# ಕುಮುದಿನಿ

(ಸಾಮಾಜಿಕ ಕಾದಂಬರಿ)

---

ಲೇಖಕರು

**ರವೀಂದ್ರನಾಥ ಠಾಕೂರರು**

ಅನುವಾದಕರು

**ಅ. ನಾರಾಯಣಸ್ವಾಮಿ ಅಯ್ಯರ್**

---

ಪ್ರಕಾಶಕರು

**ಎಮ್. ಎಸ್. ವಾರ್ಸ ಅಂಡ್ ಕಂಪೆನಿ**

ಬೆಂಗಳೂರು.

# ಅರಿಕೆ

---

ರವೀಂದ್ರರ ಕಾದಂಬರಿಯೊಂದನ್ನು ಕನ್ನಡಿಸಿ ಓದುಗರಿಗೆ ಅರ್ಪಿಸಲು ಅವಕಾಶ ದೊರೆತುದಕ್ಕಾಗಿ ಆನಂದಿಸುತ್ತೇನೆ. ಇದು **ರವೀಂದ್ರರ "ಯೋಗಾಯೋಗ"** ಎಂಬ ಕಾದಂಬರಿಯ ಅನುವಾದ. ಈ ಕಾದಂಬರಿ ಈಗಾಗಲೇ ಹಿಂದಿ, ತಮಿಳು ಮೊದಲಾದ ಭಾಷೆಗಳಿಗೆ ಭಾಷಾಂತರವಾಗಿದೆ. ಆ ಅನುವಾದಕರುಗಳು ಉಪಯೋಗಿಸಿರುವ "**ಕುಮುದಿನಿ**" ಎಂಬ ಹೆಸರನ್ನೇ ನಾನೂ ಉಪಯೋಗಿಸಿರುವೆನು.

ಇದಕ್ಕೆ ಹಿರಿಯರೊಬ್ಬರ ಆಶೀರ್ವಾದವನ್ನು ಪಡೆದುಕೊಂಡು, ರವೀಂದ್ರರ ಕಾದಂಬರಿಗಳನ್ನು ಕುರಿತು ಪರಿಚಯಾತ್ಮಕ ಮುನ್ನುಡಿಯೊಂದನ್ನು ಬರೆಯಬೇಕೆಂಬ ಸಂಕಲ್ಪವಿತ್ತು. ಹಿರಿಯರ ಹರಕೆ ಕೈಸೇರಲು ಸಾವಕಾಶವಾಯಿತು. ಪ್ರವಾಸದಲ್ಲಿರುವ ಕಾರಣ ಸಕಾಲಕ್ಕೆ ಸಹಾಯ ಗ್ರಂಥಗಳನ್ನು ಒದಗಿಸಿಕೊಳ್ಳಲು ಅನುಕೂಲವಿಲ್ಲವಾಯಿತು. ಎರಡನೆಯ ಮುದ್ರಣದಲ್ಲಿ ಇವನ್ನು ಸೇರಿಸಿಕೊಳ್ಳಲು ಅವಕಾಶವಾಗುವುದೆಂದು ಎಣಿಸುತ್ತೇನೆ.

ಬಂಗಾಳಿಗಳಲ್ಲಿ ಗಂಡಹೆಂಡಿರು (ಒಬ್ಬರೊಡನೊಬ್ಬರು) ಮಾತನಾಡುವಾಗ ಹೆಂಡತಿ ಗಂಡನನ್ನು ಏಕವಚನದಲ್ಲಿ ಸಂಬೋಧಿಸುವ ವಾಡಿಕೆಯಿದೆ. ಇದು ನಮ್ಮ ಜನರಿಗೆ ವಿಚಿತ್ರವೆನ್ನಿಸುವುದೆಂದು ಇದುವರೆಗಿನ ಅನುವಾದಗಳಲ್ಲಿ ಇಂತಹ ಸಂದರ್ಭಗಳಲ್ಲಿ ಬಹುವಚನವನ್ನೇ ಉಪಯೋಗಿಸಿದ್ದುಂಟು.

ಆದರೆ, "ಅನುವಾದ ಮೂಲಕ್ಕೆ ಸ್ವಲ್ಪವೂ ವ್ಯತ್ಯಾಸವಿರಬಾರದು. ಓದುಗರಿಗೆ ಅರ್ಥವಾಗದ ಅಂಶ ಇರುವುದಾಗಿ ಕಂಡರೆ ಅನುವಾದಕನು ಅವುಗಳನ್ನು ಟಿಪ್ಪಣಿಕೊಟ್ಟು ವಿವರಿಸಬೇಕು", ಎಂದು ಅನುವಾದಗಳನ್ನು ಕುರಿತು ರವೀಂದ್ರರು ಬರೆದಿರುವುದು ನನ್ನ ಗಮನಕ್ಕೆ ಬಂದಿತು. ಅಲ್ಲದೆ ರವೀಂದ್ರರು ಈ ಮಾತುಗಳನ್ನು ಅನುವಾದಕರುಗಳಿಗೆ ಒತ್ತಿ ಒತ್ತಿ

ಹೇಳುತ್ತಿದ್ದರೆಂದು ನನ್ನ ಮಾನ್ಯ ಮಿತ್ರರೂ ಶಾಂತಿನಿಕೇತನದ ಅಧ್ಯಾಪಕರೂ ಆದ ಶ್ರೀಮಾನ್ ಹಜಾರೀ ಪ್ರಸಾದ್ ದ್ವಿವೇದೀ ಯವರು ತಿಳಿಸಿದರು. ಈ ಕಾರಣದಿಂದ ಈ ಕಾದಂಬರಿಯಲ್ಲಿ ಮೂಲದಲ್ಲಿದ್ದಂತೆಯೇ ಈ ನಡೆವಳಿಕೆಯನ್ನೂ ಕೂಡ ಅನುವಾದಿಸಿರುತ್ತೇನೆ.

ಈ ಕಾದಂಬರಿಯ ಕರಡನ್ನು ತಿದ್ದಿ ಅಚ್ಚಿಗೆ ಸಿದ್ಧಮಾಡಲು ಹಲವು ವಿಧಗಳಲ್ಲಿ ನೆರವು ನೀಡಿದ ಶ್ರೀಮಾನ್ ಜಿ. ವರದರಾಜರಾವ್ ಎಂ. ಎ. ರವರಿಗೆ ನಾನು ಚಿರಋಣಿ. ಪ್ರಕಾಶಕರಾದ ಶ್ರೀಮಾನ್ ವಾಸನ್ ಮತ್ತು ಸಹೋದರರಿಗೂ ನನ್ನ ವಂದನೆಗಳು.

ಲೋಪದೋಷಗಳೇನಿದ್ದರೂ ಅವುಗಳನ್ನು ಮನ್ನಿಸಬೇಕೆಂದು ಕೋರುತ್ತೇನೆ.

ವ್ಯಯನಾಮ ಸಂವತ್ಸರ
ಮಾಘ, ಬಹುಳ ಚತುರ್ದಶಿ (ಶಿವರಾತ್ರಿ)
ಆನಂದಕುಟೀರ ಅಂಚೆ, ಹಿಮಾಲಯ
೧೯—೨—೧೯೪೭

ಅ. ನಾರಾಯಣಸ್ವಾಮಿ ಅಯ್ಯರ್.

ಶ್ರೀ

# ಕುಮುದಿನಿ

---

೧

ಇಂದು ಆಷಾಢ ಶುದ್ಧ ಸಪ್ತಮಿ. ಅವಿನಾಶ ಘೋಷಾಲನ ಹುಟ್ಟಿದ ದಿನ. ಇಂದಿಗೆ ಅವನಿಗೆ ಇಪ್ಪತ್ತುಮೂರು ವರ್ಷ ತುಂಬಿತು. ಮುಂಜಾನೆಯಿಂದ ಒಂದೇ ಸಮನೆ ಅಭಿನಂದನೆಯ ತಂತಿಗಳೂ, ಹೂವಿನ ದಂಡೆಗಳೂ, ತುರಾಯಿಗಳೂ, ಎಡಬಿಡದೆ ಬರುತ್ತಿವೆ.

ಕತೆಯ ಆರಂಭ ಇಲ್ಲಿ. ಆದರೆ ಈ ಆರಂಭಕ್ಕೆ ಮುಂಚೆಯೂ ಒಂದು ಆರಂಭವಿದೆ; ಸಂಜೆಯಲ್ಲಿ ದೀವಿಗೆ ಹಚ್ಚಲು ಮುಂಜಾನೆ ಬತ್ತಿ ಹೊಸೆಯುವಂತೆ.

ಈ ಕತೆಯ ಪುರಾತನ ಚರಿತ್ರೆಯನ್ನು ಸಂಶೋಧನೆ ಮಾಡಿದುದಾದರೆ ಘೋಷಾಲ್ ಮನೆತನದವರು ಒಂದಾನೊಂದು ಕಾಲದಲ್ಲಿ ಸುಂದರವನದ ಕಡೆ ಇದ್ದರೆಂದೂ ಅನಂತರ ಹುಗ್ಲೀ ಜಿಲ್ಲೆಯ ನೂರ್ ನಗರಕ್ಕೆ ಬಂದರೆಂದೂ ತಿಳಿಯಬರುವುದು. ಬಹಿರಂಗವಾಗಿ ಪೋರ್ತುಗೀಸರ ಆಕ್ರಮಣದಿಂದಲೋ ಇಲ್ಲವೇ ಸಮಾಜದ ಕಿರುಕುಳದಿಂದ ಉಂಟಾದ ಸಂಕಟದಿಂದಲೋ, ಯಾಕಾಗಿ ಅವರು ಸ್ಥಳ ಬದಲಾಯಿಸಿದರೆಂಬುದನ್ನು ಖಂಡಿತ ಹೇಳಲಾಗುವುದಿಲ್ಲ. ದಿಕ್ಕುಗಾಣದೆ ಹಳೆಯ ಮನೆ ಬಿಟ್ಟುಬಿಡಬಲ್ಲವರೇ ಸಾವಕಾಶ ಮಾಡದೆ ಹೊಸ ಮನೆ ಕಟ್ಟಲು ಶಕ್ತರು. ಆದ ರಿಂದಲೇ ಘೋಷಾಲ್ ಮನೆತನದವರಿಗೆ ಬಹು ಪುರಾತನ ಕಾಲದಿಂದ ವಿಸ್ತಾರವಾದ ಭೂಮಿಕಾಣಿ, ಹೇರಳವಾಗಿ ದನಕರುಗಳು, ಆಳುಕಾಳುಗಳು, ಹಬ್ಬ ಹರಿದಿನಗಳು, ಬರುವವರು ಹೋಗುವವರು ಇದ್ದುದು ಕಾಣುವುದು. ಇಂದೂ ಅವರ ಹಳೆಯ ನೆಲೆಯಾದ ಶೇಯಾಕೂಲಿಯಲ್ಲಿ ಕೊನೆಯ ಪಕ್ಷ ಹತ್ತಾರು ಎಕರೆ ಆಗಲವಾದ ಘೋಷಾಲ್ ದಿಘಿ ಅಂತರ

ಗಂಗೆಯ ಮುಸುಕಿನಲ್ಲಿ ಕೆಸರು ತುಂಬಿ, ಹಾಳು ಬಿದ್ದು ಗತವೈಭವದ ಸಾಕ್ಷಿ ಹೇಳುತ್ತಿದೆ. ಇಂದು ಆ ಕೆರೆಯ ಹೆಸರುಮಟ್ಟಿಗೆ ಅವರದು. ನೀರು ಜಮೀಂದಾರ್ ಚಟರ್ಜಿ ಮನೆತನದವರದು. ಹೀಗೆ ಬದುಕಿ ಬಾಳಿದ ಮನೆತನ ಹೇಗೆ ದಿನ ದಿನಕ್ಕೂ ಕ್ಷಯಿಸಿತು ಎನ್ನುವುದು ಬಹು ಸ್ವಾರಸ್ಯ ವಾದ ವಿಷಯ.

ಇವರ ಚರಿತ್ರೆಯ ಮಧ್ಯಮ ಪರಿಚ್ಛೇದದಲ್ಲಿ ಚಟರ್ಜಿ ಜಮೀಂದಾರರ ಸಂಗಡ ಜಗಳ ಆರಂಭವಾದದ್ದು ಕಾಣಿಸುವುದು. ಅದು ಆಸ್ತಿಯ ವಿಚಾರವಾಗಲ್ಲ; ದೇವಿಯ ಪೂಜೆಯನ್ನು ಕುರಿತು. ಘೋಷಾಲರು ಸ್ಪರ್ಧೆಯಿಂದ ಚಟರ್ಜಿಗಳಿಗಿಂತ ಎರಡು ಮೊಳ ಎತ್ತರದ ದುರ್ಗಿಯ ಪ್ರತಿಮೆ ಮಾಡಿಸಿದ್ದರು. ಚಟರ್ಜಿಗಳು ಅದಕ್ಕೆ ಉತ್ತರ ಕೊಟ್ಟರು. ರಾತ್ರಿಯೋ ರಾತ್ರಿ ವಿಸರ್ಜನೆಯ ಮೆರವಣಿಗೆಯ ಹಾದಿಯಲ್ಲಿ ಘೋಷಾಲರ ಪ್ರತಿಮೆಯ ತಲೆ ತಗಲುವಂತೆ ಅಲ್ಲಲ್ಲಿ ತೋರಣಗಳನ್ನು ಕಟ್ಟಿಸಿದರು. ಎತ್ತರವಾದ ಪ್ರತಿಮೆಯ ದಳದವರು ತೋರಣಗಳನ್ನು ಕಿತ್ತು ಒಗೆಯಲು ಸಿದ್ಧರಾದರು. ಕುಳ್ಳ ಪ್ರತಿಮೆಯವರು ಅವರುಗಳ ತಲೆ ಒಡೆಯಲು ತೊಡಗಿದರು. ಇದರ ಫಲವಾಗಿ ದೇವಿ ಆ ವರ್ಷ ಎಂದಿಗಿಂತ ಹೆಚ್ಚಾಗಿ ರಕ್ತವನ್ನು ವಸೂಲು ಮಾಡಿದ್ದಳು. ಕೊಲೆ-ಗಾಯಗಳಿಂದ ವ್ಯಾಜ್ಯ ಮೊಳೆಯಿತು. ಆ ವ್ಯಾಜ್ಯ ಘೋಷಾಲರ ಸರ್ವನಾಶಕ್ಕೆ ಕಾರಣ ವಾಯಿತು.

ಬೆಂಕಿ ಆರಿತು. ಕಟ್ಟಿಗೆಯೂ ಉಳಿದಿರಲಿಲ್ಲ. ಎಲ್ಲ ಬೂದಿ ಆಗಿತ್ತು. ಚಟರ್ಜಿಗಳ ಧನಲಕ್ಷ್ಮಿಯ ಮುಖವೂ ಸಹ ಕಾಂತಿಹೀನ ವಾಗಿತ್ತು. ವಿಧಿಯಿಲ್ಲದೆ ಸಂಧಿಯಾಗಬಹುದು; ಆದರೆ ಅದರಿಂದ ಶಾಂತಿಯುಂಟಾಗದು. ನೆಟ್ಟಗೆ ನಿಂತಿರುವ ವ್ಯಕ್ತಿ, ಅಂಗತ್ತಲಾಗಿ ಬಿದ್ದಿರುವ ವ್ಯಕ್ತಿ ಇಬ್ಬರ ಮೈಯೊಳಗೂ ಗುಡುಗಾಟ ಇದ್ದೇ ಇರುವುದು. ಚಟರ್ಜಿಗಳು ಸಮಾಜದ ಬತ್ತಳಿಕೆಯಿಂದ ಘೋಷಾಲರ ಮೇಲೆ ಕೊನೆಯ ಅಂಬನ್ನು ಒಗೆದರು. ಒಂದಾನೊಂದು ಕಾಲದಲ್ಲಿ ಅವರುಗಳು ಭಂಗಜ ಬ್ರಾಹ್ಮಣರಾಗಿದ್ದರೆಂದೂ ಇಲ್ಲಿಗೆ ಬಂದು ಆ ಸಂಗತಿ ಮರೆಮಾಚಿರು ವರೆಂದೂ ಕೆಂಬೂತ ನವಿಲ ವೇಷ ಹಾಕಿದೆಯೆಂದೂ ಸುದ್ದಿ ಹರಡಿದರು.

ದೂರುವವರಿಗೆ ಯಥೇಚ್ಛವಾದ ಧನ ಸಹಾಯವಿತ್ತು. ಅದರಿಂದಲೇ ಸ್ಮೃತಿರತ್ನರಕೇರಿಯಲ್ಲೂ ಅವರ ಈ ಅಪಪ್ರಚಾರಕ್ಕೆ ಅನುಸ್ವಾರ ವಿಸರ್ಗ ಗಳ ಹಿಮ್ಮೇಳ ಒದಗಿತು. ಕಲಂಕ ತೊಲಗಿಸಲು ಸಾಕಾಗುವಷ್ಟು ರುಜು ವಾತನ್ನಾಗಲಿ ಅಥವಾ ಹಣವನ್ನಾಗಲಿ ಕೊಡಲು ಘೋಷಾಲ್ ಮನೆತನ ದವರಿಗೆ ತಕ್ಕಷ್ಟು ಶಕ್ತಿಯಿರಲಿಲ್ಲ. ವಿಧಿಯಿಲ್ಲದೆ ಸಮಾಜದ ಕಿರುಕುಳಕ್ಕೆ ಗುರಿಯಾಗಿ ಇವರುಗಳು ಎರಡನೆಯ ಬಾರಿ ಮನೆಮಠಗಳನ್ನು ಬಿಟ್ಟು ರಜಬ್‌ಪುರದಲ್ಲಿ ಕೇವಲ ಸಾಮಾನ್ಯ ಜನರಂತೆ ಇರತೊಡಗಿದರು.

ಹೊಡೆದವರು ಮರೆಯುವರು. ಹೊಡೆತ ತಿಂದವರು ಸುಲಭದಲ್ಲಿ ಮರೆಯಲಾರರು. ಕೈಯಲ್ಲಿದ್ದ ದೊಣ್ಣೆ ಕಸಿದು ಬಿದ್ದರೂ, ಮನಸ್ಸಿನ ಒಳಗೆ ಹೋರಾಟವಿನ್ನೂ ನಿಂತಿರುವುದಿಲ್ಲ. ಬಹಳ ದಿನಗಳು ಕೈ ತೆಪ್ಪಗಿದ್ದು ದರಿಂದಲೇ ಮಾನಸಿಕ ಅಸ್ತ್ರ ಅವರ ಮನೆತನದಲ್ಲಿ ವೃದ್ಧಿಯಾಗುತ್ತ ಬಂದಿದೆ. ನಡುನಡುವೆ ಅವರುಗಳು ಚಟರ್ಜಿ ಮನೆತನದವರನ್ನು ಯಾವ ಯಾವ ಬಗೆಯಲ್ಲಿ ಸೋಲಿಸಿದ್ದರೆನ್ನುವುದನ್ನು ಕುರಿತು, ಇಂದಿಗೂ ಅವರ ಮನೆಯಲ್ಲಿ ಹಲವಾರು ಕತೆಗಳು ಕೇಳಿಬರುತ್ತವೆ. ಅವುಗಳಲ್ಲಿ ನಿಜ ವೆಷ್ಟೋ, ಸುಳ್ಳೆಷ್ಟೋ ಬಲ್ಲವರಿಲ್ಲ. ಆಷಾಢದ ಸಂಜೆಯ ವೇಳೆಯಲ್ಲಿ ಹೆಂಚಿನ ಮನೆಯ ಹಜಾರದಲ್ಲಿ ಕುಳಿತು ಮನೆಮಕ್ಕಳು ಬಾಯಿಬಿಟ್ಟು ಕೊಂಡು ಆ ಕತೆಗಳನ್ನು ಕೇಳುತ್ತಿರುವರು. ಚಟರ್ಜಿಗಳ ಮನೆತನದಲ್ಲಿ ಹೆಸರುವಾಸಿಯಾದ ದಾಂಡುಸರ್ದಾರ ರಾತ್ರಿ ಮಲಗಿದ್ದಾಗ ಇಪ್ಪತ್ತು ಇಪ್ಪತ್ತೈದು ಜನ ಲಾಠಿವಾಲಾಗಳು ಅವನನ್ನು ಹಿಡಿದು ತಂದು ಘೋಷಾ ಲರ ಕಛೇರಿಯಲ್ಲಿ ಸುಳಿವೇ ಇಲ್ಲದಂತೆ ಮರೆಮಾಡಿದ ಕಥೆ ಒಂದು ನೂರು ವರ್ಷಗಳಿಂದಲೂ ಘೋಷಾಲರ ಮನೆಯಲ್ಲಿ ಕೇಳಿಬರುತ್ತಿದೆ. ಪೋಲೀ ಸರು ವಿಚಾರಣೆಗೆ ಬಂದಾಗ ನಾಯಬ ಭುವನ್‌ವಿಶ್ವಾಸನು ಅನಾಯಾಸ ವಾಗಿ "ಹೌದು. ಅವನು ತನ್ನ ಸ್ವಂತ ಕೆಲಸದ ಮೇಲೆ ಕಛೇರಿಗೆ ಬಂದಿದ್ದ.....ಮಗ ಕೈಸಿಕ್ಕಿದಾಗ ಸ್ವಲ್ಪ ಅವಮಾನಪಡಿಸಿದರು. ಆ ವ್ಯಥೆ ಯಿಂದ ಅವನು ಬೈರಾಗಿಯಾಗಿ ಹೊರಟು ಹೋದನಂತೆ" ಎಂದನು. ಮ್ಯಾಜಿಸ್ಟ್ರೇಟರ ಸಂದೇಹ ನಿವೃತ್ತಿಯಾಗಲಿಲ್ಲ. ಭುವನನು "ಹುಜೂರ್, ಈ ವರ್ಷ ಕೊನೆಯಾಗುವುದರೊಳಗೆ ಅವನ ಸುಳಿವನ್ನು ಹೊರಗೆಡಪದಿದ್ದರೆ

ನನ್ನ ಹೆಸರು ಭುವನನೇ ಅಲ್ಲ" ಎಂದನು. ದಾಂಡುವಿನ ಆಕಾರದ ಪಟಿಂಗನೊಬ್ಬನನ್ನು ಎಲ್ಲಿಂದಲೋ ಹುಡುಕಿ ತಂದನು. ಅವನನ್ನು ನೆಟ್ಟಗೆ ಢಾಕಾವಿಗೆ ಕಳುಹಿಸಿದನು. ಅವನು ಅಲ್ಲಿ ಜೇಬುಕಳ್ಳತನ ಮಾಡಿದನು. ಪೋಲೀಸರಲ್ಲಿ ದಾಂಡು ಮಂಡಲದವನೆಂದು ಹೆಸರು ಬರೆಸಿದನು. ಒಂದು ತಿಂಗಳ ಸಜ ಆಯಿತು. ಬಿಡುಗಡೆಯಾದ ಕೂಡಲೇ ಭುವನ ಮ್ಯಾಜಿಸ್ಟ್ರೇಟರಲ್ಲಿಗೆ ಹೋಗಿ ದಾಂಡುಸರ್ದಾರ ಢಾಕಾದ ಬಂದೀಖಾನೆಯಲ್ಲಿರುವನೆಂದು ಸುದ್ದಿಕೊಟ್ಟನು. ವಿಚಾರಿಸಿದಾಗ ದಾಂಡು ಬಂದೀಖಾನೆಯಲ್ಲಿದ್ದುದು ತಿಳಿಯಿತು. ಅವನ ಮೈಮೇಲಿನ ಅರಿವೆಯನ್ನು ಬಂದೀಖಾನೆಯ ಹೊರಗಿನ ಮೈದಾನದಲ್ಲಿ ಬಿಸಾಡಿ ಹೊರಟು ಹೋಗಿದ್ದನು. ಆ ಅರಿವೆ ದಾಂಡುವುದೆಂದೇ ನಿಶ್ಚಯವಾಯಿತು. ಅನಂತರ ಅವನೆತ್ತ ಹೋದನೆಂಬ ಸುದ್ದಿ ತಿಳಿಸುವ ಹೊಣೆ ಭುವನನದಲ್ಲ.

ಈ ಕತೆಗಳು ದಿವಾಳಿ ತೆಗೆದ ವರ್ತಮಾನಕಾಲದ ಹಳೆಯಕಾಲದ ಹುಂಡಿಗಳು. ಗೌರವದ ದಿನಗಳು ಕಳೆದಿವೆ. ಆಧರಿಂದಲೇ ಗೌರವದ ಪ್ರಾಚೀನ ಇತಿಹಾಸ ಸಂಪೂರ್ಣ ಪೊಳ್ಳಾಗಿ ಇಷ್ಟೊಂದು ಹೆಚ್ಚು ಸದ್ದಾಗುವುದು.

ಏನೇ ಆಗಲಿ. ಎಣ್ಣೆ ಮುಗಿಯುವಂತೆ, ದೀಪ ನಂದುವಂತೆ, ಒಂದು ಹೊತ್ತಿಗೆ ರಾತ್ರಿಯೂ ಕಳೆಯುವುದು. ಘೋಷಾಲ್ ಮನೆತನದ ಸೂರ್ಯೋದಯ ಮತ್ತೆ ಅವಿನಾಶನ ತಂದೆಯಾದ ಮಧುಸೂದನನ ಅದೃಷ್ಟಶಾಲಿಯಾದ ಹಣೆಯಲ್ಲಿ ಕಾಣಿಸಿತು.

೨

ಮಧುಸೂದನನ ಅಪ್ಪ ಆನಂದ ಘೋಷಾಲ ರಜಬ್‌ಪುರದ ಮಂಡೀ ವರ್ತಕರಲ್ಲಿ ಗುಮಾಸ್ತೆಯಾಗಿದ್ದನು. ತಿನ್ನಲು ದಪ್ಪಕ್ಕಿಯ ಅನ್ನ, ಉಡಲು ಹೊಲೆಮಗ್ಗದ ಬಟ್ಟೆ, ಹೀಗೆ ಅವರ ಸಂಸಾರ ಸಾಗುತ್ತಿತ್ತು. ಮನೆಯ ಹೆಂಗಸರ ಕೈಯಲ್ಲಿ ಶಂಖದ ಬಳೆಗಳು, ಗಂಡಸರ ಕೊರಳಲ್ಲಿ ರಕ್ಷಾಯಂತ್ರದ ಹಿತ್ತಾಳೆಯ ತಾಯಿತೆ, ಬಿಲ್ವಪತ್ರೆ ಅಂಟನಿಂದ ಹೊಸೆದ ದಪ್ಪ

ಯಜ್ಞೋಪವೀತ. ಬ್ರಾಹ್ಮಣಿಕೆಯ ಗೌರವದ ಪ್ರಮಾಣ ಕ್ಷೀಣವಾಗಲು ಜನಿವಾರದ ಪ್ರಮಾಣ ಬಲವಾಗಿತ್ತು.

ಹಳ್ಳಿಯ ಶಾಲೆಯಲ್ಲಿ ಮಧುಸೂದನನ ವಿದ್ಯೆಯ ಆರಂಭ. ಜೊತೆಯಲ್ಲೇ ನದೀತೀರದಲ್ಲಿ, ಮಂಡಿಯ ಅಂಗಳದಲ್ಲಿ, ಸೆಣಬಿನ ಮೂಟೆಯ ಮೇಲೆ ಹತ್ತಿ ಕುಳಿತು ಕೂಲಿಯಿಲ್ಲದ ವಿದ್ಯೆ ಕಲಿಯುತ್ತಿದ್ದ. ಬೆಲೆ ಕೇಳುವವರು, ಕೊಳ್ಳುವವರು, ಎತ್ತಿನಗಾಡಿ ಹೊಡೆಯುವವರು ಇವರುಗಳೇ ಅವನ ಜೊತೆಗಾರರು. ಮಂಡಿಯಲ್ಲಿ ತವರಹೊಡೆಸಿದ ಸೂರಿನ ಅಡಿಯಲ್ಲಿ ಸಾಲಾಗಿ ಅಡಕಿಟ್ಟಿದ್ದ ಬೆಲ್ಲದ ಗುಡಾಣಗಳು, ಹೊಗೆಸೊಪ್ಪಿನ ಪಿಂಡಿ, ಸೀಮೆಯ ಸಾಮಾನುಗಳ ಪೆಟ್ಟಿಗೆಗಳು, ಸೀಮೇಯೆಣ್ಣೆಯ ಟಿನ್ನುಗಳು, ಸಾಸುವೆಯ ಮೂಟೆಗಳು, ಉದ್ದಿನ ರಾಶಿ, ದೊಡ್ಡ ದೊಡ್ಡ ತಕ್ಕಡಿ ತೂಕದ ಕಲ್ಲುಗಳು ಇವುಗಳ ನಡುವೆ ತಿರುಗಾಡುವುದೆಂದರೆ ಅವನಿಗೆ ಹೂದೋಟದಲ್ಲಿ ತಿರುಗಾಡುವಷ್ಟು ಆನಂದವಾಗುತ್ತಿತ್ತು. ಮಗ ಮುಂದೆ ಬರುವನೆಂದು ಅಪ್ಪ ನಿರ್ಧರಿಸಿದನು. ಹಾಗೂ ಹೀಗೂ ಕಷ್ಟಪಟ್ಟು ಎರಡು ಮೂರು ಪ್ಯಾಸುಗಳನ್ನು ಮಾಡಿದ್ದೇ ಆದರೆ ಸ್ಕೂಲು ಮೇಸ್ಟರ ಕೆಲಸದಿಂದ ಮೊಖ್ತಾರ್, ವಕೀಲೀ ಉದ್ಯೋಗಗಳವರೆಗೆ ಒಂದಲ್ಲ ಒಂದು ಕೆಲಸವು ಮಧುಸೂದನನಿಗೆ ಸಿಕ್ಕಬಹುದೆಂದು ಎಣಿಸಿದನು. ಇತರ ಮೂವರು ಮಕ್ಕಳ ಹಣೆಬರಹದಲ್ಲಿ ಗುಮಾಸ್ತೆಗಿರಿಯವರೆಗೆ ಮಾತ್ರ ಬರೆದಿತ್ತು. ಅವರಲ್ಲಿ ಒಬ್ಬ ಮಂಡಿವರ್ತಕರಲ್ಲಿದ್ದರೆ ಮತ್ತೊಬ್ಬ ತಾಲ್ಲೂಕು ಕಛೇರಿಯಲ್ಲಿ ಕಿವಿಯಲ್ಲಿ ಲೇಖನಿ ಸೆಕ್ಕಿಸಿಕೊಂಡು ಉಮೇದುವಾರಿಕೆಯಲ್ಲಿ ಕುಳಿತುಬಿಟ್ಟನು. ಆನಂದ ಘೋಷಾಲನ ಕ್ಷೀಣ ಸರ್ವಸ್ವವನ್ನು ಊರಿಕೊಂಡು ಮಧುಸೂದನ ಕಲ್ಕತ್ತೆಯ ಮೆಸ್‌ನಲ್ಲಿ ಒಂದು ಕೊಟಡಿಯನ್ನು ಗೊತ್ತು ಮಾಡಿಕೊಂಡನು.

ಪರೀಕ್ಷೆಯಲ್ಲಿ ಈ ಹುಡುಗ ಕಾಲೇಜಿನ ಗೌರವ ಕಾಯುವನೆಂದು ಅಧ್ಯಾಪಕರು ಎಣಿಸಿದ್ದರು. ಇಂತಹ ಸಮಯದಲ್ಲಿ ತಂದೆ ಸತ್ತು ಹೋದರು. ಓದುವ ಪುಸ್ತಕಗಳನ್ನು, ನೋಟ್ ಬುಕ್ ಸಮೇತವಾಗಿ ಮಾರಿಬಿಟ್ಟನು. ಇನ್ನು ಮುಂದೆ ವ್ಯಾಪಾರ ಮಾಡುವುದಾಗಿ ಮಧು

ಪಣತೊಟ್ಟನು. ವಿದ್ಯಾರ್ಥಿಗಳಿಗೆ ಬೇಕಾದ ಹಳೆಯ ಪುಸ್ತಕಗಳನ್ನು ಮಾರುವುದೇ ಅವನ ವ್ಯಾಪಾರಕ್ಕೆ ಆರಂಭವಾಯಿತು. ತಾಯಿ, "ಮಗ ಪರೀಕ್ಷೆಯಲ್ಲಿ ಪ್ಯಾಸುಮಾಡಿ ಸದ್ಗೃಹಸ್ಥನಾಗುವನು. ಅನಂತರ ಘೋಷಾಲರ ವಂಶ ಪ್ರವರ್ಧಮಾನಕ್ಕೆ ಬರುವುದು" ಎಂದು ಬಹಳ ಆಶೆಯಿಟ್ಟುಕೊಂಡಿದ್ದರು. ಈಗ ಅದನ್ನು ನೆನಸಿಕೊಂಡಾಗಲೆಲ್ಲ ದುಃಖ ಪಡಬೇಕಾಗಿ ಬಂದಿತು.

ಚಿಕ್ಕಂದಿನಿಂದ ಮಧು ಸಾಮಾನುಗಳನ್ನು ಆರಿಸಿ ತೆಗೆಯುವುದರಲ್ಲಿ ಹೇಗೆ ನಿಸ್ಸೀಮನೋ ಹಾಗೆಯೇ ಅವನು ಸ್ನೇಹಿತರನ್ನು ಹುಡುಕಿ ಹಿಡಿಯು ವುದರಲ್ಲೂ ಗಟ್ಟಿಗ. ಎಂದೂ ಮೋಸ ಹೋಗಿಲ್ಲ. ಕಾನಾಯಿ ಗುಪ್ತ, ಅವನ ಮುಖ್ಯ ನಚ್ಚಿನ ಗೆಳೆಯ. ಇವನ ಪೂರ್ವೀಕರು ದೊಡ್ಡ ದೊಡ್ಡ ಕೋಠಿಗಳಲ್ಲಿ ಮುತ್ಸದ್ದಿಗಳಾಗಿದ್ದರು. ಅಪ್ಪ ಹೆಸರುವಾಸಿಯಾದ ಸೀಮೆ ಯೆಣ್ಣೆ ಕಂಪೆನಿಯಲ್ಲಿ ದೊಡ್ಡ ಅಧಿಕಾರದಲ್ಲಿದ್ದ.

ಅದೃಷ್ಟವಶಾತ್ ಇವರ ಮನೆಯ ಹೆಣ್ಣಿಗೆ ಮದುವೆ. ಮಧು ಸೂದನ ಸೊಂಟಕ್ಕೆ ವಸ್ತ್ರ ಕಟ್ಟಿಕೊಂಡು ಕೆಲಸಕ್ಕೆ ಕೈಹಾಕಿದನು. ಚಪ್ಪರ ಹಾಕುವುದು, ಎಲೆ ಹೂವುಗಳಿಂದ ಮಂಟಪ ಸಿಂಗರಿಸುವುದು, ಅಚ್ಚು ಕೂಟದಲ್ಲಿ ನಿಂತುಕೊಂಡಿದ್ದು ಚಿನ್ನದ ಅಕ್ಷರದಲ್ಲಿ ಲಗ್ನಪತ್ರಿಕೆ ಅಚ್ಚು ಮಾಡಿಸುವುದು, ಬೆಂಚು, ಜಮಖಾನೆಗಳನ್ನು ಬಾಡಿಗೆಗೆ ತರುವುದು, ಹೆಬ್ಬಾಗಿಲಲ್ಲಿ ನಿಂತು ಬಂದವರನ್ನು ಆದರಿಸಿ ಬರಮಾಡಿಕೊಳ್ಳುವುದು, ಬಡಿಸುತ್ತ ಗಂಟಲು ಕಟ್ಟುವವರೆಗೆ ಉಪಚಾರಮಾಡಿ ಮಾತನಾಡುವುದು ಯಾವುದನ್ನೂ ಬಿಡಲಿಲ್ಲ. ಈ ಸುಯೋಗದಲ್ಲಿ ಅದೆಷ್ಟು ವ್ಯವಹಾರಜ್ಞಾನ ಮತ್ತು ಬುದ್ಧಿವಂತಿಕೆಯ ಪರಿಚಯ ತೋರಿದನೆಂದರೆ ಅದರಿಂದ ರಜನೀ ಬಾಬು ಅತ್ಯಾನಂದ ಹೊಂದಿದರು. ಆತ ಕೆಲಸಗಾರರನ್ನು ಗುರುತಿಸ ಬಲ್ಲವರು. ಈ ಹುಡುಗ ವೃದ್ಧಿಗೆ ಬರುವವನೆಂದು ಅರಿತರು. ತಾವೇ ಅವನ ಹೆಸರಿನಲ್ಲಿ ಹಣ ಡಿಪಾಸಿಟ್‌ಮಾಡಿ ಮಧುವನ್ನು ರಜಬ್‌ಪುರದಲ್ಲಿ "ಕೆರೋಸಿನ್ ಏಜನ್ಸಿ" ಯಲ್ಲಿ ಕೂರಿಸಿದರು..

ಸೌಭಾಗ್ಯದ ಓಟ ಮೊದಲಾಯಿತು. ಆ ಓಟದ ಹಾದಿಯಲ್ಲಿ ಕೆರೋಸಿನ್ ಡಿಪೊ ಯಾವ ಮೂಲೆಯಲ್ಲೋ ಬಿಂದುವಿನ ಆಕಾರದಲ್ಲಿ

ಹಿಂದೆ ಬಿದ್ದಿತು. ಆಯುದ ಅಂಕಣದ ದೊಡ್ಡ ದೊಡ್ಡ ಅಂಕಿಗಳ ಮೇಲೆ ಹೆಜ್ಜೆ ಇಡುತ್ತ ಇಡುತ್ತ ವ್ಯಾಪಾರ ಸರಸರನೆ ಅಡ್ಡದಾರಿಯಿಂದ ರಾಜ ಬೀದಿಗೆ, ಚಿಲ್ಲರೆ ವ್ಯಾಪಾರದಿಂದ ಒಟ್ಟು ವ್ಯಾಪಾರಕ್ಕೆ, ಅಂಗಡಿಯಿಂದ ಆಫೀಸಿಗೆ, ಉದ್ಯೋಗಪರ್ವದಿಂದ ಸ್ವರ್ಗಾರೋಹಣಕ್ಕೆ ಮುನ್ನಡೆ ಯಿತು. ಎಲ್ಲರೂ "ಅದೃಷ್ಟ ಎಂದರೆ ಇದು" ಎಂದು ಅನ್ನಲಾರಂಭಿಸಿ ದರು. ಅಂದರೆ ಹಿಂದಿನ ಜನ್ಮದ ಹಬೆಯಿಂದಲೇ ಈ ಜನ್ಮದ ಗಾಡಿ ನಡೆಯುವುದಷ್ಟೆ. ವಿಧಿ ತನಗೆ ಮೋಸಮಾಡಲು ತಾನು ತಪ್ಪಿತಸ್ಥನಲ್ಲ ವೆಂದೂ ಲೆಕ್ಕವನ್ನು ತಪ್ಪುಮಾಡದ ಕಾರಣದಿಂದಲೇ ಪರೀಕ್ಷಕರು ತನಗೆ ಸೊನ್ನೆ ಸುತ್ತಲಿಲ್ಲವೆಂದೂ ಮಧು ಚೆನ್ನಾಗಿ ಅರಿತಿದ್ದ. ಲೆಕ್ಕ ತಪ್ಪುಮಾಡಿ ತೇರ್ಗಡೆಯಾಗದವರೇ ಪರೀಕ್ಷರಲ್ಲಿ ಪಕ್ಷಪಾತವನ್ನು ಎಣಿಸುವವರು.

ಮಧುಸೂದನ ಬಲು ಬಿಗಿ ಸ್ವಭಾವದವನು. ತನ್ನ ಸ್ಥಿತಿಗತಿಯ ವಿಷಯ ಮಾತನಾಡನು. ಆದರೂ ಪರಿಸ್ಥಿತಿಯಿಂದ ಬತ್ತಿದ ಹೊಳೆಯಲ್ಲಿ ಪ್ರವಾಹ ಬರುತ್ತಿದೆಯೆಂಬುದನ್ನು ಅರಿಯಲು ಸಾಧ್ಯವಿತ್ತು. ಕುಟುಂಬ ರಕ್ಷಣೆ ಅನುಸರಿಸುವ ಬಂಗಾಳಾ ದೇಶದಲ್ಲಿ ಇಂತಹ ಸ್ಥಿತಿಯಲ್ಲಿ ಸಾಮಾನ್ಯ ಮನುಷ್ಯನಾದವನು ಮದುವೆಮಾಡಿಕೊಂಡು ಬದುಕಿದಷ್ಟು ಕಾಲ ಸಂಪತ್ತು ಅನುಭವಿಸಿ ವಂಶಪರಂಪರೆಯ ಹಾದಿ ಮುಂದುವರಿದು ತನ್ನ ಸಾವಿನ ಅನಂತರ ಅದು ಮುನ್ನಡೆಯಬೇಕೆಂಬ ಬಯಕೆ ಅವರಿಗೆ ಪ್ರಬಲ ಹೆಣ್ಣು ಹೆತ್ತವರು ಮಧುವನ್ನು ಹುರಿದುಂಬಿಸಲು ಹಿಂದೆಗೆಯಲಿಲ್ಲ. ಮಧು ಸೂದನ 'ಮೊದಲು ಒಂದು ಹೊಟ್ಟೆ ಪೂರ್ತಿ ತುಂಬಲಿ, ಆಮೇಲೆ ಮತ್ತೊಂದು ಹೊಟ್ಟೆಯ ಹೊಣೆ ಹೊರುವುದಾದೀತು' ಎಂದನು. ಇದ ರಿಂದ ಮಧುಸೂದನನ ಹೃದಯ ಹೇಗಾದರೂ ಇರಲಿ, ಹೊಟ್ಟೆಯಂತೂ ದೊಡ್ಡದು ಎಂಬುದನ್ನು ಅರಿಯಬಹುದು.

ಇದೇ ಸಮಯದಲ್ಲಿ ಮಧುಸೂದನನ ಮುಂಜಾಗ್ರತೆಯಿಂದ ರಜಬ್ ಪುರವು ಸೆಣಬಿಗೆ ಹೆಸರುವಾಸಿಯಾಯಿತು. ಇದ್ದಕ್ಕಿದ್ದಂತೆ ಹೊಳೆಯ ದಡದ ಬಂಜರು ಭೂಮಿಯನ್ನು ಬೇಕಾದಂತೆ ಕೊಂಡುಕೊಂಡನು. ಆಗ ಬೆಲೆ ಅಗ್ಗವಾಗಿತ್ತು. ಇಟ್ಟಿಗೆ ಗೂಡು ಕಟ್ಟಿಸಿದನು. ನೇಪಾಳದಿಂದ ತೇಗವ ತೊಲೆಗಳು ಬಂದವು. ಸಿಲ್ಹೆಟ್‌ನಿಂದ ಸುಣ್ಣವೂ ಕಲ್ಕತ್ತೆಯಿಂದ

ವ್ಯಾಗನ್ನುಗಳಲ್ಲಿ ಜಿಂಕ್‌ಷೀಟುಗಳೂ ಬಂದವು. ಪೇಟೆಯ ಜನ ಅಚ್ಚರಿಗೊಂಡರು. "ಆಯಿತು, ಕೈಯಲ್ಲಿ ಹಣ ಸೇರಿತು. ಅದು ನಿಲ್ಲುವುದಾದರೂ ಹೇಗೆ. ಈಗ ಅಜೀರ್ಣದ ಸರದಿ ವ್ಯಾಪಾರವು ಇಳಿಮುಖವಾಗುವ ಬಗೆ ಹೇಗೆ" ಎಂದರು.

ಈ ಬಾರಿಯೂ ಮಧುಸೂದನ ಲೆಕ್ಕದಲ್ಲಿ ತಪ್ಪು ಮಾಡಲಿಲ್ಲ. ನೋಡುತ್ತಿದ್ದ ಹಾಗೆಯೇ ರಜಬ್‌ಪುರದಲ್ಲಿ ವ್ಯಾಪಾರದ ನೆರೆ ಏರಿತು. ಅದರ ಸುಳಿಯ ಸೆಳೆತದಲ್ಲಿ ದಳ್ಳಾಳಿಗಳು ಬಂದು ಸೇರಿದರು. ಮಾರ್ವಾಡಿಗಳ ಗುಂಪು ಬಂದಿತು. ಕೂಲಿಗಳು ಬಂದು ನೆಲಸಿದರು. ಮಿಲ್ಲು ಆರಂಭವಾಯಿತು. ದೊಡ್ಡ ದೊಡ್ಡ ಹೊಗೆಯ ಕೊಳವೆಗಳಿಂದ ಸುತ್ತುಗಟ್ಟಿಕೊಂಡು ಹೊಗೆ ಎದ್ದು ಆಕಾಶದಲ್ಲಿ ಕಪ್ಪು ಕಟ್ಟಿತು.

ವರಮಾನದ ಅಂಕಿ ನೋಡದೆಯೇ ಮಧುಸೂದನನ ಮಹಿಮೆ ಈಗ ದೂರದಿಂದ ಬರಿಯ ಕಣ್ಣಿಗೇ ಕಾಣುತಿತ್ತು. ಒಬ್ಬನೇ ಇಡೀ ಬಡಾವಣೆಯ ಯಜಮಾನ. ಕಾಂಪೌಂಡು ಗೋಡೆಯಿಂದ ಸುತ್ತುವರಿದ ಎರಡಂತಸ್ತಿನ ಮನೆ. ಹೆಬ್ಬಾಗಿಲಲ್ಲಿ "ಮಧು ಚಕ್ರ" ಎಂದು ಕೆತ್ತಿದ ಕಲ್ಲಿನ ಹಲಗೆ. ಈ ಹೆಸರು ಅವರ ಹಳೆಯ ಕಾಲೇಜಿನ ಸಂಸ್ಕೃತ ಅಧ್ಯಾಪಕರು ಹೇಳಿದ್ದು. ಈಗ ಅವರಿಗೆ ಅಕಸ್ಮಾತ್ತಾಗಿ ಮಧುಸೂದನನಲ್ಲಿ ಹಿಂದಿನ ಕಾಲಕ್ಕಿಂತ ಹೆಚ್ಚು ಅಭಿಮಾನ.

ಈ ಸಲ ವಿಧವೆ ತಾಯಿ ಹೆದರುತ್ತ ಹೆದರುತ್ತ ಬಂದು "ಅಪ್ಪಾ-ಯಾವಾಗ ಸಾಯುವೆನೋ, ಸೊಸೆಯನ್ನ ನೋಡಿ ಕಣ್ಣುಮುಚ್ಚಿಕೊಳ್ಳಲು ಸಾಧ್ಯವಾಗದೆ?" ಎಂದಳು.

ಮಧು ಗಂಭೀರವಾಗಿ "ಮದುವೆಯಾಗಲೂ ಕಾಲವ್ಯರ್ಥವಾಗುವುದು. ಮದುವೆಯಾಗಿಯೂ ಕಾಲವ್ಯರ್ಥ. ನನಗೆ ವಿರಾಮವೆಲ್ಲಿದೆ?" ಎಂದು ಸಂಕ್ಷೇಪವಾಗಿ ಉತ್ತರ ಕೊಟ್ಟನು.

ಬಲವಂತಮಾಡುವಷ್ಟು ಧೈರ್ಯ ಅವನ ತಾಯಿಗೂ ಇರಲಿಲ್ಲ. ಯಾಕೆಂದರೆ ಕಾಲಕ್ಕೆ ಬಹಳ ಬೆಲೆಯುಂಟು. ಮಧುಸೂದನನ ಈ ಮಾತನ್ನು ಎಲ್ಲರೂ ಬಲ್ಲರು.

ಕೆಲವು ದಿನಗಳು ಕಳೆದವು. ಉನ್ನತಿಯು ಉಬ್ಬರ ಏರಿ ವ್ಯಾಪಾರದ ಕಚೇರಿ ಪರಸ್ಥಳದಿಂದ ಕಲ್ಕತ್ತೆಗೆ ಬಂದಿತು. ಮೊಮ್ಮಗ, ಮೊಮ್ಮಗಳನ್ನು ನೋಡುವ ಆನಂದದ ಆಶೆಬಿಟ್ಟು ಅಮ್ಮ ಸ್ವರ್ಗ ಸೇರಿದಳು. ಘೋಷಾಲ್ ಕಂಪೆನಿಯ ಕೀರ್ತಿ ಈಗ ದೇಶ ದೇಶಾಂತರದಲ್ಲಿ ಹರಡಿತು. ಅವರ ವ್ಯಾಪಾರ ಪರಂಪರೆಯಿಂದ ನಡೆದು ಬಂದಿರುವ ವಿಲಾಯತಿ ಕೋಠಿಗಳಿಗೆ ಸರಿದೂಗುತ್ತ ನಡೆಯುತ್ತಿದೆ. ಶಾಖೋಪಶಾಖೆಗಳಲ್ಲಿ ಆಂಗ್ಲೇಯರೂ ಕೂಡ ಮ್ಯಾನೇಜರುಗಳಾಗಿದ್ದಾರೆ.

ಮಧುಸೂದನ ಈಗ ಮದುವೆಗೆ ವಿರಾಮವಾಯಿತೆಂದು ತಾನಾಗಿ ಹೇಳಿದ. ಹೆಣ್ಣಿನ ಸಂತೆಯಲ್ಲಿ ಅವನಿಗೆ ಒಳ್ಳೆಯ ತೂಕವಿತ್ತು. ಬಲು ದೊಡ್ಡ ಪೆಮ್ಮೆಗಾರನ ಮನೆತನದ ಬಿಗುಮಾನವನ್ನು ಮರೆಸುವಂತಹ ಶಕ್ತಿ ಅವನಿಗಿತ್ತು. ನಾಲ್ಕು ದಿಕ್ಕಿನಿಂದಲೂ ಹೆಣ್ಣು ಕೊಡುವವರು ಬಂದರು. ಕುಲ, ರೂಪ, ಗುಣ, ಧನ, ಮೊದಲಾದವುಗಳಲ್ಲಿ ಹೆಸರು ವಾಸಿಯಾದ ಹೆಣ್ಣುಗಳು ಬಂದವು. ಆದರೆ ಮಧುಸೂದನನು ಕಣ್ಣು ಬಿಟ್ಟು 'ಆ ಚಟರ್ಜಿಗಳ ಮನೆಯ ಹೆಣ್ಣು ಬೇಕು' ಎಂದನು.

ಪೆಟ್ಟುತಿಂದ ವಂಶ, ಪೆಟ್ಟುತಿಂದ ಪಟ್ಟೆಹುಲಿಯಂತೆ ಅತಿ ಭಯಂಕರ ವಾದುದು.

## ೩

ಇನ್ನು ಹೆಣ್ಣಿನವರ ಸುದ್ದಿ.

ನೂರ್‌ನಗರದಲ್ಲಿ ಚಟರ್ಜಿ ಮನೆತನದವರ ಸ್ಥಿತಿ ಗತಿ ಈಗ ಉತ್ತಮ ವಾಗಿರಲಿಲ್ಲ. ಐಶ್ವರ್ಯದ ಕಟ್ಟೆ ಒಡೆದಿದೆ. ಆರಾಣೆಯ ಪಾಲುಗಾರರು ತಮ್ಮ ಭಾಗ ತೆಗೆದುಕೊಂಡು ಬೇರೆಯಾದರು. ಈಗ ಅವರು ದೊಣ್ಣೆ ಹಿಡಿದು ಹೊರಗೆ ನಿಂತು ಹತ್ತಾಣೆ ಹಿಸ್ಸೇದಾರರ ಎಲ್ಲೆಯನ್ನು ಒತ್ತರಿಸಲು ಹವಣಿಸುತ್ತಿರುವರು. ಅದಲ್ಲದೆ ಮನೆದೇವರು ರಾಧಾಕಾಂತಜಿಯ ಸೇವೆಯ ಅಧಿಕಾರ ಹತ್ತು-ಆರಾಗಿ ಅದೆಷ್ಟು ಸೂಕ್ಷ್ಮವಾಗಿ ಹಂಚಿಕೆಯಾಗಲು ಸಂಧಾನ ನಡೆಯುತ್ತಿದೆಯೆಂದರೆ ಅಷ್ಟೂ ಅದರಲ್ಲಿನ ಕಾಳುಕಡ್ಡಿ ವಕೀಲರು, ಮೊಖ್ತ್ಯಾರರು ಅಂಗಳದಲ್ಲಿ ಒಂಬತ್ತುಆರಾಗಿ ಹರಡುತ್ತಿದ್ದುವು.

ಪ್ಯಾದೆಗಳಿಗೂ ಮೋಸವಾಗಲಿಲ್ಲ. ನೂರ್‌ನಗರದ ಹಿಂದಿನ ಪ್ರತಾಪವಿಲ್ಲ. ವರಮಾನವಿಲ್ಲ. ಖರ್ಚುಮಾತ್ರ ನಾಲ್ಮಡಿಯಾಗಿ ಬೆಳೆದಿದೆ. ಸೇಕಡ ಒಂಬತ್ತರಂತೆ ಬಡ್ಡಿಯ ಗುಡ್ಡವೇ ಬೆಳೆದುಹೋಗಿ, ಜಮೀನುದಾರಿಯ ಪ್ರಭಾವ ಸುತ್ತಲೂ ನಾಲ್ಕು ದಿಕ್ಕಿನಲ್ಲೂ ಬಲೆಯನ್ನು ಬೀಸಲು ತೊಡಗಿತ್ತು.

ಕುಟುಂಬದಲ್ಲಿ ಇಬ್ಬರು ಸೋದರರು. ಐವರು ಸೋದರಿಯರು. ಹೆಣ್ಣು ಹೆಚ್ಚಾದ ತಪ್ಪಿಗೆ ಜುಲ್ಮಾನೆ ಇನ್ನೂ ತೀರಿರಲಿಲ್ಲ. ಯಜಮಾನರು ಇರುವಾಗಲೇ ನಾಲ್ಕು ಹೆಣ್ಣುಗಳ ಮದುವೆ ಕುಲೀನರ ಮನೆಗೆ ಕೊಟ್ಟು ನಡೆದಿತ್ತು. ಇವರುಗಳ ಆಸ್ತಿಯ ಹೊಳಪು ಈ ಕಾಲದ್ದು; ಖ್ಯಾತಿ ಪುರಾತನಕಾಲದ್ದು. ಅಳಿಯಂದರ ಸ್ಥಾನಮಾನಗಳಿಗೆ ತಕ್ಕಂತೆ ಹಣ ಕಾಸನ್ನು ಚೆಲ್ಲಿ ಚಟರ್ಜಿಯವರ ಸಾಲ ಬೆಳೆಯಿತು. ಬಡ್ಡಿ ದ್ವಿಗುಣವಾ ಯಿತು.

ಚಿಕ್ಕವನು ತಲೆ ಕೊಡುವಿಕೊಂಡು ಎದ್ದು ನಿಂತು "ನಾನು ವಿಲಾ ಯಿತಿಗೆ ಹೋಗಿ ಬ್ಯಾರಿಸ್ಟರ್ ಆಗಿಬರುವೆ. ಉದ್ಯೋಗ ಮಾಡದಿದ್ದರೆ ದಾರಿಯಿಲ್ಲ" ಎಂದನು. ಅವನು ವಿಲಾಯಿತಿಗೆ ಹೋದ. ಕುಟುಂಬದ ಹೊರೆ ಅಣ್ಣ ವಿಪ್ರದಾಸನ ಹೆಗಲ ಮೇಲೆ ನಿಂತಿತು.

ಈ ಸಮಯದಲ್ಲೇ ಹಿಂದೆ ಹೇಳಿದ ಘೋಷಾಲ್ ಮತ್ತು ಚಟರ್ಜಿ ಗಳ ಅದೃಷ್ಟದ ಗಾಳಿಪಟಗಳು ಒಂದಕ್ಕೊಂದು ತಗುಲಿ ಅವುಗಳ ಘರ್ಷಣೆ ಮತ್ತೊಮ್ಮೆ ಮೊದಲಾಯಿತು. ಅದರ ವಿವರ ಬಹು ಸ್ವಾರಸ್ಯವಾಗಿದೆ.

ಬಡಾ ಬಜಾರಿನ ತನ್‌ಸೂಕ್‌ದಾಸ್ ಹಲವಾಯಿಯ ಹತ್ತಿರ ಇವ ರಿಗೆ ದೊಡ್ಡ ಮೊತ್ತದ ಸಾಲವಿತ್ತು. ಲೆಕ್ಕತಪ್ಪದೆ ಬಡ್ಡಿಕೊಡುತ್ತ ಬಂದಿ ದ್ದರು. ಯಾವಬಗೆಯ ತೊಡಕೂ ಇರಲಿಲ್ಲ. ಈ ಸಮಯದಲ್ಲಿ ಪೂಜೆಯ ರಜೆಯಲ್ಲಿ ವಿಪ್ರದಾಸನ ಸಹಪಾಠಿ ಅಮೂಲ್ಯಧನ ಗೆಳೆತನ ತೋರಲು ಬಂದನು. ಅವನು ದೊಡ್ಡ ಅಟಾರ್ನಿಗಳ ಆಫೀಸೊಂದರಲ್ಲಿ ಆರ್ಟಿಕಲ್ಡ್ ಕ್ಲಾರ್ಕ್. ಸುಲೋಚನ ಧರಿಸಿದ ಈ ಎಳೆಯ ವಾರೆಗಣ್ಣಿ ನಿಂದ ನೂರ್‌ನಗರದ ಸ್ಥಿತಿಗತಿ ನೋಡಿದ. ಅವನು ಕಲ್ಕತ್ತೆಗೆ ಹಿಂದಿ

ರುಗಿದ. ಹಿಂದೆಯೇ ತರ್ನ್‌ಸೂಕ್‌ದಾಸ್ ಬಂದು ಅಸಲು ಹಣಕ್ಕಾಗಿ ಪಟ್ಟುಹಿಡಿದು ಕುಳಿತ. "ಹೊಸದಾಗಿ ಸಕ್ಕರೆ ಕಾರ್ಖಾನೆ ತೆರೆಯಲಿ ರುವೆ. ಹಣ ಬೇಕಾಗಿದೆ" ಎಂದ.

ವಿಪ್ರದಾಸ್ ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತ.

ಈ ಸಂಕಟದ ಸಮಯದಲ್ಲೇ ಚಟರ್ಜಿ ಮತ್ತು ಘೋಷಾಲ್ ಈ ಎರಡು ಹೆಸರುಗಳಲ್ಲಿ ಮತ್ತೊಮ್ಮೆ ದ್ವಂದ್ವ ಯುದ್ಧವು ಘಟಿಸಿತು. ಅದಕ್ಕೆ ಸ್ವಲ್ಪ ಹಿಂದೆ ಸರ್ಕಾರ್ ಬಹದ್ದೂರರವರಿಂದ ಮಧುಸೂದನ 'ರಾಜಾ' ಎಂಬ ಬಿರುದು ಪಡೆದಿದ್ದ. ಹಿಂದೆ ಹೇಳಿದ ಸಹಪಾಠಿ ಸ್ನೇಹಿತ ಬಂದು "ಹೊಸರಾಜರು ಸಂತೋಷದಲ್ಲಿ ಮುಳುಗಿರುವರು. ಈ ಸಮಯದಲ್ಲಿ ಅವರ ಬಳಿ ಅನುಕೂಲಕ್ಕೆ ತಕ್ಕಂತೆ ಸಾಲ ಪಡೆಯಬಹುದು." ಎಂದನು. ಅದೂ ಆಯಿತು. ಚಟರ್ಜಿಮನೆತನದವರ ಹನ್ನೊಂದುಲಕ್ಷ ರೂಪಾಯಿ ಸಾಲವೆಲ್ಲ ಶೇಕಡ ಏಳರ ಬಡ್ಡಿಯಂತೆ ಒಂದುಕಡೆ ಸೇರಿತು. ವಿಪ್ರದಾಸನು ನೆಮ್ಮದಿಯ ನಿಟ್ಟುಸಿರು ಬಿಟ್ಟನು.

ಕುಮುದಿನಿ ಅವರ ಕೊನೆಯ ಸೋದರಿ. ಹಾಗೆಯೇ ಅವರ ಶಕ್ತಿಯೂ ಕಡೆಗಾಲದ ಸ್ಥಿತಿಯಲ್ಲಿತ್ತು. ವರದಕ್ಷಿಣೆ ಕೊಡಿಸುವ ಗಂಡು ಹುಡುಕುವ ವಿಷಯ ನೆನೆಯಲೆತ್ನಿಸಿದರೆ ಸಂಕಟವಾಗುವುದು. ಅವಳು ನೋಡಲು ಅಂದವಾಗಿದ್ದಳು. ತೆಳ್ಳಗೆ ಉದ್ದವಾಗಿದ್ದಳು. ಸುಗಂಧ ರಾಜಗಿಡದ ದಂಡೆಯಂತೆ ಇದ್ದಳು. ಕಣ್ಣು ದೊಡ್ಡವಲ್ಲದಿದ್ದರೂ ಲಕ್ಷಣ ವಾಗಿ ಕಪ್ಪಗಿದ್ದವು. ಮೂಗು ಅಂದಗೆಡದ ಮಾಟದಲ್ಲಿ ಹೂವಿನ ಎಸಳಿನಿಂದ ಮಾಡಿದಂತಿತ್ತು. ಆ ಕೈಗಳಿಂದ ದೊರೆಯುವ ಸೇವೆ ಕಮಲೆಯ ವರ ದಾನದಂತೆ ಕೃತಜ್ಞರಾಗಿ ಸ್ವೀಕರಿಸಬೇಕಾಗಿತ್ತು. ಇಡೀ ಮುಖದಲ್ಲಿ ವೇದನೆಯಿಂದ ತುಂಬಿದ ಕರುಣಾಭರಿತ ಧೈರ್ಯದ ಭಾವವಿತ್ತು.

ಕುಮುದಿನಿ ತನ್ನ ವಿಷಯವಾಗಿ ತನ್ನಲ್ಲೇ ನಾಚಿಕೊಂಡಿದ್ದಳು. ತಾನು ನತದೃಷ್ಟಳೆಂದು ಅವಳ ನಂಬಿಕೆ. ಗಂಡಸರು ಸ್ವಸಾಮರ್ಥ್ಯದಿಂದ ಸಂಸಾರ ನಡೆಸುವರೆಂದೂ, ಹೆಂಗಸರು ತಮ್ಮ ಅದೃಷ್ಟಬಲದಿಂದ ಕುಟುಂಬದಲ್ಲಿ ಲಕ್ಷ್ಮಿಯನ್ನು ಕರೆತರುವರೆಂದೂ ಅವಳು ಅರಿತಿದ್ದಳು. ಅವಳಿಗೆ

ಬುದ್ಧಿ ತಿಳಿದ ಕಾಲದಿಂದ ನಾಲ್ಕೂಕಡೆ ದುರ್ಭಾಗ್ಯದ ಪಾಪದೃಷ್ಟಿಯ ಪ್ರಭಾವವನ್ನು ಕಾಣುತ್ತಿದ್ದಳು. ಮೇಲಿಂದ ಕುಟಂಬದ ಮೇಲೆ ತನ್ನ ಪ್ರಾಪ್ತವಯಸ್ಸಿನ ಹೊರೆ, ಅವಳಿಗೆ ಎಷ್ಟೊಂದು ಸಂಕಟವನ್ನುಂಟು ಮಾಡಿತ್ತೋ ಅಷ್ಟುಷ್ಟೂ ಅವಮಾನವನ್ನುಂಟುಮಾಡಿತ್ತು. ಹಣೆ ಚಚ್ಚಿಕೊಳ್ಳುವುದಲ್ಲದೆ ಬೇರೆ ಏನುಮಾಡುವುದಕ್ಕೂ ಸಾಧ್ಯವಿರಲಿಲ್ಲ. ಹಾದಿ ಹುಡುಕುವ ಶಕ್ತಿಯನ್ನು ದೇವರು ಹೆಣ್ಣುಮಕ್ಕಳಿಗೆ ಕೊಡಲಿಲ್ಲ. ಕೇವಲ ವ್ಯಥೆಯನ್ನು ಸಹಿಸುವ ಶಕ್ತಿಯನ್ನು ಮಾತ್ರ ಕೊಟ್ಟಿರುವನು; "ಅಸಂಭವವಾದದ್ದೇನಾದರೂ ಘಟಿಸದೇಕೆ ? ಯಾವುದಾದರೊಂದು ದೇವತೆಯ ವರವಾಗಲಿ ಯಾವುನಾದರೊಬ್ಬ ಯಕ್ಷನ ಸಂಪತ್ತಾಗಲಿ ಹಿಂದಿನ ಜನ್ಮದ ಯಾವುದಾದರೂ ಒಂದು ಹಳೆಯ ಸಾಲವಾಗಲಿ ಕೈಗೆ ಬರಬಾರದೆ ?" ಎಂದು ಹಾತೊರೆಯುವಳು. ಒಂದೊಂದು ದಿನ ರಾತ್ರಿ ಹಾಸಿಗೆಯಿಂದೆದ್ದು ತೋಟದಲ್ಲಿ ಸುಯ್‌ಗುಟ್ಟುತ್ತಿದ್ದ ಸರ್ವೆಗಿಡಗಳ ತುದಿಯ ಮೇಲೆ ದಿಟ್ಟಿಸಿ ನೋಡುವಳು. "ಓ, ನನ್ನ ರಾಜಪುತ್ರ ಎಲ್ಲಿರುವೆ ? ನಿನ್ನ ಏಳು ರಾಜಭಂಡಾರದ ಧನಮಾಣಿಕ್ಯವೆಲ್ಲಿ ? ನನ್ನ ಒಡಹುಟ್ಟಿದವರನ್ನು ಉಳಿಸು, ನಾನು ಚಿರ ಕಾಲ ನಿನ್ನ ದಾಸಿಯಾಗಿರುವೆ" ಎಂದು ಮನಸ್ಸಿನಲ್ಲೇ ಧ್ಯಾನ ಮಾಡುವಳು.

ಮನೆತನದ ದುರ್ಗತಿಗಾಗಿ ತನ್ನನ್ನು ಎಷ್ಟೆಷ್ಟು ದೂರುಕೊಳ್ಳುವಳೋ ಅಷ್ಟುಷ್ಟೂ ತನ್ನ ಹೃದಯದ ಅಮೃತಧಾರೆಯನ್ನು, ದುಃಖದಲ್ಲಿ ನವೆನವೆದು ಪುಟಕ್ಕಿಟ್ಟ ಚಿನ್ನದಂತಿದ್ದ ಪರಿಶುದ್ಧವಾದ ಪ್ರೀತಿಯನ್ನು ಅಣ್ಣಂದಿರ ಮೇಲೆ ತೋರಿಸುತ್ತಿದ್ದಳು. ಕುಮುದಳ ವಿಷಯವಾಗಿ ತಮ್ಮ ಹೊಣೆ ನಡೆಸಲು ಸಾಧ್ಯವಿಲ್ಲವೇ ಎಂದು ಅವಳ ಅಣ್ಣಂದಿರು ಕುಮುದಳನ್ನು ತಮ್ಮ ಒಲವಿನಿಂದ ಕವಿದಿಟ್ಟಿದ್ದರು. ಈ ತಂದೆ ತಾಯಿಲ್ಲದವಳಿಗೆ ಮೇಲಿರುವವನು ಯಾವ ಪ್ರೀತಿಯನ್ನು ದೊರಕಿಸದಿದ್ದನೋ ಅದನ್ನು ಅಣ್ಣಂದಿರು ಕೊಡಲು ಸದಾ ಹಾತೊರೆಯುತ್ತಿದ್ದರು. ಅವಳೊಂದು ಚಂದ್ರಪ್ರಭೆಯ ಮುರುಕು. ದುಸ್ಥಿತಿಯಿಂದ ಕವಿದ ಕತ್ತಲೆಯನ್ನು ಸವಿಯಾಗಿ ಮಾಡುವವಳು ಎಂದು ಎಣಿಸಿದ್ದರು. ನಡು ನಡುವೆ ತಾನು ದುರ್ಭಾಗ್ಯದ ವಾಹನ

ವೆಂದು ಅವಳು ತನ್ನನ್ನು ಧಿಕ್ಕರಿಸಿಕೊಂಡಾಗ ಅಣ್ಣ ವಿಪ್ರದಾಸ ನಕ್ಕು- "ಕುಮೂ, ನೀನು ಸ್ವತಃ ನಮ್ಮ ಸೌಭಾಗ್ಯ—ನೀನಿಲ್ಲದಿದ್ದರೆ ಮನೆಯಲ್ಲಿ ಸಂಪತ್ತೆಲ್ಲಿರುತ್ತಿತ್ತು ? " ಎನ್ನುವನು.

ಕುಮುದಿನಿ ಮನೆಯಲ್ಲೇ ಓದು ಬರಹ ಕಲಿಯುತ್ತಿದ್ದಳು. ಹೊರಗಿನ ಪರಿಚಯವಿಲ್ಲವೆಂದೇ ಅನ್ನಬಹುದು. ಹಳೆಯ ಬೆಳಕಿನಲ್ಲಿ ಮತ್ತು ಹೊಸಕತ್ತಲೆಯಲ್ಲಿ ಅವಳ ವಾಸ. ಅವಳ ಪ್ರಪಂಚ ಮಂಜುಮುಚ್ಚಿದ್ದು. ಅಲ್ಲಿಗೆ ಸಿದ್ಧೇಶ್ವರಿ, ಗಂಧೇಶ್ವರಿ, ಘೆಂಟೂ, ಯಷ್ಟೀ, ಇವರುಗಳು ಅಧಿಕಾರಿಗಳು. ಅಲ್ಲಿ ವಿಶೇಷದಿನಗಳಲ್ಲಿ ಚಂದ್ರ ಕಾಣಿಸನು. ಶಂಖಊದಿ ಗ್ರಹಣದ ಕುದೃಷ್ಟಿಯನ್ನು ಓಡಿಸಬೇಕಾಗಿದೆ. ಅಂಬುವಾಚಿಯಲ್ಲಿ ಅಲ್ಲಿ ಹಾಲುಕುಡಿದರೆ ಹಾವಿನ ಹೆದರಿಕೆ ಹೋಗುವುದು. ಮಂತ್ರಜಪಿಸಿ, ಮರಿ ಮೀಸಲುಕಟ್ಟಿ, ಅಡಕೆ ಬೆಣತಕ್ಕಿ ಮತ್ತು ಐದುಬಿಲ್ಲೆಯ ಶಿನ್ನಿ ಒಪ್ಪಿಸುವುದಾಗಿ ಹೇಳಿ, ಕಂಕಣ ತಾಯಿತಿ ಕಟ್ಟಿಕೊಂಡು ಆ ಪ್ರಪಂಚದ ಶುಭಾಶುಭದೊಡನೆ ವ್ಯವಹಾರ ನಡೆದೀತು. ಸ್ವಸ್ತ್ಯಯನದ ಶಕ್ತಿಯಿಂದ ಅದೃಷ್ಟ ತಿದ್ದುವ ಆಶೆ. ಆ ಆಶೆ ಸಾವಿರ ಬಾರಿ ವ್ಯರ್ಥವಾಗಿದೆ. ಅನೇಕ ವೇಳೆ ಶುಭಲಗ್ನದ ಶಾಖೆಯಲ್ಲಿ ಶುಭಫಲ ಫಲಿಸದೆಂದು ಪ್ರತ್ಯಕ್ಷವಾಗಿರುವುದು. ಆದರೂ ವಾಸ್ತವದ ಶಕ್ತಿಯಿಂದ ಪ್ರಮಾಣದ ಮೂಲಕ ಕನಸಿನ ಮೋಹವನ್ನು ಕತ್ತರಿಸಲು ಸಾಧ್ಯವಿಲ್ಲ. ಕನಸಿನ ರಾಜ್ಯದಲ್ಲಿ ವಿವೇಚನೆ ನಡೆಯದು. ಅಂಗೀಕರಿಸಿ ನಡೆಯುವುದೊಂದೇ ಅಲ್ಲಿ ನಡೆಯುವುದು. ಈ ಪ್ರಪಂಚದಲ್ಲಿ ದೈವದ ರಾಜ್ಯದಲ್ಲಿ ಯುಕ್ತಿಯ ಸುಸಂಗತಿಯ ತತ್ವ ಇವನ್ನು ಒಳ್ಳೆಯದು ಕೆಟ್ಟದರ ನಿತ್ಯ ತತ್ವವು ನುಂಗುವುದೆಂದೇ ಕುಮುದಿನಿಯ ಮುಖದಲ್ಲಿ ಅಷ್ಟೊಂದು ಕರುಣೆ. ತಪ್ಪುಮಾಡದೆಯೇ ತಾನು ನಾಚಿಕೆಗೆ ಗುರಿಯಾಗಿರುವುದನ್ನು ಅವಳು ಬಲ್ಲಳು. ಆ ನಾಚಿಕೆಯನ್ನು ಎಂಟುವರ್ಷಗಳಿಂದ ಗುಟ್ಟಾಗಿ ತನ್ನದಾಗಿ ಅಂಗೀಕರಿಸಿದಳು— ಅದು ತನ್ನ ತಂದೆಯ ಸಾವಿನಿಂದ ಆರಂಭವಾಗಿತ್ತು.

೪

ಪರಂಪರೆಯ ಧನಿಕರ ಮನೆಯಲ್ಲಿ ಹಿಂದಿನಕಾಲ ವಾಸಿಸುವ ದುರ್ಗದ ಕಟ್ಟಡ ಬಹಳ ಬಲವಾದುದು. ಹಲವು ಬಾಗಿಲುಗಳನ್ನು

ದಾಟಿದ ಮೇಲೆಯೇ ಹೊಸಕಾಲು ಅಲ್ಲಿಗೆ ಪ್ರವೇಶಿಸಲು ಸಾಧ್ಯ. ಅಲ್ಲಿಯುವರು ಹೊಸಯುಗವನ್ನು ಬಂದುಮುಟ್ಟಲು ಬಹಳ ವಿಳಂಬವಾಗುವುದು. ವಿಪ್ರದಾಸನ ತಂದೆ ಮುಕುಂದಲಾಲರೂ ಮುಂದೆ ಮುಂದೆ ಓಡುವ ಹೊಸ ಕಾಲವನ್ನು ಹಿಡಿಯಲಾರದಿದ್ದರು.

ಅವರ ಮೈ ಕಪ್ಪಗೆ ಎತ್ತರವಾಗಿತ್ತು. ಕರಿಯ ಗುಂಗುರು ಕೂದಲು. ದೊಡ್ಡ ದೊಡ್ಡ ಕಣ್ಣುಗಳಲ್ಲಿ ಅಪ್ರತಿಹತವಾದ ಪ್ರಭುತ್ವದ ದೃಷ್ಟಿ. ದೊಡ್ಡ ಧ್ವನಿಯಲ್ಲಿ ಕೂಗುಹಾಕುವರು. ಅನುಚರ ಪರಿವಾರದವರ ಎದೆ ಥರಥರ ಗುಟ್ಟುವುದು. ಜಟ್ಟಿಯನ್ನೇ ನೇಮಿಸಿಕೊಂಡು ನಿಯಮತಪ್ಪದೆ ಕುಸ್ತಿ ಆಡುತ್ತಿದ್ದರೂ, ದೇಹಶಕ್ತಿ ಕಡಮೆಯಿಲ್ಲದಿದ್ದರೂ ಸುಕುಮಾರ ಶರೀರದಲ್ಲಿ ಶ್ರಮದ ಚಿಹ್ನೆ ಕಾಣಿಸದು. ತೊಡಿಗೆಯಲ್ಲಿ ಕಸೂತಿಕೆಲಸ ಮಾಡಿದ ತೆಳುವಾದ ಮಸ್ಲಿನ್ ಜುಬ್ಬಾ. ಬಹು ಪ್ರಯತ್ನ ಪೂರ್ವಕವಾಗಿ ನೆರಿಹಿಡಿದು ನೆಲದವರೆಗೆ ಜೋಲುವ ಕಚ್ಚೆಹಾಕಿದ ಫರಾಸ್‌ಡಂಗಾ ಅಥವಾ ಢಾಕಾದ ಧೋತಿ. ಒಡೆಯ ಬರುತ್ತಿರುವನೆಂಬ ಸುದ್ದಿಯನ್ನು ಇಸ್ತಾಂಬೂಲಿನ ಅತ್ತರಿನ ಸುಗಂಧ ವಾರ್ತೆಯ ಮೂಲಕ ವಾಯು ಹೊತ್ತು ಹರಡುತ್ತಿತ್ತು. ಕೈಯಲ್ಲಿ ಭಂಗಾರದ ಅಡಿಕೆ ಎಲೆಯ ಡಬ್ಬಿಯನ್ನು ಹಿಡಿದುಕೊಂಡು ಖಾನ್‌ಸಾಮಾ ಹಿಂದೆ ಹಿಂದೆ ಬರುತ್ತಿದ್ದನು. ಬಾಗಿಲಲ್ಲಿ ಬಿಲ್ಲೆಹಾಕಿದ ಜವಾನ ಸದಾ ಸಿದ್ಧವಾಗಿರುತ್ತಿದ್ದ. ಹೆಬ್ಬಾಗಿಲ ಬಳಿ ಮುದುಕ ಚಂದ್ರ ಭಾನ್ ಜಮಾದಾರ ಹೊಗೆಸೊಪ್ಪು ಉಜ್ಜುವುದು ಮತ್ತು ರಾಮರಸ ಅರೆಯುವುದರ ನಡುವಣ ವಿರಾಮದಲ್ಲಿ ಬೆಂಚಿನ ಮೇಲೆ ಕುಳಿತು ನೀಳವಾದ ಗಡ್ಡವನ್ನು ಬಾರಿ ಬಾರಿಗೂ ಬಾಚಿ ಎರಡು ಕಿವಿಯ ಕಡೆಗೂ ಎಳೆದು ಕಟ್ಟುತ್ತಿದ್ದನು. ಕೆಳದರ್ಜೆಯ ದರವಾನರು ಬಿಚ್ಚುಗತ್ತಿಯ ಪಹರೆ ಕೊಡುತ್ತಿದ್ದರು.

ಬೈಠಕ್ ಖಾನೆಯಲ್ಲಿ ಮುಕುಂದಲಾಲರು ಬೆನ್ನಿಗೆ ದಿಂಬು ಆನಿಸಿಕೊಂಡು ಗದ್ದುಗೆಯ ಮೇಲೆ ಕೂರುತ್ತಿದ್ದರು. ಪಾರಿಷದವರು ಎದುರಿನಲ್ಲೂ ಎಡಗಡೆಗೂ ಇಬ್ಭಾಗವಾಗಿ ಕೆಳಗೆ ಕೂರುತ್ತಿದ್ದರು. ಹುಕ್ಕಾಬರ್ದಾರರುಗಳು ಇವರುಗಳಲ್ಲಿ ಯಾರ ಮರ್ಯಾದೆ ಯಾವಬಗೆ ಹುಕ್ಕಾದಿಂದ ರಕ್ಷಿತವಾಗುವದೆಂಬುದನ್ನು ಎಂದರೆ, ಕಟ್ಟುಹಾಕಿದ ನಳಿಕೆ ಕಟ್ಟುಹಾಕದ್ದು

ಅಥವಾ ಗುಡಿಗುಡಿಯೇ ಎಂಬುದನ್ನು ಬಲ್ಲರು. ಯಜಮಾನರಿಗಾಗಿ ಭಾರಿ ಆಲ್‌ಬೊಲಾ. ಪನ್ನೀರಿನ ಸುಗಂಧದಿಂದ ತುಂಬಿದ್ದು.

ಮನೆಯ ಮತ್ತೊಂದು ಭಾಗದಲ್ಲಿ ವಿಲಾಯಿತಿ ಬೈಠಖ್‌ಖಾನೆ. ಅಲ್ಲಿ ಹದಿನೆಂಟನೆಯ ಶತಮಾನದ ವಿಲಾಯಿತಿ ಸಾಮಾನುಗಳು. ಇದಿರಿನಲ್ಲೇ ಕಪ್ಪುಗೆರೆಬಿದ್ದ ಬಹು ದೊಡ್ಡ ಸಿಲುಗನ್ನಡಿ. ಅದರ ಗಿಲೀಟುಮಾಡಿದ ಚೌಕಟ್ಟಿನ ಇಕ್ಕೆಲದಲ್ಲೂ ರೆಕ್ಕೆ ಹರಡಿಕೊಂಡ ಸುರಸುಂದರಿಯ ಕೈಯಲ್ಲಿ ಹಿಡಿದ ದೀಪದಾನಿ. ಕೆಳಗೆ ಮೇಜಿನ ಮೇಲೆ ಭಂಗಾರದ ಮುಲಾಮಿನಿಂದ ಚಿತ್ರಿತವಾದ ಕರೀಕಲ್ಲಿನ ಗಡಿಯಾರ, ಮತ್ತೆ ಅವೆಷ್ಟುಬಗೆಯ ವಿಲಾಯಿತಿ ಗಾಜಿನ ಬೊಂಬೆಗಳು. ನೆಟ್ಟನೆಯ ಬೆನ್ನುಕುರ್ಚಿ, ಸೋಫಾಗಳು, ಸರಪಳಿಯಲ್ಲಿ ಜೋಲಾಡುವ ಜಾಜ್ವಲ್ಯಮಾನವಾದ ರಸಗುಂಡುಗಳು ಎಲ್ಲ ಹಾಲೆಂಡ್-ಬಟ್ಟೆಯಲ್ಲಿ ಮರೆಮಾಡಿದ್ದುವು. ಗೋಡೆಯ ಮೇಲೆ ಪೂರ್ವಪುರುಷರ ಆಯಿಲ್ ಪೆಯಿಂಟಿಂಗ್, ಮತ್ತೆ ಅವುಗಳ ಸಂಗಡ ವಂಶದ ಹಿತೈಷಿಗಳಾದ ಒಬ್ಬಿಬ್ಬರು ರಾಜಪುರುಷರ ಫೋಟೋ, ಕೊಟಡಿಯ ಅಳತೆಗೆ ಹಾಸಿದ್ದ ವಿಲಾಯಿತೀ ಜಮಖಾನೆ. ಅದರಲ್ಲಿ ದಪ್ಪ ದಪ್ಪ ಹೂಗಳು ಪಾಸಲು ಬಣ್ಣದಲ್ಲಿ ಚಿತ್ರಿತವಾಗಿದ್ದುವು. ವಿಶೇಷ ದಿನಗಳಲ್ಲಿ ಜಿಲ್ಲೆಯ ಸಾಹೇಬ ಜನರನ್ನು ಕರೆದಾಗ ಈ ಕೋಣೆಯ ಮೇಲುಮುಸುಕು ತೆರೆಯಲಾಗುತ್ತಿತ್ತು. ಮನೆಯಲ್ಲಿ ಇದೊಂದು ಮಾತ್ರವೇ ಆಧುನಿಕ ರೀತಿಯದು. ಆದರೆ ಇದೇ ಎಲ್ಲಕ್ಕೂ ಹಳೆಯ ದೆವ್ವಗಳ ಬೀಡಾದ ಕೋಣೆಯೆಂದು ಮನಸ್ಸಿಗೆ ಅನ್ನಿಸುವುದು. ಉಪಯೋಗಿಸದೆ, ದುರ್ವಾಸನೆ ತುಂಬಿ, ಜೀವನ ಯಾತ್ರೆಯಿಂದ ವಂಚಿತಳಾದ ವಿಧವೆಯಂತಿತ್ತು.

ಮುಕುಂದಲಾಲರ ಸುಖಲೋಲುಪತೆ ಆ ಕಾಲದ ಪದ್ಧತಿಗೆ ತಕ್ಕಂತಿತ್ತು. ಅದರಲ್ಲಿಯೂ ನಿರ್ಭಯವಾಗಿ ಹೆಚ್ಚುಹೆಚ್ಚಾಗಿ ಹಣವನ್ನು ಖರ್ಚುಮಾಡುತ್ತಿದ್ದುದರಿಂದಲೇ ಅವರ ಗೌರವ ಉಳಿದಿತ್ತು; ಅರ್ಥಾತ್ ಧನ ಹೊರೆಯಾಗಿ ತಲೆಗೆ ಹತ್ತಿರಲಿಲ್ಲ; ಪಾದಪೀಠವಾಗಿ ಕಾಲಿನಡಿಯಲ್ಲಿ ಇತ್ತು. ಇವರುಗಳ ವಿಲಾಸಪ್ರಿಯತೆಯ ಬಹಿರಂಗ ಸಭೆಯಲ್ಲಿ ದಾನ ದಕ್ಷಿಣೆ, ಅಂತರಂಗ ಸಭೆಯಲ್ಲಿ ಭೋಗವಿಲಾಸ- ಎರಡೂ ಪೂರ್ತ ದೊಡ್ಡ ಅಳತೆಯದು. ಒಂದುಕಡೆ ಆಶ್ರಿತ ವಾತ್ಸಲ್ಯದಿಂದ

ಎಷ್ಟು ಧಾರಾಳವಿತ್ತೋ ಮತ್ತೊಂದು ಕಡೆ ಉದ್ಧತೆಯನ್ನು ಅಡಗಿಸುವುದರಲ್ಲಿ ಅಷ್ಟು ಸಾಹಸವಿತ್ತು. ಆಕಸ್ಮಾತ್ತಾಗಿ ಹಣಗಾರನಾದ ನೆರೆಯವನೊಬ್ಬ ದೊಡ್ಡ ತಪ್ಪಿಗಾಗಿ ಯಜಮಾನರ ತೋಟದ ಮಾಲಿಯ ಮಗನ ಕಿವಿ ಹಿಡಿದಿದ್ದನಷ್ಟೆ. ಈ ಧನಿಕನಿಗೆ ಬುದ್ಧಿ ಕಲಿಸಲು ಖರ್ಚಾದ ಹಣದ ಮೊತ್ತ ಸ್ವಂತ ಮಗನಿಗೆ ಕಾಲೇಜಿನ ಓದಿಗೂ ಈ ಕಾಲದಲ್ಲಿ ಅಷ್ಟು ಖರ್ಚಾಗದು. ಆದರೆ ತೋಟಗಾರನ ಮಗನನ್ನು ಅಲಕ್ಷಿಸಲಿಲ್ಲ. ಚಾವಟಿಯಿಂದ ಹೊಡೆದು ಹಾಸಿಗೆಹಿಡಿಯುವಂತೆ ಮಾಡಿದ್ದರು. ಸಿಟ್ಟಿನ ಭರದಲ್ಲಿ ಚಾವಟಿಯ ಏಟಿನಿಂದ ಹುಡುಗನ ಉನ್ನತಿಯೂ ಆಯಿತು. ಯಜಮಾನರ ಖರ್ಚಿನಲ್ಲಿ ವಿದ್ಯೆ ಕಲಿತು ಈಗ ಅವನು ಮೊಖ್ತ್ಯಾರನಾಗಿರುವನು.

ಪುರಾತನ ಕಾಲದ ಧನವಂತರ ಪದ್ಧತಿಯಂತೆ ಮುಕುಂದಲಾಲರ ಜೀವನ ಎರಡು ಮನೆಗಳಲ್ಲಿ. ಒಂದರಲ್ಲಿ ಗಾರ್ಹಸ್ಥ್ಯ, ಇನ್ನೊಂದರಲ್ಲಿ ಮೋಜುಗಾರಿಕೆ. ಅಂದರೆ ಒಂದುಮನೆಯಲ್ಲಿ ದಶಕರ್ಮ, ಇನ್ನೊಂದರಲ್ಲಿ ಏಕಾದಶ ಕುಕರ್ಮ. ಮನೆಯಲ್ಲಿ ಒಡತಿ. ಅಲ್ಲಿ ಪೂಜೆ ಅರ್ಚನೆ, ಅತಿಥಿ ಸೇವೆ, ಹಬ್ಬ, ಹರಿದಿನ, ವ್ರತ- ಉಪವಾಸ, ಬ್ರಾಹ್ಮಣಭೋಜನ, ನೆರೆಹೊರೆಯವರು ಗುರುಪುರೋಹಿತರ ಆದರ ಸನ್ಮಾನ. ಮೋಜಿನ ಮನೆಯ ಆವರಣ ಹೊರಗಡೆ. ಅಲ್ಲಿ ನವಾಬರ ದರ್ಬಾರು, ಮಜಲಿಸುಗಳ ಮೇಲಾಟದಿಂದ ತಲೆ ಕಾದುಹೋಗಿತ್ತು. ಇಲ್ಲಿ ಬರುತ್ತಿದ್ದವರು ಮನೆಗೆ ಬರಲಾರದ ಪುರನಿವಾಸಿನಿಯರು. ಅವರ ಸಹವಾಸವನ್ನು ಆ ಕಾಲದ ಧನಿಕರು ನಾಗರಿಕತೆ ನಡವಳಿಕೆ ಕಲಿಯುವ ಮಾರ್ಗವೆಂದು ಎಣಿಸಿದ್ದರು. ಎರಡು ವಿರುದ್ಧ ಗಾಳಿಯಲ್ಲಿ ಇಕ್ಕೆಲದಲ್ಲಿ ನೆಲಸಿದ್ದ ಗ್ರಹ ಉಪಗ್ರಹಗಳನ್ನು ಕಟ್ಟಿಕೊಂಡು ಮನೆಯ ಒಡತಿಯರು ಬಹಳ ಸಹನೆಯಿಂದಿರಬೇಕಾಗುತ್ತಿತ್ತು.

ಮುಕುಂದಲಾಲರ ಹೆಂಡತಿ ನಂದರಾನಿ ಮಹಾ ಅಭಿಮಾನಿನಿ. ಸಹನೆಯೆಂಬುದು ಅವಳಿಗೆ ಸಂಪೂರ್ಣವಾಗಿ ಅಭ್ಯಾಸವಿಲ್ಲದ ವಿಷಯ. ಅದಕ್ಕೆ ಕಾರಣವಿತ್ತು. ಹೊರಗಡೆಗೆ ತನ್ನ ಗಂಡನ ಬಯಕೆಯ ಓಟ ಎಷ್ಟೇ ವೇಗವಾಗಿದ್ದರೂ ಒಳಗೊಳಗೆ ತನ್ನ ಕಡೆಗೇ ಬಲವಾದ ಆಕರ್ಷಣೆಯಿತ್ತೆಂಬುದನ್ನು ಆಕೆ ಬಲ್ಲಳು. ಆದರಿಂದಲೇ ಗಂಡ ತನ್ನ ಪ್ರೇಮದ ವಿಷಯದಲ್ಲಿ

ಸ್ವತಃ ಅನ್ಯಾಯಮಾಡಿದರೆ ಆಕೆ ಸಹಿಸಲಾರಳು. ಈ ಸಲವೂ ಇದೇ ನಡೆಯಿತು.

೫

ರಾಸಲೀಲೆಯ* ಸಮಯ. ಮಹಾ ಕೋಲಾಹಲ. ಕಲ್ಕತ್ತೆಯಿಂದ ಸ್ವಲ್ಪ, ಢಾಕಾದಿಂದ ಸ್ವಲ್ಪ, ಆಮೋದದ ವಸ್ತುಗಳು ಬಂದವು. ಮನೆಯ ಅಂಗಳದಲ್ಲಿ ಕೃಷ್ಣಲೀಲೆಯ ಆಟ ಏರ್ಪಾಟಾಗಿತ್ತು. ಒಂದೊಂದು ದಿನ ಕೀರ್ತನೆ. ಇಲ್ಲಿ ಹೆಣ್ಣುಮಕ್ಕಳ ಮತ್ತು ನೆರೆಹೊರೆಯವರ ಗುಂಪು. ಹಿಂದಿನ ವರ್ಷಗಳಲ್ಲಿ ಮತ್ತೊಂದು ಕಡೆ ಬೈಠಕ್‌ಖಾನೆಯಲ್ಲಿ ತಾಮಸಿಕ ಕಾರ್ಯಕ್ರಮದ ಏರ್ಪಾಡಿರುತ್ತಿತ್ತು. ಅಂತಃಪುರವಾಸಿಗಳಿಗೆ ರಾತ್ರಿ ನಿದ್ದೆ ಹತ್ತದು. ಎದೆಯಲ್ಲಿ ವ್ಯಥೆ ಕೊರೆಯುತ್ತಿದೆ. ಬಾಗಿಲ ಕಿಂಡಿಯಿಂದ ಅಷ್ಟಿಷ್ಟು ನೋಡಿಕೊಂಡು ಹೋಗಲು ಸಾಧ್ಯವಿತ್ತು. ಈ ಸಲ ನದಿಯ ಮೇಲೆ ಬಜರಾ§ದಲ್ಲಿ ಸೂಳೆಯರ ಮೇಳ ಕಟ್ಟಿಸಬೇಕೆಂದು ಮನಸ್ಸಾಯಿತು.

ಏನು ನಡೆಯುತ್ತಿದೆಯೆಂಬುದನ್ನು ನೋಡಲು ಎಡೆಯಿಲ್ಲವಲ್ಲ ಎಂದು ನಂದರಾಣಿಯ ಮನಸ್ಸು ಮಾತಾಡಲು ಅವಕಾಶವಿಲ್ಲದೆ ಕತ್ತಲೆಯಲ್ಲಿ ಬಿಕ್ಕಿ ಬಿಕ್ಕಿ ಅಳುತ್ತಿತ್ತು. ಮನೆಗೆಲಸ, ಬರುವವರು ಹೋಗುವವರ ಊಟ ಉಪಚಾರ ಇವೆಲ್ಲವನ್ನೂ ನಗುಮುಖದೊಡನೆಯೇ ನಡೆಸಬೇಕಾಗಿತ್ತು. ಎದೆಯೊಳಗೆ ನೆಲಸಿದ್ದ ಮುಳ್ಳು ನಡೆದಾಗ, ಅಲುಗಿದಾಗ, ಚುಚ್ಚುತ್ತಿತ್ತು. ಜೀವ ತಲ್ಲಣಿಸುತ್ತಿತ್ತು. ಯಾರಿಗೂ ಅರಿವಾಗುತ್ತಿರಲಿಲ್ಲ. ಅತ್ತ ಮೇಲೆ "ರಾಣಿಯವರಿಗೆ ಜಯವಾಗಲಿ" ಎಂದು ತೃಪ್ತ ಕಂಠಗಳಿಂದ ದನಿ ಹೊರಡುತ್ತಿತ್ತು.

ಕೊನೆಗೆ ಉತ್ಸವದ ಸಮಯ ಕಳೆಯಿತು. ಮನೆ ಬಡವಾಯಿತು. ಹರಿದ ಬಾಳೆಎಲೆ, ಹಾಲು, ಮೊಸರು, ಮಿಠಾಯಿಯ ಕುಡಿಕೆಗಳ ಚೂರುಗಳ ಮೇಲೆ ಕಾಗೆ ನಾಯಿಗಳ ಕಲರವದ ಉತ್ತರಕಾಂಡ ನಡೆಯುತ್ತಿತ್ತು. ಆಳುಗಳು ಕಾಲಾವದಿ ಕಟ್ಟಿ ಲಾಂದ್ರಗಳನ್ನು ಬಿಚ್ಚಿದರು. ಚಾಂದೊಯಾ

---

* ರಾಸಲೀಲೆ–ಗೋಕುಲಾಷ್ಟಮಿಯ ಸಮಯ.

§ ಬಜರಾ–ಒಂದು ಜಾತಿಯ ದೊಡ್ಡ ದೋಣಿ.

2

ಇಳಿಯಿತು. ಮೇಣದ ಬತ್ತಿಯ ತುಂಡು, ಬೆಂಡಿನ ಹೂಗಳ ತೋರಣ ಇವುಗಳಿಗಾಗಿ ನೆರೆಯ ಹುಡುಗರು ಕಾದಾಡುತಿದ್ದರು. ಆ ಗುಂಪು ಗದ್ದಲದ ನಡುವೆ ಆಗಾಗ ಕಪಾಳಕ್ಕೆ ಹೊಡೆದ ಏಟಿನ ಸದ್ದು ಆಕಾಶವನ್ನೇ ಭೇದಿಸಿ ಕೊಂಡು ಹೋಗುತ್ತಿತ್ತು. ಅಂತಃಪುರದ ಅಂಗಳದಲ್ಲಿ ಎಂಜಲು ಅನ್ನ ಕಾಯಿ ಪಲ್ಯಗಳ ವಾಸನೆಯಿಂದ ಗಾಳಿಯೆಲ್ಲ ಹುಳಿ ವಾಸನೆ. ಎಲ್ಲಿಡೆ ಯಲ್ಲೂ ದಣಿವು, ಆಲಸಿಕೆ ಮತ್ತು ಕೊಳಕು. ಈಗಲೂ ಮುಕುಂದ ಲಾಲರು ಹಿಂದಿರುಗಿ ಬಾರದಿರಲು ಈ ಶೂನ್ಯತೆ ಸಹಿಸಲು ಅಸಾಧ್ಯವಾ ಯಿತು. ಸುದ್ದಿ ಅರಿಯುವ ಮಾರ್ಗವಿಲ್ಲವೆಂದೇ ನಂದರಾಣಿಯ ಧೈರ್ಯದ ಕಟ್ಟೆ ಇದ್ದಕ್ಕಿದ್ದಂತೆ ಒಡೆದು ನುಚ್ಚುನೂರಾಯಿತು.

ದಿವಾನ್‌ಜಿಯವರನ್ನು ಕರೆಸಿ ಪರದೆಯ ಮರೆಯಿಂದ "ವೃಂದಾವನ ದಲ್ಲಿ ಅಮ್ಮನ ಬಳಿಗೆ ನಾನು ಹೋಗಬೇಕಾಗಿದೆ. ಅವಳಿಗೆ ಮೈಯಲ್ಲಿ ಚೆನ್ನಾಗಿಲ್ಲ. ಯಜಮಾನರಿಗೆ ತಿಳಿಸಿ'' ಎಂದಳು.

ದಿವಾನ್‌ಜಿಯವರು ಕೆಲಹೊತ್ತು ಬಕ್ಕದಲೆಯ ಮೇಲೆ ಕೈಯಾಡಿಸಿ ಮೆಲುದನಿಯಲ್ಲಿ "ಯಜಮಾನರಿಗೆ ತಿಳಿಸಿ ಹೋಗಿದ್ದರೆ ಉತ್ತಮ ವಾಗಿತ್ತು. ಇಂದೋ ನಾಳೆಯೋ ಮನೆಗೆ ಹಿಂದಿರುಗುವರೆಂದು ಸುದ್ದಿ ಕೇಳಿರುವೆನು" ಎಂದರು.

"ಇಲ್ಲ, ನಿಧಾನಮಾಡಲು ಸಾಧ್ಯವಿಲ್ಲ''

ಒಂದೆರಡು ದಿನಗಳಲ್ಲೇ ಹಿಂದಿರುಗುವರೆಂಬ ಸುದ್ದಿಯನ್ನು ನಂದ ರಾಣಿ ಕೇಳಿದ್ದಳು. ಆದುದರಿಂದಲೇ ಹೊರಟುಹೋಗಲು ಇಷ್ಟು ಆತುರ. ಅಲ್ಪಸ್ವಲ್ಪ ಅತ್ತು ಕರೆದು ಆಣೆಯಿಟ್ಟುಕೊಳ್ಳುವುದರೊಡನೆ ಎಲ್ಲ ತೀರಿಹೋಗುವುದನ್ನೂ ಚೆನ್ನಾಗಿ ಬಲ್ಲಳು. ಪ್ರತಿ ಬಾರಿಯೂ ಹೀಗೆಯೇ ಆಗಿದೆ. ತಕ್ಕ ಶಾಸ್ತಿ ಅಸಮಾಪ್ತಿಯಾಗಿಯೇ ಉಳಿಯುವುದು. ಈ ಬಾರಿ ಅದು ಯಾವ ಬಗೆಯಲ್ಲೂ ಸಾಧ್ಯವಿಲ್ಲ. ಶಿಕ್ಷೆಯ ವಿಧಾನ ತೀರ್ಮಾನಿಸಿ ಕೂಡಲೇ ಶಿಕ್ಷೆವಿಧಿಸಿದವರು ಓಡಬೇಕಾಗಿದೆ. ಹೊರಡುವುದಕ್ಕೆ ಮುಂಚಿನ ಗಳಿಗೆಯಲ್ಲಿ ಕಾಲು ಸರಿಯಬಯಸದು—ಮಲಗುವ ಮಂಚದ ಮೇಲೆ ಬೋರಲಾಗಿ ಬಿದ್ದು ಬಿಕ್ಕಿಬಿಕ್ಕಿ ಅಳತೊಡಗಿದಳು. ಆದರೆ ಹೋಗುವುದು ನಿಲ್ಲಲಿಲ್ಲ.

ಕಾರ್ತಿಕಮಾಸದ ಮಧ್ಯಾಹ್ನಕಾಲ. ಬಿಸಿಲಿಗೆ ಗಾಳಿ ಬಹು ಶಾಖವಾಗಿತ್ತು. ರಸ್ತೆಯ ಅರುಗಿನ ಗಿಡಮರಗಳ ಮರ್ಮರದೊಡನೆ ಸ್ವಲ್ಪ ಗಂಟಲೊಡೆದ ಕೋಗಿಲೆಯ ದನಿ ಕೇಳಿಬರುತ್ತಿತ್ತು. ಪಲ್ಲಕ್ಕಿ ಹೋಗುತ್ತಿದ್ದ ಹಾದಿಯಿಂದ ಹಸುರು ಗದ್ದೆಯ ಬಳಿ ನದಿ ಕಾಣಿಸುತ್ತಿತ್ತು. ಆಚೆ ದಡದ ಮೈದಾನದ ಅರುಗಿನಲ್ಲಿ ಬಜರಾ ನಿಂತಿತ್ತು. ಸ್ತಂಭದ ಮೇಲೆ ಮನೆತನದ ಬಾವುಟ ಹಾರುತ್ತಿತ್ತು. ಬಜರಾದ ಸೂರಿನ ಮೇಲೆ ಚಿರಪರಿಚಿತನಾದ ಗೋಪೀ ಹರಿಕಾರನು ಕುಳಿತಿರುವುದು ದೂರದಿಂದ ಕಾಣುತ್ತಿತ್ತು. ಅವನ ಪಗಡಿಯ ಬಿಲ್ಲೆಯಮೇಲೆ ಸೂರ್ಯನ ಕಿರಣ ಥಳಥಳಿಸುತ್ತಿತ್ತು. ಬಲವಾಗಿ ಪಲ್ಲಕ್ಕಿಯ ಕದ ಮುಚ್ಚಿದ್ದಳು. ಎದೆಯ ಒಳಭಾಗ ಕಲ್ಲಿಸಂತಾಯಿತು.

೬

ಮುಕುಂದಲಾಲರು ಧ್ವಜಮುರಿದು, ಪಟಹರಿದು ಪೆಟ್ಟುತಗುಲಿ ಬಿರುಗಾಳಿಗೆ ಸಿಕ್ಕಿ ಸೊರಗಿದ ಹಡಗಿನಂತೆ ಸಂಕೋಚದೊಡನೆ ನೆಲೆಗೆ ಬಂದು ಸೇರಿದರು. ಅಪರಾಧದ ಹೊರೆಯಿಂದ ಎದೆ ಭಾರವಾಗಿತ್ತು. ಪ್ರಮೋದದ ನೆನಪು, ಹೊಟ್ಟೆತುಂಬ ಉಂಡಮೇಲೆ ಉಳಿದಿರುವ ಉಚ್ಛಿಷ್ಟದಂತೆ ಮನಸ್ಸಿಗೆ ಬೇಸರವುಂಟುಮಾಡುತ್ತಿತ್ತು. ಆ ಆಮೋದ ಉತ್ಸಾಹದಾತೃಗಳೂ, ಉದ್ಯೋಗಕರ್ತೃಗಳೂ ಏನಾದರೂ ಇದಿರಿನಲ್ಲಿಇದ್ದುದಾದರೆ ಅವರುಗಳನ್ನು ಚಾವಟಿಯಿಂದ ಬಾರಿಸಿಬಿಡುತ್ತಿದ್ದರು. “ಪುನಃ ಎಂದೆಂದಿಗೂ ಹೀಗಾಗಲು ಎಡೆಕೊಡೆನು” ಎಂದು ಮನಸ್ಸಿನಲ್ಲೇ ಪಣತೊಟ್ಟರು. ಅವರ ಕೆದರಿದ ತಲೆಗೂದಲು ಕೆಂಪೇರಿದ ಕಣ್ಣುಗಳು, ಒಣಗಿದ ಮುಖಭಾವವನ್ನು ನೋಡಿ ಯಜಮಾನಿಯ ಪ್ರಯಾಣದ ಸುದ್ದಿ ತಿಳಿಸಲು ಯಾರಿಗೂ ಧೈರ್ಯವಾಗಲಿಲ್ಲ. ಮುಕುಂದಲಾಲರು ಅಂಜುತ್ತಅಂಜುತ್ತಅಂತಃಪುರವನ್ನುಹೊಕ್ಕರು. “ಯಜಮಾನೀ ಕ್ಷಮಿಸು, ತಪ್ಪಾಯಿತು, ಮತ್ತೆ ಎಂದೂ ಹೀಗಾಗದು” ಎಂದು ಮನಸ್ಸಿನಲ್ಲೇ ಅನ್ನುತ್ತ ಮಲಗುವ ಮನೆಯ ಬಾಗಿಲ ಬಳಿ ಸ್ವಲ್ಪ ನಿಂತು ಮೆಲ್ಲಮೆಲ್ಲನೆ ಒಳಹೊಕ್ಕರು. ಬಿಗುಮಾನಗೊಂಡಾಕೆ ಮಂಚದ ಮೇಲೆ ಮಲಗಿರುವಳೆಂದೇ ಮನದಲ್ಲಿ ತೀರ್ಮಾನಿಸಿದ್ದರು. ನೆಟ್ಟಗೆ ಕಾಲ ಬಳಿ ಹೋಗಿ ಬೀಳಬೇಕು ಎಂದು ಎಣಿಸಿ ಕೋಣೆ ಹೊಕ್ಕರು. ಕೋಣೆ ಬರಿದಾಗಿತ್ತು. ಹೃದಯ ಸ್ತಬ್ಧವಾಯಿತು. ಮಲಗುವ ಮನೆಯಲ್ಲಿ ಸುಪ್ಪತ್ತಿಗೆಯ

ಮೇಲೆ ನಂದರಾಣಿಯನ್ನು ಕಂಡಿದ್ದರೆ, ದುಗುಡಗೊಂಡವಳು ಕ್ಷಮೆ ತೋರಲು ಅರ್ಧಹಾದಿ ಮುಂದಕ್ಕೆ ಬಂದಿರುವಳೆಂದು ಅರಿಯುತ್ತಿದ್ದರು. ಆದರೆ ಯಜಮಾನಿ ಮಲಗುವ ಮನೆಯಲ್ಲಿ ಇಲ್ಲದಿರಲು ಆಗ ಮುಕುಂದಲಾಲರು ತಮ್ಮ ಪ್ರಾಯಶ್ಚಿತ್ತವು ದೀರ್ಘವೂ ಕಠಿಣವೂ ಆಗುವುದೆಂದು ಅರಿತರು. ಪ್ರಾಯಶಃ ರಾತ್ರಿಯವರೆಗೆ ನಿರೀಕ್ಷಿಸಬೇಕಾದೀತು. ಇಲ್ಲವೆ ಇನ್ನೂ ನಿಧಾನವಾಗಬಹುದು. ಆದರೆ ಅಷ್ಟು ಹೊತ್ತು ನೆಮ್ಮದಿಯಿಂದಿರುವುದು ಅವರಿಂದ ಸಾಧ್ಯವಾಗದ ಸಂಗತಿ. "ಸಂಪೂರ್ಣ ಶಾಸ್ತಿಯನ್ನು, ಈಗಲೇ ತಲೆ ಒಡ್ಡಿ ಕ್ಷಮಾಪಣೆ ಪಡೆಯುವೆ. ಇಲ್ಲವಾದರೆ ನೀರನ್ನೂ ಕುಡಿಯೆನು" ಎಂದು ನಿರ್ಧರಿಸಿದರು. ಹೊತ್ತು ಏರಿತ್ತು. ಇನ್ನೂ ಸ್ನಾನ, ಆಹಾರ ತೀರಿಲ್ಲದುದನ್ನು ಕಂಡು ಯಾವ ಸಾಧ್ವೀ ತಾನೆ ಸುಮ್ಮನಿದ್ದಾಳು—ಮಲಗುವ ಮನೆಯಿಂದ ಹೊರಬಿದ್ದು ಬಂದು ನೋಡಿದರು—ದಾಸಿ ಪ್ಯಾರಿಯು ವರಾಂಡದ ಒಂದು ಮೂಲೆಯಲ್ಲಿ ಮುಖ ಮುಚ್ಚಿಕೊಂಡು ನಿಂತಿದ್ದಳು. "ನಿಮ್ಮ ಅಮ್ಮನವರು ಎಲ್ಲಿಗೆ ಹೋಗಿರುವರು" ಎಂದು ಕೇಳಿದರು.

"ಅವರು ತಮ್ಮ ತಾಯಿಯನ್ನು ನೋಡಲು ವೃಂದಾವನಕ್ಕೆ ಹೋದರು" ಎಂದಳು.

ಸರಿಯಾಗಿ ಅರಿಯದೆ ಹೋದರು. ಬಿಗಿದ ಕೊರಲಿನಲ್ಲಿ "ಎಲ್ಲಿಗೆ ಹೋಗಿದ್ದಾರೆ ?" ಎಂದರು.

"ವೃಂದಾವನಕ್ಕೆ, ಅವರ ತಾಯಿಗೆ ಖಾಯಿಲೆ".

ಮುಕುಂದಲಾಲರು ನೆಟ್ಟಗೆ ವರಾಂಡದ ಕಟಕಟಿಯನ್ನು ಹಿಡಿದು ನಿಂತರು. ಅನಂತರ ವೇಗವಾಗಿ ಹೊರಗೆ ಬೈಠಕ್ ಖಾನೆಯಲ್ಲಿ ಹೋಗಿ ಕುಳಿತರು. ಒಂದುಮಾತೂ ಆಡಲಿಲ್ಲ. ಹತ್ತಿರ ಬರಲು ಯಾರಿಗೂ ಧೈರ್ಯವಿರಲಿಲ್ಲ.

ದಿವಾನ್‌ಜಿಯವರು ಬಂದು ಮೆಲ್ಲಮೆಲ್ಲನೆ "ಅಮ್ಮನವರನ್ನು ಕರೆತರಲು ಜನ ಕಳುಹಲೇನು ?" ಎಂದರು.

ಒಂದು ಮಾತೂ ಆಡದೆ ಕೇವಲ ಬೆರಳು ಸನ್ನೆಯಿಂದ ಬೇಡವೆಂದು ತಿಳಿಸಿದರು. ದಿವಾನ್‌ಜಿ ಹೊರಟುಹೋಗಲು ರಾಧು ಖಾನ್‌ಸಾಮಾ* ನನ್ನು ಕರೆದು “ಬ್ರಾಂದಿ ತೆಗೆದುಕೊಂಡು ಬಾ” ಎಂದರು.

ಮನೆಯ ಜನರೆಲ್ಲ ಮುಂದುಗಾಣದವರಾದರು. ಭೂಕಂಪ ಪೃಥ್ವಿಯ ಗಭೀರ ಗರ್ಭದಿಂದ ತಲೆಕೊಡವಿಕೊಂಡು ಏಳುವಾಗ ಅದನ್ನು ಅಡಗಿಸುವ ಪ್ರಯತ್ನಮಾಡುವುದು ವ್ಯರ್ಥ. ನಿರುಪಾಯರಾಗಿ ಅದರ ಹಾವಳಿಯನ್ನು ಸಹಿಸಲೇಬೇಕು.–ಇದೂ ಅದರಂತೆಯೇ.

ಹಗಲು ರಾತ್ರಿ ನೀರು ಬೆರಸದ ಬ್ರಾಂದಿ ಉಪಯೋಗವಾಗುತ್ತಿತ್ತು. ಊಟ ತಿಂಡಿ ಇಲ್ಲವೆಂದೇ ಅನ್ನಬಹುದು. ಒಂದನೆಯದಾಗಿ ಮೈ ಮೊದಲೇ ದಣಿದಿದ್ದಿತು. ಅದರ ಮೇಲೆ ಈ ಪ್ರಚಂಡ ಅನಿಯಮದಿಂದ ಸನ್ನಿಪಾತ ದೊಡನೆ ರಕ್ತ ವಮನವಾಗತೊಡಗಿತು.

ಕಲ್ಕತ್ತೆಯಿಂದ ಡಾಕ್ಟರ್ ಬಂದರು–ಹಗಲು ರಾತ್ರಿ ತಲೆಗೆ ಮಂಜು ಗಡ್ಡೆ ಕಟ್ಟಿಟ್ಟರು.

ಮುಕುಂದಲಾಲರು ಯಾರನ್ನು ಕಂಡರೆ ಅವರ ಮೇಲೆ ಹುಚ್ಚು ಹುಚ್ಚಾಗಿ ರೇಗುತ್ತಿದ್ದರು. ಮನೆಯ ಜನರೆಲ್ಲರೂ ತಮಗೆ ವಿರುದ್ಧವಾಗಿ ಒಳಸಂಚು ನಡೆಸುತ್ತಿರುವರೆಂದು ಅವನ ನಂಬಿಕೆ. “ಇವರುಗಳು ಅವಳನ್ನು ಹೋಗಗೊಟ್ಟರೇಕೆ ?” ಎಂದು ಒಳಗೊಳಗೇ ಆಕ್ಷೇಪಣೆ ಹೂಡುತ್ತಿದ್ದರು.

ಕುಮುದಿನಿ ಒಬ್ಬಳು ಮಾತ್ರ ಅವರ ಹತ್ತಿರ ಸುಳಿಯಲು ಸಾಧ್ಯ. ಅವಳು ಬಂದು ಮಗ್ಗುಲಲ್ಲಿ ಕೂರುವಳು. ಮುಕುಂದಲಾಲರು ಬಿಡುಗಣ್ಣಿನಿಂದ ಅವಳ ಮುಖ ನೋಡುತ್ತಿದ್ದರು–ತಾಯಿಯ ಸಂಗಡ ಅವಳ ಕಣ್ಣಿನಲ್ಲೋ ಹುಬ್ಬಿನಲ್ಲೋ ಏನಾದರೂ ಹೋಲಿಕೆ ಕಾಣುವುದೇ ಎಂದು ಯೋಚಿಸುವಂತಿತ್ತು. ಒಮ್ಮೊಮ್ಮೆ ಅವಳ ತಲೆಯನ್ನು ಎದೆಗೆ ಅಪ್ಪಿಕೊಂಡು ತೆಪ್ಪನೆ ಕಣ್ಣುಮುಚ್ಚಿಕೊಂಡಿರುತ್ತಿದ್ದರು. ಕಣ್ಣ ಕೊನೆಯಿಂದ ನೀರು ಹರಿಯುತ್ತಿತ್ತು. ಆದರೆ ಮರೆವಿನಿಂದಲೂ ಒಮ್ಮೆ ಅವಳ ತಾಯಿಯ ಮಾತೆತ್ತಲಿಲ್ಲ.

---

* ಖಾನ್‌ಸಾಮಾ–ಅಡಿಗೆಯ ಪರಿಚಾರಕ.

ಇತ್ತ ವೃಂದಾವನಕ್ಕೆ ತಂತಿ ಹೋಗಿದ್ದಿತು. ಯಜಮಾನಿಯವರು ಮರುದಿನವೇ ಬರುವರೆಂಬ ಸುದ್ದಿಯಿತ್ತು. ಆದರೆ ಹಾದಿಯಲ್ಲಿ ಎಲ್ಲಿಯೋ ರೈಲ್ವೆ ಪ್ರಯಾಣಕ್ಕೆ ಅಡ್ಡಿಯಾಗಿದೆಯೆಂದು ಸುದ್ದಿ ಬಂದಿತು.

೭

ಅವತ್ತು ತದಿಗೆ. ಸಂಜೆಯಲ್ಲಿ ಬಿರುಗಾಳಿ ಆರಂಭಿಸಿತು. ತೋಟದಲ್ಲಿ ಲಟಲಟನೆ ಮರದ ಕೊಂಬೆಗಳು ಮುರಿಯುತ್ತಿದ್ದವು. ಇದ್ದಕ್ಕಿದ್ದ ಹಾಗೆ ಮಳೆ, ಕೆರಳಿದ ಕೋಪದಂತೆ ಬಡಿದು ಬಾರಿಸುತ್ತಿತ್ತು. ಆಳು ಕಾಳುಗಳು ಊಟಮಾಡಲು ಕಟ್ಟಿಸಿದ್ದ ವಸಾರೆಗೆ ಹೊದಿಸಿದ್ದ ಜಿಂಕ್‌ಷೀಟ್ ಹಾರಿಹೋಗಿ ಕೊಳದಲ್ಲಿ ಬಿದ್ದಿತು. ಗಾಳಿ, ಬಾಣ ತಗುಲಿದ ಹುಲಿಯಂತೆ ಗೊರ್ ಗೊರ್ ಎಂದು ಗೊರಗುಟ್ಟುತ್ತ ಆಕಾಶದ ಮೂಲೆ ಮೂಲೆಯಲ್ಲೆಲ್ಲಾ ಬಾಲ ಬಡಿಯುತ್ತ ಸುರುಳಿ ಸುತ್ತಿ ತಿರುಗುತ್ತಿತ್ತು. ಹಠಾತ್ತಾಗಿ ಗಾಳಿಯ ಹೊಡೆತಕ್ಕೆ ಕಿಟಕಿ ಬಾಗಿಲುಗಳು ದಡದಡನೆ ನಡುಗತೊಡಗಿದವು. ಕುಮುದಿನಿಯ ಕೈ ಅದುಮಿ ಹಿಡಿದುಕೊಂಡು ಮುಕುಂದಲಾಲರು "ತಾಯಿ ಕುಮು, ಭಯವಿಲ್ಲ, ನೀನಂತೂ ಯಾವ ತಪ್ಪನ್ನೂ ಮಾಡಿಲ್ಲ. ಅಗೋ ನೋಡು ಹಲ್ಲು ಕಡಿಯುವುದನ್ನು. ಅವರುಗಳು ನನ್ನನ್ನು ಹೊಡೆಯಲು ಬರುತ್ತಿರುವರು" ಎಂದರು.

ಅಪ್ಪನ ತಲೆಯ ಮೇಲೆ ಮಂಜುಗಡ್ಡೆಯ ಗಂಟನ್ನು ಒತ್ತುತ್ತ ಕುಮುದಿನಿ—"ಹೊಡೆಯುವರೇಕೆ ಅಪ್ಪಾ? ಬಿರುಗಾಳಿ ಬೀಸುತ್ತಿದೆ. ಈಗಲೇ ನಿಂತುಬಿಡುವುದು" ಎಂದಳು.

"ವೃಂದಾವನ? ವೃಂದಾವನ....ಚಂದ್ರ....ಚಕ್ರವರ್ತಿ. ಅಪ್ಪನಕಾಲದ ಪುರೋಹಿತ-ಅವನಂತೂ ಸತ್ತುಹೋಗಿರುವನು. ದೆವ್ವವಾಗಿಬಿಟ್ಟಿದ್ದಾನೆ ವೃಂದಾವನದಲ್ಲಿ. ಅವನು ಬರುವನೆಂದು ಯಾರು ಹೇಳಿದರು?"

"ಮಾತನಾಡಬೇಡ ಅಪ್ಪ, ಸ್ವಲ್ಪ ನಿದ್ದೆಹೋಗು"

"ಅಗೋ ನೋಡು-ಎಚ್ಚರಿಕೆ, ಎಚ್ಚರಿಕೆ, ಎಂದು ಕಾಗೆ ಹೇಳುತ್ತಿದೆ"

"ಏನೂ ಇಲ್ಲ, ಗಾಳಿಯ ವೇಗ ಮರಗಳನ್ನು ಅಲುಗಿಸುತ್ತಿದೆ"

"ಯಾಕೆ, ಅವಳ ಕೋಪವಾದರೂ ಏಕೆ? ಇಷ್ಟರಲ್ಲಿ ತಪ್ಪೇನು ಮಾಡಿದೆ. ನೀ ಹೇಳು ಮಗು"

"ಯಾವ ತಪ್ಪೂ ಮಾಡಿಲ್ಲ ಅಪ್ಪ. ಸ್ವಲ್ಪ ನಿದ್ದೆ ಹೋಗು"

"ವಿಂದೇ ದೂತೀ? ಅದೇ ಮಧು ಅಧಿಕಾರಿ ವೇಷಹಾಕುವನಲ್ಲ?
ಮಿಛೆಕರ್ ಕೆನೊ ನಿಂದೆ....
ಉಗೋ ವಿಂದೇ ಶ್ರೀ ಗೋವಿಂದೇ...."

(ವ್ಯರ್ಥದಲಿ ನಿಂದಿಸುವೆಯೇಕೆ-ಎಲೇ ವಿಂದೇ, ಶ್ರೀ ಗೋವಿಂದನಾ! ಕಣ್ಣುಮುಚ್ಚಿಕೊಂಡು ಗುಯ್‌ಗುಯ್ ಎಂದು ಹಾಡತೊಡಗಿದರು).

ಕಾರ್ ಬಾಂಶಿ ಪಿ ಬಾಜೆ ವೃಂದಾವನೇ
ಸಯಿ ಲೋ ಸಯಿ
ಘರೇ ಆಮೀ ರಯಿಬೊ ಕೆಮನೆ....

(ಯಾರ ವೇಣುವಿದು ಬಾಜಿಸುತಿದೆ ವೃಂದಾವನದಲೀ
ಸಖಿ ಓ ಸಖಿ
ಮನೆಯಲಿ ನಾನು ಇರುವೆನೆಂತು.)

ರಾಧೂ, "ಬ್ರಾಂಡಿ ಲೇ ಆವ್"

ಕುಮುದಿನಿ ತಂದೆಯ ಮುಖದೆಡೆಗೆ ಬಗ್ಗಿ "ಅಪ್ಪಾ, ಅದೇನು ಹೇಳಿದೆ?" ಎಂದಳು. ಮುಕುಂದಲಾಲರು ಕಣ್ಣುತೆರೆದು ನೋಡಿ ನಾಲಗೆ ಕಚ್ಚಿಕೊಂಡು ತೆಪ್ಪನಾದರು. ಬುದ್ಧಿ ಹದತಪ್ಪಿದ ಈ ಸಮಯದಲ್ಲೂ ಕುಮುದಿನಿಯ ಇದಿರಿನಲ್ಲಿ ಮದ್ಯದ ಸಂಚಾರಕ್ಕೆ ಎಡೆಯಿಲ್ಲವೆಂಬ ಅಂಶವನ್ನು ಮರೆಯಲಿಲ್ಲ. ಸ್ವಲ್ಪ ಹೊತ್ತಾದ ನಂತರ ಪುನಃ ಹಾಡತೊಡಗಿದರು—

"ಶ್ಯಾಮೇರ್ ಬಾಂಸಿ ಕಾಡ್‌ತೆ ಹೊಬೆ
ನಯಿಲೆ ಆಮಾಯ್ ಏ ವೃಂದಾವನ್ ಛಾಡತೆ ಹೊಬೆ"

(ಶ್ಯಾಮನ ವೇಣುವನ್ನು ಕಸಿದುಕೊಳ್ಳಬೇಕು; ಇಲ್ಲದಿದ್ದರೆ ನನಗೆ ಈ ವೃಂದಾವನ ಬಿಡಬೇಕು)

ಈ ಅಸ್ತವ್ಯಸ್ತ ಹಾಡನ್ನು ಕೇಳಿ ಕುಮುದಿನಿಯ ಎದೆ ಬಿರಿಯುತಿತ್ತು. ತಾಯಿಯು ಕೋಪಗೊಳ್ಳುತ್ತಿದ್ದಳು. ತಂದೆಯ ಕಾಲ ಬಳಿ ತಾಯಿಯ ಪರವಾಗಿ ಕ್ಷಮೆ ಬೇಡುವಳಂತೆ ತಲೆಯಿಡುವಳು.

ಮುಕುಂದರು ಹಠಾತ್ತಾಗಿ "ದಿವಾನ್‌ಜಿ" ಎಂದು ಕೂಗುಹಾಕಿದರು.

ದಿವಾನ್‌ಜಿ ಬಂದ ಮೇಲೆ "ಅದೇನು ಠಕ್‌ಠಕ್ ಸದ್ದು ಕೇಳಿಸುವುದಲ್ಲ" ಎಂದರು.

ದಿವಾನ್‌ಜಿ "ಗಾಳಿಗೆ ಕದಗಳು ಸದ್ದುಮಾಡುತ್ತಿವೆ" ಎಂದರು.

"ಮುದಿಯ ಬಂದಿದ್ದಾನೆ. ಆ ವೃಂದಾವನ ಚಂದ್ರ, ಬಕ್ಕದಲೆ, ಕೈಯಲ್ಲಿ ದೊಣ್ಣೆ, ಹೆಗಲ ಮೇಲೆ ವಸ್ತ್ರ, ನೋಡಿ ಬಾ ಮತ್ತೆ-ಸುಮ್ಮನೆ ಠಕ್ ಠಕ್ ಠಕ್ ಎಂದು ಸದ್ದುಮಾಡುತ್ತಿರುವನು. ಲಾಠಿಯೇ, ಪಾದುಕೆಯೇ ?"

ರಕ್ತವಮನ ಸ್ವಲ್ಪಹೊತ್ತು ನಿಂತಿತು. ರಾತ್ರಿ ಮೂರು ಘಂಟೆಗೆ ಮತ್ತೆ ಆರಂಭವಾಯಿತು. ಮುಕುಂದಲಾಲರು ಹಾಸಿಗೆಯಲ್ಲಿ ನಾಲ್ಕು ದಿಕ್ಕಿನಲ್ಲೂ ತಡವರಿಸಿ ಕುಗ್ಗಿದ ದನಿಯಲ್ಲಿ "ಯಜಮಾನೀ, ಮನೆ ಕತ್ತಲೆಯಾಗಿದೆಯಲ್ಲ—ಇನ್ನೂ ದೀಪ ಹಚ್ಚುವುದಿಲ್ಲವೇನು" ಎಂದರು. ಅದೇ ಕೊನೆಯ ಮಾತಾಯಿತು.

ವೃಂದಾವನದಿಂದ ಹಿಂದಿರುಗಿ ಬಂದು ನಂದರಾಣಿ ಮನೆಯ ಬಾಗಿಲ ಬಳಿ ಮೂರ್ಛೆಹೋದಳು. ಅವಳನ್ನು ಹಿಡಿದೆತ್ತಿ ತಂದು ಹಾಸಿಗೆಯಲ್ಲಿ ಮಲಗಿಸಿದರು. ಪ್ರಪಂಚದಲ್ಲಿ ಯಾವುದೂ ಅವಳಿಗೆ ರುಚಿಸಲಿಲ್ಲ. ಕಣ್ಣೀರು ಒಮ್ಮೆಗೇ ಬತ್ತಿಹೋಯಿತು. ಹುಡುಗರು ಮಕ್ಕಳ ನಡುವೆಯೂ ನೆಮ್ಮದಿಯಿರಲಿಲ್ಲ. ಗುರುಗಳು ಬಂದು ಶ್ಲೋಕಗಳನ್ನು ಹೇಳುತಿದ್ದರು. ಮುಖ ಪಕ್ಕಕ್ಕೆ ತಿರುಗಿಸಿಕೊಳ್ಳುವಳು. ಕೈಯಲ್ಲಿನ ಕಬ್ಬಿಣದ ಬಳೆ ಕಳಚಲಿಲ್ಲ. "ನನ್ನ ಕೈ ನೋಡಿ ನನ್ನ ಸೌಮಾಂಗಲ್ಯಕ್ಕೆ ಕೊರೆಯಿರದು ಎಂದು ಹೇಳಿದ್ದರಲ್ಲ, ಅದೇನು ಸುಳ್ಳಾಗಲು ಸಾಧ್ಯವಿದೆಯೆ ?" ಎಂದು ಹೇಳುತಿದ್ದಳು.

ದೂರದ ಬಂಧುವಾದ ಕ್ಷೇಮಾಠಾಕೂರಣಿ ಸೆರಗಿನಿಂದ ಕಣ್ಣೊರಸುತ್ತ ಒರಸುತ್ತ "ಆಗಬೇಕಾಗಿದ್ದುದು ಆಗಿಹೋಯಿತು. ಈಗ ಮನೆಯ ಕಡೆ ಗಮನಿಸು. ಯಜಮಾನರು ಹೋಗುವಾಗ, ಬಡೊಬಊ, ಮನೆಯಲ್ಲಿ ದೀಪ ಹಚ್ಚುವುದಿಲ್ಲವೇನು ಎಂದು ಹೇಳಿಹೋದರಲ್ಲ" ಎಂದಳು.

ನಂದರಾಣಿ ಹಾಸಿಗೆಯಿಂದ ಎದ್ದು ಕುಳಿತು ದೂರದ ಕಡೆಗೆ ದಿಟ್ಟಿಸಿ ನೋಡಿ "ಹೋಗುತ್ತೇನೆ, ದೀಪ ಹಚ್ಚಲು ಹೋಗುತ್ತೇನೆ–ಇನ್ನು ಈಗ ಸಾವಕಾಶವಾಗದು" ಎಂದಳು. ಅವಳ ಬಿಳುಪೇರಿದ ಬಾಡಿದ ಮುಖ, ಕೈಯಲ್ಲಿ ದೀವಿಗೆ ಹಿಡಿದುಕೊಂಡು ಪ್ರಯಾಣ ಹೊರಟಂತೆ ಉಜ್ವಲ ವಾಯಿತು.

ಸೂರ್ಯ ಉತ್ತರಾಯಣಕ್ಕೆ ತಿರುಗಿದನು. ಮಾಘಮಾಸ ಬಂದಿತು. ಶುಕ್ಲ ಚತುರ್ದಶಿ. ನಂದರಾಣಿ ಹಣೆಯಲ್ಲಿ ಅಗಲವಾಗಿ ಕುಂಕುಮ ಇಟ್ಟುಕೊಂಡಳು. ಮೈಗೆ ಕಾಶೀ ಪೀತಾಂಬರ ಸುತ್ತಿಕೊಂಡಳು. ಸಂಸಾರದ ಕಡೆಗೆ ತಿರುಗಿನೋಡದೆ ನಗುಮುಖದೊಡನೆ ಹೊರಟುಹೋದಳು.

೮

ಅಷ್ಟ ಸತ್ತ ಅನಂತರ, ತಾವು ಆಶ್ರಯಿಸಿದ್ದ ಮರದ ಒಳಭಾಗವನ್ನು ಹುಳುಗಳು ಮೇಯ್ದುಬಿಟ್ಟಿವೆಯೆಂಬುದನ್ನು ವಿಪ್ರದಾಸ ನೋಡಿದನು. ಬುಡವಿಲ್ಲದ ಮರದಂತೆ ಆಸ್ತಿಪಾಸ್ತಿಗಳಾವುವೂ ಇಲ್ಲದೆ ಸಂಸಾರ ಸ್ವಲ್ಪ ಸ್ವಲ್ಪವಾಗಿ ಕುಸಿಯುತ್ತಿತ್ತು. ಕ್ರಿಯಾಕರ್ಮಗಳನ್ನು ಕಡಮೆಮಾಡಿ, ನಡೆನುಡಿಯಲ್ಲಿ ಕಾರ್ಪಣ್ಯ ತೋರದಿದ್ದರೆ ದಾರಿಯಿಲ್ಲ. ಕುಮುವಿನ ಮದುವೆಯ ವಿಷಯವಾಗಿಯೂ ಮಾತು ತಲೆಯೆತ್ತುತ್ತಿತ್ತು. ಅದಕ್ಕೆ ಸರಿಯಾದ ಉತ್ತರ ಹೇಳಲು ನಾಲಗೆ ಹಿಂಜರಿಯುತ್ತಿತ್ತು. ಕೊನೆಗೆ ನೂರ್ ನಗರವನ್ನು ಬಿಡಬೇಕಾಗಿ ಬಂದಿತು. ಕಲ್ಕತ್ತೆಯ ಬಾಗ್‌ಬಜಾರಿನಲ್ಲಿದ್ದ ಒಂದು ಮನೆಗೆ ಬಂದು ನೆಲಸಿದರು.

ಕುಮುದಿನಿಗೆ ತಮ್ಮ ಹಳೆಯ ಮನೆಯನ್ನು ಕಂಡರೆ ಪಂಚಪ್ರಾಣ. ನಾಲ್ಕು ದಿಕ್ಕಿನಲ್ಲೂ ಹೂವು ಹಣ್ಣುಗಳು, ಗೋಶಾಲೆ, ಪೂಜೆಯ ಮನೆ, ಪೈರಿನ ಗದ್ದೆಗಳು, ಜನಗಳು. ಅಂತಃಪುರದ ಕೈ ತೋಟದಲ್ಲಿ ಬುಟ್ಟಿಯ

ತುಂಬ ಹೂ ಕೊಯ್ಯುತ್ತಿದ್ದಳು. ಉಪ್ಪು ಮೆಣಸಿನಕಾಯಿಯೊಡನೆ ಎಲಚಿ ಹಣ್ಣನ್ನು ಬೆರಸಿ ಮಿತಿಮೀರಿ ತಿನ್ನುವಳು ವೈಶಾಖ ಜ್ಯೇಷ್ಠದ ಜಡಿ ಮಳೆಯಲ್ಲಿ ಮಾವಿನ ತೋಪಿನಲ್ಲಿ ಕಾಯಿ ಆರಿಸುವಳು. ತೋಟದ ಪೂರ್ವ ದಿಕ್ಕಿನಲ್ಲಿ ಏತದ ಮನೆ. ಅಲ್ಲಿ ಹಬ್ಬ ಹರಿದಿನಗಳಲ್ಲಿ ಹೆಂಗಸರ ಕೋಲಾಹಲದಲ್ಲಿ ಅವಳಿಗೂ ಸ್ವಲ್ಪ ಭಾಗವಿರುತ್ತಿತ್ತು. ಪಾಚಿ ಕಟ್ಟಿ ಹಸುರ ಬಣ್ಣ ಬಂದ ಪೌಳಿ ಗೋಡೆ ಸುತ್ತುವರಿದ, ಕಿಟಕಿಯ ಪುಷ್ಕರಿಣಿ, ದಟ್ಟವಾದ ನೆರಳಿನಲ್ಲಿ ಸ್ನಿಗ್ಧವಾಗಿತ್ತು. ಕೋಗಿಲೆ, ಗೂಬೆ, ಗೀಜುಗ ಮೈನಾ ಹಕ್ಕಿಗಳ ದನಿಯಿಂದ ತುಂಬಿತ್ತು. ಇಲ್ಲಿಯೇ ಅವಳು ಪ್ರತಿನಿತ್ಯ ನೀರಿನಲ್ಲಿ ಈಜುತ್ತಿದ್ದಳು. ಕಮಲದ ಹೂ ಕೊಯ್ದುಕೊಳ್ಳುವಳು. ಘಟ್ಟದ ಮೇಲೆ ಕುಳಿತು ಕನಸು ಕಾಣುವಳು. ಅನನ್ಯಮನಸ್ಕಳಾಗಿ ಒಂಟಿಯಾಗಿ ಕುಳಿತು ಪಶಮೆಯ ಹೊಲಿಗೆಯ ಕೆಲಸಮಾಡುವಳು. ಪ್ರತಿಯೊಂದು ಋತುವೂ ಒಂದಲ್ಲ ಒಂದು ಹಬ್ಬದ ದೆಸೆಯಿಂದ ಮನುಷ್ಯನಿಗೆ ಅತ್ಯಂತ ಪ್ರಿಯವಾಗಿದೆ. ಅಕ್ಷಯ ತದಿಗೆಯಿಂದ ದೋಲ್ ಯಾತ್ರೆಯ (ಹೋಳಿ ಹುಣ್ಣಿಮೆ) ವಾಸಂತೀ ಪೂಜೆಯವರೆಗೆ ಅವೆಷ್ಟು ಹಬ್ಬಗಳು! ಮನುಷ್ಯನೂ ಪ್ರಕೃತಿಯೂ ಕೈ ಕೂಡಿಸಿಕೊಂಡು ಇಡೀ ವರ್ಷವನ್ನು ಕುಶಲ ಶಿಲ್ಪದಿಂದ ಹೆಣೆದಿರುವರು. ಎಲ್ಲವೂ ಸುಂದರವಾದವು, ಎಲ್ಲವೂ ಸುಖವಾದವು ಎನ್ನುವಂತಿಲ್ಲ. ಮೀನಿನ ಪಾಲು, ಪೂಜೆಯ ಪಸಾಯನ, ಯಜಮಾನಿಯ ಪಕ್ಷಪಾತ, ಮಕ್ಕಳ ಜಗಳದಲ್ಲಿ ತಮ್ಮ ತಮ್ಮ ಮಕ್ಕಳನ್ನುವಹಿಸಿಕೊಳ್ಳುವುದು, ಇವೆಲ್ಲ ಕಲೆತು ಸದ್ದಿಲ್ಲದೆ ಹೊಟ್ಟೆಕಿಚ್ಚು ಅಥವಾ ತಾರಸ್ವರದಲ್ಲಿ ದೂರು, ಕಿವಿ ಮಾತಿನಲ್ಲಿ ಪರರ ವಿಷಯದ ಚರ್ಚೆ ಅಥವಾ ಮುಕ್ತಕಂಠದಿಂದ ಅಪವಾದದ ಘೋಷಣೆ ಇವೆಲ್ಲ ಬಹುಮಟ್ಟಿಗೆ ಇದ್ದೇ ಇದೆ. ಎಲ್ಲಕ್ಕೂ ಹೆಚ್ಚಿನದಾಗಿ ನಿತ್ಯನೈಮಿತ್ತಿಕ ಕೆಲಸದ ಗೊಂದಲದಲ್ಲಿ ಒಳಗೊಳಗೆ ಅಡಗಿದ ಉದ್ವೇಗ—ಯಜಮಾನರು ಯಾವಾಗ ಏನು ಕೇಳುವರೋ, ಅವರ ಸಭೆಯಲ್ಲಿ ಯಾವ ವೇಳೆಯಲ್ಲಿ ಏನು ಗೊಂದಲವಾಗುವದೋ ಎಂಬ ಭಯ. ಹಾಗೇನಾದರೂ ಆಗಿಹೋದರೆ ಮನಸ್ಸಿಗೆ ನೆಮ್ಮದಿಯೇ ಇಲ್ಲ. ಕುಮುದಿನಿಯ ಎದೆ ದಡಗುಟ್ಟುವುದು. ಕೋಣೆಯಲ್ಲಿ ಅಮ್ಮ ಗುಟ್ಟಾಗಿ ಅಳುವಳು. ಹುಡುಗರ ಮುಖ ಕಳೆಗುಂದಿರುವುದು.

ಈ ಎಲ್ಲ ಶುಭಾಶುಭದಿಂದಲೂ ಸುಖ ದುಃಖದಿಂದಲೂ ಸಂಸಾರಯಾತ್ರೆ ಸರ್ವದಾ ಆಂದೋಲಿತವಾಗುವುದು.

ಇವುಗಳ ನಡುವಣಿಂದಲೇ ಕುಮುದಿನಿ ಕಲ್ಕತ್ತೆಗೆ ಬಂದಳು. ಇದೊಂದು ದೊಡ್ಡ ಸಮುದ್ರದಂತೆ. ಆದರೆ ದಾಹ ಅಡಗಿಸಲು ಒಂದು ಹನಿ ನೀರು ಸಾಕಾಗುವುದೆ? ತಮ್ಮೂರಿನಲ್ಲಿ ಆಕಾಶದ ವಾಯುಮಂಡಲದಲ್ಲೂ ಗುರುತಾದ ಮುಖ ಚಹರೆಯಿತ್ತು. ಗ್ರಾಮದ ದಿಗಂತದಲ್ಲಿ ಎಲ್ಲಾದರೊಂದೆಡೆಯಲ್ಲಿ ದಟ್ಟವಾದ ಅರಣ್ಯ, ಒಂದೆಡೆಯಲ್ಲಿ ಮರಳ ದಿಣ್ಣೆ, ನದಿಯ ಜಲರೇಖೆ, ದೇವಾಲಯದ ಗೋಪುರ, ವಿಶಾಲವಾದ ಗೋಮಾಳ. ಅಡವಿಯ ಗಿಡಗಳ ಗುಂಪು, ಜಾಡು ಬಿದ್ದ ಹಾದಿ—ಇವೆಲ್ಲ ನಾನಾ ರೇಖೆಯಲ್ಲಿ ನಾನಾ ವರ್ಣದಲ್ಲಿ ವಿಚಿತ್ರ ಆವರಣದೊಡನೆ ಕೂಡಿ ಆಕಾಶಕ್ಕೆ ಒಂದು ಹೊಸ ಮೆರುಗನ್ನುಂಟುಮಾಡಿತ್ತು. ಅದು ಕುಮುದಿನಿಯ ಸರ್ವಸ್ವವಾಗಿತ್ತು. ಕೆರೆಯಿಂದ, ಗದ್ದೆಯಿಂದ, ಬೆತ್ತದ ಗಿಡದಿಂದ, ಬೆಸ್ತರ ದೋಣಿಯ ಕಾಚಿನ ಬಣ್ಣದ ಪಟದಿಂದ, ಬಿದಿರ ಮೆಳೆಯ ಎಳೆಬಿದಿರ ನವಿರಾದ ಎಲೆಗಳಿಂದ, ಹಲಸಿನ ಗಿಡದ ಅಚ್ಚ ಹಸುರಿನಿಂದ ಆಚೆಯ ದಡದ ಮರಳು ದಿಣ್ಣೆಯ ಮಾಸಲು ಹಳದಿ ಬಣ್ಣದಿಂದ—ಎಲ್ಲದರೊಡನೆ ನಾನಾ ವಿಧದಲ್ಲಿ ಬೆರೆತು ಆ ಬೆಳಕು ಚಿರಪರಿಚಿತವಾದೊಂದು ರೂಪವನ್ನು ಧರಿಸಿತ್ತು. ಕಲ್ಕತ್ತೆಯ ಈ ಅಪರಿಚಿತ ಭವನಗಳ ಬಿಸಿಲುಮಹಡಿಯಲ್ಲಿ ಗೋಡೆಗಳಲ್ಲಿ ಒರಟು ರೇಖೆಯ ಆಘಾತದಿಂದ ನಾನಾ ಭಾಗವಾಗಿ ಅದೇ ಆಕಾರ ಅವಳನ್ನು ಅರಿಯದವರಂತೆ ಕಠಿಣ ದೃಷ್ಟಿಯಿಂದ ನೋಡುತ್ತಿತ್ತು. ಇಲ್ಲಿಯ ದೇವರು ದಿಂಡರುಗಳೂ ಅವಳನ್ನು ಬದಿಗಿಟ್ಟಿದ್ದುವು.

ವಿಪ್ರದಾಸ ಅವಳನ್ನು ಕುರ್ಚಿಯ ಬಳಿಗೆ ಸೆಳೆದುಕೊಂಡು "ಏನು ಕುಮೂ, ಮನಸ್ಸಿಗೆ ನೆಮ್ಮದಿಯಿಲ್ಲವೇನು?" ಎಂದು ಕೇಳುವನು.

ಕುಮುದಿನಿ ನಕ್ಕು "ಇಲ್ಲ ಅಣ್ಣ, ಏನೂ ಇಲ್ಲ"

"ಮ್ಯೂಜಿಯಮ್ ನೋಡಲು ಹೋಗುವೆಯಾ?" ಎನ್ನುವನು.

"ಹೂಂ, ಹೋಗುವೆ"

ಅದೆಷ್ಟು ಹೆಚ್ಚಿನ ಉತ್ಸಾಹದಿಂದ ಹೇಳುವಳೆಂದರೆ ವಿಪ್ರದಾಸ ಗಂಡ ಸಲ್ಲದಿದ್ದರೆ ಇದು ಸ್ವಾಭಾವಿಕವಾದುದಲ್ಲವೆಂದು ಅರಿಯುತ್ತಿದ್ದನು. ಮ್ಯೂಜಿಯಮ್ಮಿಗೆ ಹೋಗದಿದ್ದರೇ ಅವಳಿಗೆ ನೆಮ್ಮದಿ. ಹೊರಗಿನ ಜನರ ಗುಂಪಿನ ನಡುವೆ ಹೋಗಲು ಅವಳ ಸಂಕೋಚಕ್ಕೆ ಕೊನೆಯಿರದು. ಕೈ ಕಾಲು ತಣ್ಣಗಾಗಿಬಿಡುತ್ತಿತ್ತು. ಕಣ್ಣು ಬಿಟ್ಟು ಚೆನ್ನಾಗಿ ನೋಡಲು ಆಗುತ್ತಲೇ ಇರಲಿಲ್ಲ.

ವಿಪ್ರದಾಸ ಅವಳಿಗೆ ಚದುರಂಗ ಆಡಲು ಕಲಿಸಿದನು. ಸ್ವತಃ ಅಸಾಮಾನ್ಯ ಆಟಗಾರ. ಕುಮುವಿನ ಪಳಗದ ಆಟದಿಂದ ಅವನಿಗೆ ಸಂತೋಷ. ಕೊನೆಗೆ ನಿಯಮ ತಪ್ಪದೆ ಆಡುತ್ತ ಆಡುತ್ತ ಕುಮುದಿನಿಯ ಕೈ ಪಳಗಿತು. ವಿಪ್ರದಾಸ ಎಚ್ಚರಿಕೆಯಿಂದ ಆಡಬೇಕಾಯಿತು. ಕಲ್ಕತ್ತೆಯಲ್ಲಿ ಕುಮುವಿನ ಸರಿವಯಸ್ಸಿನ ಜೊತೆಗಾತಿಯರು ಇಲ್ಲದ ಕಾರಣ ಈ ಅಣ್ಣ ತಂಗಿಯರು ಅಣ್ಣ ತಮ್ಮಂದಿರಂತೆ ಆದರು. ಸಂಸ್ಕೃತ ಸಾಹಿತ್ಯದಲ್ಲಿ ವಿಪ್ರದಾಸನಿಗೆ ಬಹಳ ಅಭಿಲಾಷೆ. ಕುಮುದಿನಿ ಮನಸ್ಸಿಟ್ಟು ಅವನ ಬಳಿ ವ್ಯಾಕರಣ ಕಲಿತಳು. ಕುಮಾರಸಂಭವ ಓದಿದಾಗಿನಿಂದ ಶಿವಪೂಜೆಯ ಕಾಲದಲ್ಲಿ ಅವಳು ತಪಸ್ವಿನಿ ಪಾರ್ವತಿಯ ತಪೋಧನವಾದ ಪರಶಿವನನ್ನು ಕಾಣತೊಡಗಿದಳು. ಕನ್ಯೆಯ ಧ್ಯಾನದಲ್ಲಿ ಅವಳ ಭವಿಷ್ಯತ್ತಿನ ಪತಿ, ಪವಿತ್ರವಾದ ದಿವ್ಯಜ್ಯೋತಿಯಿಂದ ಉದ್ಭವಿಸಿ ಕಾಣಿಸಿಕೊಂಡನು.

ವಿಪ್ರದಾಸನಿಗೆ ಫೋಟೋ ತೆಗೆಯುವ ಚಟ. ಕುಮುವು ಅದನ್ನೂ ಕಲಿತಳು. ಅವರಲ್ಲಿ ಒಬ್ಬರು ಫೋಟೋ ತೆಗೆದರೆ ಮತ್ತೊಬ್ಬರು ಅದನ್ನು ತೊಳೆದು ಪ್ರತಿಮಾಡುವರು. ಬಂದೂಕು ಹಾರಿಸುವುದರಲ್ಲಿ ವಿಪ್ರದಾಸನ ಕೈ ಪಳಗಿತ್ತು. ಹಬ್ಬದ ಸಂದರ್ಭದಲ್ಲಿ ಊರಿಗೆ ಹೋದಾಗ ಕಿಟಕಿಯ ಪುಷ್ಕರಿಣಿಯಲ್ಲಿ ಎಳನೀರು, ಬಿಲ್ವಪತ್ರೆ ಕಾಯಿಯ ಚಿಪ್ಪು, ಅಖರೋಟು ಮೊದಲಾದುವನ್ನು ತೇಲಿಬಿಟ್ಟು ಪಿಸ್ತೂಲ್ ಹಾರಿಸುವುದನ್ನು ಅಭ್ಯಾಸ ಮಾಡುತ್ತಿದ್ದನು. "ಬಾ ಕುಮೂ, ಪ್ರಯತ್ನಿಸಿ ನೋಡು" ಎಂದು ಕುಮುವನ್ನು ಕರೆಯುವನು.

ಯಾವ ಯಾವ ವಿಷಯದಲ್ಲಿ ಅವರ ಅಣ್ಣನಿಗೆ ಅಭಿರುಚಿಯಿತ್ತೋ ಅವೆಲ್ಲವನ್ನೂ ಕುಮು ಪ್ರಯತ್ನಪೂರ್ವಕವಾಗಿ ತನ್ನದಾಗಿ ಮಾಡಿಕೊಂಡಿದ್ದಳು. ಅಣ್ಣನಿಂದ ಏಸರಾಜ್ ಕಲಿತು ಅವಳ ಕೈ ಎಷ್ಟರವುಟ್ಟಿಗೆ ಪಳಗಿತ್ತೆಂದರೆ, ಕೊನೆಗೆ ಅಣ್ಣ " ನಾನು ಸೋತೆ " ಎಂದು ಒಪ್ಪಿಕೊಂಡನು.

ಈ ವಿಧದಲ್ಲಿ ಎಳೆ ವಯಸ್ಸಿನಿಂದ ಯಾವ ಅಣ್ಣನಲ್ಲಿ ಎಲ್ಲಕ್ಕಿಂತಲೂ ಹೆಚ್ಚಾದ ಭಕ್ತಿಯಿಟ್ಟಿದ್ದಳೋ ಆತ ಕಲ್ಕತ್ತೆಗೆ ಬಂದ ಮೇಲೆ, ಎಲ್ಲರಿಗಿಂತಲೂ ಹೆಚ್ಚು ಪ್ರಿಯವಾದನು. ಕಲ್ಕತ್ತೆಯಲ್ಲಿ ಬಂದದ್ದು ಸಾರ್ಥಕವಾಯಿತು. ಕುಮುದಿನಿ ಸ್ವಭಾವತಃ ತನ್ನ ಮನದಲ್ಲಿ ಒಂಟಿಯಾಗಿ ಇರುತ್ತಿದ್ದಳು. ಪರ್ವತವಾಸಿನಿ ಉಮೆಯಂತೆ ಅವಳು ಒಂದು ಕಲ್ಪಿತ ತಪೋವನದಲ್ಲಿ ಮಾನಸಸರೋವರದ ದಡದಲ್ಲಿ ವಾಸಿಸುತ್ತಿದ್ದಳು. ಹೀಗೆ ಹುಟ್ಟಿದಂದಿನಿಂದ ಏಕಾಂಗಿಯರಾದ ಮನುಷ್ಯರಿಗೆ ಮುಕ್ತ ಆಕಾಶದ ಆವಶ್ಯಕತೆಯಿದೆ. ವಿಶಾಲ ನಿರ್ಜನತೆ ಮತ್ತು ಅದರ ನಡುವೆ ತಮ್ಮ ಸಂಪೂರ್ಣ ತನು ಮನಗಳನ್ನು ಅರ್ಪಿಸಿ ಭಕ್ತಿ ತೋರುವವರೊಬ್ಬರು ಬೇಕಾಗಿದೆ. ಹತ್ತಿರದ ಪ್ರಪಂಚದಿಂದ ಹೀಗೆ ದೂರವಾಗಿರುವುದು ಹೆಂಗಸರ ಸ್ವಭಾವಕ್ಕೆ ತಕ್ಕುದಲ್ಲವೆಂದು ಹೆಂಗಸರು ಇದನ್ನು ಸಂಪೂರ್ಣವಾಗಿ ಒಪ್ಪುವುದಿಲ್ಲ. ಅವರು ಇದನ್ನು ಅಹಂಕಾರ, ಇಲ್ಲವೇ ನಿಷ್ಕರುಣೆ ಎಂದು ಎಣಿಸುವರು. ಆದರಿಂದಲೇ ಊರಿನಲ್ಲಿದ್ದಾಗಲೂ ಜೊತೆಯವರ ಗುಂಪಿನಲ್ಲಿ ಕುಮುದಿನಿಗೆ ಗೆಳತಿಯರು ಇರಲಿಲ್ಲ.

ತಂದೆ ಇದ್ದಾಗಲೇ ವಿಪ್ರದಾಸನ ಮದುವೆ ನಿಶ್ಚಯವಾಗಿತ್ತು. ಈ ಸಮಯದಲ್ಲಿ ಮಂಗಲಸ್ನಾನಕ್ಕೆ ಎರಡು ದಿನ ಮುಂಚೆ ಕನ್ಯೆ ಸನ್ನಿಪಾತ ಜ್ವರದಿಂದ ಸತ್ತುಹೋದಳು. ಆಗ ಭಟ್ಟರ ಬೀದಿಯಲ್ಲಿ ವಿಪ್ರದಾಸನ ಜಾತಕಪರೀಕ್ಷೆಯಿಂದ, ವಿವಾಹ ಸ್ಥಾನದಲ್ಲಿದ್ದ ಕೆಟ್ಟ ಗ್ರಹದ ದೆಶೆಯಿಂದ ಭೋಗ ಕ್ಷಯಿಸಲು ಅವಕಾಶವಿದೆಯೆಂದು ತಿಳಿಯಬಂದಿತು. ಮದುವೆ ನಿಂತುಹೋಯಿತು. ಈ ಮಧ್ಯೆ ತಂದೆಯ ಸಾವು ಒದಗಿತು. ಆ ತರುವಾಯ ಘಟಕರ* ಉದ್ಯೋಗಕ್ಕೆ ಬೆಂಬಲವಾಗುವ ಸುಸಮಯ ವಿಪ್ರದಾ

* ಘಟಕರು—ಮದುವೆಯ ಮಧ್ಯಸ್ತಿಕೆ ಮಾಡುವವರು.

ಸನ ಮನೆಯಲ್ಲಿ ಉಂಟಾಗಲಿಲ್ಲ. ಘಟಕನೊಬ್ಬ ಒಮ್ಮೆ ದೊಡ್ಡ ಮೊತ್ತದ ವರದಕ್ಷಿಣೆಯ ಆಶೆ ತೋರಿದನು. ಅದರಿಂದ ವಿರುದ್ಧವಾದ ಫಲವಾಯಿತು. ನಡುಗುವ ಕೈಯಿಂದ ಹುಕ್ಕವನ್ನು ಗೋಡೆಗೊರಗಿಸಿ ಅಂದು ಅತ್ಯಂತ ವೇಗವಾಗಿ ಹೆಜ್ಜೆ ಇಡುತ್ತ, ಘಟಕ ರಸ್ತೆಯಲ್ಲಿ ಹೊರಬೀಳಬೇಕಾಯಿತು.

೬

ಸುಬೋಧನ ಕಾಗದ ವಿಲಾಯತಿಯಿಂದ ಇದುವರೆಗೆ ನಿಯಮತಪ್ಪದೆ ಬರುತ್ತಿತ್ತು. ಈಗ ನಡುನಡುವೆ ತಪ್ಪುತ್ತಿತ್ತು. ಕುಮು ಟಪಾಲನ್ನು ಇದಿರುನೋಡುತ್ತ ವ್ಯಗ್ರಳಾಗಿರುತಿದ್ದಳು. ಅಂಚೆಯವನು ಈ ಬಾರಿ ಅವಳ ಕೈಗೇ ಕಾಗದ ಕೊಟ್ಟ. ವಿಪ್ರದಾಸ ಕನ್ನಡಿಯ ಇದಿರಿನಲ್ಲಿ ನಿಂತು ಮುಖ ಕ್ಷೌರ ಮಾಡಿಕೊಳ್ಳುತ್ತಿದ್ದನು. ಕುಮು ಓಡಿಹೋದವಳು-“ ಅಣ್ಣಾ, ಚಿಕ್ಕಣ್ಣನ ಕಾಗದ ” ಎಂದಳು.

ಮುಖಕ್ಷೌರ ಮುಗಿಸಿ, ಆರಾಮ ಕುರ್ಚಿಯಲ್ಲಿ ಕುಳಿತು, ವಿಪ್ರದಾಸ ಹೆದರುತ್ತ ಹೆದರುತ್ತಲೇ ಲಕ್ಕೋಟೆ ಒಡೆದನು. ಓದಿ ಮುಗಿಸಿದಾಗ ಅದೊಂದು ತೀವ್ರ ವೇದನೆಯೋ ಎನ್ನುವಂತೆ ಕೈಯಲ್ಲಿ ಅದುಮಿ ಹಿಡಿದುಕೊಂಡನು.

ಕುಮುದಿನಿ ಹೆದರಿ “ ಚಿಕ್ಕಣ್ಣನಿಗೆ ಖಾಯಿಲೆಯಾಗಿಲ್ಲ ತಾನೆ? ” ಎಂದು ಕೇಳಿದಳು.

“ ಇಲ್ಲ, ಅವನು ಚೆನ್ನಾಗಿಯೇ ಇದ್ದಾನೆ ”

“ ಕಾಗದದಲ್ಲಿ ಏನು ಬರೆದಿದ್ದಾನೆ-ಹೇಳು ಅಣ್ಣ ”

“ ವಿದ್ಯಾಭ್ಯಾಸದ ಸಂಗತಿ ”

ಕೆಲವು ದಿನಗಳಿಂದ ವಿಪ್ರದಾಸ ಕುಮುದಳಿಗೆ ಸುಬೋಧನ ಕಾಗದ ಓದಲು ಕೊಡುತ್ತಿರಲಿಲ್ಲ. ಅಲ್ಲಿಷ್ಟು ಇಲ್ಲಿಷ್ಟು ಓದಿ ಹೇಳುತ್ತಿದ್ದ. ಈ ಬಾರಿ ಅದೂ ಇಲ್ಲ. ಕಾಗದ ಕೇಳಿ ತೆಗೆದುಕೊಳ್ಳಲು ಕುಮುವಿಗೆ ಧೈರ್ಯವಾಗಲಿಲ್ಲ. ಮನಸ್ಸು ತಲ್ಲಣಿಸುತ್ತಿತ್ತು.

ಸುಬೋಧ ಮೊದಮೊದಲು ಲೆಕ್ಕಾಚಾರವಾಗಿ ಖರ್ಚುಮಾಡುತ್ತಿದ್ದ. ಮನೆಯ ಸಂಕಟದ ಸಂಗತಿ ಮನದಲ್ಲಿ ಇನ್ನೂ ಹೊಸದಾಗಿತ್ತು.

ಈಗ ಅದು ಮಂಕಾದ ಹಾಗೆಲ್ಲಾ ಖರ್ಚೂ ಹಾಗೆಯೇ ಬೆಳೆಯಿತು. ಶ್ರೀಮಂತಿಕೆಯ ನಡೆನುಡಿಗಳನ್ನು ಅನುಸರಿಸದಿದ್ದರೆ ಈ ಕಾಲದ ಸಾಮಾಜಿಕ ಉಚ್ಚಶಿಖರದ ವಾತಾವರಣದಲ್ಲಿ ತಲುಪಲಾಗುವುದಿಲ್ಲ; ಹಾಗೆ ತಲುಪದಿದ್ದರೆ ವಿಲಾಯತಿಗೆ ಬರುವುದೇ ವ್ಯರ್ಥ, ಎಂದು ಭಾವಿಸ ತೊಡಗಿದನು.

ವಿಧಿಯಿಲ್ಲದೆ ವಿಪ್ರದಾಸ ಒಂದೆರಡು ಬಾರಿ ತಂತಿಯ ಮೂಲಕ ಹೆಚ್ಚು ಹಣ ಕಳಿಸಬೇಕಾಯಿತು. ಈ ಸಲ ಒಂದು ಸಾವಿರ ಪೌಂಡಿಗೆ ಬೇಡಿಕೆ ಬಂದಿದೆ—ಆತುರದ ಆವಶ್ಯಕತೆ.

ವಿಪ್ರದಾಸ ತಲೆಯ ಮೇಲೆ ಕೈಯಿಟ್ಟುಕೊಂಡು "ಎಲ್ಲಿಂದ ತರಲಿ?" ಎಂದನು. ಎದೆಯ ರಕ್ತ ನೀರುಮಾಡಿಕೊಂಡು ಕುಮುದಿನಿಯ ಮದುವೆಗಾಗಿ ಹಣ ಕೂಡಿಸುತ್ತಿದ್ದ. "ಕೊನೆಗೆ ಆ ಹಣಕ್ಕೂ ಕೈ ಹಾಕ ಬೇಕಾಗುವುದೇನು? ಕುಮುದಿನಿಯ ಭವಿಷ್ಯವನ್ನು ದಿವಾಳಿ ಕೆಡವಿ ಬೆಲೆ ಕೊಡಬೇಕಾಗುವುದಾದರೆ ಸುಬೋಧ ಬ್ಯಾರಿಸ್ಟರ್ ಆಗಿತಾನೆ ಪ್ರಯೋಜನವೇನು?"

ಆ ರಾತ್ರಿ ವಿಪ್ರದಾಸ ವರಾಂಡದಲ್ಲಿ ಅಡ್ಡಾಡುತ್ತಿದ್ದನು. ಕುಮುದಿನಿಯ ಕಣ್ಣಿಗೂ ನಿದ್ರೆ ಹತ್ತಲಿಲ್ಲ. ಒಂದು ಹೊತ್ತಿನಲ್ಲಿ ಕುಮುದಿನಿ ಹೊರಗೆ ಬಂದು ವಿಪ್ರದಾಸನ ಕೈ ಹಿಡಿದುಕೊಂಡು, "ಸತ್ಯವನ್ನು ಹೇಳು ಅಣ್ಣಾ, ಚಿಕ್ಕಣ್ಣನಿಗೆ ಏನಾಗಿದೆ? ನಿನ್ನ ಕಾಲಿಗೆ ಬೀಳುವೆ. ನನ್ನ ಹತ್ತಿರ ಮರೆಮಾಚಬೇಡ" ಎಂದಳು.

ವಿಪ್ರದಾಸ, ವಿಷಯವನ್ನು ಇನ್ನು ಗುಟ್ಟಾಗಿ ಇಟ್ಟರೆ ಕುಮುದಿನಿಯ ಸಂದೇಹ ಮತ್ತಷ್ಟು ಹೆಚ್ಚುವುದೆಂಬುದನ್ನು ಅರಿತನು. ಸ್ವಲ್ಪ ಹೊತ್ತು ಸುಮ್ಮನಿದ್ದು, ಆನಂತರ "ಸುಬೋಧ ಹಣ ಬೇಕೆಂದು ಬರೆದಿರುವನು. ಅಷ್ಟು ಹಣ ಕೊಡುವ ಶಕ್ತಿ ನನಗಿಲ್ಲ" ಎಂದನು.

ಕುಮುದಿನಿ ವಿಪ್ರದಾಸನ ಕೈ ಹಿಡಿದುಕೊಂಡು, "ಅಣ್ಣಾ, ಒಂದು ಮಾತು ಹೇಳುವೆ. ಕೋಪಗೊಳ್ಳುವುದಿಲ್ಲವೆಂದು ಹೇಳು" ಎಂದಳು.

"ಕೋಪಗೊಳ್ಳುವ ಮಾತಾದರೆ, ಕೋಪಿಸಿಕೊಳ್ಳದೆ ಬದುಕುವುದಾದರೂ ಹೇಗೆ?"

" ಇಲ್ಲ ಅಣ್ಣಾ, ತಮಾಷೆಯಲ್ಲ, ನನ್ನ ಮಾತು ಕೇಳು,—ಅಮ್ಮನ ಒಡವೆಗಳು ನನಗಾಗಿ ಇವೆಯಲ್ಲವೆ,—ಅವುಗಳನ್ನು ತೆಗೆದುಕೊಂಡು...."

" ಸಾಕು ಸಾಕು, ನಿನ್ನ ಒಡವೆಗಳಿಗೆ ನಾವು ಕೈಯಿಡುವುದು ಸಾಧ್ಯವೇ ? "

" ಹಾಗಾದರೆ ನನ್ನಿಂದ ಆಗುವುದೆ ? "

" ಇಲ್ಲ, ನೀನೂ ಮಾಡಲಾರೆ. ಆ ಮಾತಿರಲಿ, ಈಗ ಮಲಗಿಕೋ ಹೋಗು "

ಕಲ್ಕತ್ತಾ ಪಟ್ಟಣದ ಬೆಳಗಿನ ಹೊತ್ತು. ಕಾಗೆಗಳ ಕೂಗು ಮತ್ತು ಕಸ ಗುಡಿಸುವವರ ಗಾಡಿಗಳ ಗಡಗಡ ಶಬ್ದದೊಡನೆ ಬೆಳಕು ಹರಿಯಿತು. ದೂರದಲ್ಲಿ ಒಮ್ಮೊಮ್ಮೆ ಜಹಜಿನ ಶಬ್ದ, ಒಮ್ಮೊಮ್ಮೆ ಎಣ್ಣೆಯ ಮಿಷನ್ನಿನ ಸಿಳ್ಳುದನಿ. ಮನೆಯ ಇದಿರ ಬೀದಿಯಲ್ಲಿ ಮನುಷ್ಯನೊಬ್ಬ ಹೆಗಲ ಮೇಲೆ ಏಣಿ ಹೊತ್ತುಕೊಂಡು ಜ್ವರಾರಿ ಗುಳಿಗೆಯ ಪ್ರಕಟನೆಯನ್ನು ಗೋಡೆಗೆ ಅಂಟಿಸುತ್ತ ಹೋಗುತಿದ್ದನು. ಖಾಲಿ ಗಾಡಿಯ ಎತ್ತುಗಳ ಜೋಡಿ ಗಾಡಿಯವನ ಕೈಯಲ್ಲಿ ಬಲವಾದ ಪೆಟ್ಟಿನಿಂದ ಚುರುಕುಗೊಂಡು ವೇಗ ವಾಗಿ ನಡೆದುಹೋಗುತ್ತಿದ್ದುವು. ನಲ್ಲಿಯಲ್ಲಿ ನೀರು ಹಿಡಿದುಕೊಳ್ಳುವುದ ಕ್ಕಾಗಿ ಹಿಂದುಸ್ಥಾನೀ ಹೆಂಗಸೊಬ್ಬಳಿಗೂ ಉಡಿಯಾ ಬ್ರಾಹ್ಮಣನೊಬ್ಬ ನಿಗೂ ಕಾದಾಟ ಬೈದಾಟಗಳು ಆರಂಭವಾಗಿತ್ತು. ವಿಪ್ರದಾಸ ವರಾಂಡ ದಲ್ಲಿ ಕುಳಿತಿದ್ದ. ಕೈಯಲ್ಲಿ ಗುಡುಗುಡಿಯ ನಾಳವಿತ್ತು. ನೆಲದ ಮೇಲೆ ಓದದಿದ್ದ ಸಮಾಚಾರ ಪತ್ರಿಕೆ ಬಿದ್ದಿತ್ತು.

ಕುಮು ಬಂದು, " ಅಣ್ಣಾ, ಉಹೂಂ ಎನ್ನಬೇಡ " ಎಂದಳು.

" ನನ್ನ ಸ್ವಾತಂತ್ರ್ಯಕ್ಕೆ ಅಡ್ಡ ಬರುತ್ತೀಯಾ ? ನಿನ್ನ ಅಧಿಕಾರದಿಂದ ರಾತ್ರಿಯನ್ನು ಹಗಲಾಗಿಯೂ, ಇಲ್ಲದೆ ಇದ್ದುದನ್ನು ಇದ್ದಂತೆಯೂ ಮಾಡಬೇಕೆಂದು ಬಯಸುವೆಯಾ "

" ಅಲ್ಲ, ಹೇಳುವೆನು ಕೇಳು,—ನನ್ನ ಒಡವೆ ತೆಗೆದುಕೊಂಡು ನಿನ್ನ ಚಿಂತೆ ಅಳಿಯಲಿ ".

"ಅದು ಸಾಧ್ಯವೇ? ಎಂತಹ ಮಾತನ್ನಾಡುವೆ ತಂಗಿ, ನಿನ್ನ ಒಡವೆಗಳಿಂದ ನನ್ನ ಚಿಂತೆ ದೂರವಾಗುವುದೆಂಬ ಯೋಚನೆಯಾದರೂ ನಿನಗೆ ಹೇಗೆ ಹೊಳೆಯಿತು?"

"ಅದನ್ನರಿಯೆ, ಆದರೆ ನಿನ್ನ ಈ ಚಿಂತೆಯನ್ನು ನೋಡಲು ನನ್ನಿಂದ ಸಹಿಸಲಾಗುವುದಿಲ್ಲ."

"ಚಿಂತಿಸಿಯೇ ಚಿಂತೆಯನ್ನು ಕೊನೆಗಾಣಿಸಬೇಕವ್ಮಾ, ಅದನ್ನು ಮೋಸದಿಂದ ತಡೆಯಹೋದರೆ ಕೇಡಾಗುವುದು. ಸ್ವಲ್ಪ ಧೈರ್ಯದಿಂದಿರು. ಒಂದು ವಿಧದಲ್ಲಿ ವ್ಯವಸ್ಥೆಮಾಡುವೆ."

ವಿಪ್ರದಾಸ ಆ ಬಾರಿಯ ಅಂಚೆಯಲ್ಲಿ ಹಣ ಕಳುಹಿಸಬೇಕಾದರೆ ಕುಮುವಿನ ವರದಕ್ಷಿಣೆಯ ಹಣಕ್ಕೆ ಕೈ ಹಾಕಬೇಕಾಗುವುದು. ಅದು ಅಸಂಭವ ಎಂದು ಕಾಗದ ಬರೆದನು.

ಕಾಲಕ್ರಮದಲ್ಲಿ ಸುಬೋಧನಿಂದ ಉತ್ತರ ಬಂದಿತು. "ಕುಮುವಿನ ವರದಕ್ಷಿಣೆಯ ಹಣ ನನಗೆ ಬೇಕಿಲ್ಲ. ಆಸ್ತಿಯಲ್ಲಿ ನನ್ನ ಸ್ವಂತದ ಅರ್ಧ ಭಾಗವನ್ನು ಮಾರಿ ಹಣ ಕಳುಹಿಸಬೇಕು. ಇದರೊಡನೆ 'ಪವರ್ ಆಫ್ ಅಟಾರ್ನಿ' ಕಳುಹಿಸಿದ್ದೇನೆ" ಎಂದು ಬರೆದಿದ್ದನು.

ಈ ಕಾಗದ ವಿಪ್ರದಾಸನ ಎದೆಯಲ್ಲಿ ಬಾಣದಂತೆ ನಾಟಿತು. ಇಷ್ಟು ಬಲವಾದ ನಿಷ್ಠುರದ ಕಾಗದವನ್ನು ಸುಬೋಧ ಹೇಗೆ ಬರೆದನೋ ಕಾಣೆ. ಆ ಕ್ಷಣ ಮುಮುಕ ದಿವಾನ್‌ಜಿಗಳನ್ನು ಕರೆಸಿದನು. "ಭೂಷಣ್‌ರಾಯ್ ರವರು ಕರೀಮ್‌ಹಾಟ ತಾಲ್ಲೂಕನ್ನು ಕೊಳ್ಳಬಯಸಿದ್ದರಲ್ಲವೇ? ಎಷ್ಟು ಹಣ ಕೊಡುವರು?" ಎಂದನು.

"ಇಪ್ಪತ್ತು ಸಾವಿರದವರೆಗೆ ಬರಬಹುದು."

"ಭೂಷಣರಾಯ್‌ರವರಿಗೆ ಸುದ್ದಿ ಕಳಿಸು. ಮಾತು ಕತೆ ಆಡ ಬೇಕಾಗಿದೆ."

ವಿಪ್ರದಾಸ ವಂಶದ ಹಿರಿಯ ಮಗ. ಅವನು ಹುಟ್ಟಿದಾಗ ಅವನ ತಾತ ಈ ತಾಲ್ಲೂಕನ್ನು ಪ್ರತ್ಯೇಕವಾಗಿ ಅವನಿಗೆ ದಾನಮಾಡಿದ್ದರು.

ಭೂಷಣ್‌ರಾಯ್ ಭಾರೀ ಲೇವಾದೇವಿಯವರು. ಇಪ್ಪತ್ತು ಇಪ್ಪತ್ತೈದು ಲಕ್ಷ ಹಣದ ಲೇವಾದೇವಿ. ಹುಟ್ಟಿದ ಊರು ಕರೀಮ್‌ಹಾಟಿಯಲ್ಲಿ. ಇದರಿಂದಲೇ ಬಹುದಿನಗಳಿಂದ ತನ್ನ ಗ್ರಾಮುವನ್ನು ಕೊಂಡುಕೊಳ್ಳಬೇಕೆಂಬ ಬಯಕೆ. ಹಣದ ಮುಗ್ಗಟ್ಟಿನಿಂದ ವಿಪ್ರದಾಸ ಒಮ್ಮೊಮ್ಮೆ ಸಿದ್ಧನಾಗಿದ್ದ. ಆದರೆ ರೈತರು ಅಳತೊಡಗುತ್ತಿದ್ದರು. ಅವರನ್ನು ಜಮೀನುದಾರರೆಂದು ನಾವುಗಳು ಎಂದಿಗೂ ಅಂಗೀಕರಿಸಲಾರೆವು—ಎನ್ನುವರು. ಅದರಿಂದಲೇ ಮಾತು ಕತೆ ಅಷ್ಟಕ್ಕೇ ನಿಂತುಹೋಗುತ್ತಿತ್ತು. ಈ ಬಾರಿ ವಿಪ್ರದಾಸ ಮನಸ್ಸನ್ನು ಕಠಿಣವಾಗಿ ಮಾಡಿ ಕುಳಿತನು. ಸುಬೋಧನ ಹಣದ ಬೇಡಿಕೆ ಇಲ್ಲಿಗೇ ನಿಲ್ಲುವುದಿಲ್ಲವೆಂಬುದನ್ನು ಅವನು ಖಂಡಿತವಾಗಿ ಬಲ್ಲ. "ನನ್ನ ಗ್ರಾಮುವನ್ನು ಮಾರುವುದರಿಂದ ಬರುವ ಈ ಹಣ ಸುಬೋಧನಿಗೆ ಇರಲಿ. ಮುಂದೆ ನೋಡೋಣ" ಎಂದುಕೊಳ್ಳುವನು.

ದಿವಾನರಿಗೆ ವಿಪ್ರದಾಸನ ಇದಿರಿನಲ್ಲಿ ಮಾತನಾಡಲು ಧೈರ್ಯವಾಗಲಿಲ್ಲ. ಗುಟ್ಟಾಗಿ ಕುಮುವಿನೊಡನೆ ಹೇಳಿದರು—"ಅಕ್ಕ, ನಿಮ್ಮ ಮಾತನ್ನು ದೊಡ್ಡ ಯಜಮಾನರು ಕೇಳುತ್ತಾರೆ. ಅವರಿಗೆ ಅಡ್ಡಿಮಾಡಿರಿ. ಇದು ಬಹಳ ಅನ್ಯಾಯ" ಎಂದರು.

ವಿಪ್ರದಾಸನನ್ನು ಮನೆಯವರೆಲ್ಲ ಪ್ರೀತಿಸುವರು. ಯಾರಿಗೋಸ್ಕರವೇ ಆಗಲಿ ದೊಡ್ಡ ಯಜಮಾನರು ಸ್ವಂತ ಆಸ್ತಿ ಹಾಳುಮಾಡಿಕೊಳ್ಳುವುದು ಅವರುಗಳಿಗೆ ಒಪ್ಪಿಗೆಯಿಲ್ಲ.

ಹೊತ್ತೇರುತ್ತಿತ್ತು. ವಿಪ್ರದಾಸ ಆ ತಾಲ್ಲೂಕಿನ ಕಾಗದಪತ್ರಗಳನ್ನು ಇಟ್ಟುಕೊಂಡು ತಿರುವಿಹಾಕುತ್ತಿದ್ದನು. ಊಟ ತಿಂಡಿಗಳಾಗಲಿ, ಸ್ನಾನ ಆಹ್ನಿಕಗಳಾಗಲಿ ಆಗಿರಲಿಲ್ಲ. ಕುಮು ಬಾರಿಬಾರಿಗೆ ಅವನಿಗೆ ಹೇಳಿ ಕಳುಹಿಸಿದಳು. ಒಂದು ಹೊತ್ತಿನಲ್ಲಿ ಒಣ ಮುಖದೊಡನೆ, ಸಿಡಿಲು ಬಡಿದು ಎಲೆ ಸೀದ ಗಿಡದಂತೆ, ಒಳಗೆ ಬಂದಳು. ಕುಮುವಿನ ಎದೆಯಲ್ಲಿ ಶೂಲ ನಾಟದಂತಾಯಿತು.

ಸ್ನಾನ ಮಾಡಿ ಊಟಮಾಡಿದ ಮೇಲೆ ಅಲ್‌ಬೋಲಾದ ನಾಳವನ್ನು ಕೈಯಲ್ಲಿ ಹಿಡಿದು ಮಂಚದ ಮೇಲೆ ದಿಂಬು ಆನಿಕೊಂಡು ಮಲಗಿ

ದ್ದಾಗ ಕುಮು ಅಣ್ಣನ ತಲೆಯ ಬಳಿ ಕುಳಿತು ಮೆಲ್ಲಮೆಲ್ಲನೆ ಕೂದಲ ನಡುವೆ ಕೈ ಆಡಿಸುತ್ತ "ಅಣ್ಣಾ, ನಿನ್ನ ಗ್ರಾಮವನ್ನು ನೀನು ಮಾರಬೇಡ" ಎಂದಳು.

"ನಿನಗೆ ನವಾಬ್ ಸಿರಾಜುದ್ದೌಲನ ಭೂತ ಹಿಡಿದಿದೆಯೇನು? ಎಲ್ಲಾ ಮಾತಿನಲ್ಲೂ ಹಟವೇ?"

"ಇಲ್ಲ ಅಣ್ಣಾ, ಮಾತನ್ನು ಅಡಗಿಸಿಬಿಡಬೇಡ."

ಆಗ ವಿಪ್ರದಾಸನಿಗೆ ತೆಪ್ಪಗಿರಲು ಆಗಲಿಲ್ಲ. ನೆಟ್ಟಗೆ ಎದ್ದು ಕುಳಿತು, ಕುಮುವನ್ನು ತಲೆಯ ಬಳಿಯಿಂದ ಸರಿಸಿ, ಇದಿರಿನಲ್ಲಿ ಕೂರಿಸಿದನು. ಅಡಗಿದ ದನಿಯನ್ನು ಸರಿಪಡಿಸಲು ಸ್ವಲ್ಪ ಕೆಮ್ಮಿ "ಸುಬೋಧ ಏನು ಬರೆದಿದ್ದಾನೆ ಬಲ್ಲೆಯೇನು? ಇದೋ ನೋಡು" ಎಂದನು.

ಹೀಗೆಂದು ಜುಬ್ಬದ ಜೇಬಿನಿಂದ ಅವನ ಕಾಗದವನ್ನು ಹೊರತೆಗೆದು ಕುಮುವಿನ ಕೈಯಲ್ಲಿಟ್ಟನು. ಕುಮು ಎಲ್ಲವನ್ನೂ ಓದಿ ಎರಡು ಕೈಗಳಿಂದಲೂ ಮುಖ ಮುಚ್ಚಿಕೊಂಡು "ಅಮ್ಮ! ಚಿಕ್ಕಣ್ಣ ಇಂತಹ ಕಾಗದವನ್ನು ಬರೆಯಬಲ್ಲನೆ?" ಎಂದಳು.

ವಿಪ್ರದಾಸ, "ಅವನು ಸ್ವಂತ ಆಸ್ತಿ ಮತ್ತು ನನ್ನ ಆಸ್ತಿ ಎಂದು ಭೇದ ಕಾಣಬಲ್ಲವನಾಗಿರುವಾಗ ನನ್ನ ಗ್ರಾಮವನ್ನು ನಾನು ಬೇರೆಯಾಗಿ ಇಡಲು ಸಾಧ್ಯವೇನು? ಇವತ್ತು ಅವನಿಗೆ ತಂದೆಯಿಲ್ಲ. ವಿಪತ್ತಿನ ವೇಳೆಯಲ್ಲಿ ಅವನಿಗೆ ನಾನು ಕೊಡದಿದ್ದರೆ ಮತ್ತಾರು ಕೊಡುವರು?" ಎಂದನು.

ಇದರ ಮೇಲೆ ಕುಮು ಮತ್ತೆ ಮಾತನಾಡಲಾರದೆ ಹೋದಳು. ನಿಶ್ಶಬ್ದವಾಗಿ ಅವಳ ಕಣ್ಣುಗಳಿಂದ ನೀರು ಹರಿಯತೊಡಗಿತು. ವಿಪ್ರದಾಸ ಮತ್ತೆ ದಿಂಬನ್ನು ಒರಗಿಕೊಂಡು ಕಣ್ಣುಮುಚ್ಚಿಕೊಂಡನು.

ಬಹಳ ಹೊತ್ತು ಅಣ್ಣನ ಕಾಲನ್ನು ಸವರುತ್ತಿದ್ದು ಕೊನೆಗೆ ಕುಮು ದಿನಿ "ಅಣ್ಣಾ, ಅಮ್ಮನ ಆಸ್ತಿ ಇನ್ನೂ ಅಮ್ಮನದಾಗಿಯೇ ಇದೆಯಲ್ಲ. ಅವಳ ಆ ಒಡವೆಗಳು ಇರುವಂತೆಯೇ ನೀನೇಕೆ...."

ವಿಪ್ರದಾಸ ಪುನಃ ಬೆಚ್ಚಿ ಎದ್ದು ಕುಳಿತು, "ಕುಮೂ, ಇಷ್ಟಾದರೂ ನೀನು ವಿಷಯ ತಿಳಿದುಕೊಳ್ಳಲಿಲ್ಲವಲ್ಲ. ನಿನ್ನ ಒಡವೆಯ ಹಣದಿಂದ ಸುಬೋಧ ಇಂದು ವಿಲಾಯತಿಯಲ್ಲಿ ಥಿಯೇಟರ್-ಕನ್‌ಸರ್ಟ್ ನೋಡುತ್ತ ತಿರುಗಿದನಾದರೆ ಅವನನ್ನು ನಾನು ಎಂದಾದರೂ ಕ್ಷಮಿಸಬಲ್ಲ ನೇನು?—ಇಲ್ಲ, ಅವನು ಎಂದಾದರೂ ತಲೆಯೆತ್ತಿಕೊಂಡು ನಿಲ್ಲಬಲ್ಲನೆ? ಅವನಿಗೆ ಅಷ್ಟೊಂದು ಶಕ್ತಿ ಯಾಕೆ ಕೊಡುತ್ತೀಯೆ?"

ಕುಮು ತೆಪ್ಪನೆ ನಿಂತಿದ್ದಳು. ಯಾವ ಉಪಾಯವೂ ಅವಳಿಗೆ ತೋರಲಿಲ್ಲ. ಆಗ, ಅನೇಕ ಬಾರಿ ಆಲೋಚಿಸಿದ್ದಂತೆಯೇ ಆಲೋಚಿಸ ತೊಡಗಿದಳು.—"ಅಸಂಭವವಾದುದು ಏನಾದರೂ ಘಟಿಸದೇ? ಆಕಾ ಶದ ಯಾವುದಾದರೊಂದು ಗ್ರಹ, ಯಾವುದಾದರೂ ನಕ್ಷತ್ರ ಒಂದು ಮುಹೂರ್ತದಲ್ಲಿ ಎಲ್ಲ ಬಾಧೆಯನ್ನೂ ಪರಿಹರಿಸಲಾರದೆ? ಆದರೆ, ಶುಭ ಶಕುನ ಕಾಣುತ್ತಿತ್ತು. ಕೆಲವು ದಿನದಿಂದ ಅವಳ ಎಡಗಣ್ಣು ಅದರುತ್ತಿತ್ತು. ಇದಕ್ಕೆ ಮುಂಚೆ ಬಾಳುವೆಯಲ್ಲಿ ಬಹು ಬಾರಿ ಎಡಗಣ್ಣು ಅದರಿತ್ತು. ಅದನ್ನು ಕುರಿತು ಆಗ ಯೋಚಿಸಬೇಕಾದ ಆವಶ್ಯಕತೆಯಿರ ಲಿಲ್ಲ. ಈ ಬಾರಿ ಶಕುನ ಮನಸ್ಸಿನಲ್ಲೇ ನೆಲೆಯಾಯಿತು. ಅದರ ಫಲ ಅದು ತೋರಲೇಬೇಕು. ಶುಭಶಕುನದ ಸತ್ಯ ಭಂಗವಾಗಬಾರದು.

೧೦

ಮೋಡ ಕವಿದಿದೆ. ವಿಪ್ರದಾಸನ ದೇಹಸ್ಥಿತಿ ಸರಿಯಾಗಿಲ್ಲ. ದುಂಡುದಿಂಬನ್ನು ಒರಗಿಕೊಂಡು ಅರ್ಧ ಮಲಗಿದ ಸ್ಥಿತಿಯಲ್ಲಿ ಸಮಾಚಾರ ಪತ್ರವನ್ನು ಓದುತ್ತಿದ್ದನು. ಕುಮುವಿನ ಪ್ರೀತಿಯ ಬೆಕ್ಕು ದಿಂಬಿನ ಒಂದು ಭಾಗವನ್ನು ಆಕ್ರಮಿಸಿಕೊಂಡು ಸುರಳಿಸುತ್ತಿಕೊಂಡು ಮಲಗಿತ್ತು. ವಿಪ್ರ ದಾಸನ ಟೆರಿಯರ್ ನಾಯಿ, ವಿಧಿಯಿಲ್ಲದೆ ಅದರ ಪ್ರತಿಷ್ಠೆ ಸಹಿಸಿ ಕೊಂಡು ಒಡೆಯನ ಕಾಲ ಬಳಿ ಮಲಗಿ ಕನಸ್ಸಿನಲ್ಲಿ ಒಮ್ಮೊಮ್ಮೆ ಗುಯ್ ಗುಯ್ ಎಂದು ಸದ್ದು ಮಾಡುತ್ತಿತ್ತು.

ಇಂತಹ ಸಮಯದಲ್ಲಿ ಮತ್ತೊಬ್ಬ ಘಟಕ ಬಂದನು.

"ನಮಸ್ಕಾರ"

" ನೀವು ಯಾರು "

" ಸ್ವಾಮಿ, ಯಜಮಾನರು ನನ್ನನ್ನು ಚೆನ್ನಾಗಿ ಬಲ್ಲರು, (ಶುದ್ಧ ಸುಳ್ಳು) ತಾವು ಆಗ ಇನ್ನೂ ಚಿಕ್ಕವರು. ನನ್ನ ಹೆಸರು ನೀಲಮಣಿ ಘಟಕ. ದಿವಂಗತ ಗಂಗಾಮಣಿ ಘಟಕರ ಪುತ್ರ. "

" ಏನು ಕೆಲಸವಾಗಬೇಕು ? "

" ಉತ್ತಮವಾದ ವರನ ಸುದ್ದಿಯಿದೆ. ನಿಮ್ಮ ಕುಟುಂಬಕ್ಕೆ ತಕ್ಕಂಥಾದ್ದು. "

ವಿಪ್ರದಾಸ ಸ್ವಲ್ಪ ಎದ್ದು ಕುಳಿತನು. ಘಟಕ ರಾಜಾ ಬಹದ್ದೂರ್ ಮಧುಸೂದನ ಘೋಷಾಲರ ಹೆಸರು ಹೇಳಿದನು.

ವಿಪ್ರದಾಸ ವಿಸ್ಮಿತನಾಗಿ " ಮಕ್ಕಳಿವೆಯಲ್ಲವೆ ? " ಎಂದನು.

ಘಟಕ ನಾಲಿಗೆ ಕಚ್ಚಿಕೊಂಡು, " ಇಲ್ಲ, ಅವರು ಮದುವೆಮಾಡಿಕೊಳ್ಳಲಿಲ್ಲ. ಅಪಾರ ಐಶ್ವರ್ಯ. ಸ್ವತಃ ವ್ಯಾಪಾರ ಸಾಪಾರ ನೋಡುವುದನ್ನು ಬಿಟ್ಟುಬಿಟ್ಟಿರುವರು. ಈಗ ಸಂಸಾರ ನಡೆಸಲು ಮನಸ್ಸುಮಾಡಿರುವರು."

ವಿಪ್ರದಾಸ ಸ್ವಲ್ಪ ಹೊತ್ತು ತೆಪ್ಪನೆ ಗುಡುಗುಡಿ ಸೇದುತ್ತ ಕುಳಿತಿದ್ದನು. ಅನಂತರ ಇದ್ದಕ್ಕಿದ್ದಂತೆ ಜೋರಾಗಿ " ವಯಸ್ಸಿಗೆ ಈಡಾದ ಹೆಣ್ಣು ನಮ್ಮ ಮನೆಯಲ್ಲಿಲ್ಲ " ಎಂದನು.

ಘಟಕ ಬಿಡಲು ಬಯಸಲಿಲ್ಲ. ವರನ ಐಶ್ವರ್ಯದ ಪರಿಮಾಣವೆಷ್ಟು, ಗವರ್ನರರ ದರ್ಬಾರಿನಲ್ಲಿ ಅವನು ಹೇಗೆ ಹೋಗಿಬರುತ್ತಾನೆ, ಎಂಬುವುಗಳನ್ನೆಲ್ಲಾ ವರ್ಣಿಸಿ ವರ್ಣಿಸಿ ವ್ಯಾಖ್ಯಾನಮಾಡತೊಡಗಿದನು.

ವಿಪ್ರದಾಸ ಮತ್ತೆ ತೆಪ್ಪನೆ ಕುಳಿತಿದ್ದನು. ಪುನಃ " ವಯಸ್ಸು ಕೂಡದು " ಎಂದನು.

ಘಟಕ " ಯೋಚನೆ ಮಾಡಿ ನೋಡಿ. ಮೂರು ನಾಲ್ಕು ದಿನಗಳ ಅನಂತರ ಮತ್ತೊಮ್ಮೆ ಬರುವೆನು " ಎಂದನು.

ವಿಪ್ರದಾಸ ನಿಟ್ಟುಸಿರು ಬಿಟ್ಟು ಪುನಃ ಮಲಗಿದನು.

ಅಣ್ಣನಿಗೋಸ್ಕರ ಬಿಸಿ ಟೀ ತೆಗೆದುಕೊಂಡು ಕುಮು ಕೋಣೆಯೊಳಕ್ಕೆ ಬರಲಿದ್ದಳು. ಬಾಗಿಲ ಹೊರಗಡೆ ತುಂಡು ಪಂಚೆ, ಒಂದು ನೆನೆದ ಕೊಡೆ ಮತ್ತು ಕೆಸರು ತುಂಬಿದ ತಾಲ್‌ತಲಾದ ಮೆಟ್ಟನ್ನೂ ಕಂಡಳು. ಅವರುಗಳ ಮಾತು ಕತೆ ಬಹುಮಟ್ಟಿಗೆ ಕಿವಿ ಮುಟ್ಟಿತು. ಆಗ ಘಟಕ "ರಾಜಾ ಬಹದ್ದೂರರು ಈ ವರ್ಷ ಕೊನೆಯಾಗುವುದರೊಳಗೆ ಮಹಾರಾಜರಾಗುವರು. ಇದು ಖಂಡಿತ. ಗವರ್ನರವರ ಬಾಯಾರ ಬಂದ ಸುದ್ದಿ. ಅದರಿಂದಲೇ ಇಷ್ಟು ದಿನಗಳ ಅನಂತರ ಅವರಿಗೆ ಯೋಚನೆ ಹಿಡಿದಿದೆ. ಮಹಾರಾಣಿಯ ಸ್ಥಾನವನ್ನು ಬರಿದಾಗಿಡುವುದು ಇನ್ನು ಮೇಲೆ ಸಾಧ್ಯವಾಗದ ಸಂಗತಿ. ನಿಮ್ಮ ಮನೆಯ ಪುರೋಹಿತ ಕಿನೂ ಭಟ್ಟಚಾರ್ಯ ನನಗೆ ದೂರದ ಸಂಬಂಧ. ಅವನ ಬಳಿ ಕನ್ಯೆಯ ಜಾತಕ ನೋಡಿರುವೆ—ಜಾತಕ ಕೂಡಿ ಬಂದಿದೆ. ಇದಕ್ಕಾಗಿ ಪಟ್ಟಣದ ಹುಡುಗಿಯರ ಜಾತಕಗಳನ್ನು ತಿರುವಿಹಾಕುವುದನ್ನೂ ಬಿಡಲಿಲ್ಲ. ಇಂತಹ ಜಾತಕ ಒಂದಾದರೂ ಕೈಗೆ ಸಿಕ್ಕಿಲ್ಲ. ಇದೋ ನೋಡಿ. ನಾನು ತಮಗೆ ಹೇಳುತ್ತೇನೆ–ಈ ಸಂಬಂಧ ಆಗಿಯೇ ಹೋಗಿದೆ. ಇದು ಬ್ರಹ್ಮ ಹಾಕಿದ ಗಂಟು" ಎಂದು ಹೇಳುತ್ತಿದ್ದ.

ಸರಿಯಾಗಿ ಈ ವೇಳೆಗೆ ಕುಮುವಿಗೆ ಪುನಃ ಎಡಗಣ್ಣು ಅದರಿತು. ಶುಭಶಕುನದ ಅಪೂರ್ವ ರಹಸ್ಯವೆಂಥಾದ್ದು. ಕಿನೂ ಆಚಾರ್ಯರು ಅದೆಷ್ಟು ಬಾರಿ ಅವಳ ಕೈ ನೋಡಿ ರಾಜಮಹಿಷಿಯಾಗುವೆಯೆಂದು ಹೇಳಿದ್ದರು. ಜಾತಕದ ಮನೆಗಳ ಆ ಪರಿಣತ ಫಲ ತಾನಾಗಿ ಅರಸುತ್ತ ಇಂದು ಅವಳ ಬಳಿ ಬಂದಿದೆ. ಅವರುಗಳ ಮನೆಯ ಪುರೋಹಿತ ಕೆಲವು ದಿನಗಳ ಹಿಂದೆ ವರ್ಷಾಶನಕ್ಕಾಗಿ ಕಲ್ಕತ್ತೆಗೆ ಬಂದಿದ್ದರು. ಈ ಬಾರಿ ಆಷಾಢಮಾಸದಿಂದ ವೃಷಭರಾಶಿಗೆ ರಾಜಸನ್ಮಾನ, ಸ್ತ್ರೀಯರಿಂದ ಅರ್ಥ ಲಾಭ, ಶತ್ರುನಾಶ, ಅನಿಷ್ಟದಲ್ಲಿ ಹೆಂಡತಿಗೆ ಖಾಯಿಲೆ, ಹೆಚ್ಚೇಕೆ, ಪತ್ನೀ ವಿಯೋಗ ಎಂದು ಹೇಳಿ ಹೋಗಿದ್ದರು. ವಿಪ್ರದಾಸನದು ವೃಷಭ ರಾಶಿ. ನಡುನಡುವೆ ದೇಹದ ಅಸ್ವಸ್ಥತೆ ಇದೆಯೆಂದು ಹೇಳಿದ್ದರು. ಅದಕ್ಕೂ ಪ್ರಮಾಣ ಕಂಡ ಹಾಗೆ ಸಿಕ್ಕಿತ್ತು. ನಿನ್ನೆ ರಾತ್ರಿಯಿಂದ ತಾನು ಕಂಡಂತೆ ನೆಗಡಿಯ ಲಕ್ಷಣ. ಆಷಾಢಮಾಸವೂ ಆರಂಭವಾಯಿತು. ಹೆಂಡತಿಗೆ

ಖಾಯಿಲೆ ಮತ್ತು ವಿಯೋಗದ ವಿಷಯ ಯೋಚಿಸುವುದರಿಂದ ಏನೂ ಪ್ರಯೋಜನವಿಲ್ಲ. ಆದ್ದರಿಂದ ಈ ಬಾರಿ ಕಾಲ ಚೆನ್ನಾಗಿದೆ ಎಂದು ಕೊಂಡಳು.

ಕುಮು ಅಣ್ಣನ ಹತ್ತಿರ ಕುಳಿತು "ಅಣ್ಣಾ, ತಲೆ ನೋವೇನು" ಎಂದಳು.

ಅಣ್ಣ "ಇಲ್ಲ" ಎಂದನು.

"ಟೀ ತಣ್ಣಗಾಗಿ ಬಿಟ್ಟಿರಲಿಲ್ಲ ತಾನೆ? ನಿನ್ನ ಕೋಣೆಯಲ್ಲಿ ಹೊರಗಿನ ಮನುಷ್ಯ ಇದ್ದುದನ್ನು ನೋಡಿ ಒಳಗೆ ಬರಲಾಗಲಿಲ್ಲ."

ವಿಪ್ರದಾಸ ಕುಮುವಿನ ಮುಖದ ಕಡೆಗೆ ನೋಡಿ ನಿಟ್ಟುಸಿರು ಬಿಟ್ಟನು. ಅದೃಷ್ಟದ ನಿಷ್ಠುರತೆ ಎಲ್ಲಕ್ಕಿಂತ ಅಸಹನೀಯವಾದುದು. ಅದು ಕದಲಿಸಲಸಾಧ್ಯವಾದ ಭಂಗಾರದ ಚಕ್ರವನ್ನು ತಂದಾಗ ಹೆಚ್ಚು ಅಸಹನೀಯ. ಅಣ್ಣನ ಮುಖಭಂಗಿಯಿಂದ ಕಂಡುಬಂದ ಈ ಅಸ್ಥಿರತೆಯ ವೇದನೆಯಿಂದ ಕುಮುವಿಗೆ ವ್ಯಥೆಯಾಯಿತು. ದೈವದ ದಾನವನ್ನು ಕಂಡು ಅಣ್ಣನಿಗೇಕೆ ಹೀಗೆ ಸಂದೇಹ? ಮದುವೆಯ ಸಂಗತಿ ಸ್ವಂತದ ಆಯ್ಕೆಯನ್ನವಲಂಬಿಸಿದ್ದು ಎಂಬ ಉಪಸರ್ಗ ಎಂದೂ ಕುಮುದಿನಿಯ ತಲೆಗೆ ಹೊಳೆದೇ ಇರಲಿಲ್ಲ. ಬಾಲ್ಯದಿಂದ ಕುಮುದಿನಿ ಮೇಲೆ ಮೇಲೆ ತನ್ನ ನಾಲ್ವರು ಅಕ್ಕಂದಿರ ಮದುವೆ ನೋಡಿದ್ದಳು. ಅವರುಗಳನ್ನು ಕುಲೀನರ ಮನೆಗೆ ಕೊಟ್ಟಿತ್ತು. ಕುಲ ಹೊರತು ಹೊಗಳುವಂತಹ ಬೇರೆ ವಿಶೇಷ ಏನೂ ಇರಲಿಲ್ಲ. ಮಕ್ಕಳು ಮರಿಗಳೊಡನೆ ಅವರುಗಳು ಸಂಸಾರ ನಡಸುತ್ತ ಬಂದಿರುವರು. ಕಾಲ ತಳ್ಳುತ್ತಿದೆ. ದುಃಖ ಉಂಟಾದಾಗ ದಂಗೆಯೇಳರು. ಇದು ಬಿಟ್ಟು ಮತ್ತೆ ಏನಾದರೂ ಆಗಲು ಅವಕಾಶವಿದೆಯೇ ಎಂಬುದನ್ನು ಯೋಚಿಸಲೂ ಬಾರದು. ತಾಯಿಯೇನು ಮಕ್ಕಳನ್ನು ಆರಿಸಿ ತರುವಳೇನು? ಕುಪುತ್ರನಾಗಲಿ ಸುಪುತ್ರನಾಗಲಿ ಮಗನನ್ನು ಅಂಗೀಕರಿಸುವಳು. ಗಂಡನೂ ಹಾಗೆಯೆ. ವಿಧಾತನಂತೂ ಅಂಗಡಿ ತೆರೆದಿಲ್ಲವಲ್ಲ. ಅದೃಷ್ಟದ ಮೇಲೆ ಯಾರ ಅಧಿಕಾರ ನಡೆದೀತು?

ಇಷ್ಟು ದಿನಗಳ ಮೇಲೆ, ಕುಮುದಿನಿಯ ದುರದೃಷ್ಟದ ಮರುಭೂಮಿಯನ್ನು ದಾಟಿ ರಾಜಪುತ್ರ ವೇಷ ಮರೆಸಿಕೊಂಡು ಬಂದನು. ರಥದ ಗಾಲಿಯ ಸದ್ದನ್ನು ಕುಮುದಿನಿ ತನ್ನ ಹೃತ್ಸ್ಪಂದನದ ಮಧ್ಯೆ ಕೇಳುತ್ತಿದ್ದಳು. ಹೊರಗಿನ ಛದ್ಮ ವೇಷವನ್ನು ಅವಳು ಪರೀಕ್ಷಿಸಿ ನೋಡಬಯಸಲೇ ಇಲ್ಲ.

ಅವಸರ ಅವಸರವಾಗಿ ಕೋಣೆಗೆ ಹೋಗಿ ಪಂಚಾಂಗ ತೆರೆದು ನೋಡಲು ಅಂದು ಮನೋರಥ ಸಿದ್ಧಿಸುವ ದ್ವಿತೀಯೆ. ಮನೆಯಲ್ಲಿ ಕೆಲಸದವರಲ್ಲಿ ಬ್ರಾಹ್ಮಣರೆಷ್ಟು ಜನ ಇದ್ದರೋ ಅವರನ್ನೆಲ್ಲ ಸಂಜೆಯಲ್ಲಿ ಕರೆದು ಫಲಾಹಾರ ಮಾಡಿಸಿದಳು. ಯಥಾಶಕ್ತಿ ದಕ್ಷಿಣೆಯನ್ನೂ ಕೊಟ್ಟಳು. "ತಾಯೀ, ಮಹಾರಾಣಿಯಾಗು, ಐಶ್ವರ್ಯ ಲಭಿಸಲಿ, ಸಂತಾನ ಭಾಗ್ಯವುಂಟಾಗಲಿ" ಎಂದು ಎಲ್ಲರೂ ಆಶೀರ್ವದಿಸಿದರು.

ವಿಪ್ರದಾಸನ ಬೈಠಕ್ ಖಾನೆಗೆ ಎರಡನೆಯ ಸಲ ಘಟಕನು ಬಂದನು. ಚುಟಿಕೆ ಬಾರಿಸಿ ಶಿವ ಶಿವ ಎಂದು ಮುದುಕ ದೊಡ್ಡ ದನಿಯಲ್ಲಿ ಆಕಳಿಸಿದನು. ಈ ಸಾರಿ ಅಸಮ್ಮತಿ ತೋರಿ ಮಾತು ಮುಗಿಸಲು ವಿಪ್ರದಾಸನಿಗೆ ಸಾಹಸವಾಗಲಿಲ್ಲ. ಇಷ್ಟು ದೊಡ್ಡ ಹೊಣೆಯನ್ನು ಹೇಗೆ ವಹಿಸಲಿ ಎಂದು ಯೋಚಿಸಿದನು. ಕುಮುವಿನ ವಿಷಯದಲ್ಲಿ ಈ ಮದುವೆ ಎಲ್ಲಕ್ಕಿಂತ ಮೇಲೇ ಅಲ್ಲವೇ ಎಂಬುದನ್ನು ತಾನು ನಿರ್ಧರಿಸುವುದಾದರೂ ಹೇಗೆ? ನಾಳಿದ್ದು ಕೊನೆಯ ಮಾತು ಹೇಳುವೆನೆಂದು ಘಟಕನನ್ನು ಕಳುಹಿಸಿಬಿಟ್ಟನು.

## ೧೧

ಸಂಜೆಯ ಕತ್ತಲೆ, ಮೋಡದ ಛಾಯೆ ಮತ್ತು ಮಳೆಯ ನೀರಿನಿಂದ ಗಭೀರವಾಗಿತ್ತು. ಕುಮುವಿನ ಸಾಮಾನು ಸರಂಜಾಮುಗಳು ಹೆಚ್ಚಾಗಿ ಏನೂ ಇರಲಿಲ್ಲ. ಒಂದು ಮಗ್ಗುಲಲ್ಲಿ ಸಣ್ಣ ಮಂಚ, ಅಲಮಾರಿನಲ್ಲಿ ಮೂರು ನಾಲ್ಕು ನೆರಿ ಹಿಡಿದ ಸೀರೆ ಮತ್ತು ಸಂಪಿಗೆ ಬಣ್ಣದ ಭೈರವಾಸಗಳು. ಮೂಲೆಯಲ್ಲಿ ಹಲಸಿನ ಹಲಗೆಯಿಂದ ಮಾಡಿದ ಪೆಟ್ಟಿಗೆ. ಅದರಲ್ಲಿ ಅವಳು ನಿತ್ಯ ಉಪಯೋಗಿಸುವ ಬಟ್ಟೆಗಳು. ಮಂಚದ ಕೆಳಗೆ ಹಸರು ಬಣ್ಣದ ತವರದ ಪೆಟ್ಟಿಗೆಯಲ್ಲಿ ಎಲೆ, ಅಡಿಕೆಯ ಮಸಾಲೆ ಸಾಮಾನುಗಳು.

ಮತ್ತೊಂದು ಪೆಟ್ಟಿಗೆಯಲ್ಲಿ ತಲೆ ಬಾಚಿಕೊಳ್ಳುವ ಸಾಧನಗಳು. ಗೋಡೆಯ ಗೂಡಿನಲ್ಲಿ ಮರದ ಹಲಗೆಗಳ ಮೇಲೆ ಕೆಲವು ಪುಸ್ತಕಗಳು. ಮಸಿ ಕುಡಿಕೆ, ಲೇಖನಿ, ಬರೆಯುವ ಕಾಗದ, ತಾಯಿ ಕೈಯಿಂದ ಹೆಣೆದಿಸ್ಟ್ರ ತಂದೆ ಸರ್ವದಾ ಉಪಯೋಗಿಸುತ್ತಿದ್ದ ಪಾದರಕ್ಷೆಗಳು. ಮಲಗುವ ಮಂಚದ ತಲೆದೆಸೆಯಲ್ಲಿ ರಾಧಾಕೃಷ್ಣರ ಚಿತ್ರ. ಗೋಡೆಯ ಮೂಲೆಯಲ್ಲಿ ಒರಗಿಸಿಟ್ಟಿದ್ದ ಒಂದು ಏಸರಾಜ್.

ಮನೆಯಲ್ಲಿ ಕುಮು ದೀಪ ಹಚ್ಚಲಿಲ್ಲ. ಮರದ ಪೆಟ್ಟಿಗೆಯ ಮೇಲೆ ಕುಳಿತು ಕಿಟಕಿಯ ಹೊರಗೆ ದೃಷ್ಟಿ ನಾಟಿದ್ದಳು. ಇದಿರಿನಲ್ಲಿ ಕಲ್ಕತ್ತಾ ನಗರ ಪ್ರಪಂಚದ ಆದಿಕಾಲದಲ್ಲಿ ದಪ್ಪ ಚರ್ಮಹೊಂದಿದ ಒಂದು ಅತಿಕಾಯ ಜಂತುವಿನಂತೆ ಮಳೆಯ ಹಸಿಯ ನಡುವೆ ಮಂಕುಮಂಕಾಗಿ ಕಾಣುತ್ತಿತ್ತು. ನಡುನಡುವೆ ಅದರ ಮೈ ಮೇಲೆ ಬೆಳಕಿನ ಕಿರಣದ ಬಿಂದು. ಕುಮುವಿನ ಮನಸ್ಸು ಆಗ ಅದೃಷ್ಟ ಗೊತ್ತುಮಾಡಬಹುದಾದ ತನ್ನ ಭವಿಷ್ಯಲೀಲೆಯಲ್ಲಿ ಲೀನವಾಗಿತ್ತು. ಆ ಎಡೆಯ ಮನೆ ಮಠ, ನೆಂಟರಿಷ್ಟರು ಎಲ್ಲ ಅವಳ ಸ್ವಂತ ಆದರ್ಶದಂತೆ ಎರಕೆ ಹೊಯ್ದುದ್ದು. ಅವೆಲ್ಲವುಗಳ ನಡುವೆ ಪ್ರತಿಷ್ಠಿತವಾಗಿದ್ದ ತನ್ನ ಸತೀ ಲಕ್ಷ್ಮೀ ರೂಪಕ್ಕೆ ಅದೆಷ್ಟು ಭಕ್ತಿ, ಅದೆಷ್ಟು ಪೂಜೆ, ಅದೆಷ್ಟು ಸೇವೆ ಸಲ್ಲಿಸಿದಳೋ ಹೇಳಲಸದಳ. ತನ್ನ ಸ್ವಂತ ತಾಯಿಯ ಪುಣ್ಯಚರಿತ್ರದಲ್ಲಿ ಒಂದೆಡೆಯಲ್ಲಿ ಒಂದು ಗಭೀರವಾದ ಗಾಯವಿತ್ತು. ಆಕೆ ಗಂಡನ ತಪ್ಪಿನಿಂದ ಸ್ವಲ್ಪ ಕಾಲವಾದರೂ ಧೈರ್ಯಗೆಟ್ಟಿದ್ದಳು. ಕುಮು ಎಂದೆಂದಿಗೂ ಅಂತಹ ತಪ್ಪು ಮಾಡಳು.

ವಿಪ್ರದಾಸನ ಹೆಜ್ಜೆಯ ಸದ್ದು ಕೇಳಿ ಕುಮು ಬೆಚ್ಚಿದಳು. ಅಣ್ಣನನ್ನು ನೋಡಿ "ದೀಪ ಹಚ್ಚಲೇ ಅಣ್ಣಾ" ಎಂದಳು.

"ಬೇಡ ಕುಮು, ಆವಶ್ಯಕತೆಯಿಲ್ಲ" ಎಂದು ಹೇಳಿ ವಿಪ್ರದಾಸ ಪೆಟ್ಟಿಗೆಯ ಮೇಲೆ ಅವಳ ಮಗ್ಗುಲಲ್ಲಿ ಬಂದು ಕುಳಿತನು. ಕುಮು ಅವಸರ ಅವಸರವಾಗಿ ನೆಲದ ಮೇಲೆ ಕುಳಿತು ಮೃದುವಾಗಿ ಅವನ ಪಾದಗಳ ಮೇಲೆ ಕೈ ಆಡಿಸತೊಡಗಿದಳು.

ವಿಪ್ರದಾಸ ಸ್ನಿಗ್ಧವಾದ ದನಿಯಲ್ಲಿ "ಬೈಠಕ್ ಖಾನೆಯಲ್ಲಿ ಹೊರಗಿನ ಜನ ಬಂದಿದ್ದರು. ಆದರಿಂದಲೇ ನಿನ್ನನ್ನು ಕರೆಯಕಳುಹಲಿಲ್ಲ. ಇಷ್ಟು ಹೊತ್ತು ಒಂಟಿಯಾಗಿಯೇ ಕುಳಿತಿದ್ದೆಯೇನು ?" ಎಂದನು.

ಕುಮು ನಾಚಿದವಳಾಗಿ–" ಇಲ್ಲ, ಕ್ಷೇಮಾ ಅತ್ತೆ ಬಹಳ ಹೊತ್ತು ಕುಳಿತಿದ್ದಳು" ಎಂದಳು. ಮಾತನ್ನು ಬದಲಾಯಿಸಲು "ಬೈಠಕ್ ಖಾನೆ ಯಲ್ಲಿ ಯಾರು ಬಂದಿದ್ದರು ಅಣ್ಣಾ" ಎಂದು ಕೇಳಿದಳು.

" ಆ ಮಾತನ್ನೇ ನಿನಗೆ ಹೇಳಲು ಬಂದಿರುವೆ. ಈ ವರ್ಷ ಜ್ಯೇಷ್ಠ ಮಾಸಕ್ಕೆ ನೀನು ಹದಿನೆಂಟು ದಾಟಿ ಹತ್ತೊಂಭತ್ತನೆಯ ವರ್ಷದಲ್ಲಿ ಕಾಲಿ ಡುವೆ ಅಲ್ಲವೆ ?"

" ಹೌದಣ್ಣಾ, ಅದರಿಂದ ತಪ್ಪಾಯಿತೇನು !"

" ತಪ್ಪಿನ ಮಾತಲ್ಲ, ಇಂದು ನೀಲಮಣಿ ಘಟಕ ಬಂದಿದ್ದ. ತಂಗೀ ಲಕ್ಷ್ಮೀ, ನಾಚಿಕೊಳ್ಳಬೇಡ. ಅಪ್ಪ ಬದುಕಿದ್ದಾಗ ನಿನಗಿನ್ನೂ ಹತ್ತು ವರ್ಷ ವಾಗಿತ್ತು. ಮದುವೆ ಆಗಲೇ ನಿಶ್ಚಯವಾಗಿತ್ತು. ಆಗಿಬಿಟ್ಟಿದ್ದರೆ ನಿನ್ನ ಅಭಿಪ್ರಾಯವನ್ನು ಯಾರೂ ಕೇಳುತ್ತಿರಲಿಲ್ಲ. ಆದರೆ ಇಂದು ನಾನು ಹಾಗೆ ಮಾಡಲಾರೆ. ರಾಜಾ ಮಧುಸೂದನ ಘೋಷಾಲರ ಹೆಸರು ಖಂಡಿತ ಕೇಳಿಯೇ ಇರುವೆ. ವಂಶ ಮರ್ಯಾದೆಯಲ್ಲಿ ಅವರೇನು ಕೀಳಲ್ಲ. ಆದರೆ ವಯಸ್ಸಿನಲ್ಲಿ ನಿನಗೂ ಅವರಿಗೂ ಬಹಳ ವ್ಯತ್ಯಾಸವಿದೆ. ನಾನು ಒಪ್ಪಲಾ ರದೆ ಹೋದೆ. ಈಗ ನಿನ್ನ ಬಾಯಿಂದ ಒಂದು ಮಾತು ಕೇಳಿದರೆ ತೀರ್ಮಾ ನಿಸಿಬಿಡಲು ಸಾಧ್ಯವಾದೀತು. ನಾಚಿಕೊಳ್ಳಬೇಡ ಕುಮು."

" ಇಲ್ಲ, ನಾಚಿಗೆ ಪಡೆನು" ಎಂದು ಹೇಳಿ ಕೆಲಹೊತ್ತು ಸುಮ್ಮನಿ ದ್ದಳು. " ಯಾರು ಏನೇ ಹೇಳಲಿ, ಖಂಡಿತವಾಗಿ ಅವರೊಡನೆ ನನ್ನ ಸಂಬಂಧ ಗೊತ್ತಾಗಿಬಿಟ್ಟಿದೆ" ಎಂದಳು. ಇದು ಆ ಘಟಕರ ಮಾತಿನ ಪ್ರತಿಧ್ವನಿ—ಯಾವ ವೇಳೆಯಲ್ಲೋ ಆ ಮಾತು ಇವಳ ಮನಸ್ಸಿನ ಅಂತ ರಾಳದಲ್ಲಿ ಬೇರೂರಿತ್ತು.

ವಿಪ್ರದಾಸ ಅಚ್ಚರಿಗೊಂಡವನಾಗಿ " ಅದು ಯಾವ ವಿಧದಲ್ಲಿ ಗೊತ್ತಾಯಿತು" ಎಂದನು.

ಕುಮು ತೆಪ್ಪನಿದ್ದಳು.

ವಿಪ್ರದಾಸ ಅವಳ ತಲೆ ಸವರುತ್ತ "ಹುಡುಗಾಟ ಮಾಡಬೇಡ, ಕುಮೂ" ಎಂದನು.

ಕುಮುದಿನಿಯೆಂದಳು–"ನೀನು ಅರಿಯಲಾರೆ ಅಣ್ಣ, ಎಳ್ಳಷ್ಟೂ ಹುಡುಗಾಟ ಮಾಡುತ್ತಿಲ್ಲ."

ಅಣ್ಣನಲ್ಲಿ ಅವಳಿಗೆ ಮೇರೆಯಿಲ್ಲದ ಭಕ್ತಿ. ಆದರೆ ಅಣ್ಣನಂತೂ ದೈವವಾಣಿಯನ್ನೂ ನಂಬನು. ಈ ಎಡೆಯಲ್ಲೇ ಅಣ್ಣನ ದೃಷ್ಟಿ ಮಂಕು ಎಂಬುದನ್ನು ಕುಮುದಿನಿ ಬಲ್ಲಳು.

ವಿಪ್ರದಾಸ "ನೀನಂತೂ ಅವರನ್ನು ನೋಡಿಲ್ಲವಲ್ಲ" ಎಂದನು.

"ಅದಿರಲಿ, ನಾನು ಸರಿಯಾಗಿ ತಿಳಿದಿರುವೆ"

ಇಂತಹ ಪರಿಸ್ಥಿತಿಯಲ್ಲೇ ಅಣ್ಣ ತಂಗಿಯಲ್ಲಿ ಅಪಾರ ಭೇದವೆಂಬುದನ್ನು ವಿಪ್ರದಾಸ ಚೆನ್ನಾಗಿಯೇ ಅರಿತಿದ್ದ. ಕುಮುವಿನ ಮನಸ್ಸಿನ ಈ ಕತ್ತಲೆಯ ಕೋಣೆಯ ಮೇಲೆ ಅಣ್ಣನ ಅಧಿಕಾರ ಏನೇನೂ ಇಲ್ಲ. ಆದರೂ ವಿಪ್ರದಾಸ ಮತ್ತೊಮ್ಮೆ "ನೋಡು ಕುಮು, ಇದು ಇಡೀ ಬಾಳುವೆಯ ವಿಷಯ. ಥಟಕ್ಕನೆ ಯಾವುದೋ ಒಂದು ಆವೇಶದ ಭರದಲ್ಲಿ ಪಣ ತೊಟ್ಟು ಕೂರಬೇಡ" ಎಂದನು.

ಕುಮು ವ್ಯಾಕುಲಗೊಂಡವಳಾಗಿ "ಆವೇಶವಲ್ಲ ಅಣ್ಣ, ನಾನು ನಿನ್ನ ಈ ಕಾಲು ಮುಟ್ಟಿ ಹೇಳುತ್ತೇನೆ. ಮತ್ತಾರನ್ನೂ ಮದುವೆಯಾಗಲಾರೆ" ಎಂದಳು.

ವಿಪ್ರದಾಸ ಬೆಚ್ಚಿಬಿದ್ದನು. ಯಾವೆಡೆಯಲ್ಲಿ ಕಾರ್ಯ ಕಾರಣದ ಯೋಗಾಯೋಗವಿಲ್ಲವೋ ಆ ಎಡೆಯಲ್ಲಿ ತರ್ಕ ಹೂಡುವುದಾದರೂ ಹೇಗೆ? ಅಮಾವಾಸ್ಯೆಯೊಡನೆ ಕುಸ್ತಿ ಮಾಡುವುದು ನಡೆಯದ ಸಂಗತಿ. ಕುಮು ಯಾವುದೋ ಒಂದು ದೈವ ಸಂಕೇತವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡಿರುವಳೆಂದು ವಿಪ್ರದಾಸ ಅರಿತನು. ಸಂಗತಿ ವಾಸ್ತವ. ಅಂದು ಮುಂಜಾನೆ ತಾನೆ ದೇವರನ್ನು ಉದ್ದೇಶಿಸಿ ಮನಸ್ಸಿನಲ್ಲೇ "ಈ ಹೂಗಳಲ್ಲಿ ಜೊತೆ ಜೊತೆಯಾಗಿ ತೆಗೆದಿಟ್ಟ ನಂತರ ಕೊಟ್ಟಕೊನೆಯಲ್ಲಿ ಉಳಿಯುವ

ಹೂವಿನ ಬಣ್ಣ ದೇವರ ಬಣ್ಣದಂತೆ ನೀಲಮೇಘವಾದರೆ ಆಗ ಆತನಿಗೆ ಒಪ್ಪಿಗೆಯೆಂದು ಅರಿಯುವೆನು'' ಎಂದು ನೆನೆದಿದ್ದಳು. ಎಲ್ಲಕ್ಕೂ ಕೊನೆಯಲ್ಲಿ ಸಿಕ್ಕಿದ ಹೂ ನೀಲೀ ಅಪರಾಜಿತಾ.

ಅನತಿ ದೂರದಲ್ಲಿ ಮಲ್ಲಿಕ್‌ರವರ ಮನೆಯಲ್ಲಿ ಸಂಜೆಯ ಆರತಿಯ ಕಂಚಿನ ಗಂಟೆ, ಜಾಗಟೆಗಳ ಧ್ವನಿ, ಕೇಳತೊಡಗಿದವು. ಕುಮು ಕೈ ಜೋಡಿಸಿ ನಮಸ್ಕರಿಸಿದಳು. ವಿಪ್ರದಾಸ ಬಹಳ ಹೊತ್ತು ತೆಪ್ಪನಿದ್ದನು. ಕ್ಷಣಕ್ಷಣಕ್ಕೆ ಮಿಂಚು ಹೊಳೆಯುತ್ತಿತ್ತು. ಮಳೆಯ ಧಾರೆಗೆ ವಿರಾಮವಿರಲಿಲ್ಲ.

೧೨

ವಿಪ್ರದಾಸ ಮತ್ತೂ ಹಲವು ಬಾರಿ ಕುಮುದಿನಿಗೆ ಅರಿವು ಮಾಡಿಕೊಡಲು ಪ್ರಯತ್ನಿಸಿದನು. ಕುಮು ಮಾತಿಗೆ ಉತ್ತರ ಕೊಡದೆ ತಲೆ ತಗ್ಗಿಸಿಕೊಂಡು ಸೆರಗಿನ ತುದಿಯನ್ನು ಹೊಸೆಯುತ್ತಿದ್ದಳು.

ಮದುವೆಯ ಮಾತು ನಿರ್ಧಾರವಾಯಿತು. ಕೇವಲ ಮದುವೆ ನಡೆಯುವುದೆಲ್ಲಿ? ಎಂಬ ಒಂದು ಸಂಗತಿಯನ್ನು ಕುರಿತು ಎರಡು ಕಡೆಯಲ್ಲೂ ಸ್ವಲ್ಪ ಮಾತು ನಡೆದಿತ್ತು. ವಿಪ್ರದಾಸನ ಇಚ್ಛೆ ಕಲ್ಕತ್ತೆಯ ಮನೆಯಲ್ಲಿ ಆಗಲೆಂದು. ಮಧುಸೂದನನ ದೃಢವಾದ ಹಟ ನೂರ್ ನಗರದಲ್ಲಿ ಆಗಲೆಂದು. ಗಂಡಿನವರ ಇಚ್ಛೆಯೇ ನಡೆಯಿತು.

ಏರ್ಪಾಡಿಗಾಗಿ ಸ್ವಲ್ಪ ಮುಂದಾಗಿಯೇ ನೂರ್ ನಗರಕ್ಕೆ ಬರಬೇಕಾಯಿತು. ವೈಶಾಖ-ಜ್ಯೇಷ್ಠದ ಬೇಗೆಯ ಅನಂತರ ಆಷಾಢದಲ್ಲಿ ಮಳೆ ಬಂದರೆ ಭೂಮಿ ಕ್ರಮಕ್ರಮವಾಗಿ ಹೇಗೆ ಹಸುರಾಗಿ ಕಾಣುವುದೋ ಹಾಗೆಯೇ ಕುಮುದಿನಿಯ ಒಳಗೂ ಹೊರಗೂ ಒಂದು ಹೊಸ ಪ್ರಾಣದ ಪ್ರಭಾವ ಮೂಡಿತು. ತನ್ನ ಮನಸ್ಸಿನಲ್ಲಿ ಕಲ್ಪಿಸಿಕೊಂಡ ಮನುಷ್ಯನೊಡನೆ ಕೂಡುವ ಆನಂದ ಅವಳನ್ನು ಹಗಲು ರಾತ್ರಿ ಪುಳಕಿತಳನ್ನಾಗಿ ಮಾಡುತ್ತಿತ್ತು. ಶರತ್‌ಕಾಲದ ಹೊಂಬೆಳಕು ಅವಳೊಡನೆ ಪ್ರತ್ಯಕ್ಷವಾಗಿ ಮಾತನಾಡುತ್ತಿತ್ತು. ಯಾವುದೋ ಅನಾದಿಕಾಲದ ಮಾತು ಕತೆ. ಮಲಗುವ ಮನೆಯ ಇದಿರ ವರಾಂಡದಲ್ಲಿ ಕುಮು ಪುರಿ ಎರಚುವಳು. ಹಕ್ಕಿಗಳು

ಬಂದು ಬಂದು ತಿನ್ನುತ್ತಿದ್ದುವು. ರೊಟ್ಟಿಯ ಚೂರು ಇಡುವಳು. ಅಳಿಲು ಚಂಚಲವಾದ ಕಣ್ಣುಗಳಿಂದ ನಾಲ್ಕು ದಿಕ್ಕಿನಲ್ಲೂ ದಿಟ್ಟಿಸಿ ನೋಡುತ್ತ ವೇಗವಾಗಿ ಓಡಿ ಬಂದು ಬಾಲದ ಮೇಲೆ ಊರಿಕೊಂಡು ನಿಲ್ಲುವುದು. ಮುಂದಿನ ಎರಡು ಕಾಲುಗಳಲ್ಲಿ ರೊಟ್ಟಿ ಎತ್ತಿ ಹಿಡಿದುಕೊಂಡು ಕುಚುರ್ ಕುಚುರ್ ಎಂದು ತಿನ್ನುತ್ತಿತ್ತು. ಕುಮುದಿನಿ ಮರೆಯಲ್ಲಿ ಆನಂದದಲ್ಲಿ ಮುಳುಗುವಳು. ಪ್ರಪಂಚದ ವಿಷಯದಲ್ಲಿ ಅವಳ ಅಂತರ್ಯ ಇಂದು ದಾಕ್ಷಿಣ್ಯದಿಂದ ತುಂಬಿತ್ತು. ಬೆಳಗ್ಗೆ ಮೈ ತೊಳೆದುಕೊಳ್ಳುವ ಸಮಯ ದಲ್ಲಿ ಕಿಟಕಿಯ ಪುಷ್ಕರಿಣಿಯಲ್ಲಿ ನೀರು ಅವಳೊಂದಿಗೆ ಮಾತಾಡು ವುದೋ ಎನ್ನುವಂತೆ, ಕಂಠ ಮಟ್ಟ ಮುಳುಗಿ ತೆಪ್ಪನೆ ಕುಳಿತಿದ್ದಳು. ಸಂಜೆಯ ವಕ್ರ ಕಿರಣ ಪುಷ್ಕರಿಣಿಯ ಪಡುವಲ ತೀರದ ಚಕ್ಕೋತನ ಗಿಡದ ರೆಂಬೆಯ ಮೇಲಿಂದ ಬಂದು ಘನ ನೀಲ ಜಲರಾಶಿಯ ಮೇಲೆ ಬಿದ್ದು ಹೊನ್ನ ರೇಖೆಯಂತೆ ಥಳಥಳಿಸುತ್ತಿತ್ತು. ಅವಳು ದೃಷ್ಟಿಸಿ ದೃಷ್ಟಿಸಿ ನೋಡುತ್ತಿದ್ದಳು. ಆ ನೆಳಲು ಬೆಳಕಿನಲ್ಲಿ ಅವಳ ಇಡೀ ದೇಹದ ಮೇಲೆ ಅನಿರ್ವಚನೀಯ ಪುಳಕದ ಕಂಪನ ಹೊಮ್ಮಿ ಹರಿಯಿತು. ಮಧ್ಯಾಹ್ನ ಮನೆಯ ಬಿಸಿಲು ಮಹಡಿಯ ಮೇಲಿನ ಎತ್ತರವಾದ ಭಾಗದಲ್ಲಿ ಒಂಟಿ ಯಾಗಿ ಕುಳಿತಿರುತ್ತಿದ್ದಳು. ಪಕ್ಕದ ತೋಟದ ಗಿಡದಿಂದ ಗೂಬೆಯ ಕೂಗು ಕಿವಿಯಲ್ಲಿ ಬೀಳುತ್ತಿತ್ತು. ಅವಳ ಯೌವನ ಮಂದಿರದಲ್ಲಿ ಇಂದು ಯಾವ ದೇವತೆಯ ಆವಾಹನೆಯಾಗುವುದಿತ್ತೋ ಅದು ರೂಪ ತಾಳಿತ್ತು. ಕೃಷ್ಣರಾಧೆಯರ ಯುಗಲ ರೂಪದ ಮಾಧುರ್ಯ ಅದರೊಡನೆ ಕಲೆತಿದೆ. ಮನೆಯ ಬಿಸಿಲು ಮಹಡಿಯ ಮೇಲೆ ಏಸರಾಜನನ್ನು ಎತ್ತಿಕೊಂಡು ಮೆಲ್ಲ ಮೆಲ್ಲನೆ ಬಾರಿಸುವಳು. ಅವಳ ಅಣ್ಣನಿಗೆ ಅತ್ಯಂತ ಪ್ರಿಯವಾದದ್ದು ಭೂಪಾಳಿ ರಾಗದ ಕೀರ್ತನೆ:—

ಆಜು ಮೋರ್ ಘರೇ ಆಯಿಲೊ ಪಿಯರವಾ
ರೋಮ ರೋಮೆ ಹರ ಬೀಲಾ

(ಇಂದು ನನ್ನ ಮನೆಗೆ ಪ್ರಿಯ ಬಂದನೋ–ರೋಮರೋಮದಲ್ಲಿ ಹರುಷವುಂಟಾಯಿತೋ....)

ರಾತ್ರಿ ಹಾಸಿಗೆಯಲ್ಲಿ ಕುಳಿತು ಕೈ ಮುಗಿಯುವಳು. ಬೆಳಗ್ಗೆ ಎದ್ದು ಹಾಸಿಗೆಯಲ್ಲಿ ಕುಳಿತು ಮತ್ತೆ ಕೈ ಮುಗಿಯುವಳು. ಯಾರಿಗೆ ನಮಿಸುವಳೋ ಅದು ಸ್ಪಷ್ಟವಾಗಿಲ್ಲ—ನಿರಾವಲಂಬ ಭಕ್ತಿಯೊಂದರ ಸ್ವತಃ ಸ್ಫೂರ್ತ ಉಚ್ಛ್ವಾಸ.

ಆದರೆ ಮನೋನಿರ್ಮಿತ ಪ್ರತಿಮೆಯ ದೇವಾಲಯದ ಕದ ಚಿರಕಾಲವಂತೂ ಮುಚ್ಚಿರಲು ಸಾಧ್ಯವಿಲ್ಲ. ಪಿಸುಮಾತಿನ ನಿಶ್ವಾಸದ ತಾಪ ಮತ್ತು ವೇಗದಿಂದ ಆ ಮೂರ್ತಿಯ ಲಾವಣ್ಯ ಅಳಿಯತೊಡಗಿದಾಗ ದೇವತೆಯ ರೂಪ ನೆಲಸಿರುವುದಾದರೂ ಹೇಗೆ? ಆಗ ಭಕ್ತನಿಗೆ ಬಹು ದುಃಖದ ಕಾಲ.

ಒಂದು ದಿನ ಗಾಣಿಗರ ಕೇರಿಯ ಮುದುಕಿ* ತೀನಕವಡಿ ಬಂದು ಕುಮುವಿನ ಇದಿರಿನಲ್ಲೇ "ಆಹಾ ನಮ್ಮ ಕುಮುವಿನ ಅದೃಷ್ಟಕ್ಕೆ ಎಂತಹ ರಾಜ ಸಿಕ್ಕಿದ—ಕೊರವಂಜಿಯ ಹಾಡಿನಲ್ಲಿ ಹೇಳಿರುವ ಹಾಗೆ"

ಏಕ್ ಜೆ ಛಿಲೊ ಕೂಕುರ್-ಚಾಟಾ ಶಿಯಾಲ್‌ಕಾಟಾರ್ ವನ
ಕೇಟೇ ಕರ್‌ಲೆ ಸಿಂಹಾಸನ....

ಅದರಂತೆ ಇವನೂ ಆ ಶಿಯಾಲ್ ಕಾಂಟಾವನದ ರಾಜ. ಅವನು ರಜಬ್ ಪುರದ ಆಂದೋ ಮುಹರಿಯ ಮಗ ಮೊಧೊ. ದೇಶದಲ್ಲಿ ಕ್ಷಾಮ ಬಂದಾಗ, ಬರ್ಮಾದಿಂದ ಅಕ್ಕಿ ತಂದು ಮಾರಿ ಗಳಿಸಿದ್ದು ಅವನ ಹಣ. ಆಗಲೂ ಮುದಿ ತಾಯಿಯನ್ನು ಸಾಯುವವರೆಗೂ ಒಲೆಯ ಮುಂದೆ ಬೇಯಿಸಿ ಬೂದಿಮಾಡಿದ–ಎಂದಳು.

ಹೆಣ್ಣುಮಕ್ಕಳು ಉತ್ಸುಕಗೊಂಡು ತೀನ್‌ಕವಡಿಯನ್ನು ಮುತ್ತಿ ಕುಳಿತರು. "ವರನನ್ನು ಬಲ್ಲೆಯೇನು?" ಎಂದು ಕೇಳಿದರು.

"ಅರಿಯೆನೇನು? ಅವರ ಅಮ್ಮ ನಮ್ಮ ಕೇರಿಯ ಹೆಣ್ಣು, ಪುರೋಹಿತರು-ಚಕ್ರವರ್ತಿಗಳ ಮಗಳು. (ದನಿ ಕುಗ್ಗಿಸಿ) ಸತ್ಯವಾದ

* ತೀನ ಕವಡಿ, ಸಾತ್ ಕವಡಿ (ಮೂರು ಕವಡೆ, ಏಳು ಕವಡೆ) ಎಂದು ಮಕ್ಕಳಿಗೆ ಹೆಸರಿಡುವ ಪದ್ಧತಿಯಿದೆ.

ಮಾತು ಹೇಳುವೆ ಮಗೂ, ಶ್ರೇಷ್ಠ ಬ್ರಾಹ್ಮಣರ ಮನೆಯಲ್ಲಿ ಅವರಿಗೆ ಹೆಣ್ಣು ಕೊಟ್ಟು ತರುವುದು ನಡೆಯದು. ಅದಿರಲಿ ಬಿಡು, ಲಕ್ಷ್ಮಿಯಂತೂ ಜಾತಿ ಕುಲ ನೋಡುವವಳಲ್ಲವಲ್ಲ.''

ಕುಮುದಿನಿಯ ಮನಸ್ಸು ಈ ಕಾಲದ ಅಚ್ಚಿನಲ್ಲಿ ಎರಕಹೊಯ್ದು ದಲ್ಲ. ಜಾತಿ ಕುಲಗಳ ಪವಿತ್ರತೆ ಅವಳ ಬಳಿ ಒಂದು ವಾಸ್ತವದ ವಿಷಯ ವಾಗಿತ್ತು. ಮನಸ್ಸು ಅದರಿಂದ ಎಷ್ಟೆಷ್ಟು ಸಂಕುಚಿತವಾಗುತ್ತಿತ್ತೊ ಅಷ್ಟಷ್ಟೂ ನಿಂದಿಸುವವರ ಮೇಲೆ ಕೋಪ ಬರುತ್ತಿತ್ತು. ಆ ಸ್ಥಳದಿಂದ ಇದ್ದಕ್ಕಿದ್ದಂತೆ ಅಳುತ್ತ ಎದ್ದು ಹೊರಗೆ ಓಡಿಹೋಗುವಳು. ಇದ್ದವರು ಎಲ್ಲರೂ ಒಬ್ಬರನ್ನೊಬ್ಬರು ಚುಚ್ಚಿ–"ಅಬ್ಬ, ಈಗಲೇ ಇಷ್ಟೊಂದು ಅಭಿ ಮಾನವೆ. ಇವಳೇನು ದಕ್ಷಯಜ್ಞದ ಸತಿಯನ್ನು ಸೋಲಿಸಿ ಮುಂದುವರಿ ದವಳಲ್ಲ " ಎನ್ನುವರು.

ವಿಪ್ರದಾಸನ ಮನಸ್ಸಿನ ನಡೆ ಈ ಕಾಲದ್ದು. ಆದರೂ ಜಾತಿ ಕುಲದ ಹೀನತೆಗಳು ಅವನನ್ನು ಸೋಲಿಸಿಬಿಡುತ್ತಿದ್ದುವು. ಅದರಿಂದಲೇ ಸುದ್ದಿಯನ್ನು ಅಡಗಿಸಿಬಿಡಲು ಬಹಳ ಪ್ರಯತ್ನಮಾಡಿದನು. ಆದರೆ ಹರಿದ ದಿಂಬಿನ ಮೇಲೆ ಭಾರ ಅದುಮಿದರೆ ಅದರ ಅರಳೆ ಮತ್ತೂ ಹೆಚ್ಚಾಗಿ ಹೇಗೆ ಹೊರಬೀಳುವುದೋ ಹಾಗೆ ಆಯಿತು.

ಇತ್ತ ಮುದಿ ರೈತ ದಾಮೋದರವಿಶ್ವಾಸನಿಂದ ಘೋಷಾಲ್ ಮನೆ ತನದವರು ಬಹು ಹಿಂದಿನ ಕಾಲದಲ್ಲಿ ನೂರ್ ನಗರದ ಪಕ್ಕದ ಶೇಯಾ ಕೂಲಿ ಗ್ರಾಮದ ಒಡೆಯರಾಗಿದ್ದರೆಂದು ಸುದ್ದಿ ತಿಳಿಯಿತು. ಈಗ ಅದು ಚಟರ್ಜಿಗಳ ಅಧೀನದಲ್ಲಿದೆ. ಪ್ರತಿಮಾ ವಿಸರ್ಜನೆಯ ವ್ಯಾಜ್ಯದಲ್ಲಿ ಯಾವ ವಿಧದಲ್ಲಿ ಘೋಷಾಲ್ ಮನೆತನದವರ ವಿಸರ್ಜನೆ ಘಟಿಸಿತ್ತು, ಯಜಮಾನರು ಯಾವ ಯುಕ್ತಿಯಿಂದ ಅವರನ್ನು ಊರುಬಿಟ್ಟು ಹೊರಡಿಸಿ ದರು ಮತ್ತು ಸಮಾಜದಿಂದಲೂ ಹೇಗೆ ಹೊರದೂಡಿದರೆಂಬುದನ್ನು ವರ್ಣಿ ಸುತ್ತ ವರ್ಣಿಸುತ್ತ ದಾಮೋದರನ ಮುಖ ಭಕ್ತಿಯಿಂದ ಉಜ್ವಲವಾಗು ತ್ತಿತ್ತು. ಘೋಷಾಲರುಗಳು ಒಂದಾನೊಂದು ಕಾಲದಲ್ಲಿ ಧನ, ಮಾನ, ಮರ್ಯಾದೆಗಳಲ್ಲಿ ಚಟರ್ಜಿ ಮನೆತನದವರಿಗೆ ಸರಿಸಮಾನರಾಗಿದ್ದರೆಂಬ

ಸಂಗತಿ ಕೇಳಲು ಸಂತೋಷವೇ. ಆದರೆ ವಿಪ್ರದಾಸನ ಮನಸ್ಸಿನಲ್ಲಿ, ಈ ಮದುವೆಯು, ಹಿಂದಿನ ಆ ಹಳೆಯ ವ್ಯಾಜ್ಯದ ಮುಂದುವರಿದ ಅಂಶ ವೇನೂ ಅಲ್ಲವಷ್ಟೆ ಎಂದು ಭಯವಾಯಿತು.

೧೩

ಮಾರ್ಗಶಿರ ಮಾಸದಲ್ಲಿ ಮದುವೆ. ಇಪ್ಪತ್ತೈದನೆಯ ಆಶ್ವಯುಜ ದಂದು ಲಕ್ಷ್ಮೀಪೂಜೆ ಆಯಿತು. ಹಠಾತ್ತಾಗಿ ಇಪ್ಪತ್ತೇಳನೇ ಆಶ್ವಯುಜ ದಂದು ಗುಡಾರ ಮತ್ತು ನಾನಾ ಬಗೆಯ ಅಲಂಕಾರದ ವಸ್ತುಗಳೊಡನೆ ಘೋಷಾಲ್ ಕಂಪೆನಿಯ ಎಂಜನೀಯರಿಂಗ್ ಓವರ್ಸಿಯರ್ ಬಂದು ತಲು ಪಿದರು. ಅವರ ಸಂಗಡ ಪಶ್ಚಿಮ ಪ್ರಾಂತದ ಕೂಲಿಯವರಿದ್ದರು. ಸಂಗತಿ ಯೇನು? ಶೇಯಾ ಘೋಷಾಲ್ ದಿಘಿಯ ಅರುಗಿನಲ್ಲಿ ಗುಡಾರ ಹೊಡೆದು ಮದವಣಿಗನೂ ಅವನ ಕಡೆಯವರೂ ಕೆಲವು ದಿನಗಳ ಮುಂಚಿನಿಂದ ಅಲ್ಲಿರುವರೆಂದು ತಿಳಿಯಿತು.

“ಇದೆಂತಹ ಮಾತು? ಅವರುಗಳು ಎಷ್ಟು ಜನ ಬೇಕಾದರೂ ಬರಲಿ. ಎಷ್ಟು ದಿನ ಬೇಕಾದರೂ ಇರಲಿ, ನಾವೇ ಏರ್ಪಾಡು ಮಾಡು ವೆವು. ಗುಡಾರದ ಆವಶ್ಯಕತೆಯೇನು? ನಮ್ಮದೇ ಬೇರೆಯಾದ ಮನೆ ಯಿದೆ. ಅದನ್ನು ಅಣಿಮಾಡಿಸಿ ಇಡುತ್ತೇನೆ” ಎಂದು ವಿಪ್ರದಾಸ ನೆಂದನು.

ಓವರ್‌ಸಿಯರ್ “ರಾಜಾ ಬಹದ್ದೂರರವರ ಅಪ್ಪಣೆ. ಕೆರೆಯ ನಾಲ್ಕೂ ಕಡೆಯ ಪೊದೆಗಳನ್ನು ಕಡಿದು ಚೊಕ್ಕಟಮಾಡಬೇಕು ಎಂದಿರು ವರು—ತಾವು ಜಮೀನುದಾರರು, ಅನುಮತಿ ಬೇಕು” ಎಂದರು.

ವಿಪ್ರದಾಸ ಮುಖ ಕೆಂಪಗೆ ಮಾಡಿಕೊಂಡು “ಇದೇನು ಉಚಿತ ವೇನು? ಪೊದೆಗಳನ್ನು ನಾವೇ ಕಡಿಸಿಕೊಡಬಲ್ಲೆವು” ಎಂದನು.

ಓವರ್‌ಸಿಯರ್ ವಿನೀತಭಾವದಿಂದ—“ಆ ಎಡೆಯಲ್ಲೇ ರಾಜಾ ಬಹ ದ್ದೂರರ ಪೂರ್ವಪುರುಷರ ಮನೆ ಮಠವಿತ್ತು. ಅದರಿಂದ ತಾವೇ ಅದನ್ನು ಸ್ವಚ್ಛಪಡಿಸಬೇಕೆಂದು ಅವರಿಗೆ ಆಸಕ್ತಿಯುಂಟಾಗಿದೆ” ಎಂದನು.

ವಿಷಯ ಬಹಳ ಅಸಂಗತವೇನೂ ಅಲ್ಲ. ಆದರೆ ನಂಟರಿಷ್ಟರು ಗೊಣಗುಟ್ಟತೊಡಗಿದರು. ರೈತರುಗಳು "ಇದು ನಮ್ಮ ಒಡೆಯರನ್ನು ಸೋಲಿಸುವ ಪ್ರಯತ್ನ, ಹಠಾತ್ತಾಗಿ ಗಂಟು ದೊಡ್ಡದಾಗಿಬಿಟ್ಟಿದೆ. ಅದನ್ನು ಗುಟ್ಟಾಗಿ ಇಟ್ಟುಕೊಳ್ಳಲು ಸಾಧ್ಯವಿಲ್ಲ. ಆ ವಿಷಯವನ್ನು ಜಯಘೋಷ ಹಬ್ಬಿಸುವುದಕ್ಕಲ್ಲವೆ ಈ ಯತ್ನ. ಹಿಂದಿನ ಕಾಲವಾಗಿದ್ದಿದ್ದರೆ ಮದುವಣಿಗನ ಸಮೇತ ದಿಬ್ಬಣದವರನ್ನು ವೈತರಣಿ ದಾಟಿಸಲು ಸಾವಕಾಶವಾಗುತ್ತಿರಲಿಲ್ಲ. ಚಿಕ್ಕ ಯಜಮಾನರು ಇದ್ದಿದ್ದರೆ ಅವರೂ ಸಹಿಸುವವರಲ್ಲ. ಈ ಬಾಬುಗಳೂ ಇವರ ಗುಡಾರಗಳೂ ಎಲ್ಲಿರಬೇಕೆಂಬುದನ್ನು ತೋರಿಸಿಬಿಡುತ್ತಿದ್ದರು" ಎಂದರು.

ರೈತರುಗಳು ಬಂದು ವಿಪ್ರದಾಸನೊಡನೆ "ಹುಜೂರ್, ಅವರುಗಳ ಇದಿರಿನಲ್ಲಿ ತಲೆ ತಗ್ಗಿಸಲಾರೆವು. ಎಷ್ಟೇ ಖರ್ಚಾದರೂ ನಾವೇ ಕೊಡುವೆವು" ಎಂದರು.

ಆರಾಣೆಯ ಪಾಲುಗಾರ ನವಗೋಪಾಲ ಬಂದು, "ವಂಶದ ಅಪಮರ್ಯಾದೆ ಸಹಿಸಲು ಸಾಧ್ಯವಿಲ್ಲ. ಒಂದಾನೊಂದು ಕಾಲದಲ್ಲಿ ನಮ್ಮ ಹಿರಿಯರುಗಳು ಆ ಘೋಷಾಲರುಗಳ ಮೂಳೆ ಮೂಳೆ ತಟ್ಟಿನೋಡಿದ್ದರು. ಇಂದು ಅವರುಗಳು ನಮ್ಮ ಎಲ್ಲೆಯ ಮೇಲೆ ಮುತ್ತಿಗೆ ಹಾಕಿ ಹಣದ ಹೊಳಪು ತೋರಬಂದಿರುವರು. ಹೆದರಬೇಡಿ ಅಣ್ಣಾ, ಖರ್ಚು ಎಷ್ಟಾದರೂ ಆಗಲಿ, ನಾವು ಇರುವೆವು. ಆಸ್ತಿ ಪಾಲಾದರೇನಾಯ್ತು? ವಂಶದ ಗೌರವವಂತೂ ಪಾಲುಮಾಡಲಾಗುವುದಿಲ್ಲವಲ್ಲ" ಎಂದನು.

ಹೀಗೆಂದು ನವಗೋಪಾಲನೇ ಹಾರಿ ಕುಣಿದು ಯಜಮಾನಿಕೆ ವಹಿಸಿಕೊಂಡನು.

ವಿಪ್ರದಾಸ ಕೆಲವು ದಿನಗಳಿಂದ ಕುಮುವಿನ ಬಳಿಗೆ ಹೋಗಿರಲಿಲ್ಲ. ಅವಳ ಮುಖ ನೋಡುವುದಾದರೂ ಹೇಗೆ? ಕುಮುವಿನ ಬಳಿ ಗಂಡಿನ ಕಡೆಯವರ ದಿಮಾಕನ್ನು ಯಾರಾದರೂ ಅತ್ಯುಕ್ತಿಮಾಡಿ ಹೇಳಬಾರದೆಂಬ ದಯಾದಾಕ್ಷಿಣ್ಯವಾಗಲಿ ದೊಡ್ಡಸ್ತಿಕೆಯಾಗಲಿ ಸಮಾಜದಲ್ಲಿಲ್ಲ. ಅವಳೊಡನೆಯೇ ಎಲ್ಲರೂ ಲಂಬಿಸಿ ಲಂಬಿಸಿ ಹೇಳುತ್ತಿದ್ದರು. ಹೆಣ್ಣುಮಕ್ಕಳ

ಕೋಪವೆಲ್ಲ ಅವಳ ಮೇಲೆಯೇ. ಅವಳ ಕಾರಣದಿಂದಲೇ ಪೂರ್ವ ಪುರುಷರ ತಲೆ ತಗ್ಗಿತು. ಮಹಾರಾಣಿ ಆಗ ಹೊರಟಿರುವಳು! ಅಯ್ಯೋ ರಾಜನ ಠೀವಿಯೇ!

ಜಾತಿ ಕುಲದ ಮಾತನ್ನು ಕುಮು ತನ್ನ ಭಕ್ತಿಯಿಂದ ಮುಚ್ಚಿದ್ದಳು. ಆದರೆ ಹಣದ ಬಡಾಯಿ ತೋರಿ ಮಾವನ ಮನೆಯವರನ್ನು ಕಡಮೆಯವರನ್ನಾಗಿ ಮಾಡುವ ನೀಚತೆಯನ್ನು ಕಂಡು ಅವಳ ಮನಸ್ಸು ವಿಷಾದದಿಂದ ತುಂಬಿತು. ಜನರ ನೆರೆಯಿಂದಲೇ ಅವಳು ದೂರ ಓಡುತ್ತಿದ್ದಳು. ಘೋಷಾಲರ ಅವಮಾನ-ಇಂದು ಅವಳಿಗೆ ಸೇರಿದ್ದೇ. ಅಣ್ಣನ ಬಾಯಿಂದ ಏನಾದರೂ ಕೇಳಬೇಕೆಂದು ಮನಸ್ಸು ತಲ್ಲಣಿಸುತ್ತಿತ್ತು. ಆದರೆ ಅಣ್ಣನನ್ನು ಕಾಣಲೇ ಇಲ್ಲ. ಒಳಮನೆಯಲ್ಲಿ ಊಟಕ್ಕೂ ಬರುತ್ತಿರಲಿಲ್ಲ.

ಒಂದು ದಿನ ವಿಪ್ರದಾಸ ಅಂತಃಪುರದ ಕೈ ತೋಟವಲ್ಲಿ ಸಿಹಿ ತಿಂಡಿ ಮಾಡುವುದಕ್ಕಾಗಿ ಚಪ್ಪರ ಹಾಕಿಸಲು ಸ್ಥಳ ಸರಿಮಾಡಿಸಲು ಹೋಗಿ ಕಿಟಕಿಯ ಘಟ್ಟದಲ್ಲಿ ಕುಮು ಕೆಳಗಿನ ಮೆಟ್ಟಿಲ ಮೇಲೆ ಕುಳಿತು ತಲೆ ತಗ್ಗಿಸಿಕೊಂಡು ನೀರಿನ ಕಡೆ ದಿಟ್ಟಿಸಿ ನೋಡುತ್ತಿದ್ದುದನ್ನು ಕಂಡನು. ಅಣ್ಣನನ್ನು ಕಂಡು ವೇಗವಾಗಿ ಎದ್ದು ಬಂದಳು. ಬಂದೊಡನೆ, "ಅಣ್ಣಾ, ಏನೂ ಅರ್ಥವಾಗುತ್ತಿಲ್ಲ" ಎಂದು ಹೇಳಿದವಳೇ ಬಟ್ಟೆಯಿಂದ ಬಾಯಿ ಮುಚ್ಚಿಕೊಂಡು ಅಳತೊಡಗಿದಳು.

ಅಣ್ಣ ಮೆಲ್ಲಮೆಲ್ಲನೆ ಬೆನ್ನು ಸವರುತ್ತ "ಜನರ ಹರಟೆಯ ಮಾತಿಗೆ ಕಿವಿಗೊಡಬೇಡ ತಂಗೀ".

"ಆದರೆ ಅವರುಗಳು ಹೀಗೇಕೆ ಮಾಡುವರು? ಇದರಿಂದ ನಿನ್ನ ಗೌರವ ಇರುವುದೇನು?"

"ಅವರ ದೃಷ್ಟಿಯನ್ನೂ ಗಮನಿಸಿ ನೋಡು. ಹಿರಿಯರು ಹುಟ್ಟಿದ ಸ್ಥಳಕ್ಕೆ ಬಂದಿರುವರು. ಈಗ ಕೋಲಾಹಲ ಮಾಡಬಹುದೆ? ಮದುವೆಯ ಸಂದರ್ಭದಿಂದ ಇದನ್ನು ನೋಡು—"

ಕುಮು ತೆಪ್ಪಗಿದ್ದಳು. ವಿಪ್ರದಾಸ ತಡೆದುಕೊಳ್ಳಲಾರದೆ ಹೋ ದನು. ವಿಧಿಯಿಲ್ಲದೆ "ನಿನ್ನ ಮನಸ್ಸಿನಲ್ಲಿ ಎಳ್ಳಷ್ಟಾದರೂ ಅಸಮಾಧಾನ ವಿದ್ದರೆ ಮದುವೆ ಈಗಲೂ ನಿಲ್ಲಿಸಿಬಿಡುವೆ" ಎಂದನು.

ಕುಮುದಿನಿ ಜೋರಾಗಿ ತಲೆ ಅಲ್ಲಾಡಿಸಿ "ಛೀ, ಛೀ, ಅದೆಲ್ಲಿಯಾ ದರೂ ಸಾಧ್ಯವೇ ?" ಎಂದಳು.

ಅಂತರ್ಯಾಮಿಯ ಇದಿರಿನಲ್ಲಿ ಸತ್ಯಗ್ರಂಥಿಯ ಗಂಟುಬಿದ್ದಿದೆ. ಉಳಿದ ಕರ್ಮಗಳೆಲ್ಲ ಕೇವಲ ಬಾಹ್ಯವಾದುವು.

ವಿಪ್ರದಾಸನ ಏಕಾಂಗಿ ಮನಸ್ಸು ಇಷ್ಟೊಂದು ನಿಷ್ಠೆಯನ್ನು ಕಂಡು ಧೈರ್ಯಗೆಡುತ್ತಿತ್ತು. ಸುಡಿಸುವ ಕೈಯು ಹದ ತಪ್ಪಿದುದಾದರೆ ಶ್ರುತಿ ಮಾಡಿದ ವಿಸರಾಜಿನ ಗೌರವವೇನೂ ಇರದು. ಪುರಾಣದಲ್ಲಿ ಹೇಳಿಲ್ಲವೆ– ಸೀತೆ ಹೇಗಿದ್ದಳೋ ರಾಮನೂ ಹಾಗೆಯೇ ಎಂದು. ಮಹಾದೇವನಿಗೆ ತಕ್ಕ ಸತಿ–ಪಾರ್ವತಿ; ಅರುಂಧತಿ ಹೇಗೆಯೋ ವಸಿಷ್ಠರೂ ಹಾಗೆಯೇ. ಈ ಕಾಲದ ಬಾಬುಗಳು ತಮ್ಮೊಳಗೆ ಪುಣ್ಯವಿಲ್ಲವೆಂದು ಒಮ್ಮುಖದ ಪಾತಿ ವ್ರತ್ಯ ಬೋಧಿಸುವರು. ಅವರ ಕಡೆಯಿಂದ ಎಣ್ಣೆ ಒದಗದು. ಬತ್ತಿ ಯನ್ನು ಉರಿಯ ಹೇಳುವರು—ಒಣಜೀವ ಉರಿದು ಉರಿದೇ ಅವರುಗಳು ಬೂದಿಯಾಗಿ ಹೋದರು.

ಕುಮುದಿನಿಗೆ ಹೇಳುವುದು ವ್ಯರ್ಥ. ಈಗಿನಿಂದಲೂ ಅವಳು ಮನಸ್ಸಿ ನಲ್ಲೇ ಆತ ಒಳ್ಳೆಯವರೇ ಆಗಲಿ ಕೆಟ್ಟವರೇ ಆಗಲಿ ಆತ ನನ್ನ ಪ್ರಾಣ ಸಮಾನ ಎಂದು ಜಪಮಾಡತೊಡಗಿದಳು. "**ದುಃಖೇಷ್ವನುದ್ವಿಗ್ನಮನಾ ಸುಖೇಷುವಿಗತಸ್ಪೃಹಃ । ವೀತರಾಗಭಯಕ್ರೋಧಃ**"—ಇವು ಕೇವಲ ಸಂನ್ಯಾಸ ಧರ್ಮದ್ದಷ್ಟೇ ಅಲ್ಲ, ಪತಿವ್ರತಾ ಧರ್ಮದ್ದೂ ಇದೇ ಲಕ್ಷಣ. ಆ ಧರ್ಮಸುಖ ದುಃಖವನ್ನು ಮೀರಿದ್ದು–ಅದರಲ್ಲಿ ಕ್ರೋಧವಿಲ್ಲ, ಭಯ ವಿಲ್ಲ. ಮತ್ತೆ ಅನುರಾಗ? ಅದರದಾದರೂ ಅತ್ಯಾವಶ್ಯಕತೆ ಏತರದು? ಅನುರಾಗದಲ್ಲಿ ಬಯಸುವ-ಹೊಂದುವ ಲೆಕ್ಕವಿರುವುದು. ಭಕ್ತಿ ಅದಕ್ಕೂ ದೊಡ್ಡದು. ಅದರಲ್ಲಿ ಬೇಡಿಕೆಯಿಲ್ಲ. ಅರ್ಪಣೆಯಿದೆ. ಪತಿವ್ರತಾ ಧರ್ಮ ನಿರ್ಹೇತುಕವಾದದ್ದು. ಮಧುಸೂದನ ವ್ಯಕ್ತಿಯಲ್ಲಿ ದೋಷ

ವಿರಲು ಸಾಧ್ಯ. ಆದರೆ ಗಂಡ ಎಂಬ ವಸ್ತು ನಿರ್ವಿಕಾರವಾದುದು, ನಿರಂಜನವಾದುದು. ಆ ವ್ಯಕ್ತಿಯನ್ನು ಒಮ್ಮನದಿಂದ ಧ್ಯಾನಿಸಿ ಕುಮುದಿನಿ ತನ್ನನ್ನು ಸಮರ್ಪಣೆಮಾಡಿಕೊಂಡಳು.

೧೪

ಘೋಷಾಲ್ ದಿಘಿಯ ಅರುಗಿನಲ್ಲಿ ಕಾಡು ಚೊಕ್ಕಟವಾಯಿತು. ಗುರುತೇ ಗೊತ್ತಾಗುತ್ತಿರಲಿಲ್ಲ. ನೆಲ ಸಂಪೂರ್ಣವಾಗಿ ತಟ್ಟೆಯಹಾಗಿತ್ತು. ಅಲ್ಲಲ್ಲಿ ಕೆಮ್ಮಣ್ಣು ಹಾಕಿ ದಮ್ಮಸ್ಸು ಮಾಡಿದ ರಸ್ತೆ. ರಸ್ತೆಯ ಅರುಗಿನಲ್ಲಿ ದೀಪದ ಕಂಬಗಳು. ಕೆರೆಯ ಕೊಳಚೆಯನ್ನೆಲ್ಲಾ ತೆಗೆದು ಶುದ್ಧಿ ಮಾಡಿದ್ದರು. ಘಟ್ಟದ ಬಳಿ ಥಳಥಳಿಸುತ್ತಿದ್ದ ಹೊಚ್ಚ ಹೊಸ ವಿಲಾಯಿತಿ 'ಯಾಕ್ಟ್' ಗಳು ಎರಡು. ಅವುಗಳಲ್ಲಿ ಒಂದರ ಮೇಲೆ "ಮಧುಮತೀ" ಎಂದೂ ಇನ್ನೊಂದರ ಮೇಲೆ "ಮಧುಕರೀ" ಎಂದೂ ಬರೆದಿತ್ತು. ರಾಜಾಬಾಬುಗಳು ಸ್ವತಃ ವಾಸಮಾಡಲಿರುವ ಗುಡಾರದ ಇದಿರಿನಲ್ಲಿ ಚೌಕಟ್ಟು ಹಾಸಿದ ಹಳದಿ ಬನಾತಿನ ಮೇಲೆ ಕೆಂಪು ರೇಷ್ಮೆಯಲ್ಲಿ "ಮಧುಚಕ್ರ" ಎಂದು ಬರೆದಿತ್ತು. ಅಂತಃಪುರದವರಿಗೆ ಒಂದು ಗುಡಾರ. ಅಲ್ಲಿಂದ ನೀರಿನವರೆಗೆ ಚಾಪೆಗಳಿಂದ ಮರೆಮಾಡಿದ ಹಾದಿ. ಘಟ್ಟದ ಮೇಲೆ ದೊಡ್ಡ ಬೇವಿನ ಹಲಗೆಯಲ್ಲಿ "ಮಧುಸಾಗರ" ಎಂಬ ಬರಹವಿತ್ತು. ಒಂದು ಕಡೆ ನಾನಾ ಆಕಾರದ ಪಾತಿಗಳಲ್ಲಿ ಸೂರ್ಯಕಾಂತಿ, ಸುಗಂಧರಾಜ, ಚಂಡೆಹೂವು, ಕ್ಯಾನಾ ಮತ್ತು ಕಾಮ ಕಸ್ತೂರಿ, ಮರದ ಚೌಕವಾದ ಪೆಟ್ಟಿಗೆಗಳಲ್ಲಿ ನಾನಾವರ್ಣದ ವಿಲಾಯತೀ ಹೂವುಗಳು ಕಂಡುಬಂದವು. ನಡುವೆ ಒಂದು ಜಲಾಶಯ. ಅದರಿಂದ ನೀರು ಧಾರೆಧಾರೆಯಾಗಿ ಚಿಮ್ಮುತ್ತಿತ್ತು. ಈ ಸ್ಥಳಕ್ಕೆ "ಮಧುಕುಂಜ" ವೆಂದು ಹೆಸರಿಟ್ಟಿತ್ತು. ಹೆಬ್ಬಾಗಿಲಲ್ಲಿ ಚಿತ್ರಗೆಲಸ ಮಾಡಿದ ಕಬ್ಬಿಣದ ಬಾಗಿಲುಗಳ ಮೇಲೆ ಬಾವುಟ ಹಾರುತ್ತಿತ್ತು. ಬಾವುಟದಲ್ಲಿ ಮಧುಪುರಿ ಎಂದು ಬರೆದಿತ್ತು. ನಾಲ್ಕು ದಿಕ್ಕಿನಲ್ಲೂ "ಮಧು" ಎಂಬ ಹೆಸರಿನ ಪ್ರಭಾವ. ಇತ್ತ ಥಳಥಳಿಸುವ ಬಿಲ್ಲೆಯನ್ನು ಜೋಲಾಡಿಸುತ್ತ ಹಳದಿಯ ಅಂಚಿಗೆ ಕೆಂಪುಬಣ್ಣದ ಅರಿವೆ ಸೇರಿಸಿದ ಪಗಡಿ ಧರಿಸಿ, ಸರಿಗೆಯ ನವಾರು ಹೊಲಿದ ಕೆಂಪು ಬನಾತಿನ ಸಮವಸ್ತ್ರ ಧರಿಸಿದ ಚಪರಾಸಿಗಳು ವಿಲಾಯತಿ ಮೆಟ್ಟನ್ನು ಚರ ಪರ

ಗುಟ್ಟಿಸುತ್ತ ಓಡಾಡುತ್ತಿದ್ದರು. ಸಂಜೆಯ ವೇಳೆಯಲ್ಲಿ ಬಂದೂಕದಲ್ಲಿ ಗೋಲಿಯಿಲ್ಲದ ತೋಟಾ ಹಾಕಿ ಹಾರಿಸಿ ಸದ್ದು ಮಾಡುವರು. ಹಗಲು ರಾತ್ರಿ ಝಾವ ಝಾವಕ್ಕೆ ಘಂಟೆ ಬಾರಿಸುವರು; ಅವರುಗಳಲ್ಲಿ ಒಬ್ಬೊಬ್ಬರ ಚರ್ಮದ ಕಮರ್ ಬಂದ್‌ನಲ್ಲಿ ಜೋಲಾಡುತ್ತಿದ್ದ ವಿಲಾಯಿತಿ ಕತ್ತಿಗಳು ಜಮೀಂದಾರರ ಭೂಮಿಯನ್ನು ಕಾಲಿನಿಂದ ಒದೆಯುತ್ತಿದ್ದುವು. ಚಟರ್ಜಿ ಮನೆತನದವರ ಹಳೆಯಕಾಲದ ಹರಕಲು ತೊಡಿಗೆ ತೊಟ್ಟ ಭಲ್ಯದವರು ನಾಚಿಕೆಯಿಂದ ಮನೆಯಿಂದ ಹೊರಬೀಳುತ್ತಲೇ ಇರಲಿಲ್ಲ. ಈ ನಡವಳಿಕೆ ನೋಡಿ ಚಟರ್ಜಿ ಕುಟುಂಬದವರ ಮೈ ಉರಿಯಿತು. ನೂರ್ ನಗರದ ಎಲುವುಗೂಡಿನ ನಡುವೆ ಚುಚ್ಚಿದ ಈಟಿಯ ಕೊನೆಯಲ್ಲಿ ಇಂದು ಘೋಷಾಲ್ ಮನೆತನದವರ ಜಯಪತಾಕೆ ಹಾರುತ್ತಿತ್ತು.

ಶುಭ ವಿವಾಹದ ಸೂಚನೆ ಇದು.

೧೫

ವಿಪ್ರದಾಸ ನವಗೋಪಾಲನನ್ನು ಕರೆದು ಹೇಳಿದನು. "ನವೂ, ಆಡಂಬರದಲ್ಲಿ ಮೇಲಾಟವಾಡುವುದು ಸಾಮಾನ್ಯರ ಕೆಲಸ."

ನವಗೋಪಾಲನೆಂದನು—"ಚತುರ್ಮುಖ ಬ್ರಹ್ಮ ತನ್ನ ಕಾಲನ್ನು ಝಾಡಿಸಿಯೇ ಹೆಚ್ಚು ಅಂಶ ಮನುಷ್ಯರನ್ನು ಸೃಷ್ಟಿಸಿರುವನು. ನಾಲ್ಕು ಮುಖಗಳು ಕೇವಲ ದೊಡ್ಡ ದೊಡ್ಡ ಮಾತುಗಳನ್ನು ಆಡುವುದಕ್ಕಾಗಿಯೇ. ಹದಿನೈದೂವರೆಯಾಣೆಯಷ್ಟು ಜನ ಸಾಮಾನ್ಯವರ್ಗದವರು, ಅವರ ಬಳಿ ಮರ್ಯಾದೆ ಉಳಿಸಿಕೊಳ್ಳಬೇಕಾದರೆ ಸಾಮಾನ್ಯರ ಹಾದಿಯನ್ನೇ ಹಿಡಿಯಬೇಕು"

ವಿಪ್ರದಾಸ, "ಹಾಗೂ ನೀನು ಜಯ ಗಳಿಸಲಾರೆ. ಆದಕ್ಕಿಂತ ಸಾತ್ವಿಕಭಾವದಿಂದ ಕೆಲಸಮಾಡು. ಅದು ಚೆನ್ನಾಗಿ ಕಾಣುವುದು. ಯೋಗ್ಯರಾದ ಬ್ರಾಹ್ಮಣ ವಿದ್ವಾಂಸರನ್ನು ಕರೆತಂದು ನಮ್ಮ ಸಾಮವೇದದ ಅನುಸಾರ ಪರಿಶುದ್ಧ ಭಾವದಲ್ಲಿ ಶುಭಕಾರ್ಯ ನೆರವೇರಲಿ. ಅವರು ರಾಜರಾಗಿದ್ದರೆ ಆಡಂಬರಮಾಡಲಿ. ನಾವು ಬ್ರಾಹ್ಮಣರು, ಪುಣ್ಯಕರ್ಮ ನಮ್ಮದು" ಎಂದನು.

ನವಗೋಪಾಲನೆಂದನು. "ಅಣ್ಣಾ ಪಂಚಾಂಗ ಮರೆತಿರುವೆ. ಇದು ಸತ್ಯಯುಗವಲ್ಲ. ನೀರಿನಲ್ಲಿ ನಡೆಸುವ ನಾವೆಯನ್ನು ಕೆಸರ ಮೇಲೆ ನಡೆಸ ಬಯಸುವೆಯಾ ? ನಿಮ್ಮ ರೈತರಿದ್ದಾರೆ-ನಿಮ್ಮ ತಾಲ್ಲೂಕ್‌ದಾರ ತಿನೂ ಸರ್ಕಾರ್ ಇರುವನು-ಭಾದೂ ಪರಮಾಣಿಕ, ಕಮರುದ್ದಿ ವಿಶ್ವಾಸ್ ಪಾಂಚೂಮಂಡಲಿ-ಇವರುಗಳು ಆ ಬಾಳೆಕಾಯಿ-ಅನ್ನದೊಡನೆ ಹೋಮ, ಮಾಡಿದ ಬ್ರಾಹ್ಮಣಿಕೆಯ ಒಂದಕ್ಷರವನ್ನು ಒಪ್ಪುವರೇನು ? ಇವರುಗಳು ಯಾಜ್ಞವಲ್ಕರ ಮರಿಮಕ್ಕಳೇನು ? ಇವರುಗಳ ಎದೆ ಬಿರಿಯುತ್ತಿದೆಯಲ್ಲ-ನೀನು ತೆಪ್ಪನಿರು, ನೀನು ಯಾವುದನ್ನೂ ಯೋಚಿಸಬೇಕಾಗಿಲ್ಲ.

ನವಗೋಪಾಲ ರೈತರೊಡನೆ ಕಲೆತು ಕೆರಳಿ ನಿಂತನು. ಎಲ್ಲರೂ ಎದೆ ತಟ್ಟಿಕೊಂಡು ಹಣಕ್ಕಾಗಿ ಯೋಚನೆಯೇಕೆ ಎಂದರು. ಹರಿಕಾರರು ಕಟ್ಟಿಗೆಯವರು, ಭಲ್ಯದವರು, ಕೋವಿಯವರು ಎಲ್ಲರ ಮೈಮೇಲೂ ಕೆಂಪು ಬನಾತಿನ ಮೇಲು ಹೊದಿಕೆ ಬಂದಿತು. ಬಣ್ಣ ಕಟ್ಟಿದ ಧೋತಿ ಗಳನ್ನು ಉಟ್ಟರು. ಅಲ್ಪಾರ್ಕ ಸುತ್ತಿ ಜಾಲರಿ ಜೋಲಾಡುತ್ತ, ಬಾವುಟ ಹಾರುವ ನವಬತ್‌ಖಾನೆ ಸಿದ್ಧವಾಯಿತು. ಏಳು ಕ್ರೋಶ ದೂರದಿಂದ ಅದರ ಶಿಖರ ಕಾಣುತ್ತಿತ್ತು. ದಾಯಾದಿಗಳ ಇಬ್ಬರ ಗುಂಪಿನವರೂ ಕೂಡಿ ನಾಲ್ಕೆಂಟು ಆನೆಗಳನ್ನು ಹೊರಡಿಸಿದರು. ಅವುಗಳ ಮೈ ಮೇಲೆ ಅಲಂಕಾರವಾಯಿತು. ಆಗಾಗ್ಗೆ ಕಾರಣವೇ ಇಲ್ಲದೆ ಘೋಷಾಲ್ ದಿಘಿಯ ಇದಿರ ರಸ್ತೆಯಲ್ಲಿ ಅವು ಸೊಂಡಿಲನ್ನು ಎತ್ತಿಕೊಂಡು ತಿರುಗಾಡು ದಾಗ ಕೊರಳಲ್ಲಿ ಠಣ್ ಠಣ್ ಎಂದು ಘಂಟೆ ಸದ್ದಾಗುತ್ತಿತ್ತು. 'ಮತ್ತೆ ಯಾವುದು ಸಾಧ್ಯವಾದರೂ ಗೋಣೀಚೀಲದಿಂದ ಆನೆ ಹೊರಬೀಳದು' ಎಂದು ಎಲ್ಲರೂ ಅಂದುಕೊಂಡು ತೊಡೆ ತಟ್ಟಿಕೊಂಡು "ಹೋ ! ಹೋ !" ಎಂದು ನಗತೊಡಗಿದರು.

ಮಾರ್ಗಶಿರದ ಇಪ್ಪತ್ತೇಳರಂದು ಮದುವೆಯ ದಿನ. ಇನ್ನೂ ಎಂಟು ಹತ್ತು ದಿನಗಳು ಉಳಿದಿವೆ. ಈ ಸಮಯದಲ್ಲಿ ರಾಜಾ ಸಾಹೇಬರು ದಳ ಸಮೇತವಾಗಿ ಬರಲಿರುವರೆಂಬ ಸುದ್ದಿ ಜನರ ಬಾಯಿಂದ ತಿಳಿಯಿತು. ಏನು ಮಾಡಬೇಕೆಂಬುದು ಯೋಚನೆಗಿಟ್ಟುಕೊಂಡಿತು. ಮಧುಸೂದನ

ಇವರುಗಳಿಗೆ ಏನೂ ತಿಳಿಸಿರಲಿಲ್ಲ. ಮರ್ಯಾದೆಯೊಡನೆ ನಡೆದುಕೊಳ್ಳುವುದು ಸಾಮಾನ್ಯರಿಗೆ ತಕ್ಕದ್ದು. ಮರ್ಯಾದೆ ಬಿಟ್ಟು ನಡೆಯುವುದೇ ಜನರಿಗೆ ಉಚಿತವಾದುದು ಎಂದು ಎಣಿಸಿದರೇನೊ. ಇಂತಹ ಸ್ಥಿತಿಯಲ್ಲಿ ತಾವಾಗಿ ಮೇಲೆ ಬಿದ್ದು ಸ್ಟೇಷನ್ನಿನಿಂದ ಅವರುಗಳನ್ನು ಕರೆತರಲು ಹೋಗುವುದು ಸರಿಯಾದೀತೆ? ಸುದ್ದಿ ಕೊಡದಿರುವುದಕ್ಕೆ ಉಚಿತ ಉತ್ತರ ಲಕ್ಷಿಸದಿರುವುದೆ?

ಎಲ್ಲ ನಿಜ. ಆದರೆ ಯುಕ್ತಿಯ ಮೂಲಕ ಪ್ರಪಂಚದ ದುಃಖವನ್ನು ದೂರ ಮಾಡಲಾಗುವುದಿಲ್ಲವಲ್ಲವಷ್ಟೆ. ಕುಮುವಿನ ಮೇಲೆ ವಿಪ್ರದಾಸನಿಗೆ ಅತಿ ಪ್ರೀತಿ. ಹಿಂದಿನಿಂದ ಅವಳನ್ನು ಯಾವ ಕಾರಣದಿಂದಲಾದರೂ ನೋಯಿಸಿಯಾರು ಎಂಬ ಮಾತು ಎಲ್ಲ ತರ್ಕವನ್ನೂ ಸೋಲಿಸಿಬಿಡುವಂಥದ್ದು. ಹೆಣ್ಣುಮಕ್ಕಳನ್ನು ಪೀಡಿಸುವುದು ಸುಲಭವಾದ ಕೆಲಸ. ಅವರುಗಳು ನಾಲ್ಕು ದಿಕ್ಕಿನಲ್ಲೂ ರಕ್ಷಣೆಯಿಲ್ಲದವರು. ಬಲಿಷ್ಠರ ಕೈಯಲ್ಲೇ ಸಮಾಜ ಚಾವಟಿ ಕೊಟ್ಟಿದೆ. ಮತ್ತೆ ರಕ್ಷಾಕವಚ ಇಲ್ಲದವರ ಮೃದುವಾದ ಬೆನ್ನಕಡೆ ಯಾವ ನ್ಯಾಯಶಾಸ್ತ್ರವೂ ಇಣಿಕಿ ನೋಡದು. ಇಂತಹ ಸ್ಥಿತಿಯಲ್ಲಿ ಸ್ನೇಹಧನವನ್ನು ರೋಷ, ವಿದ್ವೇಷ ಈರ್ಷ್ಯೆಯ ಬಿರುಗಾಳಿಯಲ್ಲಿ ತೇಲಿಬಿಟ್ಟು ಸ್ವಮರ್ಯಾದೆಯನ್ನು ಉಳಿಸಿಕೊಳ್ಳುವ ಪ್ರಯತ್ನಮಾಡುವುದು ಹೇಡಿತನ. ವಿಪ್ರದಾಸನ ಮನದಲ್ಲಿ ಇದೇ ಭಾವನೆ.

ವಿಪ್ರದಾಸ ಒಬ್ಬರೊಡನೆಯೂ ಹೇಳದೆ ಕುದುರೆ ಹತ್ತಿ ಸ್ಟೇಷನ್ನಿಗೆ ಹೋದನು. ಗಾಡಿ ಬಂದು ಮುಟ್ಟಿತು. ಆಗ ಐದು ಘಂಟೆಯ ವೇಳೆ. ಸೆಲೂನ್ ಗಾಡಿಯಿಂದ ರಾಜಾಸಾಹೇಬರು ದಳದೊಡನೆ ಇಳಿದರು. ವಿಪ್ರದಾಸನನ್ನು ಕಂಡು ಒಣನಮಸ್ಕಾರಮಾಡಿ—"ಇದೇನು! ನೀವೇಕೆ ತೊಂದರೆ ತೆಗೆದುಕೊಂಡಿರಿ?" ಎಂದನು.

ವಿಪ್ರದಾಸ—"ಲಕ್ಷಣವಾಯಿತು, ನಮ್ಮ ಸ್ಥಳಕ್ಕೆ ಬರುವುದು ಇದೇ ಮೊದಲು. ಬರಮಾಡಿಕೊಂಡು ಕರೆದುಕೊಂಡು ಹೋಗಬೇಕಲ್ಲವೆ"—ಎಂದನು.

ರಾಜ "ತಪ್ಪೆಣಿಸಿರುವಿರಿ. ನಿಮ್ಮ ಎಲ್ಲೆಯಲ್ಲಿ ಇನ್ನೂ ಬಂದಿಲ್ಲ. ಅದು ಮದುವೆಯದಿನ ಆಗುವುದು" ಎಂದರು.

ವಿಪ್ರದಾಸ ಮಾತಿನ ಅರ್ಥ ಅರಿಯಲಾರದೆ ಹೋದ. ಸ್ಟೇಷನ್ನಿನಲ್ಲಿ ಗುಂಪಿನ ನಡುವೆ ತರ್ಕಮಾಡಲು ಎಡೆಯಿಲ್ಲ—ಆದರಿಂದಲೇ "ಘಟ್ಟದಲ್ಲಿ ಬಜರಾ ಸಿದ್ಧವಾಗಿದೆ." ಎಂದಷ್ಟು ಮಾತ್ರ ಹೇಳಿದನು.

ರಾಜರು "ಆವಶ್ಯಕತೆಯಿಲ್ಲ, ನಮ್ಮ ಸ್ಟೀಮ್ ಲಾಂಚ್ ಇದೆ" ಎಂದರು.

ಸಂದರ್ಭ ಸರಿಯಲ್ಲವೆಂದು ವಿಪ್ರದಾಸ ಅರಿತನು. ಆದರೂ ಮತ್ತೊಮ್ಮೆ "ಅಡಿಗೆ ಊಟದ ಪಾತ್ರೆ ಪದಾರ್ಥಗಳು ಸಿದ್ಧವಾಗಿವೆ" ಎಂದನು.

"ಇಷ್ಟೊಂದು ಗೊಂದಲವೇಕೆ ನಡಸಿದಿರಿ! ಏನೇನೂ ಅವಶ್ಯವಾಗದು. ನೋಡಿ, ಒಂದು ಸಂಗತಿ ನೆನಪಿನಲ್ಲಿಡಿ. ನಮ್ಮ ಪೂರ್ವಪುರುಷರ ಜನ್ಮಭೂಮಿಗೆ ಬಂದಿರುವೆನು—ನಿಮ್ಮ ಎಲ್ಲೆಯಲ್ಲಿಲ್ಲ. ಮದುವೆಯ ದಿನ ಅಲ್ಲಿಗೆ ಹೋಗುವ ಮಾತು"

ಯಾವ ಬಗೆಯಲ್ಲೂ ಮೃದುವಾಗುವ ಆಶೆಯಿಲ್ಲವೆಂದು ವಿಪ್ರದಾಸ ಅರಿತನು. ಹೃದಯದ ಅಂತರ್ಯ ಸ್ತಬ್ಧವಾಯಿತು. ಸ್ಟೇಷನ್ನಿನ ವೆಯಿಟಿಂಗ್ ರೂಮಿನಲ್ಲಿ ಆರಾಮ ಕುರ್ಚಿಯ ಮೇಲೆ ಹೋಗಿ ಬಿದ್ದನು. ಸಂಜೆಯ ಶೀತ ಬೇರೆ. ಕತ್ತಲೆ ಕವಿಯುತ್ತ ಬಂದಿತ್ತು. ಉತ್ತರದಿಕ್ಕಿನ ಗಾಡಿ ಬರುವ ಘಂಟೆ ಬಾರಿಸಿದರು. ಸ್ಟೇಷನ್ನಿನಲ್ಲಿ ದೀಪ ಹಚ್ಚಿದರು. ಲಗಾಮನ್ನು ಬಿಟ್ಟುಬಿಟ್ಟ ಕುದುರೆಯನ್ನು ಅದರ ಇಚ್ಛೆಯಂತೆ ಹೋಗಬಿಟ್ಟು ವಿಪ್ರದಾಸ ಮನೆಗೆ ಬಂದು ತಲಪಿದಾಗ ರಾತ್ರಿ ಹೊತ್ತೇರಿತ್ತು. ಎಲ್ಲಿಗೆ ಹೋಗಿದ್ದ, ಏನು ನಡೆಯಿತು ಯಾರೊಡನೆಯೂ ಏನೂ ಹೇಳಲಿಲ್ಲ.

ಆ ರಾತ್ರಿಯೇ ಅವನಿಗೆ ನೆಗಡಿಯಾಗಿ ಕೆಮ್ಮಲು ಆರಂಭವಾಯಿತು. ಕ್ರಮೇಣ ಹೆಚ್ಚಿತು. ಅಲಕ್ಷ್ಯಮಾಡಹೋಗಿ ವ್ಯಾಧಿಯನ್ನು ಮತ್ತಷ್ಟು ಕೆರಳಿಸಿಕೊಂಡನು. ಕೊನೆಗೆ ಕುಮು ಅವನನ್ನು ಬಲಾತ್ಕರಿಸಿ ಹಾಸಿಗೆ

ಯಲ್ಲಿ ಮುಳುಗಿಸಿದಳು. ಶುಭಕಾರ್ಯದ ಎಲ್ಲಾ ಹೊರೆಯೂ ನವಗೋಪಾಲನ ಮೇಲೆ ಬಿದ್ದಿತು.

೧೬

ಎರಡು ದಿನಗಳ ಅನಂತರವೇ ನವಗೋಪಾಲ ಬಂದು "ಏನು ಮಾಡಲಿ ಸ್ವಲ್ಪ ಸಲಹೆ ಕೊಡು" ಎಂದನು.

ವಿಪ್ರದಾಸ ಬೆಚ್ಚಿದವನಾಗಿ "ಯಾಕೆ? ಏನಾಗಿದೆ?" ಎಂದನು.

"ಸಂಗಡ ಹಲವರು ಸಾಹೇಬರುಗಳಿರುವರು. ದಲ್ಲಾಳಿಗಳಿರಬಹುದು, ಅಥವಾ ಮದ್ಯದ ಅಂಗಡಿಯ ವಿಲಾಯಿತೀ ಪಟಿಂಗರಿರಬಹುದು. ನಿನ್ನೆ ಸೀರ್‌ಪುರದ ಕಾವಲಿಗೆ ಹೋಗಿ ಏನಿಲ್ಲ ಎಂದರೂ ಇನ್ನೂರು ಬಾತುಗಳನ್ನು ಹೊಡೆದು ತಂದರು. ಇಂದು ಚಂದನದಹದ ಕೊಲ್ಲಿಯ ಕಡೆ ಹೊರಟಿರುವರು. ಈ ಶೀತದ ಕಾಲದಲ್ಲಿ ಅಲ್ಲಿ ಹಂಸಗಳು ಮರಿಮಾಡುವ ಕಾಲ. ವಿಪರೀತವಾಗಿ ಜೀವಹತ್ಯ ಆಗುವುದು. ಅಹಿರಾವಣ, ಮಹಿ ರಾವಣ, ಹಿಡಿಂಬೆ, ಘಟೋತ್ಕಚ, ಇವರಿಂದ ಆರಂಭಿಸಿ ಕುಂಭಕರ್ಣನವರೆಗೆ ಪಿಂಡ ಹಾಕಲು ಸಾಕಾಗುವ ಅಳತೆಯಲ್ಲಿ—ಪ್ರೇತಲೋಕದಲ್ಲಿ ದಶಕಂಠ ರಾವಣನ ಗಂಟಲು ಗಿಟಿಗಿರಿಯುವಂಥಾದ್ದು.

ವಿಪ್ರದಾಸ ಸ್ತಂಭಿತನಾದನು. ಏನೂ ಹೇಳಲಿಲ್ಲ. ನವಗೋಪಾಲ ಮಾತು ಮುಂದುವರಿಸಿದನು—"ಆ ಕೊಲ್ಲಿಯಲ್ಲಿ ಯಾರೂ ಹಕ್ಕಿಯ ಬೇಟೆಯಾಡಕೂಡದೆಂದು ನಿನ್ನದೇ ಅಪ್ಪಣೆಯಿದೆ. ಹೋದ ವರ್ಷ ಜಿಲ್ಲೆಯ ಮ್ಯಾಜಿಸ್ಟ್ರೇಟರನ್ನೂ ಕೂಡ ತಡೆದಿದ್ದೆ. ನಿನ್ನನ್ನೂ ರಾಜಹಂಸನೆಂದು ಪರಿಗಣಿಸುವರೆಂದು ನಾವು ಅಂಜಿದ್ದೆವು — ಅವರು ಯೋಗ್ಯರಾಗಿದ್ದರು. ಹೊರಟುಹೋದರು. ಆದರೆ ಇವರು ಗೋವು, ಜಿಂಕೆ, ದ್ವಿಜರು, ಯಾವುದನ್ನೂ ಲಕ್ಷಿಸುವಂತಹ ಮನುಷ್ಯರಲ್ಲ. ಆದರೂ ಹೂಂ ಎಂದರೆ ಒಂದು ಸಲ ಸಾಧ್ಯವಾಗದಿದ್ದರೆ—"

ವಿಪ್ರದಾಸ ಛಟಪಟಿಸುತ್ತ, "ಬೇಡ ಬೇಡ, ಏನೂ ಹೇಳಬೇಡ" ಎಂದನು.

ವಿಪ್ರದಾಸ ಹುಲಿಯ ಬೇಟೆಯಲ್ಲಿ ಜಿಲ್ಲೆಯಲ್ಲೇ ಬಲು ಸಿಸ್ಸೀಮ. ಯಾವಾಗಲೋ ಒಮ್ಮೆ ಹಕ್ಕಿಗಳನ್ನು ಹೊಡೆದು ಅವನ ಮನಸ್ಸಿಗೆ ಅದೆಷ್ಟು ಬೇಸರವಾಯಿತೆಂದರೆ ಅಂದಿನಿಂದ ತನ್ನ ಜಮೀನ್‌ದಾರಿಯ ಎಲ್ಲೆಯಲ್ಲಿ ಹಕ್ಕಿಗಳ ಬೇಟೆ ಸಂಪೂರ್ಣವಾಗಿ ನಿಲ್ಲಿಸಿದನು.

ತಲೆದೆಸೆಯಲ್ಲಿ ಕುಮು ಕುಳಿತು ತಲೆಯ ಮೇಲೆ ಕೈ ಆಡಿಸುತ್ತಿದ್ದಳು. ನವಗೋಪಾಲ ಹೊರಟುಹೋಗಲು "ಅಣ್ಣಾ, ಬೇಡವೆಂದು ಹೇಳಿಕಳುಹಿಸು" ಎಂದಳು.

"ಏನನ್ನು ಬೇಡವೆನ್ನಲಿ?"

"ಹಕ್ಕಿಗಳ ಕೊಲೆ"

"ಅವರು ತಪ್ಪೆಣಿಸುವರು ಕುಮು, ಸಹನೆಗೊಳ್ಳರು"

"ತಪ್ಪೆಣಿಸಿಕೊಳ್ಳಲಿ. ಮಾನ, ಅವಮಾನ ಕೇವಲ ಅವರಿಗೆ ಮಾತ್ರವಲ್ಲ".

ವಿಪ್ರದಾಸ ಕುಮುವಿನ ಮುಖದ ಕಡೆ ನೋಡಿ, ಮನಸ್ಸಿನಲ್ಲೇ ನಕ್ಕನು. ಕಠಿಣ ನಿಷ್ಠೆಯೊಡನೆ ಕುಮು ಮನದಲ್ಲಿ ಪತಿವ್ರತಾ ಧರ್ಮ ಪಾಲಿಸುತ್ತಿರುವಳೆಂದು ಆತ ಬಲ್ಲನು. "ಛಾಯೇವಾನುಗತಾ ಸ್ವಚ್ಛಾ" ಎಂಬಂತೆ ಸಾಮಾನ್ಯ ಹಕ್ಕಿಯ ಬೇಟೆಯ ವಿಷಯವಾಗಿ "ಕಾಯದೊಡನೆ ಛಾಯೆಯ ಪಥಭೇಧ ಘಟಿಸುವುದೇನು?" ಎಂದುಕೊಂಡನು.

ದಣಿಯುದ ಉತ್ಸಾಹದೊಡನೆ ಬೇಟೆ, ವನಭೋಜನ ಮತ್ತು ಸಂಜೆಯ ಹೊತ್ತು ಬ್ಯಾಂಡಿನ ಹಿಮ್ಮೇಳದೊಡನೆ ಅಭ್ಯಾಗತ ಆಂಗ್ಲರ ನರ್ತನ ನಡೆಯುತ್ತಿತ್ತು. ಬೆಳಗ್ಗೆ ಟೆನ್ನಿಸ್, ಅದಲ್ಲದೆ ಕೆರೆಯ ದೋಣಿಗಳಿಗೆ ಮೂರು ನಾಲ್ಕು ಪರದೆಗಳನ್ನು ಕಟ್ಟಿ, ಬಾಜಿ ಕಟ್ಟಿ ದೋಣಿಗಳ ಓಟ, ಮೊದಲಾದವುಗಳು ಏರ್ಪಾಡಾಗಿದ್ದವು. ಅವುಗಳನ್ನು ನೋಡಲು ಗ್ರಾಮದ ಜನರು ಕೆರೆಯ ದಡದ ಮೇಲೆ ಕಿಕ್ಕಿರಿಯುತ್ತಿದ್ದರು. ರಾತ್ರಿ ಊಟದ ಅನಂತರ 'ಫಾರ್ ಹೀ ಇಸ್ ಎ ಜಾಲಿ ಗುಡ್ ಫೆಲೊ' ("For, he is a jolly good fellow") ಎಂಬ ಹಾಡಿನ

ಚೀರಾಟ ಬೇರೆ. ಈ ಎಲ್ಲ ವಿಲಾಸದ ನಾಯಕ ನಾಯಿಕೆಯರೂ ಸಾಹೇಬ್ ಗಂಡಸರು ಮತ್ತು ಹೆಂಗಸರು. ಅದರಿಂದಲೇ ಗ್ರಾಮದ ಜನಕ್ಕೆ ಅಚ್ಚರಿ. ಇವರು ತಲೆಯಲ್ಲಿ ಸೋಲಾ ಟೋಪಿ ಧರಿಸಿ, ಗಾಳ ಎಸೆದು ಮೀನು ಹಿಡಿಯುತ್ತಿದ್ದರು. ಅದೂ ಅತ್ಯಂತ ಅಪೂರ್ವ ದೃಶ್ಯ. ವಿಪ್ರದಾಸನ ಕಡೆಯ ಲಾಠೀ ವರಸೆ, ಕುಸ್ತಿ, ದೋಣಿಯ ಬಿನದ, ಕಲಾ ವಿಲಾಸಿಗಳ ನಾಟಕಗಳು ಮತ್ತು ನಾಲ್ಕು ಆನೆಗಳ ಗುಂಪು ಮೊದಲಾದವು ಗಳಿಗೂ ಈ ಆಮೋದಗಳಿಗೂ ಅಜಗಜಾಂತರ.

ವಿವಾಹದ ಎರಡು ದಿನಕ್ಕೆ ಮುಂಚೆ ಅರಿಶಿನದ ಶಾಸ್ತ್ರ. ಬೆಲೆ ಬಾಳುವ ಒಡವೆಗಳಿಂದ ಆರಂಭಿಸಿ ಆಟದ ಬೊಂಬೆಗಳವರೆಗೆ ಮದುವಣಿಗನ ಮನೆ ಯಿಂದ ಬಂದ ಮೆರವಣಿಗೆಯ ಆಡಂಬರ ಕಂಡು, ಎಲ್ಲರೂ ಮೂಕರಾ ದರು. ಅವುಗಳನ್ನು ಸಾಗಿಸಿಕೊಂಡು ಬಂದ ವಾಹನಗಳಾದರೂ ಒಂದಲ್ಲ, ಎರಡಲ್ಲ; ನೂರಾರು. ಚಟರ್ಜಿಗಳು ಬಹಳ ಧಾರಾಳವಾಗಿಯೇ ಸಾಮಾನು ಹೊತ್ತು ತಂದವರಿಗೆ ಬಹುಮಾನಮಾಡಿ ಬೀಳ್ಕೊಟ್ಟರು.

ಕೊನೆಗೆ ಜನಸಾಮಾನ್ಯರಿಗೆ ಸಮಾರಾಧನೆಮಾಡುವ ವಿಷಯವಾಗಿ ವೈವಾಹಿಕ ಕುರುಕ್ಷೇತ್ರದ ದ್ರೋಣಪರ್ವವೇ ಆರಂಭವಾಯಿತು.

ಅಂದು ಮಧುಸಾಗರದ ತೀರದಲ್ಲಿರುವ ಮಧುಪುರಿಯಲ್ಲಿ ಎಲ್ಲ ಜನರೂ ಊಟಕ್ಕೆ ಬರಬೇಕೆಂದು ಡೋಲುಬಾರಿಸುತ್ತ ಸಾರಿದರು. ಗಂಡಿನ ಕಡೆಯವರಿಂದ ಕರೆ ಪಡೆದವರು ಪಡೆಯದವರೂ ಯಾರೂ ತಪ್ಪಬಾರ ದೆಂದು ತಿಳಿಸಿದರು. ನವಗೋಪಾಲ ಕೋಪದಿಂದ ಕಿಡಿಕಿಡಿಯಾದ. "ಇದೆಂತಹ ಡೌಲು! ನಾವುಗಳು ಜಮೀನ್‌ದಾರರು. ಇಲ್ಲಿ ನಮ್ಮ ನಡುವೆ ಈತ ತನ್ನ ಮಧುಪುರಿ ಕಟ್ಟಿ ನಿಲ್ಲಿಸುವುದಾದರೂ ಹೇಗೆ?" ಎಂದು ಅವನ ಕೋಪ.

ಇತ್ತ ಊಟದ ಏರ್ಪಾಡೂ ಬಹಳ ಭಾರಿ ಪ್ರಮಾಣದಲ್ಲಿಯೇ ನಡೆದು, ಎಲ್ಲರ ಕಣ್ಣಿಗೂ ಕಾಣಿಸುತ್ತಿತ್ತು. ಸಾಮಾನ್ಯ ಫಲಾಹಾರವಲ್ಲ- ಮೀನು, ಮೊಸರು, ಖೀರು, ಸಂದೇಶ, ತುಪ್ಪ, ಮೈದಾಹಿಟ್ಟು, ಮತ್ತು ಸಕ್ಕರೆ ಸೂರೆಹೋಗಿತ್ತು. ಮರಗಳ ಬುಡದಲ್ಲಿ ದೊಡ್ಡ ದೊಡ್ಡ ಒಲೆ

ಗಳನ್ನು ಹಾಕಿದ್ದರು. ಅಡಿಗೆಗಾಗಿ ನಾನಾ ಅಳತೆಯ ಹಂಡೆ, ತಪ್ಪಲೆ, ಕೊಳದಪ್ಪಲೆ, ಕಡಾಯಿಗಳು ಅಣಿಯಾಗಿದ್ದುವು. ಸಾಲುಗಟ್ಟಿ ನಿಂತಿದ್ದ ಎತ್ತಿನ ಗಾಡಿಗಳಲ್ಲಿ ಉರುಳುಗಡ್ಡೆ, ಬದನೆಕಾಯಿ, ಬಾಳೇಕಾಯಿ, ಕಾಯಿ ಸೊಪ್ಪುಗಳೇ ಮೊದಲಾದವುಗಳು ಸಿದ್ಧವಾಗಿದ್ದುವು. ಸಂಜೆಯಲ್ಲಿ ಗ್ಯಾಸ್ ದೀಪದ ಬೆಳಕಿನಲ್ಲಿ ಊಟದ ಏರ್ಪಾಡಾಗಿತ್ತು.

ಇತ್ತ ಚಟರ್ಜಿಗಳ ಮನೆಯಲ್ಲಿ ಮಧ್ಯಾಹ್ನದ ಊಟ. ಗುಂಪು ಗುಂಪಾಗಿ ರೈತರು ತಾವಾಗಿಯೇ ಏರ್ಪಾಟು ಮಾಡುತ್ತಿದ್ದರು. ಹಿಂದು ಗಳಿಗೆ, ಮುಸಲ್ಮಾನರಿಗೆ ಬೇರೆ ಬೇರೆ ಏರ್ಪಾಡು. ಮುಸಲ್ಮಾನ್ ರೈತರ ಸಂಖ್ಯೆಯೇ ಹೆಚ್ಚು. ಬೆಳಕು ಹರಿಯುವ ಮುಂಚೆಯೇ ಅವರುಗಳು ಸ್ವತಃ ಅಡಿಗೆಗೆ ಆರಂಭಿಸಿದ್ದರು. ಆಹಾರದ ಉಪಕರಣಗಳು ಹೆಚ್ಚಿಲ್ಲದಿದ್ದರೂ ಚಟರ್ಜಿ ಮನೆತನದವರ ಹೊಗಳಿಕೆಗೆ ಜಯಘೋಷ ಮುಗಿಲು ಮುಟ್ಟುತ್ತಿತ್ತು. ಸ್ವತಃ ನವಗೋಪಾಲ್ ಬಾಬುಗಳು ಸುಮಾರು ಐದು ಘಂಟೆಯವರೆಗೆ ಊಟಮಾಡದೆಯೇ ಇದಿರಿಗೆ ಕುಳಿತಿದ್ದು ಎಲ್ಲರಿಗೂ ಊಟಮಾಡಿಸಿದರು. ಅನಂತರ ಕಂಗಾಲಿಗಳಿಗೆ ಊಟ. ಗಣ್ಯರಾದ ರೈತರು ಸ್ವತಃ ದಾನ ದಕ್ಷಿಣೆಗಳ ಏರ್ಪಾಡು ಮಾಡಿದ್ದರು. ಕಲಕಲ ಜಯಧ್ವನಿಯೊಡನೆ ಅಂತರಿಕ್ಷದಲ್ಲಿ ಸಮುದ್ರಮಥನ ನಡೆಯಿತು.

ಮಧುಪುರಿಯಲ್ಲಿ ಇಡೀ ಹಗಲು ಅಡಿಗೆಯಾಗುತ್ತಿತ್ತು. ಸುಗಂಧ ಬಹು ದೂರದವರೆಗೆ ಹರಡಿತ್ತು. ದೊನ್ನೆಗಳು ಬಾಳೆ ಎಲೆಗಳು ಪರ್ವತಾಕಾರವಾಗಿ ರಾಶಿ ಬಿದ್ದಿದ್ದುವು. ಎಸೆದಿದ್ದ ಕಾಯಿಪಲ್ಯದ ಸಿಪ್ಪೆಗಳು ಮತ್ತು ಉಪಯೋಗಿಸದೆ ಬಿಟ್ಟಿದ್ದ ಮೀನುಗಳ ಚೂರುಪಾರುಗಳ ಮೇಲೆ ಕಾಗೆಗಳು ಹಾರಾಡುತ್ತ ಕೋಲಾಹಲಮಾಡುತ್ತಿದ್ದುವು. ಸೀಮೆರಾಜ್ಯದ ನಾಯಿಗಳೆಲ್ಲ ಬಂದು ಕಲೆತು ಪರಸ್ಪರ ಕಚ್ಚಾಡುತ್ತ ಬೊಗಳುತ್ತಿದ್ದುವು. ಊಟದ ವೇಳೆಯಾಯಿತು. ಗ್ಯಾಸ್ ದೀಪಗಳನ್ನು ಹಚ್ಚಿದರು. ಮೆಟಿಯಾ ಬ್ರೂಜಿನ ರೋಷನ್ ಚೌಕಿಯವರು ಯಮನ್ ಕಲ್ಯಾಣದಿಂದ ಕೇದಾರ ರಾಗದವರೆಗೆ ಬಾಜಿಸುತ್ತಿದ್ದರು. ಅನುಚರ ಪರಿಚರರು ಉದ್ವಿಗ್ನ ಮುಖದೊಡನೆ ರಾಜಾ ಬಹದ್ದೂರರ ಕಿವಿಯಲ್ಲಿ ಪಿಸಪಿಸನೆ ಇನ್ನೂ ಸಾಕಷ್ಟು ಸಂಖ್ಯೆಯಲ್ಲಿ ಊಟಮಾಡುವ ಜನ ಬರಲಿಲ್ಲವೆಂದು ತಿಳಿಸುತ್ತಿದ್ದರು. ಅಂದು ಸಂತೆಯ

ದಿನವಾದ್ದರಿಂದ ಬೇರೆತಾಲ್ಲೂಕಿನಿಂದ ಸಂತೆಗೆ ಬಂದಿದ್ದು ಮನೆಗೆ ಹಿಂದಿರು ಗುತ್ತಿದ್ದವರಲ್ಲಿ ಒಬ್ಬೊಬ್ಬರೂ ಬಡಿಸಿ ಸಿದ್ಧವಾಗಿದ್ದ ಎಲೆ ಕಂಡು ಊಟಕ್ಕೆ ಕುಳಿತರು. ಕಂಗಾಲಿಗಳೂ ಭಿಕ್ಷುಕರೂ ಕೇವಲ ಕೆಲವೇ ಜನರಿದ್ದರು.

ಮಧುಸೂದನ ನಿರ್ಜನ ಗುಡಾರದೊಳಕ್ಕೆ ಹೋಗಿ, "ಹುಂ" ಎಂದು ಅಡಗಿದ ದನಿಯಲ್ಲಿ ಹುಂಕಾರಮಾಡಿದನು.

ತಮ್ಮ ರಾಧೂ ಬಂದವನೇ "ಅಣ್ಣಾ, ಇನ್ನೇಕೆ ನಡೆ ಹೋಗೋಣ" ಎಂದನು.

"ಎಲ್ಲಿಗೆ?"

"ಕಲ್ಕತ್ತೆಗೆ ಹಿಂದಿರುಗೋಣ. ಇವರೆಲ್ಲ ಪುಂಡಾಟ ಆಡುತ್ತಿರುವರು. ಇವರಿಗಿಂತಲೂ ದೊಡ್ಡ ದೊಡ್ಡವರ ಮನೆಯ ಹೆಣ್ಣುಗಳು ನಿನ್ನ ಕಿರುಬೆರಳ ಸನ್ನೆಯನ್ನೇ ನಿರೀಕ್ಷಿಸುತ್ತಿರುವರು. ಒಮ್ಮೆ ನೀನು ಬೆರಳು ಆಡಿಸಿದರಾಯಿತು"

ಮಧುಸೂದನ ಘರ್ಜಿಸುತ್ತ "ನಡಿ, ಆಚೆಗೆ" ಎಂದನು.

ಒಂದು ನೂರು ವರ್ಷಗಳ ಹಿಂದೆ ಏನು ನಡೆದಿತ್ತೋ ಈಗಲೂ ಅದೇ ಆಯಿತು. ಇದಿರು ಪಕ್ಷದವರಿಗಿಂತ ಅತಿ ಎತ್ತರದ ಪ್ರತಿಮೆ ಸ್ಥಾಪಿಸಿದ್ದರು. ಇದಿರು ಪಕ್ಷದವರು ಅದಕ್ಕೆ ಹಾದಿಯಲ್ಲಿ ಹೋಗಲು ಎಡೆಗೊಡಲಿಲ್ಲ. ಆದರೆ ವಾಸ್ತವವಾದ ಸೋಲು ಗೆಲುವನ್ನು ಹೊರಗಿನಿಂದ ಕಾಣಲಾಗುವುದಿಲ್ಲ. ಅದರ ನೆಲೆ ಸಾಮಾನ್ಯ ಜನರ ದೃಷ್ಟಿಗೆ ಗೋಚರಿಸದು.

ಚಟರ್ಜಿಗಳ ರೈತರುಗಳು ಮನಃಪೂರ್ತಿ ನಕ್ಕರು. ರುಗ್ಣಶಯ್ಯೆಯಲ್ಲಿದ್ದ ವಿಪ್ರದಾಸನ ಕಿವಿಗೆ ಏನೂ ಬೀಳಲಿಲ್ಲ.

## ೧೭

ಮದುವೆಯ ದಿನ ಹೆಣ್ಣಿನ ಮನೆಗೆ ಹೋಗುವ ಮಾರ್ಗದಲ್ಲಿ ಆಡಂಬರ ಏನೇನೂ ಇರಕೂಡದೆಂದು ರಾಜರು ಅಪ್ಪಣೆಮಾಡಿದರು. ದೀವಟಿಗೆಯಿಲ್ಲ, ವಾದ್ಯವಿಲ್ಲ. ಸಂಗಡ ಕೇವಲ ಮನೆತನದ ಪುರೋಹಿತನೂ

ಮತ್ತು ಇಬ್ಬರು ಹೊಗಳುಭಟ್ಟರೂ ಇದ್ದರು. ಪಲ್ಲಕ್ಕಿ ಹತ್ತಿ ಸದ್ದಿಲ್ಲದೆ ಮದುವೆಯ ಮನೆಗೆ ಮದುವಣಿಗ ಬಂದನು. ಜನರಿಗೆ ಏನೂ ಅರ್ಥವಾಗಲಿಲ್ಲ. ಅತ್ತ ಮಧುಪುರಿಯಲ್ಲಿ ಬ್ಯಾಂಡ್ ಬಾರಿಸುತ್ತ ದೀಪದ ಬೆಳಕಿನಲ್ಲಿ ದಿಬ್ಬಣದವರಿಗೆಲ್ಲ ಊಟ. ಕುಡಿತದಲ್ಲಿ ಮುಳುಗಿ ಆನಂದದಿಂದಿದ್ದರು. ಇದು ಪ್ರತ್ಯುತ್ತರವೆಂದು ನವಗೋಪಾಲ ಅರಿತ. ಇಂತಹ ಸಂದರ್ಭದಲ್ಲಿ ಹೆಣ್ಣಿನವರು ಕೈ ಕಾಲು ಕಟ್ಟಿಕೊಂಡು ಗಂಡಿನವರನ್ನು ಉಪಚರಿಸುವರು. ನವಗೋಪಾಲ ಅಂತಹದೇನನ್ನೂ ಮಾಡಲಿಲ್ಲ. ದಿಬ್ಬಣದವರೇನಾದರೆಂದು ಒಮ್ಮೆಯಾದರೂ ವಿಚಾರಿಸಲಿಲ್ಲ.

ಕುಮುದಿನಿ ಸಿಂಗರಿಸಿಕೊಂಡು ವಿವಾಹ ಮಂಟಪಕ್ಕೆ ಹೋಗುವ ಮುಂಚೆ ಅಣ್ಣನಿಗೆ ನಮಸ್ಕರಿಸಲು ಬಂದಳು. ಅವಳ ಶರೀರಾದ್ಯಂತವೂ ನಡುಗುತ್ತಿತ್ತು. ವಿಪ್ರದಾಸನಿಗೆ ಆಗ ಒಂದು ನೂರ ಐದು ಡಿಗ್ರಿ ಜ್ವರ. ಎದೆಗೂ ಬೆನ್ನಿಗೂ ಸಾಸುವೆಯ ಪೋಲ್ಟೀಸ್ ಹಾಕಿದ್ದರು. ಕುಮುದಿನಿ ಅವನ ಕಾಲಿಗೆ ತಲೆಯಿಟ್ಟು ದುಃಖ ತಡೆದುಕೊಳ್ಳಲಾರದೆ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಕ್ಷೇಮಾ ಅತ್ತೆ ಬಾಯ ಮೇಲೆ ಕೈ ಮುಚ್ಚಿ, "ಛೀ, ಛೀ, ಹಾಗೆ ಅಳಕೂಡದು" ಎಂದಳು.

ವಿಪ್ರದಾಸ ಮೆಲ್ಲಗೆ ಎದ್ದು ಕುಳಿತು ಅವಳ ಕೈ ಹಿಡಿದು ಪಕ್ಕದಲ್ಲಿ ಕೂರಿಸಿಕೊಂಡು ಅವಳ ಮುಖವನ್ನು ದಿಟ್ಟಿಸಿ ನೋಡುತ್ತ ಸ್ವಲ್ಪ ಹೊತ್ತು ತೆಪ್ಪಗಿದ್ದನು. ಎರಡು ಕಣ್ಣುಗಳಿಂದಲೂ ಧಾರೆ ಧಾರೆಯಾಗಿ ನೀರು ಹರಿಯತೊಡಗಿತು. ಕ್ಷೇಮಾ ಅತ್ತೆ, "ಹೊತ್ತಾಯಿತಲ್ಲ" ಎಂದಳು.

ವಿಪ್ರದಾಸ ಕುಮುವಿನ ತಲೆಯ ಮೇಲೆ ಕೈಯಿಟ್ಟು ಗದ್ಗದ ಕಂಠದಿಂದ "ಸರ್ವ ಶುಭದಾತೃವು ಕಲ್ಯಾಣವುಂಟುಮಾಡಲಿ" ಎಂದು ಹೇಳಿ ಧೊಪ್ಪನೆ ಹಾಸಿಗೆಯ ಮೇಲೆ ಬಿದ್ದನು.

ಮದುವೆಯಾಗುತ್ತಿದ್ದ ಸಮಯದಲ್ಲಿ ಕುಮುವಿನ ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯುತ್ತಿತ್ತು. ಗಂಡಿನ ಕೈಗೆ ಕೈ ಕೊಟ್ಟಾಗ ಅವಳ ಕೈ ಹಿಮದಂತೆ ತಣ್ಣಗಿತ್ತು. ಥರಥರನೆ ನಡುಗುತ್ತಿತ್ತು. ಶುಭ ದೃಷ್ಟಿಯ ವೇಳೆಯಲ್ಲಿ ಅವಳು ಗಂಡನ ಮುಖ ನೋಡಿದಳೆಂದು ತಿಳಿದಿ

ರೇನು? ನೋಡಲಿಲ್ಲವೆಂದು ಖಂಡಿತ ಹೇಳಬಹುದು. ಇವರ ನಡೆವಳಿಕೆಯಿಂದ ಎಲ್ಲ ರೀತಿಯಲ್ಲೂ ಗಂಡನನ್ನು ಕುರಿತು ಅವಳಿಗೆ ಬಹಳ ಭಯ ಹಿಡಿದಿತ್ತು. ಪಕ್ಷಿಯ ಮನಸ್ಸಿನಲ್ಲಿ, ತನಗೆ ಗೂಡಿಲ್ಲ, ಉರಲು ಸಿದ್ಧವಾಗಿದೆ ಅನ್ನಿಸಿತು.

ಮಧುಸೂದನ ನೋಡಲು ಅವಲಕ್ಷಣವಾಗಿರಲಿಲ್ಲ. ಆದರೆ ಮಹಾ ಕಠಿಣ ಸ್ವಭಾವದವನು. ಕಪ್ಪಾದ ಅವನ ಮುಖದಲ್ಲಿ ಮೊಟ್ಟಮೊದಲು ದೃಷ್ಟಿಗೆ ಬೀಳುತ್ತಿದ್ದುದೆಂದರೆ, ಹಕ್ಕಿಯ ಕೊಕ್ಕಿನಂತೆ ಬಗ್ಗಿದ್ದ ಆತನ ದೊಡ್ಡ ಮೂಗು. ಅದು ಆತನ ಮೇಲ್ತುಟಿಯ ಮುಂದಿನವರೆಗೆ ಚಾಚಿದ್ದು, ಪಹರೆ ಕಾಯುತ್ತಿದೆಯೋ ಎನ್ನುವಂತೆ ಬಾಗಿತ್ತು. ಎತ್ತಿದ ಹಣೆ ದಪ್ಪ ಹುಬ್ಬಿನ ಮೇಲೆ ತಡೆಯಲ್ಪಟ್ಟ ಹೊಳೆಯಂತೆ ಉಬ್ಬಿತ್ತು. ಆ ಹುಬ್ಬುಗಳ ಬುಡದಲ್ಲಿ ಕಪ್ಪಾದ ಕಣ್ಣುಗಳ ದೃಷ್ಟಿ ಬಹು ತೀಕ್ಷ್ಣವಾಗಿತ್ತು. ಮೀಸೆ ಗಡ್ಡಗಳನ್ನು ಬೋಳಿಸಿದ್ದ. ಚಪ್ಪಟೆಯಾದ ತುಟಿಗಳು. ಉಬ್ಬಿದ ಕೆನ್ನೆಗಳು. ಒರಟಾದ ತಲೆ ಕೂದಲು ಕಾಫಿರ್‌ರಂತೆ ಗುಂಗುರುಗುಂಗುರಾಗಿತ್ತು. ದೃಢವಾದ ಶರೀರ. ವಯಸ್ಸೆಷ್ಟಾಗಿತ್ತೋ ಅದಕ್ಕಿಂತ ಕಡಮೆ ಕಾಣುತ್ತಿತ್ತು. ಕೇವಲ ಎರಡು ಕಿವಿಯ ಪಕ್ಕಗಳಲ್ಲಿ ಮಾತ್ರ ನರೆಗೂದಲು ಕಾಣುತ್ತಿತ್ತು. ಕುಳ್ಳ. ಆದರೆ ಬಹುಮಟ್ಟಿಗೆ ಕುಮುದಿನಿಗೆ ತಕ್ಕ ಜೊತೆಯಾಗಿದ್ದ. ಎರಡು ಕೈಗಳೂ ಕೂದಲಿಂದ ತುಂಬಿದ್ದುವು. ಮೈಯ ಆಳತೆಗೆ ಮೋಟಾಗಿದ್ದುವು. ಒಟ್ಟಿನ ಮೇಲೆ ಮನುಷ್ಯ ನೋಡಲು ಒರಟನಂತೆ ಕಾಣುತ್ತಿದ್ದ. ತಲೆಯಿಂದ ಕಾಲವರೆಗೆ ಸದಾ ಯಾವುದೋ ಒಂದು ಪ್ರತಿಜ್ಞೆಯನ್ನು ಸ್ಥಿರಪಡಿಸಿಕೊಂಡಿದ್ದಂತೆ ಕಾಣುತ್ತಿತ್ತು. ಅದೃಷ್ಟ ದೇವತೆಯ ಫಿರಂಗಿಯಿಂದ ಹೊರಬಿದ್ದು ನೆಟ್ಟಗೆ ಹೋಗುತ್ತಿದ್ದ ಕಠಿಣವಾದ ಗುಂಡಿನಂತಿದ್ದ ಎನ್ನಬಹುದು. ನೋಡಿದ ಕ್ಷಣ ವ್ಯರ್ಥದ ಮಾತುಕತೆಗಾಗಲಿ ಅಪ್ರಾಸಂಗಿಕವಾದ ವಿಷಯವಾಗಲಿ ಮತ್ತು ಕೆಲಸಕ್ಕೆ ಬಾರದ ಮನುಷ್ಯರಲ್ಲಿ ಆಸಕ್ತಿ ತೋರುವುದಕ್ಕಾಗಲಿ ಅವನು ಎಳ್ಳಷ್ಟೂ ಅವಕಾಶ ಕೊಡನೆಂದು ಕಾಣುತ್ತಿತ್ತು.

ಮದುವೆ ಯಾವ ವಿಧದಲ್ಲಿ ನೆರವೇರಿತೆಂದರೆ, ಅದರಿಂದ ಎಲ್ಲರ ಮನಸ್ಸೂ ಕೆಟ್ಟಿತ್ತು. ಗಂಡಿನವರೂ, ಹೆಣ್ಣಿನವರೂ ಮೊಟ್ಟಮೊದಲು ಕಲಿ

ತೊಡನೆ ಒಂದು ಬಗೆಯ ಅಪಸ್ವರ ಹೊರಬಿದ್ದು ಅದರಿಂದ ಉತ್ಸವದ ಸಂಗೀತವೂ ಎಲ್ಲಿಯೋ ಮರೆಯಾಯಿತು. "ದೇವರು ಹಾಗಾದರೆ ನನ್ನನ್ನು ಮರೆತುಬಿಟ್ಟನೇನು?" ಎಂಬ ಪ್ರಶ್ನೆಯೊಂದು ಕುಮುವಿನ ಮನಸ್ಸಿನಲ್ಲಿ ಮೇಲಿಂದ ಮೇಲೆ ಮೂಡುತ್ತಿತ್ತು. ಸಂಶಯವನ್ನು ಸರ್ವಪ್ರಯತ್ನದಿಂದ ಅಡಗಿಸುವಳು. ಕದ ಮುಚ್ಚಿ ಕೋಣೆಯಲ್ಲಿ ಕುಳಿತು ಬಾರಿಬಾರಿಗೆ ತಲೆಯನ್ನು ನೆಲಕ್ಕೆ ಮುಟ್ಟಿ ನಮಿಸುವಳು. ಮನಸ್ಸು ದುರ್ಬಲವಾಗದಿರಲಿ ಎಂದು ಅಂದುಕೊಳ್ಳುವಳು. ಅಣ್ಣನ ಬಳಿ ಸಂಶಯವನ್ನು ಮರೆಮಾಚಿಡುವುದು ಎಲ್ಲಕ್ಕೂ ಕಠಿಣವಾದ ಕೆಲಸವಾಗಿತ್ತು.

ತಾಯಿಯ ಸಾವಿನ ಅನಂತರ ಕುಮುದಿನಿಯ ಶುಶ್ರೂಷೆಯೇ ವಿಪ್ರದಾಸನಿಗೆ ಆಸರೆಯಾಗಿತ್ತು. ಬಟ್ಟೆ ಬರೆ, ನಿತ್ಯಗಟ್ಟಲೆ ಖರ್ಚಿನ ದುಡ್ಡು ಕಾಸು, ಪುಸ್ತಕದ ಅಲ್ಮಾರು, ಕುದುರೆಯ ಕಾಳು, ಬಂದೂಕ ಚೊಕ್ಕಟ ಮಾಡುವುದು, ನಾಯಿಯ ಸೇವೆ, ಸಂಗೀತದ ಉಪಕರಣವನ್ನು ಸರಿಮಾಡುವುದು, ಕೊಠಡಿಯನ್ನು ಅಚ್ಚುಕಟ್ಟುಮಾಡುವದು—ಎಲ್ಲವೂ ಕುಮುವಿನ ಕೈಯಲ್ಲಿತ್ತು. ಅದು ಎಷ್ಟುಮಟ್ಟಿಗೆ ಅಭ್ಯಾಸ ಆಗಿತ್ತೆಂದರೆ, ನಿತ್ಯಗಟ್ಟಲೆಯ ನಡವಳಿಕೆಯಲ್ಲಿ ಕುಮುವಿನ ಕೈವಾಡ ಎಲ್ಲಾದರೊಂದೆಡೆ ಇಲ್ಲದಿದ್ದರೆ ಅವನಿಗೆ ಅದು ರುಚಿಸದು. ಆದುದರಿಂದ ಅಣ್ಣನಿಗೆ ಖಾಯಿಲೆಯಾಗಿದ್ದುದರಿಂದ ಗಂಡನ ಮನೆಗೆ ಹೋಗುವ ಮುನ್ನ ಉಳಿದಿರುವ ಕೆಲದಿನಗಳ ಸೇವೆಯಲ್ಲಿ ತನ್ನ ಚಿಂತೆಯ ಪ್ರತಿಬಿಂಬ ಅಣ್ಣನಿಗೆ ಗೋಚರಿಸದೆ ಇರಲೆಂದು ಅವಳು ಸರ್ವಪ್ರಯತ್ನಮಾಡುತ್ತಿದ್ದಳು. ಕುಮು ಏಸರಾಜ್ ಬಾರಿಸುವುದರ ವಿಷಯದಲ್ಲಿ ವಿಪ್ರದಾಸನಿಗೆ ಬಹಳ ಹೆಮ್ಮೆ. ನಾಚಿಕೆಪ್ರವೃತ್ತಿಯುಳ್ಳ ಕುಮು ಸುಲಭದಲ್ಲಿ ಬಾರಿಸಳು. ಈಗ ಎರಡು ದಿನಗಳಿಂದ ಅವಳು ತಾನಾಗಿಯೇ ವಿಚಾರಿಸಿ ಅಣ್ಣನಿಗೆ ಕಾನಡಾ-ಮಾಲ್‌ಕೋಶ್ ಆಲಾಪನೆ ಕೇಳಿಸುವಳು. ಆ ಆಲಾಪನೆಯಲ್ಲೇ ಅವಳ ದೇವತಾ ಸ್ತುತಿ, ಅವಳ ಪ್ರಾರ್ಥನೆ, ಅವಳ ಶಂಕೆ ಎಲ್ಲವೂ ಅಡಗಿದ್ದುವು. ವಿಪ್ರದಾಸ ಕಣ್ಣುಮುಚ್ಚಿಕೊಂಡು ಕೇಳುವನು. ಮತ್ತು ನಡುನಡುವೆ ವಿಚ್ಛೇದದ ವೇದನೆಯ ಅಳು ಧ್ವನಿಸುವಂತಹ ರಾಗಗಳಾದ ಸಿಂಧು, ಬೇಹಾಗ್ ಭೈರವಿ ರಾಗಗಳನ್ನು ನುಡಿಸುವಂತೆ

ಹೇಳುತ್ತಿದ್ದನು. ಆ ಸ್ವರದಲ್ಲೇ ಅಣ್ಣ ತಂಗಿಯರಿಬ್ಬರ ವ್ಯಥೆ ಒಂದಾಗಿ ಬೆರೆಯುತ್ತಿತ್ತು. ಬಾಯಿಮಾತಿನಲ್ಲಿ ಇಬ್ಬರೂ ಏನೂ ಹೇಳಲಿಲ್ಲ. ಒಬ್ಬರಿಗೊಬ್ಬರೂ ಸಮಾಧಾನ ಹೇಳಲಿಲ್ಲ, ದುಃಖ ತೋಡಿಕೊಳ್ಳಲಿಲ್ಲ.

ವಿಪ್ರದಾಸನ ಜ್ವರ, ಕೆಮ್ಮಲು, ಎದೆ ನೋವುಗಳು ಗುಣವಾಗಲಿಲ್ಲ. ದಿನದಿನಕ್ಕೂ ಹೆಚ್ಚಾದುವು. ಡಾಕ್ಟರು ಇನ್‌ಫ್ಲೂಯನ್‌ಜಾ ಎಂದರು. ನ್ಯೂಮೋನಿಯಾಕ್ಕೆ ತಿರುಗಿದರೂ ತಿರುಗಬಹುದು ಎಚ್ಚರಿಕೆಯಿಂದಿರಬೇಕು ಎಂದರು. ಕುಮುವಿನ ಮನಸ್ಸಿನ ಉದ್ವೇಗಕ್ಕೆ ಎಲ್ಲೆಯಿಲ್ಲ. ಆ ಕಾಳರಾತ್ರಿಯನ್ನು ಇಲ್ಲೇ ಕಳೆದು ಮರುದಿನ ಕಲ್ಕತ್ತೆಗೆ ಹೋಗುವ ಮಾತಿತ್ತು. ಆದರೆ ಮಧುಸೂದನ ಇದ್ದಕ್ಕಿದ್ದಂತೆ ಧಾರೆಯ ಮರುದಿನವೇ ಅವಳನ್ನು ಕರೆದುಕೊಂಡು ಹೋಗುವುದೆಂದು ಹಠಾತ್ತಾಗಿ ತೀರ್ಮಾನಿಸಿರುವನೆಂದು ತಿಳಿಯಿತು. ಇದು ಸಂಪ್ರದಾಯಕ್ಕೋಸ್ಕರವಲ್ಲ; ಪ್ರಯೋಜನಕ್ಕಾಗಲ್ಲ; ಪ್ರೇಮಕ್ಕಾಗಿಯಲ್ಲ; ಕೇವಲ ಶಿಕ್ಷೆಗಾಗಿ ಎಂದು ಅರಿತಳು. ಇಂತಹ ಸ್ಥಿತಿಯಲ್ಲಿ ಬೇಡುವುದೆಂದರೆ ಅಭಿಮಾನಿನಿಯ ತಲೆಗೆ ಸಿಡಿಲು ತಾಕಿದಂತೆ. ಆದರೂ ಕುಮು ತಲೆ ತಗ್ಗಿಸಿ ನಾಚಿಕೆ ಬಿಟ್ಟು, ನಡಗುವ ದನಿಯಲ್ಲಿ ಮದುವೆಯ ರಾತ್ರಿ, ಇನ್ನೆರಡು ದಿನಗಳು ತನ್ನನ್ನು ತಂದೆಯ ಮನೆಯಲ್ಲಿ ಇರಗೊಡಬೇಕೆಂದೂ, ಅಣ್ಣನಿಗೆ ಖಾಯಿಲೆಯೆಂದೂ ಗಂಡನಿಗೆ ಹೇಳಿದಳು. ಮಧುಸೂದನ ಸಂಕ್ಷೇಪವಾಗಿ "ಎಲ್ಲ ಏರ್ಪಾಡೂ ಆಗಿ ಹೋಗಿದೆ" ಎಂದನು. ಈ ಬಗೆಯ ಕಠೋರವಾದ ಏಕಪಕ್ಷದ ಏರ್ಪಾಡು ನಡೆದಿತ್ತು. ಇದರಲ್ಲಿ ಕುಮುವಿನ ಸಂಕಟಕ್ಕೆ ಎಳ್ಳಷ್ಟೂ ಎಡೆಯಿಲ್ಲ. ಅನಂತರ ಆ ರಾತ್ರಿ ಮಧುಸೂದನ ಅವಳನ್ನು ಮಾತನಾಡಿಸಲು ಯತ್ನಿಸಿದನು. ಅವಳು ಒಂದು ಮಾತನ್ನೂ ಆಡಲಿಲ್ಲ. ಹಾಸಿಗೆಯ ಕೊನೆಯಲ್ಲಿ ಮುಖ ತಿರುವಿಕೊಂಡು ಮಲಗಿದಳು.

ಇನ್ನೂ ಕತ್ತಲೆ ಕತ್ತಲೆಯಾಗಿತ್ತು. ಮೊದಲ ಹಕ್ಕಿಯ ಸಂದೇಹ ತುಂಬಿದ ಕೂಗು ಕೇಳಿದೊಡನೆ ಅವಳು ಎದ್ದು ಹೊರಟುಹೋದಳು.

ವಿಪ್ರದಾಸ ಇಡೀ ರಾತ್ರಿ ತಳಮಳಿಸುತ್ತಿದ್ದನು. ಸಂಜೆಯಲ್ಲಿ ಜ್ವರ ದೊಡನೆಯೇ ವಿವಾಹ ಮಂಟಪಕ್ಕೆ ಹೋಗಬೇಕೆಂದು ಅವನಿಗೆ ಆತುರ

ವಿತ್ತು. ಡಾಕ್ಟರು ಬಹಳ ಪ್ರಯತ್ನದಿಂದ ತಡೆದಿಟ್ಟರು. ಮೇಲಿಂದ ಮೇಲೆ ಜನರನ್ನು ಕಳುಹಿಸಿ ಆವನು ಸುದ್ದಿ ತರಿಸಿಕೊಳ್ಳುತ್ತಿದ್ದನು. ಸುದ್ದಿಗಳು ಯುದ್ಧದ ಸಮಯದ ಸುದ್ದಿಗಳಂತೆ ಅಸಹನೀಯವಾಗಿದ್ದುವು. ಬಹು ಭಾಗ ಕಲ್ಪಿತ. "ವರ ಬಂದುದು ಯಾವಾಗ? ವಾದ್ಯದ ಸದ್ದೂ ಕೇಳಲಿಲ್ಲವಲ್ಲ" ಎಂದನು ವಿಪ್ರದಾಸ.

ಸುದ್ದಿಗಾರನಾದ ಶಿವು–"ನಮ್ಮ ಅಳಿಯಂದಿರು ಬಹಳ ವಿವೇಚನೆ ಯುಳ್ಳವರು, ಮನೆಯಲ್ಲಿ ಖಾಯಿಲೆಯೆಂಬ ಸುದ್ದಿ ಕೇಳಿ, ಎಲ್ಲವನ್ನೂ ತಡೆದುಬಿಟ್ಟರು. ದಿಬ್ಬಣದವರ ಹೆಜ್ಜೆಯ ಸದ್ದು ಕೂಡ ಕೇಳಿಸಲಿಲ್ಲ, ಅಷ್ಟು ನಿಶ್ಶಬ್ದ" ಎಂದನು.

"ಎಲೋ ಶಿವೂ, ಫಲಾಹಾರದ ಪದಾರ್ಥಗಳು ಸಾಕಾದುವೇನು? ನನಗೆ ಅದೇ ಒಂದು ಯೋಚನೆಯಾಗಿತ್ತು. ಇದಂತೂ ಕಲ್ಕತ್ತೆ ಯಲ್ಲವಲ್ಲ."

"ಸಾಕಾಗಲಿಲ್ಲವೆ? ಏನು ಹೇಳುವಿರಿ ಸ್ವಾಮಿ? ಅದೆಷ್ಟು ಬಿಸಾಡಿಬಿಟ್ಟರು ತಿಳಿಯಿತೆ? ಇನ್ನೂ ಅಷ್ಟು ಜನರಿಗೆ ತಿನ್ನಿಸಬಹುದಾದಷ್ಟು ಪದಾರ್ಥಗಳು ಉಳಿದಿವೆ."

"ಅವರುಗಳು ಸಂತೋಷಪಟ್ಟಿರುತ್ತಾರಷ್ಟೆ?"

"ಒಂದು ಆಕ್ಷೇಪಣೆಯಾದರೂ ಯಾರ ಬಾಯಲ್ಲೂ ಬರಲಿಲ್ಲ. ಕುಟ ಪಿಟಕ್ ಎನ್ನುವ ಸದ್ದೂ ಇಲ್ಲ. ಇನ್ನೂ ಎಷ್ಟೆಷ್ಟೋ ಮದುವೆಗಳು ನಡೆಯುತ್ತವೆ. ದಿಬ್ಬಣದವರ ಗದ್ದಲದಿಂದ ಹೆಣ್ಣಿನವರಿಗೆ ಹುಚ್ಚು ಹಿಡಿಯುವುದು. ಇವರು ನಿಶ್ಶಬ್ದವಾಗಿರುವುದನ್ನು ನೋಡಿದರೆ, ಯಾರಾದರೂ ಇರುವರೋ ಇಲ್ಲವೋ ಎಂಬುದೂ ಅರಿವಾಗದು."

ವಿಪ್ರದಾಸ "ಅವರುಗಳು ಕಲ್ಕತ್ತೆಯವರಲ್ಲವೆ? ಆದರಿಂದಲೇ ಮರ್ಯಾದಸ್ಥರ ನಡವಳಿಕೆ ತಿಳಿದಿರುವದು. ಯಾವ ಮನೆಯಿಂದ ಹೆಣ್ಣು ತರುವೆವೋ ಅವರನ್ನು ಅವಮಾನ ಮಾಡುವುದು ತಮ್ಮನ್ನೇ ಅವಮಾನ ಮಾಡಿಕೊಂಡಂತೆ ಎಂಬುದನ್ನು ಅವರುಗಳು ಬಲ್ಲರು" ಎಂದನು.

“ಆಹಾ, ಯಜಮಾನರು ಹೇಳಿದ ಮಾತನ್ನು ಹಾಗೆಯೇ ಅವರ ಕಡೆಯವರಿಗೆ ತಿಳಿಸುತ್ತೇನೆ. ಕೇಳಿ ಅವರುಗಳು ಆನಂದಪಡುವರು.”

ಖಾಯಿಲೆ ಏರುವುದರಲ್ಲಿದೆಯೆಂದು ಕುಮು ಹಿಂದಿನ ರಾತ್ರಿಯೇ ಅರಿತಿದ್ದಳು. ಆದ್ದರಿಂದ ತಾನು ಅಣ್ಣನ ಸೇವೆ ಮಾಡಲು ಎಡೆಯಿಲ್ಲವೆ, ಎಂಬುದಾಗಿ ಅವಳ ಮನಸ್ಸು ಬಲೆಗೆ ಬಿದ್ದ ಹಕ್ಕಿಯಂತೆ ತಲ್ಲಣಿಸುತ್ತಿತ್ತು. ಅವಳ ಕೈಯ ಸೇವೆ ಅಣ್ಣನಿಗೆ ಔಷಧಕ್ಕಿಂತಲೂ ಹೆಚ್ಚಿನದು.

ಸ್ನಾನ ಮಾಡಿ ದೇವರ ಮೇಲೆ ಹೂವು ಹಾಕಿ ಕುಮು ಅಣ್ಣನ ಕೋಣೆಗೆ ಬಂದಾಗ ಇನ್ನೂ ಸೂರ್ಯ ಉದಿಸಿರಲಿಲ್ಲ. ಕಠಿಣ ರೋಗದೊಡನೆ ಬಹಳ ಹೊತ್ತು ಕಾದಾಡಿ ಕ್ಷಣ ಹೊತ್ತು ವಿರಾಮ ಪಡೆಯುವ ವೇಳೆಯಲ್ಲಿ ನಿಶ್ಶಕ್ತಿಯ ವೈರಾಗ್ಯ ತಲೆದೋರುವುದಷ್ಟೆ. ಆ ವೈರಾಗ್ಯದಿಂದ ವಿಪ್ರದಾಸನ ಮನಸ್ಸು ಆಗ ಶಿಥಿಲವಾಗಿತ್ತು. ಬದುಕಿನಲ್ಲಿ ಆಸಕ್ತಿ, ಸಂಸಾರದ ಚಿಂತೆ ಎಲ್ಲ ಅವನ ಬಳಿ ಹಸುರಿಲ್ಲದ ಮರುಭೂಮಿಯಂತಿತ್ತು. ಇಡೀ ರಾತ್ರಿ ಕಿಟಕಿಗಳನ್ನೆಲ್ಲಾ ಮುಚ್ಚಿತ್ತು. ಮುಂಜಾನೆ ಡಾಕ್ಟರು ಪೂರ್ವ ದಿಕ್ಕಿನ ಕಿಟಕಿಗಳನ್ನು ತೆರೆದಿದ್ದರು. ಅರಳೀ ಮರದ ಮಂಜಿನ ಹನಿ ತುಂಬಿದ ಎಲೆಗಳ ಮರೆಯಲ್ಲಿ ಅರುಣೋದಯದ ಆಕಾಶದ ಬೆಳಕು ಮೆಲ್ಲ ಮೆಲ್ಲನೆ ಬಿಳುಪಾಗುತ್ತಿತ್ತು. ಸ್ವಲ್ಪ ದೂರದಲ್ಲಿದ್ದ ನದಿಯಲ್ಲಿ ವ್ಯಾಪಾರಿಗಳ ದೋಣಿಯ ಮೇಲ್ಭಾಗದಲ್ಲಿ ಕಟ್ಟಿದ್ದ ಧ್ವಜಪಟಗಳು ಆ ಕೆಂಪಡರಿದ್ದ ಆಕಾಶದಲ್ಲಿ ಉಬ್ಬಿಕೊಂಡಿದ್ದವು. ನವಬತ್‌ಖಾನೆಯಲ್ಲಿ ಕರುಣಸ್ವರದಲ್ಲಿ ರಾಮ್‌ಕೇಲಿ ಬಾರಿಸುತ್ತಿದ್ದರು.

ಮಗ್ಗುಲಲ್ಲಿ ಕುಳಿತು ಕುಮು ತಣ್ಣಗಿದ್ದ ತನ್ನೆರಡು ಕೈಗಳ ನಡುವೆ ಬಿಸಿಯಾಗಿದ್ದ ಅಣ್ಣನ ಕೈಯನ್ನು ಎತ್ತಿಕೊಂಡಳು. ವಿಪ್ರದಾಸನ ‘ಟೆರಿಯರ್’ ನಾಯಿ ಮಂಚದ ಕೆಳಗೆ ವಿಷಣ್ಣ ಭಾವದಿಂದ ತೆಪ್ಪನೆ ಕುಳಿತಿದ್ದಿತು. ಕುಮು ಮಂಚದ ಮೇಲೆ ಬಂದು ಕುಳಿತೊಡನೆ ಅದು ಎದ್ದು ನಿಂತು ಎರಡು ಕಾಲುಗಳನ್ನೂ ಅವಳ ಮಡಿಲ ಮೇಲಿಟ್ಟು ಬಾಲ ಅಡಿಸುತ್ತ ಆಡಿಸುತ್ತ ಕರುಣದೃಷ್ಟಿಯಿಂದ ಕ್ಷೀಣ ಆರ್ತಸ್ವರದಲ್ಲಿ ಏನನ್ನೋ ಪ್ರಶ್ನಿಸಿತು.

ವಿಪ್ರದಾಸನ ಮನದಲ್ಲಿ ಒಳಗೊಳಗೆ ಯಾವುದೋ ಒಂದು ಚಿಂತೆಯು ಧಾರೆ ಹರಿಯುತ್ತಿತ್ತು. ಅದರಿಂದಲೇ ಹಠಾತ್ತಾಗಿಯೂ, ಒಮ್ಮೆ ಅಸಂಬದ್ಧ ರೀತಿಯಲ್ಲಿಯೂ ಹೇಳತೊಡಗಿದನು. "ತಂಗಿ, ವಾಸ್ತವತೆಯಲ್ಲಿ ಯಾವುದೂ ಇಲ್ಲ. ಯಾರು ದೊಡ್ಡವರು, ಯಾರು ಚಿಕ್ಕವರು, ಯಾರು ಮೇಲು, ಯಾರು ಕೀಳು, ಇವೆಲ್ಲವೂ ಕೇವಲ ಕಲ್ಪಿತ ವಿಷಯಗಳು. ನೊರೆಯ ಗುಳ್ಳೆಗಳಲ್ಲಿ ಯಾವುದರ ಸ್ಥಾನ ಎಲ್ಲಿ ಎನ್ನುವುದರಿಂದ ಬರುವುದಾದರೂ ಏನು. ನಿನ್ನೊಳಗೆ ನೀನು ಸಹಜರೀತಿಯಲ್ಲಿರು. ಯಾವುದೂ ನಿನ್ನನ್ನು ತಗಲದು".

"ನನ್ನನ್ನು ಆಶೀರ್ವದಿಸು, ಅಣ್ಣಾ, ನನ್ನನ್ನು ಆಶೀರ್ವದಿಸು" ಎಂದು ಹೇಳಿ ಕುಮು ಎರಡು ಕೈಗಳಿಂದಲೂ ಬಾಯಿ ಮುಚ್ಚಿಕೊಂಡು ಅಳುವನ್ನು ಅಡಗಿಸಿದಳು.

ವಿಪ್ರದಾಸ ದಿಂಬನ್ನು ಒರಗಿಕೊಂಡು ಸ್ವಲ್ಪ ಎದ್ದು ಕುಳಿತು ಕುಮುವಿನ ಮುಖ ತಗ್ಗಿಸಿ ಹಿಡಿದುಕೊಂಡು ಅವಳ ನೆತ್ತಿಯನ್ನು ಮುತ್ತಿಟ್ಟನು.

ಡಾಕ್ಟರು ಕೋಣೆಯ ಒಳಹೊಕ್ಕು, "ಇದು ಇನ್ನೂ ಕೂಡದು ಕುಮು, ಈಗ ಅವರಿಗೆ ವಿಶ್ರಾಂತಿ ಆವಶ್ಯಕ" ಎಂದರು.

ಕುಮು ರೋಗಿಯ ದಿಂಬನ್ನು ಸ್ವಲ್ಪ ಸುಮ್ಮಸುಮ್ಮನೆ ಸರಿಪಡಿಸಿ ಮೈ ಮೇಲೆ ಶಾಖವಾದ ಹೊದಿಕೆ ಎಳೆದು, ಮಗ್ಗುಲಲ್ಲಿದ್ದ ಮುಕ್ಕಾಲು ಮಣೆಯ ಮೇಲಿನ ಅವ್ಯವಸ್ಥೆಯನ್ನು ಸ್ವಲ್ಪ ಸರಿಪಡಿಸಿ ಅಣ್ಣನ ಕಿವಿಯಲ್ಲಿ ಮೆಲುದನಿಯಲ್ಲಿ "ಗುಣವಾದೊಡನೆ ಕಲ್ಕತ್ತೆಗೆ ಹೋಗು ಅಣ್ಣಾ. ಅಲ್ಲಿ ನಿನ್ನನ್ನು ನೋಡಲು ಅನುಕೂಲವಾಗುವುದು" ಎಂದಳು

ವಿಪ್ರದಾಸ ದೊಡ್ಡ ದೊಡ್ಡ ಸ್ನಿಗ್ಧವಾದೆರಡು ಕಣ್ಣುಗಳನ್ನು ಕುಮುವಿನ ಮುಖದ ಕಡೆಗೆ ಹೊರಳಿಸಿ ಹೇಳಿದನು. "ಕುಮೂ, ಪಡುವಲ ಮೋಡ ಮೂಡಲಿಗೆ ಹೋಗುವುದು. ಮೂಡಲ ಮೋಡ ಪಡುವಲಿಗೆ ಹೋಗುವುದು. ಇದೆಲ್ಲ ಆಗುವುದು ಗಾಳಿಯಿಂದ. ಸಂಸಾರದಲ್ಲೂ ಹಾಗೆಯೇ ಗಾಳಿ ಬೀಸುವುದು. ಮೋಡದಂತೆ ಅಷ್ಟು ಹಗುರವಾದುದೆಂದು

ಇದನ್ನು ಲೆಕ್ಕಿಸು, ತಂಗಿ. ಈಗಿನಿಂದ ನನ್ನ ವಿಷಯ ಹೆಚ್ಚಾಗಿ ಯೋಚಿಸ ಬೇಡ. ಯಾವ ಸ್ಥಳಕ್ಕೆ ಹೋಗುವೆಯೋ ಅಲ್ಲಿ ಲಕ್ಷ್ಮಿಯ ಪೀಠವನ್ನು ನೀನು ಅಲಂಕರಿಸಿಕೊಂಡಿರು. ಇದೇ ನನ್ನ ಆಶೀರ್ವಾದ. ನಿನ್ನಿಂದ ನಾವುಗಳು ಬೇರೆ ಏನನ್ನೂ ಬೇಡುವುದಿಲ್ಲ."

ಅಣ್ಣನ ಕಾಲ ಬಳಿ ಕುಮು ತಲೆ ಇಟ್ಟುಕೊಂಡು ಬಿದ್ದಿದ್ದಳು. "ಇಂದಿನಿಂದ ನನ್ನ ಬಳಿ ಬಯಸುವುದು ಇನ್ನೇನೂ ಇಲ್ಲ. ಇಲ್ಲಿಯ ನಿತ್ಯ ಗಟ್ಟಲೆಯ ಬಾಳುವೆಯಲ್ಲಿ ನನ್ನ ಕೈಯ ಸಂಪರ್ಕ ಏನೇನೂ ಇರದು" ಎಂದಳು. ಮುಹೂರ್ತಮಾತ್ರದಲ್ಲಿ ಇಷ್ಟು ದೊಡ್ಡ ವಿಚ್ಛೇದದ ಸಂಗತಿ ಮನಸ್ಸಿನಲ್ಲಿ ಒಪ್ಪಿಕೊಳ್ಳಲಾಗುವುದಿಲ್ಲ. ಬಿರುಗಾಳಿ ನಾವೆಯನ್ನು ಬಂದರಿನಿಂದ ಎಳೆದೊಯ್ಯುವಾಗ ಲಂಗರು ಹೇಗೆ ಮಣ್ಣನ್ನು ಅಪ್ಪಿಕೊಂಡಿರಲು ಬಯಸುವದೋ ಹಾಗೆ ಅಣ್ಣನ ಕಾಲನ್ನು ಕುಮು ಬಲವಾಗಿ ಬಂಧಿಸಿದ್ದಳು. ಡಾಕ್ಟರು ಮತ್ತೆ ಬಂದು, ಮೆಲ್ಲಮೆಲ್ಲನೆ " ಇನ್ನೂ ಕೂಡದು ಅಕ್ಕ" ಎಂದು ಹೇಳಿ ಕಣ್ಣೀರಿನಿಂದ ತೋಯ್ದ ತಮ್ಮ ಕಣ್ಣುಗಳನ್ನು ಒರೆಸಿಕೊಂಡರು. ಕೋಣೆಯಿಂದ ಹೊರ ಬಿದ್ದು ಬಾಗಿಲ ಹೊರಗೆ ಇದ್ದ ಚೌಕಿಯ ಮೇಲೆ ಕುಳಿತು ಸೆರಗಿನಿಂದ ಮುಖ ಮುಚ್ಚಿಕೊಂಡು ಕುಮು ನಿಶ್ಶಬ್ದವಾಗಿ ಅಳಲಾರಂಭಿಸಿದಳು. ಇದ್ದಕ್ಕಿದ್ದಂತೆ ಒಂದು ಘಳಿಗೆಯಲ್ಲಿ 'ಬೆಸ್ಸಿ' ಕುದುರೆಗೆ ಕೊನೆಯ ಬಾರಿ ತಿನ್ನಿಸಿ ಹೋಗಬೇಕೆಂದು ಹಿಂದಿನ ದಿನ ಬೆಲ್ಲ ಬೆರಸಿದ ಹಿಟ್ಟಿನಿಂದ ರೊಟ್ಟಿ ಮಾಡಿಟ್ಟುದು ನೆನಪಾಯಿತು. ಕಾಸ್ತಾರ ಇಂದು ಮುಂಜಾನೆ ಅದನ್ನು ಅಂತಃಪುರದ ತೋಟದಲ್ಲಿ ಕಟ್ಟಿ ಬಂದಿದ್ದನು. ಕುಮು ಅಲ್ಲಿಗೆ ಹೋಗಿ ನೋಡಿದಾಗ ಕುದುರೆ ಅಮಟೇ ಮರದ ಬುಡದಲ್ಲಿ ಹುಲ್ಲು ಮೇಯುತ್ತ ತಿರುಗಾಡುತ್ತಿತ್ತು. ದೂರದಿಂದ ಕುಮುವಿನ ಹೆಜ್ಜೆಯ ಸದ್ದು ಕೇಳಿ ದೊಡನೆಯೇ ಕಿವಿಗಳನ್ನು ನೆಟ್ಟಗೆ ನಿಲ್ಲಿಸಿತು. ಅವಳನ್ನು ಕಂಡ ಕೂಡಲೆ "ಹಿಂ-ಹಿಂ-ಹಿಂ" ಎಂದು ಕೆನೆಯತೊಡಗಿತು. ಎಡಗೈಯನ್ನು ಅದರ ಭುಜದ ಮೇಲಿಟ್ಟು ಕುಮು ಅದರ ಬಾಯ ಹತ್ತಿರ ರೊಟ್ಟಿ ಹಿಡಿದು ಅದಕ್ಕೆ ತಿನ್ನಿಸತೊಡಗಿದಳು. ಅದು ತಿನ್ನುತ್ತ ತಿನ್ನುತ್ತ ದೊಡ್ಡದಾಗಿ ಸ್ನಿಗ್ಧವಾದೆರಡು ಕಣ್ಣುಗಳಿಂದ ಕುಮುವನ್ನು ದಿಟ್ಟಿಸಿ ನೋಡತೊಡಗಿತು.

ತಿನ್ನುವುದಾದ ಮೇಲೆ 'ಬೆಸ್ಸಿ' ಯ ಕಣ್ಣುಗಳೆರಡರ ನಡುವಣ ವಿಶಾಲವಾದ ಹಣೆಯ ಮೇಲೆ ಮುತ್ತಿಟ್ಟು ಕುಮು ಓಡಿಹೋದಳು.

೧೮

ಮಧುಸೂದನ ಈ ನಾಲ್ಕಾರು ದಿನಗಳ ನಡುವೆ ಒಮ್ಮೆಯಾದರೂ ಬಂದು ನೋಡಿಕೊಂಡು ಹೋಗುವನೆಂದು ವಿಪ್ರದಾಸ ಎಣಿಸಿದ್ದನು. ಅದು ಸಂಭವಿಸದಿರಲು ಈ ಮದುವೆ ಎರಡು ಕುಟುಂಬಗಳ ನಡುವೆ ವಿಚ್ಛೇದದ ಖಡ್ಗವಾಗಿ ಬಂದಿದೆಯೆಂಬುದನ್ನು ಅರಿಯಲು ಅವನಿಗೆ ವಿಳಂಬವಾಗಲಿಲ್ಲ. ರೋಗದಿಂದ ತೀರ ಶಕ್ತಿಗುಂದಿರಬೇಕಾದರೆ ಈ ಸಂಗತಿಯನ್ನೂ ಅವನು ಸಹಜ ರೀತಿಯಲ್ಲೇ ಅಂಗೀಕರಿಸಿದನು. ಡಾಕ್ಟರನ್ನು ಕರೆದು "ಸ್ವಲ್ಪ ಏಸರಾಜ್ ಬಾರಿಸಬಹುದೇ ?" ಎಂದನು.

ಡಾಕ್ಟರು "ಬೇಡ, ಇವೊತ್ತು ಕಳೆಯಲಿ" ಎಂದರು.

"ಹಾಗಾದರೆ ಕುಮುವನ್ನು ಕರೆಯಿರಿ. ಪುನಃ ಅವಳು ಬಾರಿಸುವುದನ್ನು ಯಾವಾಗ ಕೇಳಲು ಅವಕಾಶವಾದೀತೋ."

ಡಾಕ್ಟರು "ಇವೊತ್ತು ಬೆಳಗ್ಗೆ ಒಂಭತ್ತರ ಗಾಡಿಯಲ್ಲಿ ಅವರುಗಳು ಹೊರಡಬೇಕಾಗಿದೆ. ಇಲ್ಲವಾದರೆ ಸೂರ್ಯ ಮುಳುಗುವ ಮುಂಚೆ ಕಲ್ಕತ್ತೆ ಸೇರಲು ಸಾಧ್ಯವಿಲ್ಲ. ಕುಮುವಿಗಂತೂ ಇನ್ನು ಬಿಡುವಿಲ್ಲ" ಎಂದರು.

ವಿಪ್ರದಾಸ ನಿಟ್ಟುಸಿರು ಬಿಟ್ಟು, "ಇಲ್ಲ, ಅವಳ ಕಾಲ ಮುಗಿಯಿತು. ಹತ್ತೊಂಬತ್ತು ವರ್ಷ ಕಳೆಯಲು ಸಾಧ್ಯವಾಯಿತು. ಈಗ ಒಂದು ಘಂಟೆಯೂ ಇನ್ನು ಕಳೆಯಲಾಗುವುದಿಲ್ಲ." ಎಂದನು.

ಬೀಳ್ಕೊಡುವ ಸಮಯದಲ್ಲಿ ಗಂಡ ಹೆಂಡಿರು ಒಂದುಗೂಡಿ ನಮಸ್ಕರಿಸಲು ಬಂದರು. ಮಧುಸೂಧನ ಮರ್ಯಾದೆ ತೋರುತ್ತ–"ಅದೇ ಮತ್ತೆ, ನಿಮ್ಮ ಶರೀರ ನೆಟ್ಟಗಿರುವಂತೆ ಕಾಣಿಸದು" ಎಂದನು.

ವಿಪ್ರದಾಸ ಅದಕ್ಕೆ ಏನೂ ಉತ್ತರ ಕೊಡದೆ–"ಭಗವಂತ ನಿಮ್ಮಗಳಿಗೆ ಒಳ್ಳೆಯದು ಮಾಡಲಿ" ಎಂದನು.

"ಅಣ್ಣಾ, ನಿನ್ನ ಮೈಯನ್ನು ಎಚ್ಚರಿಕೆಯಿಂದ ನೋಡಿಕೋ" ಎಂದು ಹೇಳಿ ಕುಮು ಮತ್ತೊಮ್ಮೆ ವಿಪ್ರದಾಸನ ಕಾಲಬಳಿ ಬಿದ್ದು ಅಳ ತೊಡಗಿದಳು.

ಹುಲು ಧ್ವನಿ. ಶಂಖಧ್ವನಿ, ಕಂಚಿನ ನಗಾರಿ, ನವಬತ್ತು, ಇವುಗಳೆಲ್ಲ ಒಟ್ಟಾಗಿ ಆಲಿಕಲ್ಲ ಮಳೆಯೇ ಆಯಿತು. ಅವರುಗಳು ಹೊರಟರು.

ಹೆಣ್ಣು ಗಂಡಿನ ಸೆರಗು ಅಂಗವಸ್ತ್ರದ ಕೊನೆಗೆ ಗಂಟು ಹಾಕಿಕೊಂಡು ಅವರುಗಳು ಹೋಗುತ್ತಿರಲು ಆ ನೋಟ ಅದೇಕೋ ವಿಪ್ರದಾಸನ ಕಣ್ಣಿಗೆ ಬೀಭತ್ಸವಾಗಿ ಕಾಣಿಸಿತು. ಪ್ರಾಚೀನ ಇತಿಹಾಸದಲ್ಲಿ ತೈಮೂರ್, ಚೆಂಗೀಸ್ ಇವರುಗಳು ಮಿತಿಮೀರಿದ ಮನುಷ್ಯರ ಮೂಳೆಗಳಿಂದ ಸ್ತಂಭಗಳನ್ನು ಕಟ್ಟಿದ್ದರು. ಆದರೆ ಈ ಅಂಗವಸ್ತ್ರ ಸೆರಗಿನ ಗಂಟು, ಅದರಿಂದ ಹುಟ್ಟುವ ಜೀವನ ಮೃತ್ಯುವಿನ ಜಯ ತೋರಣವನ್ನು ಅಳೆಯುವುದಾದರೆ ಅದರ ತುದಿ ಯಾವ ನಗರವನ್ನು ಹೋಗಿ ಮುಟ್ಟುತೋ. ಆದರೆ ಇವತ್ತು ಅವನ ಮನದಲ್ಲಿ ಇದೆಂತಹ ಭಾವನೆ.

ಪೂಜೆ ಅರ್ಚನೆಗಳಲ್ಲಿ ವಿಪ್ರದಾಸನಿಗೆ ಎಂದೂ ಆಸಕ್ತಿಯಿರಲಿಲ್ಲ. ಹೀಗಿದ್ದೂ ಇಂದು ಕೈ ಜೋಡಿಸಿಕೊಂಡು ಮನಸ್ಸಿನಲ್ಲೇ ಪ್ರಾರ್ಥನೆ ಮಾಡತೊಡಗಿದನು.

ಒಂದು ಹೊತ್ತಿನಲ್ಲಿ ಬೆಚ್ಚಿಬಿದ್ದು ಕುಳಿತು-"ಡಾಕ್ಟರೇ, ದಿವಾನ್ ಜಿಯನ್ನು ಕರೆಯಿರಿ" ಎಂದನು.

ವಿಪ್ರದಾಸನಿಗೆ ಥಟ್ಟನೆ ನೆನಪಾಯಿತು. ಮದುವೆಗೆ ಇಲ್ಲಿಗೆ ಬರಲು ಕೆಲವು ದಿನಗಳ ಮುಂಚೆ ಸುಬೋಧನಿಗೆ ಹಣ ಕಳುಹಿಸುವುದನ್ನು ಕುರಿತು ಮನಸ್ಸು ಅತ್ಯಂತ ಉದ್ವಿಗ್ನಗೊಂಡು, ಲೆಕ್ಕದ ಕಾಗದ ಪತ್ರಗಳನ್ನು ತಿರುವಿ ದಣಿದಿದ್ದಾಗ ಹನ್ನೊಂದು ಘಂಟೆ ಹೊಡೆಯಿತು ಈ ಸಮಯದಲ್ಲಿ ಅತ್ಯಂತ ಅವ್ಯವಸ್ಥೆಯ ಮನುಷ್ಯನೊಬ್ಬನು ಕೆಲವು ದಿನಗಳು ಕ್ಷೌರಮಾಡಿಸಿಕೊಳ್ಳದೆ ಕೊಳೆ ಬೆಳೆದ ಮುಖ, ಮೂಳೆಗಳು ಎದ್ದು ಕಾಣುವ ನರಗಳು, ಎದ್ದು ನಿಂತ ಕೈಗಳು, ಕೊಳಕಾದ ಒಂದು ಮೇಲು ಹೊದಿಕೆ, ಒಂದು ತುಂಡು

ಪಂಚೆ, ಹರಕಲು ಜೋತಿ ಮೆಟ್ಟು, ಇವುಗಳನ್ನು ಧರಿಸಿ ಬಂದು ನಿಂತನು. ನಮಸ್ಕಾರಮಾಡಿ "ಯಜಮಾನರೇ, ನೆನಪಿದೆಯೇನು?" ಎಂದನು.

ವಿಪ್ರದಾಸ ಸ್ವಲ್ಪ ಲಕ್ಷ್ಯವಿಟ್ಟು ನೋಡಿ, "ಯಾರು? ವೈಕುಂಠ ನೇನು?" ಎಂದನು.

ವಿಪ್ರದಾಸ ಬಾಲ್ಯದಲ್ಲಿ ಯಾವ ಸ್ಕೂಲಿನಲ್ಲಿ ಓದುತ್ತಿದ್ದನೋ ಅದಕ್ಕೆ ಸೇರಿದಂತೆ ಪಕ್ಕದಲ್ಲಿದ್ದ ಮನೆಯೊಂದರಲ್ಲಿ ವೈಕುಂಠ ಸ್ಕೂಲು ಪುಸ್ತಕಗಳು, ನೋಟು ಬುಕ್ಕು, ಚಾಕು, ಪೆನ್ನು, ಚೆಂಡು, ದಾಂಡು, ಬುಗುರಿ ಮತ್ತು ಅವುಗಳ ಸಂಗಡಲೇ ಕಾಗದದಲ್ಲಿ ಸುರುಳಿ ಸುತ್ತಿದ ನೆಲಗಡಲೆಯ ಬೀಜ ವನ್ನೂ ಮಾರುತ್ತಿದ್ದನು. ಅವನ ಮನೆ ದೊಡ್ಡ ಹುಡುಗರು ಕಲೆಯುವ ಸ್ಥಳವಾಗಿತ್ತು. ಬಗೆ ಬಗೆಯಾದ ಅದ್ಭುತ ಕತೆಗಳನ್ನು ಹೇಳುವುದರಲ್ಲಿ ಅವನಿಗೆ ಸಮನಾದವರೇ ಇರಲಿಲ್ಲ.

"ನಿನ್ನ ಸ್ಥಿತಿ ಹೀಗೇಕಾಯಿತು?" ಎಂದು ವಿಪ್ರದಾಸ ಅವನನ್ನು ಕೇಳಿದನು.

ಕೆಲವು ವರ್ಷಗಳ ಹಿಂದೆ ಅನುಕೂಲಸ್ಥರ ಮನೆಗೆ ಹೆಣ್ಣನ್ನು ಕೊಟ್ಟಿ ದ್ದನು. ಅವರಿಗೆ ವರದಕ್ಷಿಣೆಯು ವಿಶೇಷ ಆವಶ್ಯಕತೆಯಿರಲಿಲ್ಲವೆಂದೇ ಗಂಡಿನ ದಕ್ಷಿಣೆ ಸ್ವಲ್ಪ ಹೆಚ್ಚಾಗಿಯೇ ಇದ್ದಿತು. ಸಾವಿರದ ಇನ್ನೂರು ರೂಪಾಯಿಗಳು ಕಾಣಿಕೆ, ಅದಲ್ಲದೆ ಎಂಭತ್ತು ತೊಲಾ ಭಂಗಾರದ ಒಡವೆ ಗಳು. ಒಬ್ಬಳೇ ಒಬ್ಬಳು ಪ್ರೀತಿಯ ಮಗಳು. ಅದಕ್ಕಾಗಿಯೇ ಅವನು ವಿಧಿಯಿಲ್ಲದೆ ಒಪ್ಪಿದ್ದನು. ಒಮ್ಮೆಗೇ ಎಲ್ಲ ಹಣ ಸಂಗ್ರಹಿಸಲಾಗಲಿಲ್ಲ. ಅದರಿಂದ ಹುಡುಗಿಗೆ ಹಿಂಸೆ ಕೊಟ್ಟು ಕೊಟ್ಟು ಅವರ ಅಪ್ಪನ ರಕ್ತ ಶೋಷಿ ಸುತ್ತಿದ್ದರು. ಸಾಮರ್ಥ್ಯವೆಲ್ಲ ಬರಿದಾಯಿತು. ಇನ್ನೂ ಇನ್ನೂರೈವತ್ತು ಬಾಕಿ. ಈ ಬಾರಿ ಹುಡುಗಿಯ ಅವಮಾನಕ್ಕೆ ಕೊನೆಯಿಲ್ಲ. ಅತ್ಯಂತ ಅಸಹನೀಯವಾದುದರಿಂದಲೇ ಅಪ್ಪನ ಮನೆಗೆ ಓಡಿಬಂದಿದ್ದಳು. ಅದ ರಿಂದ ಬಂದೀಖಾನೆಯಲ್ಲಿದ್ದ ಖೈದಿ ಬಂದೀಖಾನೆಯ ಕಾನೂನು ಮುರಿ ದಂತಾಯಿತು. ಅಪರಾಧ ಬೆಳೆಯಿತು. ಈಗ ಆ ಇನ್ನೂರೈವತ್ತು

ರೂಪಾಯಿ ಬಿಸುಟು ಹುಡುಗಿಯನ್ನು ರಕ್ಷಿಸುವುದಾದರೆ ಅಪ್ಪ ಜೀವ ಬಿಡುವ ವಿಷಯ ಯೋಚಿಸಲಾದರೂ ಅವಕಾಶ ದೊರೆತೀತು.

ವಿಪ್ರದಾಸ ಹುಸಿನಗೆ ನಕ್ಕನು. ಸಾಕಷ್ಟು ಅಳತೆಯಲ್ಲಿ ಸಹಾಯ ಮಾಡುವ ಮಾತನ್ನು ಅಂದು ಯೋಚಿಸಲು ಅವಕಾಶವಿರಲಿಲ್ಲ. ಕ್ಷಣ ಹೊತ್ತು ಅತ್ತಿತ್ತ ನೋಡುತ್ತಿದ್ದನು. ಅನಂತರ ಎದ್ದು ಹೋಗಿ ಪೆಟ್ಟಿಗೆಯಲ್ಲಿ ಹಣದ ಚೀಲ ಝಾಡಿಸಿ ಹತ್ತು ರೂಪಾಯಿ ನೋಟು ತಂದು ಅವನ ಕೈಯಲ್ಲಿಟ್ಟನು. "ಇನ್ನೂ ನಾಲ್ಕಾರು ಕಡೆ ಪ್ರಯತ್ನಿಸಿ. ನನಗೆ ಹೆಚ್ಚು ಸಾಧ್ಯವಿಲ್ಲ" ಎಂದನು.

ವೈಕುಂಠ ಆ ಮಾತನ್ನು ಸ್ವಲ್ಪವೂ ನಂಬಲಿಲ್ಲ. ಕಾಲು ಎಳೆದು ಹಾಕುತ್ತ ಹಾಕುತ್ತ ನಡೆದನು. ಎಕ್ಕಡದಿಂದ ಅತ್ಯಂತ ಅಸಮಾಧಾನದ ಶಬ್ದ ಹೊರಡುತ್ತಿತ್ತು.

ಅಂದಿನ ಆ ಘಟನೆ ಮರತೇ ಹೋಗಿತ್ತು. ಇಂದು ಹಠಾತ್ತಾಗಿ ವಿಪ್ರದಾಸನಿಗೆ ನೆನಪಾಯಿತು. ದಿವಾನ್‌ಜಿಗಳನ್ನು ಕರೆದು "ವೈಕುಂಠನಿಗೆ ಇಂದೇ ಇನ್ನೂರೈವತ್ತು ರೂಪಾಯಿ ಕಳುಹಿಸಬೇಕು" ಎಂದು ಅಪ್ಪಣೆ ಮಾಡಿದನು. ದಿವಾನರು ಸುಮ್ಮನೆ ನಿಂತುಕೊಂಡು ತಲೆ ಕೆರೆಯತೊಡಗಿದರು. ಮೇಲಾಟದ ಆವೇಶದಲ್ಲಿ ವೆಚ್ಚಮಾಡಿ ಬಹಳ ದಿನಗಳವರೆಗೆ ಮಾಡಿದ ಮದುವೆಯ ಲೆಕ್ಕವನ್ನು ತೀರಿಸಬೇಕಾಗಿತ್ತು. ಈಗಿನ ಸ್ಥಿತಿಯಲ್ಲಿ ಅದು ಇನ್ನೂರೈವತ್ತು ರೂಪಾಯಿಗಳಾಗಿತ್ತು.

ದಿವಾನ್‌ಜಿಗಳ ಮುಖಭಾವ ನೋಡಿ ವಿಪ್ರದಾಸ ಬೆರಳಿನಿಂದ ವಜ್ರದುಂಗುರ ಕಳಚಿ "ಚಿಕ್ಕ ಬಾಬುಗಳ ಹೆಸರಿನಲ್ಲಿ ಬ್ಯಾಂಕಿನಲ್ಲಿ ಇಟ್ಟಿರುವ ಹಣವಿದೆಯಲ್ಲ, ಅದರಿಂದ ಇನ್ನೂರೈವತ್ತು ರೂಪಾಯಿ ತೆಗೆದುಕೋ. ಅದರ ಬದಲು ನನ್ನ ವಜ್ರದುಂಗುರ ಗಿರವಿ ಇರಲಿ. ವೈಕುಂಠನಿಗೆ ಕುಮುವಿನ ಹೆಸರಿನಲ್ಲಿ ಹಣ ಕಳುಹಿಸಿಕೊಡು" ಎಂದನು.

೧೯

ಮದುವೆಯ ಯುದ್ಧಕಾಂಡದ ಕೊನೆಯ ಅಧ್ಯಾಯ ಇನ್ನೂ ಉಳಿದಿದೆ. ಬೆಳಗ್ಗೆ ಕುಶಾಂಡಿಕಾ* ಮಾಡಿ ಗಂಡು ಹೆಣ್ಣು ಪಯಣ ಹೊರಡುವುದೆಂದು ಏರ್ಪಾಡಾಗಿತ್ತು. ನವಗೋಪಾಲ ಅದಕ್ಕಾಗಿ ಎಲ್ಲ ಸಿದ್ಧತೆಯನ್ನೂ ಮಾಡುತ್ತಿದ್ದ. ಇಂತಹ ಸಮಯದಲ್ಲಿ ವಿಪ್ರದಾಸನ ಕೋಣೆಯಿಂದ ಬೀಳ್ಕೊಂಡು ಹೊರಬಿದ್ದು ರಾಜಾ ಬಹದ್ದೂರರು "ಕುಶಾಂಡಿಕಾ ಗಂಡಿನವರ ಬಿಡಾರದಲ್ಲಿ, ಮಧುಪುರಿಯಲ್ಲೇ ನಡೆಯಲಿ" ಎಂದು ಹೇಳಿದನು.

ಮಾತಿನ ಈ ಔದ್ಧತ್ಯ ನವಗೋಪಾಲನಿಗೆ ಅಸಹ್ಯವೆನಿಸಿತು. ಬೇರೆ ಯಾರಾದರೂ ಆಗಿದ್ದರೆ ಇಂತಹ ಸಂದರ್ಭದಲ್ಲಿ ಕ್ರಿಮಿನಲ್ ಮೊಕದ್ದಮೆಯಲ್ಲಿ ಕೊನೆಯಾಗುತ್ತಿತ್ತು. ಆದರೂ ಭಾಷೆಯ ಕಾಠಿಣ್ಯದಲ್ಲಿ ನವಗೋಪಾಲ ಮಾಡಿದ ಅಡ್ಡಿ ದೊಣ್ಣೆಯ ಪೆಟ್ಟಿಗೆ ಸರಿಸಮವಾಗಿತ್ತು.

ಈ ಅವಮಾನದಿಂದ ಅಂತಃಪುರದಲ್ಲಿ ಬಹಳ ನೋವುಂಟಾಯಿತು. ದೂರದಿಂದ ನೆಂಟರು, ಇಷ್ಟರು ಎಲ್ಲರೂ ಬಂದಿದ್ದರು. ಅವರುಗಳ ನಡುವೆ ಕುಟುಂಬದ ಶತ್ರುಗಳಿಗೆ ಅಭಾವವಿರಲಿಲ್ಲ. ಎಲ್ಲರಿದಿರಿನಲ್ಲಿ ಈ ಅತ್ಯಾಚಾರ. ಕ್ಷೇಮಾ ಅತ್ತೆ ಮುಖ ದಪ್ಪಗೆ ಮಾಡಿಕೊಂಡು ಕುಳಿತಿದ್ದಳು. ಗಂಡು ಹೆಣ್ಣು ಹೊರಡುವ ವೇಳೆಯಲ್ಲಿ ನಮಸ್ಕರಿಸಲು ಬಂದಾಗ ಅವಳ ಬಾಯಿಂದ ಆಶೀರ್ವಾದ ಹೊರಬೀಳದಂತಿತ್ತು. ಈ ಕಾರ್ಯವನ್ನು ಕಲ್ಕತ್ತೆಯಲ್ಲಿ ನಡೆಸಿಕೊಂಡಿದ್ದರಾದರೂ ಯಾರದೂ ಏನೂ ಆಕ್ಷೇಪಣೆ ಇರುತ್ತಿರಲಿಲ್ಲ ಎಂದು ಎಲ್ಲರೂ ಹೇಳುತ್ತಿದ್ದರು. ತವರುಮನೆಯವರ ಅವಮಾನದಿಂದ ಕುಮು ಸಂಪೂರ್ಣವಾಗಿ ಕುಗ್ಗಿಹೋದಳು. ತನ್ನ ಎಲ್ಲ ಪೂರ್ವಜರ ಬಳಿಯಲ್ಲೂ ತಾನೇ ತಪ್ಪಿತಸ್ಥಳೆಂದು ಅವಳಿಗೆ ಅನ್ನಿಸಿತು. ಮನಸ್ಸಿನಲ್ಲೇ ತನ್ನ ದೇವರ ಮೇಲೆ ಮುನಿದು, ಬಾರಿಬಾರಿಗೆ "ನಾನು ನಿನ್ನ ಬಳಿ ಯಾವ ದೋಷ ಮಾಡಿದ್ದಕ್ಕಾಗಿ ನನಗೆ ಇಷ್ಟೊಂದು ಶಾಸ್ತಿ!

* ಕುಶಾಂಡಿಕಾ—ಮದುವೆಯ ಸಂದರ್ಭದಲ್ಲಿ ವಧೂವರರು ಆಚರಿಸುವ ಹೋಮ.

ನಾನಾದರೋ ನಿನ್ನಲ್ಲೇ ನಂಬಿಕೆ ಇಟ್ಟು ಎಲ್ಲವನ್ನೂ ಒಪ್ಪಿಕೊಂಡಿರು ವೆನು" ಎಂದು ಅನ್ನುತ್ತಿದ್ದಳು.

ಗಂಡು ಹೆಣ್ಣು ಗಾಡಿ ಹತ್ತಿ ಕುಳಿತರು. ಕಲ್ಕತ್ತೆಯಿಂದ ಮಧು ಸೂದನ ಕರೆತಂದಿದ್ದ ಬ್ಯಾಂಡಿನವರು ಉಚ್ಚಸ್ವರದಲ್ಲಿ ಕುಣಿತದ ಸ್ವರ ಬಾರಿಸತೊಡಗಿದರು. ದೊಡ್ಡದೊಂದು ಶಾಮಿಯಾನಾದ ಅಡಿಯಲ್ಲಿ ಹೋಮದ ಏರ್ಪಾಡಾಗಿತ್ತು. ಅತಿಥಿ ಅಭ್ಯಾಗತರಲ್ಲಿ ಕೆಲವರು ಇಂಗ್ಲೀಷ್ ಸ್ತ್ರೀ ಪುರುಷರು ಮೆತ್ತೆ ಹಾಸಿದ ಚೌಕಿಯ ಮೇಲೆ ಕುಳಿತಿದ್ದರು. ಕೆಲ ವರು ಹತ್ತಿರ ಬಂದು ಬಗ್ಗಿ ನಿಂತು ನೋಡುತ್ತಿದ್ದರು. ಈ ವೇಳೆಗೇ ಅವರುಗಳಿಗಾಗಿ ಟೀ ಮತ್ತು ಬಿಸ್ಕತ್ತು ಸಹ ಬಂದಿತ್ತು. ಒಂದು ಟೀ ಪಾಯಿಯ ಮೇಲೆ ಬಲು ದೊಡ್ಡ "ವೆಡ್ಡಿಂಗ್ ಕೇಕ್" ಕೂಡ ಸಿಂಗರಿಸಿ ಇಡಲಾಗಿತ್ತು. ಅನುಷ್ಠಾನ ಮುಗಿಯಲು ಇವರುಗಳು ಅಭಿನಂದಿಸ ತೊಡಗಿದಾಗ ಕುಮು ಮುಖ ಕೆಂಪಗೆ ಮಾಡಿಕೊಂಡು ತಲೆತಗ್ಗಿಸಿಕೊಂಡು ನಿಂತಿದ್ದಳು. ಸ್ಥೂಲಾಕೃತಿಯ ಪ್ರೌಢ ಆಂಗ್ಲ ಮಹಿಳೆಯೊಬ್ಬಳು ಅವಳ ಕಾಶೀ ಪೀತಾಂಬರದ ಅಂಚನ್ನು ಎತ್ತಿ ಹಿಡಿದುಕೊಂಡು ಪರೀಕ್ಷೆ ಮಾಡಿ ನೋಡಿದಳು. ಅವಳ ಕೈಯ ಭಂಗಾರದ ದಪ್ಪ ಬಾಜೂಬಂದನ್ನು ತಿರುವಿ ತಿರುವಿ ನೋಡುವುದರಲ್ಲೂ ಆಕೆಗೆ ಬಹಳ ಕುತೂಹಲವಿತ್ತು. ಇಂಗ್ಲಿಷ್ ಭಾಷೆಯಲ್ಲಿ ಬಾಯಿ ತುಂಬ ಹೊಗಳಿದಳು. ಅನುಷ್ಠಾನದ ಸಂಬಂಧವಾಗಿಯೂ ಮಧುಸೂದನನಿಗೆ ಒಂದು ಗುಂಪಿನವರು "How interesting" ಎಂದರು. ಮತ್ತೊಂದು ಗುಂಪಿನವರು "Isn't it" ಎಂದರು.

ಇದೇ ಮಧುಸೂದನ, ತನ್ನ ಅಣ್ಣ ಮತ್ತು ಇತರ ನೆಂಟರೊಡನೆ ನಡೆದುಕೊಂಡ ರೀತಿಯನ್ನು ಕುಮು ನೋಡಿದ್ದಳು. ಇಂದು ಅವನನ್ನೇ ಆಂಗ್ಲ ಸ್ನೇಹಿತರ ನಡುವೆ ನೋಡಿದಳು. ಮರ್ಯಾದೆಯಲ್ಲಿ ಅತಿ ವಿನಯ ದಿಂದ ಬಾಗಿದ್ದ. ನಗುವಿನ ಉಲ್ಲಾಸದಿಂದ ಮುಖ ಸದಾ ಅರಳಿರುತ್ತಿತ್ತು. ಚಂದ್ರನಿಗೆ ಹೇಗೆ ಒಂದು ಪಾರ್ಶ್ವದಲ್ಲಿ ಬೆಳಕು ಮತ್ತೊಂದು ಪಾರ್ಶ್ವದಲ್ಲಿ ಕತ್ತಲೆ ಉಂಟೋ ಮಧುಸೂದನನ ನಡವಳಿಕೆಯೂ ಹಾಗೆಯೇ ಇತ್ತು. ಆಂಗ್ಲರ ಇದಿರಿನಲ್ಲಿ ಅವನ ಮಾಧುರ್ಯ ಪೂರ್ಣ ಚಂದ್ರನಂತೆ ಎಷ್ಟು

ಉಜ್ವಲವೋ ಅಷ್ಟು ಸ್ನಿಗ್ಧವಾಗಿತ್ತು. ಮತ್ತೊಂದು ಪಾರ್ಶ್ವದಲ್ಲಿ ದುರ್ಗಮವಾಗಿದ್ದು ನೋಡಲು ಸಹ್ಯವಾಗಿರಲಿಲ್ಲ. ಹೆಪ್ಪುಗಟ್ಟಿದ ನೀರು ಗಡ್ಡೆಯಂತೆ ನಿಶ್ಚಲತೆಯಿಂದ ಕೂಡಿ ದುರ್ಭೇದ್ಯವಾಗಿತ್ತು.

ಸೆಲೂನ್ ಗಾಡಿಯಲ್ಲಿ ಆಂಗ್ಲ ಗೆಳೆಯರೊಡನೆ ಮಧುಸೂಧನ ಹತ್ತಿದ. ಮತ್ತೊಂದು ರಿಜರ್ವ್ ಮಾಡಿದ ಗಾಡಿಯಲ್ಲಿ ಹೆಂಗಸರೊಡನೆ ಕುಮುದಿನಿ ಕೂತುಕೊಂಡಳು. ಅವರಲ್ಲಿ ಒಬ್ಬಳು ಅವಳ ಕೈ ಅಮುಕಿ ನೋಡುವಳು. ಮತ್ತೊಬ್ಬಳು ಗಲ್ಲ ಹಿಡಿದೆತ್ತಿ ಮುಖದ ಸೊಬಗನ್ನು ವಿಮರ್ಶೆಮಾಡುವಳು. ಇನ್ನೊಬ್ಬಳು, "ಎತ್ತರವಾಗಿ ಇರುವಳು" ಎಂದರೆ ಮಗದೊಬ್ಬಳು "ರೋಗದ ಮುಖದವಳು" ಎನ್ನುವಳು. ಯಾರೋ ಒಬ್ಬಳು ಏನೂ ಅರಿಯದವಳಂತೆ "ಹೌದು, ಮೈಗೆ ಯಾವ ಬಣ್ಣ ಹಚ್ಚುತ್ತೀಯೆ. ನಿಮ್ಮಣ್ಣ ಸೀಮೆಯಿಂದ ಏನಾದರೂ ಕಳುಹಿಸು ತ್ತಾರೇನು?" ಎಂದಳು. 'ಕಣ್ಣು ಅಗಲವಾಗಿಲ್ಲ. ಮೈಯ್ಯ ಅಳತೆ ಹೆಣ್ಣಾದವಳಿಗೆ ಇರಬೇಕಾದುದಕ್ಕಿಂತ ಬಲು ದೊಡ್ಡದು' ಎಂದು ಎಲ್ಲರೂ ಬಗೆಬಗೆಯಾಗಿ ಮೀಮಾಂಸೆ ಮಾಡಿದರು. ಮೈ ಮೇಲಿನ ಪ್ರತಿಯೊಂದು ಒಡವೆಯನ್ನು ತಿರುವಿ ತಿರುವಿ ಚರ್ಚಿಸತೊಡಗಿದರು. "ಹಳೆಯ ಕಾಲದ ಒಡವೆಗಳು ತೂಕವಾದುವು. ಚಿನ್ನ ಅಪ್ಪಟ. ಆದರೆ ಏತರ ನಾಜೂಕು, ಬಡಕೊಂಡ ಹಾಗೇ ಇದೆ." ಎಂದರು.

ಅವರುಗಳ ಗಾಡಿಗೆ ಸ್ಟೇಷನ್ ಪ್ಲಾಟ್‌ಫಾರಮ್ಮಿನ ಇದಿರು ಕಡೆ ಕಿಟಕಿ ತೆರೆದಿತ್ತು. ಆ ಕಡೆ ಕುಮು ನೋಡುತ್ತ ಕುಳಿತಿದ್ದಳು. ಇವರ ಮಾತುಗಳು ಕಿವಿಯ ಮೇಲೆ ಬೀಳದೆ ಇರುವಂತೆ ಪ್ರಯತ್ನ ಮಾಡುತ್ತಿದ್ದಳು ಕಾಲು ಕತ್ತರಿಸಿದ ಒಂದು ನಾಯಿ ಮೂರುಕಾಲಲ್ಲೆ ಕುಂಟುತ್ತ ಕುಂಟುತ್ತ ನೆಲ ಮೂಸಿನೋಡುತ್ತ ಓಡಾಡುತ್ತಿದ್ದುದನ್ನು ಕಂಡಳು. "ಪಾಪ, ತಿನ್ನುವ ಪದಾರ್ಥ ಯಾವುದಾದರೂ ಹತ್ತಿರವಿದ್ದಿದ್ದರೆ" ಎಂದು ಕುಮು ಮನದಲ್ಲೇ ಯೋಚಿಸತೊಡಗಿದಳು. ಒಂದು ಕಾಲು ಹೋಗಿರುವುದರಿಂದ ಅದರ ಅಭಾವದಿಂದಲೇ ಅದಕ್ಕೆ ಏನೇನು ಸಹಜವಾಗಿತ್ತೋ ಅದೆಲ್ಲ ಕಠಿಣವಾಗಿದೆಯಲ್ಲವೆ ಎಂದು ಚಿಂತಿಸತೊಡಗಿದಳು. ಸೆಲೂನ್

ಗಾಡಿಯ ಎದುರಿನಲ್ಲಿ ಗೃಹಸ್ಥನೊಬ್ಬ ನಿಂತುಕೊಂಡು ಹೇಳುತ್ತಿದ್ದ ಮಾತುಗಳು ಅವಳ ಕಿವಿಗೆ ಬಿದ್ದವು. "ನೋಡಿ ಈ ರೈತರ ಹೆಣ್ಣನ್ನು ದಳ್ಳಾಳಿಗಳು ಮೋಸಮಾಡಿ ಅಸ್ಸಾಂ ಟೀ ತೋಟಕ್ಕೆ ಕರೆದುಕೊಂಡು ಹೋಗುತ್ತಿರುವಾಗ ತಪ್ಪಿಸಿಕೊಂಡು ಓಡಿಬಂದಿರುವಳು. ಗೋಲಂದಾದವರೆಗೆ ಟಿಕೀಟಿಗೆ ಹಣವಿದೆ. ಇವರ ಊರು ದುಮುರಾಂವ್. ಸಹಾಯಮಾಡಿದ್ದೇ ಆದರೆ ಈ ಹೆಂಗಸು ಬದುಕಿಕೊಳ್ಳುವಳು. ಸೆಲೂನ್ ಗಾಡಿಯಿಂದ ಜೋರಾಗಿ ಗದರಿಸಿದ ದನಿ ಕುಮುವಿಗೆ ಕೇಳಿಸಿತು. ಅವಳಿಗೆ ಸಹಿಸಲಾಗಲಿಲ್ಲ. ತಕ್ಷಣ ಬಲಗಡೆಯ ಕಿಟಕಿ ತೆರೆದು ತನ್ನ ಪುಸ್ತಕಗಳ ಗಂಟು ಬಿಚ್ಚಿ ಒದರಿ ಹತ್ತು ರೂಪಾಯಿ ನೋಟೊಂದನ್ನು ಹೆಣ್ಣ ಕೈಯಲ್ಲಿ ಕೊಟ್ಟು ಕೂಡಲೇ ಕಿಟಕಿ ಮುಚ್ಚಿದಳು. ಇದನ್ನು ನೋಡಿ ಒಬ್ಬ ಹೆಂಗಸು "ನಮ್ಮ ಸೊಸೆಯ ಧಾರಾಳದ ಕೈ ನೋಡಿ!" ಎಂದಳು. ಮತ್ತೊಬ್ಬಳು "ದೊಡ್ಡ ಬಾಗಿಲು-ಲಕ್ಷ್ಮಿಯನ್ನು ಬೀಳ್ಕೊಡಲು" ಎಂದಳು. ಬೇರೊಬ್ಬಳು "ಹಣ ಸೂರೆ ಮಾಡುವುದನ್ನು ಕಲಿತಿರುವಳು. ಕೂಡಿಡುವುದು ಕಲಿತಿದ್ದರೆ ಪ್ರಯೋಜನವಾದೀತು" ಎಂದಳು. ಇವಳ ನಡವಳಿಕೆ ಕೇವಲ ಅಹಂಭಾವವೆಂದು ಅವರುಗಳು ತೀರ್ಮಾನಿಸಿದರು. ಬಾಬುಗಳು ಯಾರಿಗೆ ಮೂರು ಕಾಸೂ ಕೊಡಲಿಲ್ಲವೋ, ಅವಳಿಗೆ ಈಕೆ ಒದರಿ ಹತ್ತು ರೂಪಾಯಿ ಬಿಸಾಡಿದಳು. ಇಷ್ಟೊಂದು ಅಹಂಕಾರ ಯಾವುದಕ್ಕಾಗಿ! ಇದೂ ಕೂಡ ಆ ಚಟರ್ಜಿ ಘೋಷಾಲ್ ಮನೆತನದವರ ಹಿಂದಿನ ಕಾಲದ ಗುದ್ದಾಟದ ಅಂಗವೆಂದು ಅವರುಗಳ ಮನಸ್ಸಿಗೆ ಅನಿಸಿತು.

ಈ ಸಮಯದಲ್ಲಿ ಅವರುಗಳ ನಡುವೆ ದಪ್ಪಮೈಯುಳ್ಳ ಕಪ್ಪುಬಣ್ಣದ ಹೆಂಗುಸೊಬ್ಬಳು ಅವಳ ಹತ್ತಿರ ಬಂದು ಕುಳಿತಳು. ಆಕೆಯದು ತುಂಬ ಅಗಲವಾದ ಕಣ್ಣು. ಸ್ನೇಹರಸದಿಂದ ತುಂಬಿದ ಮುಖಭಾವ. ಕುಮುವಿನ ಜೊತೆ ಇರಬಹುದು. ಪಿಸುಮಾತಿನಲ್ಲಿ "ಮನಸ್ಸಿಗೆ ಏನನ್ನಿಸುವುದು ಅಕ್ಕಾ, ಇವರುಗಳ ಹರಟೆಗೆ ಕಿವಿಗೊಡಬೇಡ. ಎರಡು ದಿನ ಹೀಗೆ ಚುಚ್ಚಾಟ ಬೈಯ್ಯಾಟ ಆಡುವರು. ಅನಂತರ ಗಂಟಲಿನಿಂದ ವಿಷ ಇಳಿದುಹೋದೊಡನೆ ತೆಪ್ಪಗಾಗುವರು." ಈ ಹುಡುಗಿ ಕುಮುವಿನ ನಡು

ಕಲ ಓರಗಿತ್ತಿ. ನವೀನನ ಹೆಂಡತಿ. ಅವಳ ಹೆಸರು ನಿಸ್ತಾರಿಣಿ. ಎಲ್ಲರೂ ಅವಳನ್ನು ಮೋತಿಯ ತಾಯಿ ಎಂದು ಕರೆಯುತ್ತಿದ್ದರು.

ಮೋತಿಯ ತಾಯಿ ಮಾತಿಗೆ ಆರಂಭಿಸಿದಳು. "ನೂರ್‌ನಗರಕ್ಕೆ ಬಂದಾಗ ಸ್ಟೇಷನ್ನಿಗೆ ನಿಮ್ಮ ಅಣ್ಣ ಬಂದಿದ್ದರಷ್ಟೆ"

ಕುಮು ಬೆಚ್ಚಿಬಿದ್ದಳು. ತಮ್ಮ ಅಣ್ಣ ಸ್ಟೇಷನ್ನಿನಲ್ಲಿ ಸ್ವಾಗತಿಸಲು ಹೋಗಿದ್ದರೆಂಬ ಸುದ್ದಿ ಕೇಳಿದ್ದು ಇದೇ ಮೊದಲು

"ಆಹಾ, ಎಂತಹ ಅಂದವಾದ ಗಂಡಸು. ಅಂಥವರನ್ನು ನಾನು ಎಂದೂ ಕಣ್ಣಾರೆ ನೋಡಿಲ್ಲ. ಅವರ ಆ ಸ್ಫುರದ್ರೂಪ ನನಗೆ ಒಂದು ಹಾಡನ್ನು ನೆನಪುಂಟುಮಾಡಿತು. ಅದು ಯಾವುದೆಂದರೆ :—

ಗೋರಾರ್ ರೂಪೇ ಲಾಗಲೋ ರಸೇರ್ ಬಾನ್

ಭಾಸಿಯೆ ನಿಯೆ ಜಾಯ್ ನದೀಯಾರ್ ಪುರನಾರೀರ್ ಪ್ರಾಣ್.

[ಗೋರನ (ಶ್ರೀ ಗೌರಾಂಗ) ರೂಪದಲ್ಲಿ ರಸದ ಪ್ರವಾಹ ಕೂಡಿತು. ನದಿಯಾದ ಪುರ ನಾರಿಯರ ಪ್ರಾಣವನ್ನು ಕೊಚ್ಚಿಕೊಂಡು ಹೋಗುತ್ತಿತ್ತು].

ಮುಹೂರ್ತಮಾತ್ರದಲ್ಲಿ ಕುಮುವಿನ ಮನಸ್ಸು ಕರಗಿಹೋಯಿತು. ಮುಖ ಓರೆಮಾಡಿಕೊಂಡು ಕಿಟಕಿಯಕಡೆ ನೋಡುತ್ತಿದ್ದಳು. ಹೊರಗಿನ ಮೈದಾನ, ವನ, ಆಕಾಶ ಎಲ್ಲ ಕಣ್ಣೀರಿನಿಂದ ಮಂಕಾಗಿ ಕಾಣ ತೊಡಗಿದವು.

ಕುಮುವಿಗೆ ಯಾವ ಜಾಗದಲ್ಲಿ ನೋವಾಗಿದೆ ಎಂಬುದನ್ನು ಅರಿಯಲು ಮೋತಿಯ ತಾಯಿಗೆ ವಿಳಂಬವಾಗಲಿಲ್ಲ. ಅದರಿಂದಲೇ ನಾನಾ ವಿಧದಲ್ಲಿ ಅವಳ ಅಣ್ಣನ ಮಾತನ್ನೇ ಎತ್ತುತ್ತಿದ್ದಳು. 'ಮದುವೆಯಾಗಿದೆಯಲ್ಲವೆ' ಎಂದು ಕೇಳಿದಳು.

ಕುಮುವು—ಇಲ್ಲ ಎಂದಳು.

ಮೋತಿಯ ತಾಯಿ "ಚೆನ್ನಾಯಿತು ಅಂತಹ ದೇವತೆಯಂತಹ ರೂಪ, ಇನ್ನೂ ಮನೆ ಬರಿದು! ಆ ವರ ಯಾವ ಭಾಗ್ಯವತಿಯ ಅದೃಷ್ಟದಲಿದೆಯೊ!

ಕುಮು ಆಗ ಯೋಚಿಸುತ್ತಿದ್ದಳು—ಅಣ್ಣ ಎಲ್ಲ ಹೆಮ್ಮೆಯನ್ನೂ ಬದಿಗೊತ್ತರಿಸಿ ಕೇವಲ ನನಗಾಗಿ ಸ್ಟೇಷನ್ನಿಗೆ ಹೋಗಿದ್ದ. ಅನಂತರ ಇವರುಗಳು ಒಮ್ಮೆಯಾದರೂ ನೋಡಲು ಬರಲಿಲ್ಲ! ಕೇವಲ ಹಣದ ಶಕ್ತಿಯಿಂದ ಅಂತಹ ಮನುಷ್ಯನನ್ನೂ ಅಲಕ್ಷ್ಯಮಾಡುವ ಸಾಹಸಮಾಡಿದರಲ್ಲ! ಅವನ ಮೈ ಇದಕ್ಕಾಗಿಯೇ ಕೆಟ್ಟುಹೋದದ್ದು ಎಂದು ತೋರುತ್ತೆ.

ವೃಥಾ ಆಕ್ಷೇಪಣೆಯೊಡನೆ ಬಾರಿಬಾರಿಗೆ ಮನಸ್ಸಿನಲ್ಲೇ ಹೇಳಿಕೊಳ್ಳತೊಡಗಿದಳು—"ಅಣ್ಣ ಸ್ಟೇಷನ್ನಿಗೆ ಯಾಕೆ ಹೋದ? ತನ್ನನ್ನು ಯಾಕೆ ಕೀಳುಮಾಡಿಕೊಂಡ? ನನಗೋಸ್ಕರವೆ? ನನಗಾದರೂ ಯಾಕೆ ಸಾವು ಬರಲಿಲ್ಲ?" ಎಂದು ಹಲುಬಿದಳು.

ಯಾವ ಕೆಲಸ ಆಗಿಬಿಟ್ಟಿದೆ, ಮತ್ತೆ ಹಿಂದಿರುಗಿಸಲು ಸಾಧ್ಯವಿಲ್ಲ. ಆದರ ವಿಷಯವಾಗಿಯೇ ಅವಳ ಮನಸ್ಸು ತಲೆಯ ಮೇಲೆ ಮೊಟಕಲಾರಂಭಿಸಿತು. ಕೇವಲ ರೋಗದಿಂದ ಸೊರಗಿದ ಆ ಶಾಂತ ಮುಖ ಆಶೀರ್ವಾದದಿಂದ ತುಂಬಿ ತುಳುಕುತ್ತಿದ್ದ ಸ್ನಿಗ್ಧವಾದ ಆ ಕಣ್ಣುಗಳು ಇದೇ ಮತ್ತೆ ಮತ್ತೆ ನೆನಪಾಗುತ್ತಿದ್ದುವು.

೨೦

ರೈಲ್ ಗಾಡಿ ಹೌರಾ ಬಂದು ತಲುಪಿತು. ಹೊತ್ತು ಆಗ ನಾಲ್ಕು ಹೊಡೆದಿರಬಹುದು. ಹೊದ್ದಿದ್ದ ಅಂಗವಸ್ತ್ರಗಳಿಗೆ ಗಂಟುಹಾಕಿಕೊಂಡು ವಧೂವರರು ಹೋಗಿ ಬ್ರೂಹಾಂನಲ್ಲಿ ಕುಳಿತರು. ಕಲ್ಕತ್ತೆಯ ಹಗಲು ಹೊತ್ತಿನ ಲೆಕ್ಕವಿಲ್ಲದ ಕಣ್ಣುಗಳ ಇದಿರಿನಲ್ಲಿ ಕುಮುವಿನ ತನುಮನ ಕುಗ್ಗಿ ಅಡಗಿತ್ತು. ಹತ್ತೊಂಭತ್ತು ವರ್ಷ ವಯಸ್ಸಿನ ಈ ಕನ್ಯೆಯ ಅಂಗಾಂಗಗಳಲ್ಲಿ ಗಭೀರವಾಗಿ ವ್ಯಾಪ್ತವಾಗಿದ್ದ ಅತಿಶಯವಾದ ಶುಚಿಯ ಅರಿವು—ಅದು ಕರ್ಣ ಹುಟ್ಟಿದೊಡನೆ ಆತ ಧರಿಸಿಕೊಂಡು ಬಂದ ಕವಚದಂತೆ—ಯಾವ ವಿಧದಲ್ಲಿ ಹಠಾತ್ತಾಗಿ ಛಿನ್ನವಾಗಲು ಸಾಧ್ಯ. ನಿಮಿಷಮಾತ್ರದಲ್ಲಿ ಈ ಕವಚ ಕಳಚಿ ಬೀಳುವಂತಹ ಮಂತ್ರವೂ ಇದೆ. ಆದರೆ ಆ ಮಂತ್ರ ಹೃದಯದ ಅಂತರ್ಯದಲ್ಲಿ ಇನ್ನೂ ಧ್ವನಿಸಿರಲಿಲ್ಲ. ಪಕ್ಕದಲ್ಲಿ ಯಾವ ಮನುಷ್ಯ ಕುಳಿತಿರುವನೋ ಆತನು ಆ ಮನಸ್ಸಿನ ಅಂತರ್ಯದಲ್ಲಿ ಇಂದೂ

ಹೊರಗಿನವನಾಗಿದ್ದಾನೆ. ತನ್ನವನಾಗುವ ವಿಷಯದಲ್ಲಿ ಆತನಿಂದ ಕೇವಲ ಬಾಧೆಗಳೇ ಅಡ್ಡವಾಗುತ್ತಿವೆ. ಆತನ ಭಾವಭಂಗಿಯಲ್ಲಿ, ವ್ಯವಹಾರದಲ್ಲಿ ಇದ್ದ ಒಂದು ಬಗೆಯ ಒರಟುತನ ಇದುವರೆವಿಗೂ ಕುಮುವನ್ನು ಆತನಿಂದ ದೂರವೇ ಇಟ್ಟಿತ್ತು.

ಇತ್ತ ಮಧುಸೂದನನಿಗೆ ಕುಮು ಒಂದು ಹೊಸ ಸಂಶೋಧನೆ. ಹೆಂಗಸರ ಪರಿಚಯ ಹೊಂದುವ ಮಟ್ಟಿನ ವಿರಾಮ ಈ ಕಾರ್ಯನಿರತ ಮನುಷ್ಯನಿಗೆ ಸ್ವಲ್ಪವೂ ಇರಲಿಲ್ಲ. ಯಾವ ಹೆಂಗಸೂ ಅವನ ಮನಸ್ಸನ್ನು ಒಂದು ಘಳಿಗೆ ಹೊತ್ತಾದರೂ ವಿಚಲಿತಗೊಳಿಸಿಲ್ಲ ಎನ್ನುವ ಮಾತು ನಿಜವಲ್ಲ, ಅಂದರೆ ಭೂಕಂಪದವರೆಗೆ ಮಾತ್ರ ಘಟನೆ ನಡೆದಿದೆ. ಕಟ್ಟಡಕ್ಕೆ ಪೆಟ್ಟು ತಗಲಿಲ್ಲ. ಮಧುಸೂದನ ಕುಲಸ್ತ್ರೀಯರ ನಡುವೆ ಅತ್ಯಲ್ಪ ಜನರ ಪರಿಚಯವನ್ನು ಮಾತ್ರ ಪಡೆದಿದ್ದನು. ಅವರಾದರೋ ಮನೆಗೆಲಸ ಮಾಡುವರು, ಜಗಳವಾಡುವರು, ಪಿಸುಗುಟ್ಟುವರು. ಅತಿ ತುಚ್ಛ ಕಾರಣದಿಂದ ಅಳುವುದೂ ಉಂಟು. ಮಧುಸೂದನನ ಬಾಳುವೆಯಲ್ಲಿ ಇವರುಗಳ ಸಹವಾಸ ಅತ್ಯಲ್ಪ. ಅವನ ಹೆಂಡತಿಯೂ ಪ್ರಪಂಚದ ಆ ಲೆಕ್ಕಕ್ಕಿಲ್ಲದ ವಿಭಾಗದಲ್ಲಿ ಎಡೆ ಪಡೆಯುವಳು ಮತ್ತು ನಿತ್ಯಗಟ್ಟಲೆಯ ಗಾರ್ಹಸ್ತ್ಯದ ತುಚ್ಛತೆಯಿಂದ ಆವರಿಸಲ್ಪಟ್ಟ ಗೋಡೆಗಳ ಮರೆಯಲ್ಲಿ ಯಜಮಾನರ ಕಡೆಗಣ್ಣ ಸನ್ನೆಯಿಂದ ನಡೆಯುವ ಹೆಂಗಸರ ಬಾಳುವೆಯನ್ನು ನಡೆಸುವಳು, ಎನ್ನುವುದಕ್ಕಿಂತ ಹೆಚ್ಚಾಗಿ ಅವನೇನೂ ಯೋಚಿಸಿರಲಿಲ್ಲ. ಹೆಂಡತಿಯ ಸಹವಾಸ ಮಾಡುವುದರಲ್ಲೂ ಒಂದು ಬಗೆಯ ಕಲಾನಿಪುಣತೆ ಉಂಟು. ಅದರೊಳಗೆ ಗೆಲುವುಂಟಾಗುವ ಅಥವಾ ಸೋಲುಂಟಾಗುವ ಸಂದರ್ಭವುಂಟು ಎಂಬ ಸಮಸ್ಯೆಗೆ, ಲೆಕ್ಕದಲ್ಲಿ ಬಲು ಚುರುಕಾಗಿದ್ದ ಮಧುವಿನ ಮೆದುಳಿಗೆ ಹಿಡಿಸಲಿಲ್ಲ. ಗಿಡ ಬಳ್ಳಿಗಳ ಸ್ವಂತ ಅಭಿಪ್ರಾಯದಲ್ಲಿ ಚಿಟ್ಟೆ ಅನಾವಶ್ಯಕವೆನ್ನಿಸಬಹುದು. ಆದರೂ ಚಿಟ್ಟೆಯ ಸಹವಾಸವನ್ನು ಅವು ಹೇಗೆ ಅಂಗೀಕರಿಸಲೇಬೇಕಾಗಿದೆಯೋ ಮಧುಸೂದನ ಹೆಂಡತಿಯಾಗುವವಳನ್ನೂ ಸಹ ಅದೇ ರೀತಿ ಅಂಗೀಕರಿಸಬೇಕಾಗಿತ್ತು.

ಇಂತಹ ಸಮಯದಲ್ಲಿ ಮದುವೆಯ ಅನಂತರ ಅವನು ಕುಮುವನ್ನು ಮೊದಲ ಬಾರಿ ನೋಡಿದನು. ಒಂದು ಬಗೆಯ ಸೌಂದರ್ಯವಿದೆ—

ಅದೊಂದು ದೈವದತ್ತವಾದ ವರ. ಪ್ರಪಂಚದ ಸಾಮಾನ್ಯ ಘಟನೆಗಳಿಗಿಂತ ಅಸಾಧಾರಣ ರೀತಿಯಲ್ಲಿ ಹೆಚ್ಚಾದುದು. ಪ್ರತಿ ಕ್ಷಣ ಅದು ನಿರೀಕ್ಷೆಯನ್ನು ಮೀರುತ್ತಿರುವುದು ಎಂದು ಮನಸ್ಸಿಗನ್ನಿಸುವುದು. ಕುಮುವಿನ ಸೌಂದರ್ಯ ಆ ಬಗೆಯದು. ಇದು ಬೆಳಗಿನ ಝಾವದಲ್ಲಿ ಮೂಡುವ ಬೆಳ್ಳಿಯಂತೆ ರಾತ್ರಿಯ ಪ್ರಪಂಚದಿಂದ ಬೇರೆಯಾದುದು. ಪ್ರಾತಃಕಾಲದ ಪ್ರಪಂಚದ ಆಚೆಯ ತೀರದ್ದು. ಮಧುಸೂದನ ತನ್ನ ಮನಸ್ಸಿನಲ್ಲಿ ತನಗೆ ಅರಿವಿಲ್ಲದೆಯೇ ಕುಮುವನ್ನು ಒಂದು ಬಗೆಯ ಅಸ್ಪಷ್ಟ ರೀತಿಯಲ್ಲಿ ತನಗಿಂತ ಶ್ರೇಷ್ಠಳೆಂದು ಅರಿತನು. ಅಂತೂ ಇವಳ ಸಂಗಡ ಯಾವ ಬಗೆಯಲ್ಲಿ ನಡೆದುಕೊಳ್ಳಬೇಕು, ಯಾವ ಮಾತನ್ನು ಹೇಗೆ ಆಡಿದರೆ ಯುಕ್ತವಾದೀತು ಎಂಬ ಯೋಚನೆ ತಲೆಹಾಕಿತು.

ಏನು ಹೇಳಿ ಮಾತು ಕತೆ ಆರಂಭಿಸಬೇಕು ಎಂಬುದನ್ನು ಯೋಚಿಸುತ್ತ ಯೋಚಿಸುತ್ತ ಮಧುಸೂದನ ಇದ್ದಕ್ಕಿದ್ದಂತೆ ಒಮ್ಮೆ ಕುಮುವನ್ನು "ಇತ್ತ ಕಡೆಯಿಂದ ಬಿಸಿಲು ಬರುತ್ತಿದೆಯಲ್ಲವೆ?" ಎಂದನು.

ಕುಮು ಯಾವ ಉತ್ತರವನ್ನೂ ಕೊಡಲಿಲ್ಲ. ಮಧುಸೂದನ ಬಲಭಾಗದ ಪರದೆ ಎಳೆದನು.

ಸ್ವಲ್ಪ ಹೊತ್ತು ಸದ್ದಿಲ್ಲದೆ ಕಳೆಯಿತು. ಮತ್ತೆ ಇದ್ದಕ್ಕಿದ್ದ ಹಾಗೆ "ಚಳಿಯಾಗುತ್ತಿದೆಯಲ್ಲವೆ?" ಎಂದು ಅಂದವನೇ ಉತ್ತರ ನಿರೀಕ್ಷಿಸದೆ ಎದುರಿನ ಸೀಟಿನ ಮೇಲಿನಿಂದ ವಿಲಾಯತಿ ಕಂಬಳಿ ಎಳೆದು ಕುಮು ಮತ್ತು ತನ್ನ ಕಾಲುಗಳ ಮೇಲೆ ಒಂದೇ ಕಂಬಳಿಯನ್ನು ಹರಡಿದನು. ತನುಮನಗಳು ಪುಳಕಿತವಾದುವು. ಬೆಚ್ಚಿಬಿದ್ದು ಕುಮುದಿನಿ ಕಂಬಳಿ ಸರಿಸುವುದರಲ್ಲಿದ್ದಳು. ಕಡೆಗೆ ತನ್ನನ್ನು ತಡೆದುಕೊಂಡು ಸೀಟಿನ ಕೊನೆಯಲ್ಲಿ ಹೋಗಿ ಹುದುಗಿ ಕುಳಿತಳು.

ಸ್ವಲ್ಪ ಕಾಲ ಹೀಗೆ ಕಳೆಯಿತು. ಈ ಸಮಯದಲ್ಲಿ ಹಠಾತ್ತಾಗಿ ಕುಮುವಿನ ಕೈಯ ಕಡೆ ಮಧುಸೂದನನ ದೃಷ್ಟಿ ಹೊರಳಿತು.

"ನೋಡೋಣ, ನೋಡೋಣ" ಎಂದು ಹಠಾತ್ತಾಗಿ ಅವಳ ಎಡಗೈಯನ್ನು ಕಣ್ಣ ಹತ್ತಿರ ಎತ್ತಿಕೊಂಡು, "ನಿನ್ನ ಬೆರಳಲ್ಲಿರುವುದು ಇದ್ಯಾತರ ಉಂಗುರ–ಪಚ್ಚೆಯದೆಂದು ಕಾಣುತ್ತೆ" ಎಂದನು.

ಕುಮು ತೆಪ್ಪನಿದ್ದಳು.

"ನೋಡು, ಪಚ್ಚೆ ಎಂದರೆ ನನಗಾಗದು. ಅದನ್ನು ನೀನು ಬಿಟ್ಟು ಬಿಡಬೇಕು" ಎಂದನು.

ಯಾವುದೋ ಒಂದು ಕಾಲದಲ್ಲಿ ಮಧುಸೂದನ ಪಚ್ಚೆಯ ಹರಳನ್ನು ಕೊಂಡುಕೊಂಡಿದ್ದ. ಆ ವರ್ಷ ಸೆಣಬು ಹೇರಿ ಭರ್ತಿಯಾಗಿದ್ದ ಅವನ ದೋಣಿ ಹೌರಾ ಸೇತುವೆಗೆ ತಗುಲಿ ಮುಳುಗಿಹೋಯಿತು. ಆ ವೇಳೆ ಯಿಂದ ಪಚ್ಚೆಯ ಕಲ್ಲನ್ನು ಕಂಡರೆ ಅವನಿಗಾಗದು.

ಕುಮುದಿನಿ ಮೆಲ್ಲಮೆಲ್ಲನೆ ಕೈ ಬಿಡಿಸಿಕೊಳ್ಳಲು ಪ್ರಯತ್ನಿಸಿದಳು. ಮಧುಸೂದನ ಕೈ ಬಿಡಲಿಲ್ಲ. "ಇದನ್ನು ನಾನು ಕಳಚಿಕೊಳ್ಳುವೆನು" ಎಂದನು.

ಕುಮು ಬೆಚ್ಚಿ ಬಿದ್ದು, "ಉಹೂಂ ಬೇಡ, ಹಾಗೆಯೇ ಇರಲಿ" ಎಂದಳು.

ಒಮ್ಮೆ ಚದುರಂಗ ಆಡುವಾಗ ಅವಳಿಗೆ ಗೆಲುವಾಯಿತು. ಆಗ ಅಣ್ಣ ತನ್ನ ಕೈ ಬೆರಳಲ್ಲಿದ್ದ ಉಂಗುರವನ್ನು ಬಹುಮಾನ ಕೊಟ್ಟಿದ್ದನು. ಅದೇ ಆ ಪಚ್ಚೆಯ ಉಂಗುರ.

ಮಧುಸೂದನ ಮನಸ್ಸಿನಲ್ಲೇ ನಕ್ಕನು. ಉಂಗುರದ ಮೇಲೆ ವಿಲಕ್ಷಣ ವಾದ ಆಶೆಯಿದೆ. ಈ ವಿಷಯದಲ್ಲಿ ತನ್ನ ಸಂಗಡ ಕುಮುವಿನ ಒಮ್ಮನದ ಪರಿಚಯ ಹೊಂದಿ ಅವನಿಗೆ ಸ್ವಲ್ಪ ನೆಮ್ಮದಿಯುಂಟಾಯಿತು. ವೇಳೆ ಅವೇಳೆಗಳಲ್ಲಿ, ಹಾರ, ಬಳೆ ಬಾಜೂಬಂದು ಇವುಗಳ ಸಹಾಯದಿಂದ ಅಭಿಮಾನಿನಿಯ ಸಂಗಡ ವ್ಯವಹರಿಸಲು ನೇರವಾದ ಹಾದಿ ಸಿಕ್ಕಲು ಅವಕಾಶವಿದೆ ಎಂದುಕೊಂಡನು. ಈ ಹಾದಿಯಲ್ಲಿ ಮಧುಸೂದನನ ಪ್ರಭಾವ ಒಪ್ಪದೆ ವಿಧಿಯಿಲ್ಲ. ವಯಸ್ಸು ಸ್ವಲ್ಪ ಹೆಚ್ಚೇ ಆಗಿತ್ತು.

ತನ್ನ ಬೆರಳಿಂದ ದೊಡ್ಡದಾದ ಕಮಲವಜ್ರದ ಉಂಗುರವೊಂದನ್ನು ಕಳಚಿ ಮಧುಸೂದನ ನಕ್ಕು, "ಹೆದರಬೇಡ, ಇದಕ್ಕೆ ಬದಲಾಗಿ ಬೇರೊಂದು ಉಂಗುರವನ್ನು ನಿನಗೆ ತೊಡಿಸುವೆ" ಎಂದನು.

ಕುಮುವಿಗೆ ಸುಮ್ಮನಿರಲಾಗಲಿಲ್ಲ. ಸ್ವಲ್ಪ ಪ್ರಯತ್ನಪಟ್ಟೇ ಕೈ ಎಳೆದುಕೊಂಡಳು. ಈ ಬಾರಿ ಮಧುಸೂದನನ ಮನಸ್ಸು ಹದಗೆಟ್ಟಿತು. ಯಾಜಮಾನ್ಯದ ಅವಮಾನ ಅವನಿಗೆ ಸಹಿಸದು. ಒಣಗಿದ ದನಿಯಲ್ಲಿ ಬಲವಾಗಿಯೇ, "ನೋಡು, ಈ ಉಂಗುರ ನೀನು ಕಳಚಲೇಬೇಕು" ಎಂದನು.

ಕುಮುದಿನಿ ತಲೆ ತಗ್ಗಿಸಿಕೊಂಡು ತೆಪ್ಪನಿದ್ದಳು. ಅವಳ ಮುಖ ಕೆಂಪಡರಿತು.

ಮಧುಸೂದನ ಮತ್ತೆ "ಕೇಳಿದೆಯಾ? ನಾನು ಹೇಳುವೆ. ಅದನ್ನು ಕಳಚಲೇ ಬೇಕು. ಕೊಡು ನನಗೆ." ಎಂದು ಹೇಳಿ ಕೈ ಎಳೆದುಕೊಳ್ಳಲು ಯತ್ನಿಸಿದನು.

ಕುಮು ಕೈ ಸರಿಸಿಕೊಂಡು "ನಾನು ಕಳಚುತ್ತೇನೆ" ಎಂದು ಕಳಚಿದಳು.

"ಅದನ್ನು ನನಗೆ ಕೊಡು"

ಕುಮುದಿನಿ "ಅದನ್ನು ನಾನೇ ಇಟ್ಟುಕೊಂಡಿರುವೆ" ಎಂದಳು.

ಮಧುಸೂದನ ಬೇಸರಗೊಂಡವನಾಗಿ ಗದರಿದನು. "ಇಟ್ಟು ಕೊಂಡು ನಿನಗಾಗುವ ಲಾಭವೇನು? ಅದೊಂದು ಹೆಚ್ಚು ಬೆಲೆಯ ಪದಾರ್ಥವೆಂದು ಎಣಿಸುವೆಯಲ್ಲವೆ? ನೀನು ಯಾವ ಬಗೆಯಲ್ಲೂ ಅದನ್ನು ಹಾಕಿಕೊಳ್ಳುವುದು ಸಾಧ್ಯವಿಲ್ಲ" ಎಂದನು.

ಕುಮುದಿನಿ "ನಾನು ಹಾಕಿಕೊಳ್ಳುವುದಿಲ್ಲ" ಎಂದಳು. ಹೀಗೆಂದು ಮಣಿಗೆಲಸಮಾಡಿದ್ದ ಕೈ ಚೀಲದೊಳಗೆ ಉಂಗುರ ಹಾಕಿಟ್ಟಳು.

"ಯಾಕೆ, ಈ ಸಾಮಾನ್ಯ ಪದಾರ್ಥದ ಮೇಲೆ ಇಷ್ಟೊಂದು ಅಭಿಮಾನವೇಕೆ? ನಿನ್ನಲ್ಲಿ ಹಟಕ್ಕೇನೂ ಕಡಮೆಯಿಲ್ಲ."

ಮಧುಸೂದನನ ದನಿ ನಡುಗುತ್ತಿತ್ತು. ಅವನ ಮಾತುಗಳು ಉಪ್ಪು ಕಾಗದದಿಂದ ಉಜ್ಜಿದಂತೆ ಕಿವಿಯ ಮೇಲೆ ಬಾಜಿಸುತ್ತಿದ್ದುವು. ಕುಮುದಿನಿಯು ಮೈಯೆಲ್ಲ ನವಿರೆದ್ದಿತು.

"ಈ ಉಂಗುರ ನಿನಗೆ ಯಾರು ಕೊಟ್ಟರು?"

ಕುಮುದಿನಿ ತೆಪ್ಪನಿದ್ದಳು.

"ನಿಮ್ಮ ತಾಯಿ ಇರಬಹುದೇನೋ?"

ಏನಾದರೂ ಉತ್ತರ ಕೊಟ್ಟೇ ತೀರಬೇಕೆಂದೇ ಅಸ್ಪಷ್ಟವಾದ ಧ್ವನಿಯಲ್ಲಿ "ಅಣ್ಣ" ಎಂದಳು.

ಕುಮುವಿನ ಅಣ್ಣನ ಸ್ಥಿತಿ ಏನು ಎಂಬುದನ್ನು ಮಧುಸೂದನ ಚೆನ್ನಾಗಿ ಬಲ್ಲ. ಆ ಅಣ್ಣ ಕೊಟ್ಟ ಉಂಗುರ ಶನೇಶ್ವರನ ಕೈಯ ಕನ್ನಗತ್ತಿಯೇ ಸರಿ. ಈ ಮನೆಯೊಳಕ್ಕೆ ಅದನ್ನು ತರಕೂಡದು. ಆದರೆ ಅದಕ್ಕಿಂತ ಹೆಚ್ಚಾಗಿ ಅವನನ್ನು ಮೂದಲಿಸುತ್ತಿದ್ದುದೆಂದರೆ ಕುಮುದಿನಿಯ ಬಳಿ ಇನ್ನೂ ಅವರಣ್ಣನೇ ಎಲ್ಲಕ್ಕೂ ಹೆಚ್ಚಿನವನಾಗಿರುವುದು. ಅದು ಸ್ವಾಭಾವಿಕವಾದುದೆಂದೇ ಅದನ್ನು ಸಹಿಸಲು ಆಗುವುದಿಲ್ಲ. ಹಳೆಯ ಜಮೀನ್‌ದಾರನ ಜಮೀನ್‌ದಾರಿಯನ್ನು ಹೊಸದಾಗಿ ಹಣವಂತನಾದ ಸಾಹುಕಾರ ಹರಾಜಿನಲ್ಲಿ ಕೊಂಡ ಅನಂತರ ಭಕ್ತರಾದ ಪ್ರಜೆಗಳು ಹಿಂದಿನ ಕಾಲದ ವಿಷಯಗಳನ್ನು ಸ್ಮರಿಸಿ ಸ್ಮರಿಸಿ ನಿಟ್ಟುಸಿರು ಬಿಡುತ್ತಿದ್ದರೆ, ಆಗ ಹೊಸ ಅಧಿಕಾರಿಗಳ ಮೈಯಲ್ಲಿ ಉರಿಯದೆ ಇದ್ದೀತೆ? ಇದೂ ಹಾಗೆಯೇ. ಇಂದಿನಿಂದ ನಾನೊಬ್ಬನೆ ಅವಳಿಗೆ ಎಲ್ಲವೂ! ಈ ಮಾತನ್ನು ಎಷ್ಟು ಜಾಗ್ರತೆ ಸಾಧ್ಯವಾದರೆ ಅಷ್ಟು ಜಾಗ್ರತೆ ಅವಳಿಗೆ ತಿಳಿಸಬೇಕು ಅದಲ್ಲದೆ ಅರಿಶಿನ ಶಾಸ್ತ್ರದ ಸಮಾರಾಧನೆಯ ಸಂದರ್ಭದಲ್ಲಿ ಆದ ಅವಮಾನದಲ್ಲಿ ವಿಪ್ರದಾಸನ ಕೈವಾಡವಿಲ್ಲವೆಂಬ ಮಾತನ್ನು ಮಧುಸೂದನ ನಂಬಲಾರದೆ ಹೋದನು. ಮದುವೆಯ ಮರುದಿನ ನವಗೋಪಾಲ ಅವನೊಡನೆ "ಭಾವಾ, ಮದುವೆಯ ಮನೆಯಲ್ಲಿ ನಿಮ್ಮ ಹಾಟ್‌ಖೋಲಾ*ದ ಮುಂಡಿಯಿಂದ ನಡೆಮುಡಿಯನ್ನು ಆಮದು ಮಾಡಿದ್ದೆಯಲ್ಲ, ಅದರ ಸುದ್ದಿ ಕೂಡ

* ಹಾಟ್‌ಖೋಲಾ–ಸಂತೆಯ ಮಾಳ.

ಅಣ್ಣನಿಗೆ ಹೇಳಬೇಡ. ಅವರು ಈ ವಿಷಯವಾಗಿ ಏನೂ ಅರಿಯರು. ಅವರ ಮೈಯೂ ಬಹಳ ಕೆಟ್ಟಿದೆ" ಎಂದು ಹೇಳಿದ್ದನು.

ಉಂಗುರದ ಮಾತು ಅಂತೂ ಅಲ್ಲಿಗೆ ನಿಂತಿತು. ಆದರೆ ಮನಸ್ಸಿನಲ್ಲಿ ಅದರ ನೆನಪಿತ್ತು.

ಇತ್ತ ರೂಪಮಾತ್ರವಲ್ಲದೆ ಬೇರೊಂದು ಕಾರಣದಿಂದಲೂ ಕುಮು ವಿನ ಧಾರಣೆ ಏರಿಬಿಟ್ಟಿತ್ತು. ನೂರ್‌ನಗರದಲ್ಲಿ ಇದ್ದ ವೇಳೆಯಲ್ಲೇ ಮದುವೆಯ ದಿನವೇ ಈ ಬಾರಿ ಸೀಮೆ ಅಗಸೆಯ ಬೀಜದ ಬೆಲೆ ಏರಿ ಹೆಚ್ಚು ಕಡಮೆ ಇಪ್ಪತ್ತು ಲಕ್ಷದಷ್ಟು ಲಾಭ ಬಂದಿದೆಯೆಂದು ಮಧುಸೂದ ನನಿಗೆ ತಂತಿ ಬಂದಿತ್ತು. ಇದು ಹೊಸ ಹೆಂಡತಿಯ ಅದೃಷ್ಟ ಫಲ ಎಂಬುದರಲ್ಲಿ ಸಂದೇಹವೇ ಇರಲಿಲ್ಲ. ಹೆಣ್ಣಿನ ಅದೃಷ್ಟದಿಂದ ಹೊನ್ನು ದೊರಕಿತು. ಅದಕ್ಕೆ ಪ್ರಮಾಣ ಪ್ರತ್ಯಕ್ಷವಿದೆ. ಅದರಿಂದಲೇ ಕುಮು ವನ್ನು ಪಕ್ಕದಲ್ಲಿ ಕೂರಿಸಿಕೊಂಡು ಗಾಡಿಯಲ್ಲಿದ್ದಾಗ ಒಳಗೊಳಗೆ ಭಾರೀ ಲಾಭದ ಜೀವಂತವಾದ ವಿಧಿದತ್ತ ಶಾಸನವನ್ನು ಮನೆಗೆ ತೆಗೆದುಕೊಂಡು ಹೋಗುತ್ತಿರುವೆನೆಂದು ಅವನಿಗೆ ನೆಮ್ಮದಿಯಿತ್ತು. ಅದಿಲ್ಲದಿದ್ದರೆ ಅಂದಿನ ಬ್ರೂಹಾಂ ರಥೋತ್ಸವದ ಹಿಂದಕ್ಕೆ ಬರುವ ಉತ್ಸವ ಅವಘಡಕ್ಕೆ ತುತ್ತಾಗುತ್ತಿತ್ತು.

೨೧

ರಾಜಾ ಎಂಬ ಬಿರುದು ಸಿಕ್ಕಿದ ಅನಂತರದಿಂದ ಕಲ್ಕತ್ತೆಯ ಘೋಷಾಲರ ಮನೆಯ ಹೆಬ್ಬಾಗಿಲಲ್ಲಿ "ಮಧುಪ್ರಾಸಾದ" ಎಂದು ಹೆಸರು ಕೆತ್ತಿತ್ತು. ಆ ಪ್ರಾಸಾದದ ಕಬ್ಬಿಣದ ಗೇಟಿನ ಒಂದು ಪಕ್ಕದಲ್ಲಿ ಇಂದು ನವಬತ್ ಆಗುತ್ತಿತ್ತು. ತೋಟದಲ್ಲಿ ಡೇರೆಯೊಂದರಲ್ಲಿ ಬ್ಯಾಂಡ್ ಬಾರಿ ಸುತ್ತಿದ್ದರು. ಗೇಟಿನ ತಲೆಯ ಮೇಲೆ ಅರ್ಧ ಚಂದ್ರಾಕಾರದಲ್ಲಿ ಗ್ಯಾಸ್ ದೀಪದ ಅಕ್ಷರಗಳಲ್ಲಿ 'ಪ್ರಜಾಪತಯೇನಮಃ' ಎಂದು ಬರೆದಿತ್ತು. ಸಂಜೆಯ ಹೊತ್ತಿನಲ್ಲಿ ಬೆಳಕಿನ ಉರಿಯಿಂದ ಈ ಬರಹ ಹೊಳೆಯುತ್ತಿತ್ತು. ಗೇಟಿ ನಿಂದ ಮನೆಯವರೆಗೆ ಹೋಗಿದ್ದ ಜಲ್ಲಿ ಹಾಸಿದ ಹಾದಿಯ ಇಕ್ಕೆಲದಲ್ಲಿ ದೇವಧಾರು ಪತ್ರ ಮತ್ತು ಚಂಡೆ ಹೂವಿನ ಮಾಲೆಯಿಂದ ಸಿಂಗರಿಸಿದ್ದರು.

ಮನೆಯ ಮೊದಲಂತಸ್ತಿಗೆ ಹೋಗುವ ಮೆಟ್ಟಲಿಗೆ ಕೆಂಪು ಶಾಲುವೆಯ ನಡೆಮುಡಿ ಹಾಸಿತ್ತು. ನೆಂಟರಿಷ್ಟರ ಗುಂಪಿನ ನಡುವೆ ಹಾಯ್ದು ವಧೂವರರ ಗಾಡಿ ವರಾಂಡದಲ್ಲಿ ಬಂದು ನಿಂತಿತು. ಶಂಖ, ಉಲುಧ್ವನಿ, ನಗಾರಿ, ಢೋಲು, ಕಂಚಿನ ನಪಬತ್ತು, ಬ್ಯಾಂಡು ಎಲ್ಲ ಒಂದೇಉಸುರಿನಲ್ಲಿ ಬಾಜಿಸತೊಡಗಿದವು. ಹತ್ತು ಹದಿನೈದು ಗೂಡ್ಸ್ ಗಾಡಿಗಳು ಒಂದೇ ಕಡೆ ಢಿಕ್ಕಿ ಹೊಡೆದಂತೆ ಭಾಸವಾಯಿತು. ಮಧುಸೂದನನ ದೂರದ ನೆಂಟಳೊಬ್ಬಳು ಹಣ್ಣು ಹಣ್ಣು ಮುದುಕಿ ಬೈತಲೆಯಲ್ಲಿ ಎಷ್ಟಗಲ ಎಡೆಯಿತ್ತೋ ಅಷ್ಟಗಲ ಸಿಂಧೂರ ಹಚ್ಚಿಕೊಂಡು ಅಗಲವಾದ ಕೆಂಪಂಚಿನ ಸೀರೆ ಉಟ್ಟು ದಪ್ಪವಾಗಿದ್ದ ಕೈಗಳಲ್ಲಿ ದಪ್ಪ ಚಿನ್ನದ ಬಳೆ ಮತ್ತು ಶಂಖದ ಬಳೆಗಳನ್ನು ತೊಟ್ಟು ಬೆಳ್ಳಿಯ ಬಿಂದಿಗೆಯಲ್ಲಿ ನೀರು ತಂದು ವಧುವಿನ ಕಾಲ ಮೇಲೆ ಚಿಮುಕಿಸಿ ಸೆರಗಿನಿಂದ ಒರಸಿದಳು. ಕೈಗೆ ಕಬ್ಬಿಣದ ಬಳೆ ತೊಡಿಸಿದಳು. ವಧುವಿನ ಬಾಯಲ್ಲಿ ಸ್ವಲ್ಪ ಜೇನು ಹಾಕಿ "ಆಹಾ, ಇಷ್ಟು ದಿನಗಳ ಅನಂತರ ನಮ್ಮ ನೀಲಗಗನದಲ್ಲಿ ಪೂರ್ಣ ಚಂದ್ರ ಉದಿಸಿದನು. ನೀಲ ಸರೋವರದಲ್ಲಿ ಸ್ವರ್ಣ ಕಮಲ ಅರಳಿತು" ಎಂದಳು. ವಧೂವರರು ಗಾಡಿಯಿಂದ ಇಳಿದರು. ಯುವಕ ಅಭ್ಯಾಗತರ ದೃಷ್ಟಿ ಈರ್ಷ್ಯೆಯಿಂದ ತುಂಬಿತ್ತು. ಒಬ್ಬ ಹೇಳಿದನು–"ದೈತ್ಯ, ಸ್ವರ್ಗವನ್ನು ಸೂರೆಮಾಡಿ ಭಂಗಾರದ ಸಂಕೋಲೆ ಹಾಕಿ ಅಪ್ಸರೆಯನ್ನು ಕರೆತಂದಿದ್ದಾನಯ್ಯಾ". ಮತ್ತೊಬ್ಬ–"ಹಿಂದಿನ ಕಾಲದಲ್ಲಿ ಇಂತಹ ಹೆಣ್ಣಿಗಾಗಿ ರಾಜರಾಜರಲ್ಲಿ ಯುದ್ಧವಾಗುತ್ತಿತ್ತು. ಈ ಕಾಲದಲ್ಲಿ ಸೀಮೆ ಅಗಸೆ ರಫ್ತಿನ ಹಣದಿಂದಲೇ ಕಾರ್ಯ ಸಿದ್ಧಿಸುವುದು. ಕಲಿಯುಗದಲ್ಲಿ ದೇವತೆಗಳು ಅರಸಿಕರು. ಅದೃಷ್ಟಚಕ್ರದ ಎಲ್ಲ ಗ್ರಹ ನಕ್ಷತ್ರಗಳೂ ವೈಶ್ಯವರ್ಣದವು" ಎಂದನು.

ಅನಂತರ ಮನೆ ತುಂಬಿಸಿಕೊಳ್ಳುವುದು, ಹೆಂಗಸರ ಆಚಾರ ಮೊದಲಾದುವು ಮುಗಿಯುವುವರೊಳಗೆ ಸಂಜೆಯಾಗಲು, ಆಗ ಕಾಳರಾತ್ರಿಯ ಆರಂಭದಲ್ಲಿ ಕ್ರಿಯಾ ಕಲಾಪ ಸಾಂಗವಾಗಿ ಮುಗಿಯಿತು

ಒಬ್ಬಳೇ ಒಬ್ಬ ಅಕ್ಕನ ಮದುವೆ ಕುಮುವಿಗೆ ಸ್ಪಷ್ಟವಾಗಿ ನೆನಪಿತ್ತು. ಯೌವನಾರಂಭಕ್ಕೆ ಹಿಂದಿನಿಂದಲೇ ಅವಳು ಕಲ್ಕತ್ತೆಯಲ್ಲಿ ಅಣ್ಣನ

ನಿರ್ಮಲಸ್ನೇಹದ ನೆರಳಲ್ಲಿದ್ದಳು. ಬಾಲ್ಯದಲ್ಲಿ ಗಂಡನನ್ನು ಬಯಸಿ
ಅವಳು ಶಿವಪೂಜೆ ಮಾಡುತ್ತಿದ್ದಾಗ ಗಂಡನ ಧ್ಯಾನದಲ್ಲಿ ಆ ಮಹಾ
ತಪಸ್ವೀ ರಜತಗಿರಿಯಲ್ಲಿನ ಶಿವನನ್ನೇ ಕಾಣುತ್ತಿದ್ದಳು. ಸಾಧ್ವೀ ನಾರಿಯ
ಆದರ್ಶವಾಗಿ ಅವಳು ತಮ್ಮ ತಾಯಿಯನ್ನು ಅರಿತಿದ್ದಳು. ಅದೆಂತಹ
ಸ್ನಿಗ್ಧ ಶಾಂತ ಕಮನೀಯತೆ. ಅದೆಷ್ಟು ಧೈರ್ಯ, ಎಷ್ಟು ದುಃಖ, ಎಷ್ಟು
ದೇವರ ಪೂಜೆ, ಮಂಗಲಾಚರಣೆ, ಬೇಸರವಿಲ್ಲದ ಸೇವೆ. ಅತ್ತ ಆಕೆಯ
ಗಂಡನ ನಡವಳಿಕೆಯಲ್ಲಿ ಮತ್ತು ಆಚಾರದಲ್ಲಿ ತಪ್ಪುದಾರಿ ಇತ್ತು.
ಹಾಗಿದ್ದೂ ಆ ಬಾಳುವೆಯಲ್ಲಿ ದೊಡ್ಡ ಉದಾರತೆ. ಅದರ ನಡುವೆ ಹೀನ
ತನ ಕಪಟ ಲೇಶಮಾತ್ರವೂ ಇರಲಿಲ್ಲ. ಗೌರವದ ಅರಿವು ಎನ್ನುವುದು
ಪ್ರಾಚೀನಕಾಲದ ಪೌರಾಣಿಕ ಆದರ್ಶದ್ದು. ಅವರ ಜೀವನದಲ್ಲಿ ಪ್ರತಿ
ನಿತ್ಯ ಪ್ರಾಣಕ್ಕಿಂತ ಮಾನ ಹಿರಿಯದು. ಅರ್ಥಕ್ಕಿಂತ ಐಶ್ವರ್ಯ ಹೆಚ್ಚಿ
ನದು ಎಂದು ಪ್ರಮಾಣವಾಗುತ್ತಿತ್ತು. ಆತನೂ ಅವರ ಜೊತೆಯ ಜನರು
ದೊಡ್ಡ ಸ್ವಭಾವದ ಮನುಷ್ಯರು. ತಮಗೆ ನಷ್ಟಮಾಡಿಕೊಂಡು ಮರ್ಯಾ
ದೆಯನ್ನು ಮುಕ್ಕಿಲ್ಲದಂತೆ ಕಾಯ್ದುಕೊಳ್ಳುವ ವಾಡಿಕೆ ಅವರದು. ಕೊರೆ
ಯಾಗದೆ ಶೇಖರಿಸಿದ ಹಣದ ಅಹಂಕಾರದ ಪ್ರಭಾವವಲ್ಲ.

ಕುಮುವಿನ ಎಡಗಣ್ಣು ಅದುರಿದಂದು ಅವಳು ತನ್ನ ಎಲ್ಲ ಭಕ್ತಿಯೊ
ಡನೆ ಆತ್ಮೋತ್ಸರ್ಗದ ಪೂರ್ಣಸಂಕಲ್ಪವನ್ನು ಮಾಡಿ ಸಿದ್ಧಳಾಗಿದ್ದಳು.
ಎಲ್ಲಿಯಾದರೂ ಯಾವ ಬಗೆಯ ಬಾಧೆಯಾಗಲಿ ಅಥವಾ ಕೊರತೆಯಾಗಲಿ
ಘಟಿಸಬಹುದೆಂಬ ಮಾತು ಅವಳ ಕಲ್ಪನೆಯಲ್ಲೇ ಬರಲಿಲ್ಲ. ದಮ
ಯಂತಿ ಯಾವ ಬಗೆಯಲ್ಲಿ ವಿದರ್ಭರಾಜ ನಳನನ್ನೇ ವರಿಸಬೇಕಾಗುವು
ದೆಂದು ಅರಿತಿದ್ದಳು! ಅವಳ ಮನಸ್ಸಿನ ಒಳಗಡೆ ಖಂಡಿತವಾದ ಸುದ್ದಿ
ಬಂದು ಮುಟ್ಟಿತ್ತು. ಅಂತಹ ಖಂಡಿತವಾದ ಸುದ್ದಿ ಕುಮುವಿಗೇಕೆ
ಬರಲಿಲ್ಲ? ಮದುವೆಯ ಏರ್ಪಾಡೆಲ್ಲ ಸಿದ್ಧವಾಗಿತ್ತು, ರಾಜನೂ ಬಂದ,
ಆದರೆ ಮನದಲ್ಲಿ ಯಾರನ್ನು ಸ್ಪಷ್ಟವಾಗಿ ಕಂಡಿದ್ದಳೋ ಹೊರಗೆ ಆತ
ನನ್ನು ಕಂಡಳೆಲ್ಲಿ? ರೂಪವೂ ಬಾಧಿಸುತ್ತಿರಲಿಲ್ಲ, ವಯಸ್ಸೂ ಬಾಧಿಸು
ತ್ತಿರಲಿಲ್ಲ. ಆದರೆ ರಾಜ! ಆ ಸತ್ಯವಾದ ರಾಜ ಎಲ್ಲಿ?

ಅನಂತರ ಇಂದು, ಯಾವ ಅನುಷ್ಠಾನದ ಮೂಲಕ ಕುಮುವನ್ನು ತನ್ನ ಹೊಸ ಸಂಸಾರ ಕರೆಯಿತೋ ಅದರಲ್ಲಿ ಈ ನವವಧು ಆಕಾಶದ ಸಪ್ತ ಋಷಿಗಳ ಆಶೀರ್ವಾದವನ್ನು ಕೇಳಬಹುದಾದಂಥಾ ಆ ವಜ್ರ ಗಂಭೀರ ಮಂಗಲ ಧ್ವನಿ ಬಾಜಿಸಲಿಲ್ಲವೇಕೆ? ಎಲ್ಲ ಅನುಷ್ಠಾನವನ್ನೂ ಪರಿಪೂರ್ಣಗೊಳಿಸಿ "ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ" ಎನ್ನುವಂತಹ ವಂದನಾಗಾನ ಉದಾತ್ತ ಸ್ವರದಲ್ಲಿ ಧ್ವನಿಸಲಿಲ್ಲವೇಕೆ? ಅದೇ "ಜಗತಃ ಪಿತರೌ" ಇವರಿಬ್ಬರನ್ನೂ ವಾಕ್ಯ ಮತ್ತು ಅರ್ಥಗಳಂತೆ ಯಾಕಾಗಿ ಒಂದುಗೂಡಿಸಿಲ್ಲ.

೨೨

ಮಧುಸೂದನ ಕಲ್ಕತ್ತೆಯಲ್ಲಿ ವಾಸಿಸಲು ಬಂದಾಗ ಮೊದಲು ಹಳೆಯ ಮನೆಯೊಂದನ್ನು ಕೊಂಡುಕೊಂಡಿದ್ದನು. ಆ ತೊಟ್ಟಿಯ ಮನೆಯೇ ಈಗ ಅಂತಃಪುರವಾಗಿತ್ತು. ಅನಂತರ ಅದರ ಇದಿರಿನಲ್ಲೇ ಈಗಿನ ಕಾಲದ ರೀತಿಯಲ್ಲಿ ಒಂದು ದೊಡ್ಡ ಹೊಸ ಮನೆಯನ್ನು ಅದಕ್ಕೆ ಸೇರಿದ ಹಾಗೆ ಕಟ್ಟಿಸಿದನು. ಅದೇ ಅವನ ಬೈಠಕ್ ಖಾನೆಯ ಮನೆ. ಈ ಎರಡು ಮನೆಗಳೂ ಒಂದಕ್ಕೊಂದು ಸೇರಿದ್ದರೂ ಇವು ಸಂಪೂರ್ಣ ವಾಗಿ ಬೇರೆ ಬೇರೆ ಜಾತಿಯವು. ಹೊರ ಮನೆಯಲ್ಲಿ ಎಲ್ಲೆಡೆಯೂ ಅಮೃತ ಶಿಲೆ ಹಾಸಿದ ನೆಲ, ಅದರ ಮೇಲೆ ವಿಲಾಯತಿ ರತ್ನಗಂಬಳಿ. ಗೋಡೆಗಳಿಗೆ ಚಿತ್ರಗಳ ಕಾಗದ ಅಂಟಿಸಿತ್ತು. ಅದರ ಮೇಲೆ ನಾನಾ ತರಹದ ಚಿತ್ರಗಳನ್ನು ನೇತುಹಾಕಿದ್ದರು. ಕೆಲವು "ಎನ್‌ಗ್ರೇವಿಂಗ್"; ಕೆಲವು "ಓಲಿಯೋ ಗ್ರಾಫ್"; ಕೆಲವು "ಆಯಿಲ್ ಪೆಯಿಂಟಿಂಗ್". ಅವುಗಳ ವಿಷಯಗಳಾದರೂ ಬಗೆಬಗೆಯವು. ಜಿಂಕೆಯನ್ನು ಓಡಿಸಿ ಕೊಂಡು ಹೋಗುತ್ತಿರುವ ಬೇಟೆಯ ನಾಯಿಗಳು ಅಥವಾ ಡರ್ಬಿಯ ಕುದುರೆ ಜೂಜಿನಲ್ಲಿ ಗೆದ್ದಿದ್ದ ಪ್ರಸಿದ್ಧವಾದ ಕುದುರೆಗಳು, ವಿದೇಶೀ ಸೃಷ್ಟಿ ಸೌಂದರ್ಯ, ಅಥವಾ ಸ್ನಾನಮಾಡುತ್ತಿರುವ ಬರಿ ಮೈಯ ಹೆಂಗಸರು. ಇವಲ್ಲದೆ ಗೋಡೆಯಲ್ಲಿ ಅಲ್ಲಲ್ಲಿ ಚೀಣಾ ಪಾತ್ರೆಗಳು, ಮೊರಾದಾಬಾದಿನ ಹಿತ್ತಾಳೆ ತಟ್ಟೆ, ಜಪಾನೀ ಬೀಸಣಿಗೆ, ಟಿಬೆಟ್ಟಿನ ಚಾಮರ ಮೊದಲಾದ ಅಸಂಗತ ಪದಾರ್ಥಗಳು ಅಯುಕ್ತ ಸ್ಥಾನದಲ್ಲಿ ಅವ್ಯವಸ್ಥಿತವಾಗಿ ಶೇಖರ

ವಾಗಿದ್ದುವು. ಈ ಎಲ್ಲ ಬಗೆಯ ಅಲಂಕಾರವನ್ನೂ ಆರಿಸುವುದು, ಕೊಳ್ಳು ವುದು ಮತ್ತು ಅಣಿಯಾಗಿ ಇಡುವ ಹೊಣೆ ಮಧುಸೂದನನ ಆಂಗ್ಲ ಅಸಿಸ್ಟೆಂಟರ ಮೇಲೆ ಬಿದ್ದಿತ್ತು. ಇದಲ್ಲದೆ ಮಖಮಲ್ಲಿನ ಅಥವಾ ರೇಷ್ಮೆಯ ಗೌಸು ಹಾಕಿದ ಸೋಫಾ ಕುರ್ಚಿಗಳು ನೂರಾರು. ಗಾಜಿನ ಅಲ್ಮಾರಿಯಲ್ಲಿ ಅತ್ಯಾಡಂಬರದ ರಟ್ಟುಗಳುಳ್ಳ ಇಂಗ್ಲಿಷ್ ಪುಸ್ತಕಗಳು—ಧೂಳು ಕೊಡ ಹುವ ಜೇಹಾರಿಯಲ್ಲದೆ ಮತ್ತಾರೂ ಅವನ್ನು ತಿರುವಿಹಾಕುವರಿಲ್ಲ. ಟೀ ಪಾಯಿಯ ಮೇಲೆ ಆಲ್‌ಬಮ್‌ಗಳಿದ್ದುವು. ಅವುಗಳಲ್ಲಿ ಒಂದೆರಡರಲ್ಲಿ ಕುಟುಂಬದ ಜನರ ಚಿತ್ರಗಳಿದ್ದರೆ ಕೆಲವಲ್ಲಿ ವಿದೇಶೀ ನಟಿಯರ ಚಿತ್ರ ಗಳಿದ್ದುವು.

ಅಂತಃಪುರದಲ್ಲಿ ಕೆಳ ಅಂತಸ್ತಿನ ಕೋಣೆಗಳು ಕತ್ತಲೆ ಕವಿದು, ತೇವ, ಹೊಗೆಯ ಕರೆ ಇವುಗಳಿಂದ ಕಪ್ಪಾಗಿದ್ದುವು. ಅಂಗಳದ ತುಂಬ ಕಸ. ಅಲ್ಲಿ ನೀರಿನ ನಲ್ಲಿ, ಪಾತ್ರೆ ಉಜ್ಜುವುದು, ಬಟ್ಟೆ ಒಗೆಯುವುದು ಇವುಗಳು ಸದಾ ನಡೆಯುತ್ತಿತ್ತು. ವ್ಯವಹಾರದಲ್ಲಿ ಇಲ್ಲದಿದ್ದರೂ ನಲ್ಲಿಯ ನೀರು ಹರಿ ಯುತ್ತಲೇ ಇರುತ್ತಿತ್ತು. ಮೇಲ್ಮಹಡಿಯ ವರಾಂಡದಿಂದ ಹೆಂಗಸರ ಒದ್ದೆ ಬಟ್ಟೆಗಳು ಜೋಲಾಡುತ್ತಿದ್ದುವು. ವರಾಂಡದ ಗೋಡೆಗಳಲ್ಲಿ ಎಲ್ಲಂದರೆ ಅಲ್ಲಿ ತಾಂಬೂಲದ ಉಗುಳು ಮತ್ತು ನಾನಾ ಬಗೆಯ ಕೊಳೆಯ ಅಕ್ಷಯವಾದ ನೆನಪಿನ ಚಿಹ್ನೆಗಳು. ಅಂಗಳದ ಪಡುವಲ ಜಗುಲಿಯ ಹಿಂದೆ ಅಡಿಗೆಯ ಶಾಲೆ. ಅಲ್ಲಿಂದ ಅಡಿಗೆಯ ಸುಗಂಧ ಮತ್ತು ಕಲ್ಲಿದ್ದಲ ಹೊಗೆ ಮೇಲಿನ ಕೋಣೆಗಳಿಗೆ ಸದಾ ಹರಡಿರುತ್ತಿತ್ತು. ಅಡಿಗೆ ಶಾಲೆಯ ಹೊರಗೆ ಗೋಡೆಯ ಮಗ್ಗುಲಲ್ಲಿ ಸ್ವಲ್ಪ ಜಮೀನು. ಅದರ ಒಂದು ಮೂಲೆಯಲ್ಲಿ ಕಲ್ಲಿದ್ದಲ ಚೂರು, ಒಲೆಯ ಬೂದಿ, ಒಡೆದ ಮಡಕೆಗಳು, ಹರಕಲು ಕುಕ್ಕೆ, ಜೀರ್ಣವಾದ ಜರಡಿಗಳು ರಾಶಿರಾಶಿಯಾಗಿದ್ದುವು. ಇನ್ನೊಂದು ಭಾಗದಲ್ಲಿ ಒಂದೆರಡು ಹಸುಗಳು ಮತ್ತು ಕರುಗಳನ್ನು ಕಟ್ಟಿ ದ್ದರು. ಅವುಗಳ ಹುಲ್ಲು ಮತ್ತು ತೊಪ್ಪೆ ಶೇಖರವಾಗಿತ್ತು. ಗೋಡೆಯ ಎಲ್ಲೆಡೆಯಲ್ಲೂ ಬೆರಣಿಯ ಚಕ್ರಾಕಾರದ ಗುರುತು. ಒಂದು ಅರುಗಿನಲ್ಲಿ ಒಂಟಿಯಾದ ಬೇವಿನ ಗಿಡವೊಂದು. ಅದರ ಬುಡಕ್ಕೆ ದನ ಕಟ್ಟಿ ಕಟ್ಟಿ ತೊಗಟೆ ಸುಲಿದುಹೋಗಿತ್ತು. ಮತ್ತೆ ಒಂದೇ ಸಮನೆ ಕೋಲಿನಿಂದ

ಬಡಿದು ಬಡಿದು ಅದರ ಎಲೆಗಳನ್ನು ಕೊಯ್ದುಕೊಂಡು ಗಿಡವನ್ನು ಬೋಳು ಮಾಡಿದ್ದರು. ಅಂತಃಪುರದಲ್ಲಿ ಇದಿಷ್ಟೇ ಖಾಲಿ ಜಾಗ; ಉಳಿದ ಜಾಗವೆಲ್ಲ ಹೊರಗಡೆ. ಅದು ಲತಾ ಮಂಟಪದಿಂದ, ವಿಚಿತ್ರವಾದ ಹೂಗಳ ಕುಂಡ ಗಳಿಂದ, ಗರಿಕೆ ಹುಲ್ಲಿನ ಮೈದಾನದಿಂದ, ಕೆಮ್ಮಣ್ಣು ಅಥವಾ ಗಾರೆ ಹಾಕಿದ ಹಾದಿಗಳಿಂದ, ಕಲ್ಲಿನ ಮೂರ್ತಿಗಳು ಮತ್ತು ಕಬ್ಬಿಣದ ಬೆಂಚು ಗಳಿಂದ ಅಲಂಕರಿಸಿತ್ತು.

ಒಳಮನೆಯಲ್ಲಿ ಮೂರನೆ ಮಹಡಿಯಲ್ಲಿ ಕುಮುದಿನಿಯು ಮಲಗುವ ಮನೆ. ಬೀಟೆ ಮರದಿಂದ ಮಾಡಿದ ದೊಡ್ಡ ಮಂಚ; ಚಪ್ಪರದ ಮೇಲೆ ಬಲೆಯ ಸೊಳ್ಳೇ ಪರದೆ; ಅದಕ್ಕೆ ರೇಷ್ಮೆಯ ಅಂಚು ಕಟ್ಟಿತ್ತು. ಹಾಸಿ ಗೆಯ ಕಾಲು ದೆಸೆಯಲ್ಲಿ ಬೆತ್ತಲೆ ಹೆಂಗಸೊಬ್ಬಳ ಚಿತ್ರ. ಎದೆಯನ್ನು ಎರಡು ಕೈಗಳಿಂದಲೂ ಮುಚ್ಚಿಕೊಂಡು ನಾಚಿಕೆಯ ಸೋಗು ತೋರುತ್ತಿ ದ್ದಳು. ತಲೆದೆಸೆಯಲ್ಲಿ ಮಧುಸೂದನನ ಸ್ವಂತದ ತೈಲದ ಚಿತ್ರ. ಅದರಲ್ಲಿ ಅವನು ಹೊದ್ದಿದ್ದ ಕಾಶ್ಮೀರಿ ಶಾಲಿನ ಮೇಲೆ ಮಾಡಿಸಿದ್ದ ಚಮಕಿ ಕೆಲಸವೇ ಎಲ್ಲಕ್ಕಿಂತ ಹೆಚ್ಚಾಗಿ ಹೊಳೆಯುತ್ತಿತ್ತು. ಒಂದು ಪಕ್ಕದಲ್ಲಿ ಗೋಡೆಯಲ್ಲಿ ಬಟ್ಟೆಗಳನ್ನಿಡುವ ಮಾಡ. ಅದರ ಮೇಲ್ಗಡೆ ಕನ್ನಡಿ. ಕನ್ನಡಿಯ ಇಕ್ಕೆಲದಲ್ಲಿ ಎರಡು ಪಿಂಗಾಣಿಯ ಶಾಮಾದಾನಿ. (ಊದು ಬತ್ತಿ ಸಿಕ್ಕಿಸುವ ಪಾತ್ರೆ.) ಇದಿರಿನಲ್ಲಿ ಪಿಂಗಾಣಿ ತಟ್ಟೆಯಲ್ಲಿ ಪೌಡರ್ ಡಬ್ಬಿ, ಬೆಳ್ಳಿ ಕಟ್ಟು ಹಾಕಿದ ಬಾಚಣಿಗೆ, ಮೂರು ನಾಲ್ಕು ಬಗೆಯ "ಎಸೆನ್ಸ್", ಎರಚುವ ಪಿಚಕಾರಿ ಮತ್ತು ಇನ್ನೂ ನಾನಾ ತರಹದ ಶೃಂಗಾರ ಸಾಧನಗಳು—ವಿಲಾಯಿತಿ ಅಸಿಸ್ಟೆಂಟು ಕೊಂಡು ತಂದಿಟ್ಟವು. ನಾನಾ ಶಾಖೆಗಳುಳ್ಳ ಗುಲಾಬಿ ಬಣ್ಣದ ಗಾಜಿನ ಫ್ಲೂಲ್‌ದಾನಿಯಲ್ಲಿ ಹೂವಿನ ಗೊಂಚಲು. ಇನ್ನೊಂದು ಕಡೆ ಬರೆಯುವ ಮೇಜು. ಅದರ ಮೇಲೆ ಬೆಲೆ ಬಾಳುವ ಸ್ಫಟಿಕದ ಮಸಿ ಕುಡಿಕೆ, ಲೇಖಣಿ ಮತ್ತು ಕಾಗದ ಗಳು. ಅಲ್ಲಲ್ಲಿ ದಪ್ಪ ಮೆತ್ತೆಗಳುಳ್ಳ ಸೋಫಾ ಮತ್ತು ಕೆದರಾಗಳು. ಅಲ್ಲಲ್ಲಿ ಟೀ ಪಾಯಿಗಳು. ಅದರ ಮೇಲೆ ಟೀ ಕುಡಿಯಲೂಬಹುದು; ಇಸ್ಪೀಟು ಆಡಲೂಬಹುದು. ಹೊಸ ಮಹಾರಾಣಿಗೆ ಉಪಯುಕ್ತವಾದ ಶಯನ ಗೃಹ ಯಾವ ರೀತಿಯಲ್ಲಿ ಇರಬೇಕಾದುದು ಆವಶ್ಯಕ ಎಂಬುದನ್ನು

ಮಧುಸೂದನ ಬಹಳವಾಗಿ ಆಲೋಚಿಸಿ ನೋಡಿದ್ದನು. ಇದು ಹೇಗಾಯಿತೆಂದರೆ ಒಳಮನೆಯ ಮೇಲ್ಮಹಡಿಯ ಈ ಕೋಣೆ, ಕೊಳಕು ಬೊಂತೆಯನ್ನು ಮೈಮೇಲೆ ತೊಟ್ಟುಕೊಂಡ ಭಿಕ್ಷುಕನ ತಲೆಯ ಮೇಲೆ ಜರಿ ಜವಾಹರಿ ಹಚ್ಚಿದ ಪಗಡೆ ಇಟ್ಟಂತಿತ್ತು.

ಕೊನೆಗೆ ಒಂದು ಹೊತ್ತಿಗೆ ಗದ್ದಲ, ಕೋಲಾಹಲಗಳ ಹುಚ್ಚು ಹೊಳೆ ಕವಿದಿದ್ದ ಹಗಲನ್ನು ದಾಟಿ ರಾತ್ರಿಯಲ್ಲಿ ಕುಮು ಈ ಕೋಣೆಗೆ ಬಂದು ಸೇರಿದಳು. ಅವಳನ್ನು ಆ ಮೋತಿಯ ತಾಯಿ ಕರೆತಂದಳು. ಅವಳು ಇವತ್ತು ರಾತ್ರಿ ಇವಳೊಡನೆ ಮಲಗುವಂತೆ ನಿಶ್ಚಯವಾಗಿತ್ತು. ಇನ್ನೂ ಒಂದು ಹಿಂಡು ಹೆಂಗಸರು ಸಂಗಡ ಬಂದಿದ್ದರು. ಅವರ ಕುತೂಹಲ, ಆಮೋದಗಳ ಮತ್ತು ಇಳಿಯುಬಯಸಲಿಲ್ಲ. ಮೋತಿಯ ತಾಯಿ ಅವರುಗಳನ್ನು ಕಳಿಸಿಬಿಟ್ಟಳು. ಕೊಠಡಿಯ ಒಳಕ್ಕೆ ಬಂದೊಡನೆಯೇ ಅವಳು ಒಂದು ಕೈಯಿಂದ ಇವಳ ಗಲ್ಲ ಹಿಡಿದುಕೊಂಡು "ನಾನು ಸ್ವಲ್ಪ ಹೊತ್ತು ಆ ಪಕ್ಕದ ಕೋಣೆಗೆ ಹೋಗುತ್ತೇನೆ. ನೀನು ಸ್ವಲ್ಪ ಅತ್ತುಬಿಡು. ಕಣ್ಣೀರು ಎದೆಯವರೆಗೆ ತುಂಬಿ ತುಳುಕುತ್ತಿದೆ" ಎಂದು ಹೇಳಿ ಹೊರಟುಹೋದಳು.

ಕುಮು ಚೌಕಿಯ ಮೇಲೆ ಧೊಪ್ಪನೆ ಕುಳಿತಳು. ಅಳುವುದು ಆಮೇಲೆ ಆಗಲಿ. ಈಗ ಅವಳಿಗೆ ಅತ್ಯಂತ ಆವಶ್ಯಕವಾಗಿರುವುದು ತನ್ನನ್ನು ಸರಿಪಡಿಸಿಕೊಳ್ಳುವುದು. ಒಳಗೊಳಗೆ ಎಲ್ಲಕ್ಕೂ ಮಿಗಿಲಾಗಿ ಅವಳನ್ನು ಪೀಡಿಸುತ್ತಿದ್ದ ವ್ಯಥೆ ತನ್ನಲ್ಲಿ ಅವಮಾನವನ್ನುಂಟುಮಾಡಿತ್ತು. ಇಷ್ಟು ದಿನಗಳಿಂದ ಅವಳು ಏನು ಸಂಕಲ್ಪ ಮಾಡಿದ್ದಳೋ ಅದಕ್ಕೆ ವಿರುದ್ಧವಾಗಿ ಅವಳ ದಂಗೆಕೋರ ಮನಸ್ಸು ಸಾಗಿತ್ತು. ಆ ಮನಸ್ಸನ್ನು ಹತೋಟಿಗೆ ತರಲು ಸ್ವಲ್ಪವೂ ಅವಕಾಶ ಸಿಕ್ಕಿರಲಿಲ್ಲ. "ದೇವರೇ, ಶಕ್ತಿ ಕೊಡು, ನನ್ನ ಬಾಳುವೆಯನ್ನು ನೀರುಬಿಡಬೇಡ. ನಾನು ನಿನ್ನ ದಾಸಿ. ನನ್ನನ್ನು ಜಯಶಾಲಿಯಾಗಿಸು. ಆ ಜಯ ನಿನ್ನದು" ಎಂದು ಬೇಡಿಕೊಂಡಳು.

ಮಧ್ಯವಯಸ್ಸಿನ, ಗುಂಡು ಗುಂಡಾದ ಮೈಯುಳ್ಳ ಕಪ್ಪು ಬಣ್ಣದ ಸುಂದರಿಯಾದ ವಿಧವೆಯೊಬ್ಬಳು ಕೋಣೆಯೊಳಗೆ ಕಾಲಿಟ್ಟವಳೇ—

"ಮೋತಿಯ ತಾಯಿ ನಿನಗೆ ಸ್ವಲ್ಪ ಬಿಡುವು ಕೊಟ್ಟಿರುವಳು. ಆ ಸಂಧಿಯಲ್ಲಿ ನಾನು ಬಂದಿರುವೆನು. ಯಾರನ್ನೂ ಹತ್ತಿರ ಸುಳಿಯಬಿಡಳು ಬೇಲಿಯಲ್ಲಿ ನಿನ್ನನ್ನು ತಡೆದುಬಿಡುತ್ತಾಳೆ. ಅವಳ ಬೇಲಿ ಕತ್ತರಿಸಿ ನಿನ್ನನ್ನು ಕದ್ದೊಯ್ಯಲು ಕನ್ನಗತ್ರಿ ತೆಗೆದುಕೊಂಡು ತಿರುಗುತ್ತಿದ್ದೇನೆ. ನಾನು ನಿನ್ನ ಓರಗಿತ್ತಿ, ಶ್ಯಾಮಾ ಸುಂದರಿ. ನಿನ್ನ ಗಂಡ ನನ್ನ ಮೈದುನ. ನಾವುಗಳಂತೂ ಕೊನೆಯತನಕ ಜಮಾ ಖರ್ಚಿನ ಖಾತೆಯೇ ಅವನ ಹೆಂಡತಿಯಾಗಿರುವುದೆಂದು ಎಣಿಸಿದ್ದೆವು. ಆದರೆ ಆ ಖಾತೆಯಲ್ಲಿ ಮಂತ್ರವಿದೆಯಮ್ಮ! ಇಷ್ಟು ವಯಸ್ಸಿನಲ್ಲಿ ಇಂತಹ ಸುಂದರಿ ಆ ಖಾತೆಯ ಬಲದಿಂದಲೇ ಸಿಕ್ಕಿದಳು. ಈಗ ಜೀರ್ಣಿಸಿಕೊಳ್ಳುವುದಾದರೆ ಆದೀತು. ಅಲ್ಲಿ ಮಾತ್ರ ಖಾತೆಯ ಮಂತ್ರ ಸಾಗದು. ಸತ್ಯವಾಗಿ ಹೇಳು ಮತ್ತೆ, ನಮ್ಮ ಮುದಿ ಮೈದುನ ನಿನಗೆ ಒಪ್ಪಿಗೆಯಾಗಿದೆಯಲ್ಲವೆ?" ಎಂದಳು.

ಕುಮು ಮೂಕಳಾದಳು. ಏನು ಉತ್ತರ ಕೊಡಬೇಕು ಎನ್ನುವುದು ಹೊಳೆಯಲಿಲ್ಲ. ಶ್ಯಾಮಾ ಮಾತು ಮುಂದುವರಿಸಿದಳು—"ತಿಳಿಯಿತು, ಹಾಗೆ ಒಪ್ಪಿಗೆಯಾಗದಿದ್ದರೂ ಏನಾಯಿತು? ಏಳು ಸುತ್ತು ಸುತ್ತಿಯಾದ ಮೇಲೆ ಈಗ ಇಪ್ಪತ್ತೊಂದು ಸುತ್ತು ಹಿಂದಕ್ಕೆ ಸುತ್ತಿದರೂ ಉರಲು ಬಿಚ್ಚಿಕೊಳ್ಳುವುದೇನು?"

ಕುಮು "ಏನು ಮಾತನಾಡುವಿರಿ ಅಕ್ಕ" ಎಂದಳು.

ಶ್ಯಾಮಾ ಉತ್ತರ ಕೊಟ್ಟಳು—"ಮರೆಮಾಚದೆ ಮಾತನಾಡಿದರೆ ತಪ್ಪಾಯಿತೇನಮ್ಮ? ಮುಖ ನೋಡಿದರೆ ತಿಳಿಯಲಾರದೇನು? ಆದರಿಂದ ನಿನ್ನ ಮೇಲೆ ದೋಷ ಹೊರಿಸೆನು. ಆತ ನಮ್ಮವನು ಎಂದು ಕಣ್ಣು ಕುರುಡುಮಾಡಿ ಕುಳಿತಿರುವೆನೇನು? ಬಹು ಕಠಿಣವಾದ ಕೈಗೆ ಸಿಕ್ಕಿಬಿದ್ದಿರುವೆ ತಂಗಿ, ಹಿಂದೆ ಮುಂದೆ ನೋಡಿಕೊಂಡು ಎಚ್ಚರಿಕೆಯಿಂದ ಮುಂದೆ ನಡೆ" ಎಂದಳು.

ಈ ವೇಳೆಗೆ ಮೋತಿಯ ತಾಯಿ ಕೋಣೆಯೊಳಕ್ಕೆ ಬರುವುದನ್ನು ನೋಡಿದೊಡನೆ "ಭಯವಿಲ್ಲ, ಭಯವಿಲ್ಲ, ಬಕುಳ ಪುಷ್ಪಾ. ನಾನು ಹೊರಟೆ. ನೀನಿರಲಿಲ್ಲ, ಈ ಮಧ್ಯೆ ನಮ್ಮ ಹೊಸ ಸೊಸೆಯನ್ನು ಒಮ್ಮೆ

ನೋಡಿಬರೋಣವೆಂದು ಯೋಚನೆಮಾಡಿದೆ. ನಿಜ, ಇದು ಜಿಪುಣರ ಸಂಪತ್ತು. ಎಚ್ಚರಿಕೆಯಿಂದ ಕಾದಿಡಬೇಕಾದದ್ದು. ಸಖಿಗೆ ಹೇಳುತ್ತಿದ್ದೆ– ನಮ್ಮ ಮೈದುನನಿಗೆ ಈಗ ಅರೆತಲೆನೋವು ಹಿಡಿದಂತೆ ಆಯಿತು. ಅವನ ಎಡ ಪಾರ್ಶ್ವಕ್ಕೆ ಹೆಂಡತಿ ಬಂದಂತಾಯಿತು. ಈಗ ಬಲ ಪಾರ್ಶ್ವವನ್ನು ಕಾಪಾಡುವ ತಲೆಗೆ ನೋವು ಹತ್ತಿದರೆ ಆಗಲೀಗ ಪೂರ್ತಿಯಾಗುವುದು.''

ಹೀಗೆ ಹೇಳಿ ಕೋಣೆಯಿಂದ ಹೊರಬಿದ್ದು ಮುಹೂರ್ತದ ಅನಂತರ ಮತ್ತೆ ಕೋಣೆಯನ್ನು ಹೊಕ್ಕು ಕುಮುವಿನ ಇದಿರಿನಲ್ಲಿ ಪಾನ್‌ದಾನಿ ತೆರೆದಿಟ್ಟು "ಒಂದು ವೀಳ್ಯ ತೆಗೆದುಕೋ, ತಂಬಾಕು ಹಾಕುವ ಅಭ್ಯಾಸ ವಿದೆಯೇನು?" ಎಂದಳು.

ಕುಮು "ಇಲ್ಲ" ಎಂದಳು. ಆಗ ಒಂದು ಚಿಟಿಕೆ ತಂಬಾಕು ಎತ್ತಿ ತನ್ನ ಬಾಯಲ್ಲಿ ಹಾಕಿಕೊಂಡು ಶ್ಯಾಮಾ ಮಂದಗತಿಯಲ್ಲಿ ಹೊರಟಳು.

"ಈಗಲೇ ಬದ್ದೀ ಅತ್ತೆಗೆ ಊಟಕ್ಕೆ ಕಳುಹಿಸಿಕೊಟ್ಟು ಬರುವೆ, ಹೊತ್ತಾಗದು" ಎಂದು ಹೇಳಿ ಮೋತಿಯ ತಾಯಿ ಹೊರಟುಹೋದಳು.

ಶ್ಯಾಮಾ ಸುಂದರಿ ಕುಮುವಿನ ಮನಸ್ಸಿನ ಅಂತರ್ಯದಲ್ಲಿ ಭಾರೀ ಅರುಚಿಯನ್ನು ಎಚ್ಚರಗೊಳಿಸಿದಳು. ಇಂದು ಕುಮುವಿಗೆ ಎಲ್ಲಕ್ಕಿಂತಲೂ ಹೆಚ್ಚು ಅವಶ್ಯಕವಾಗಿದ್ದುದು ಮಾಯೆಯ ಆವರಣ. ಅದನ್ನೇ ಅವಳು ತನ್ನ ಮನಸ್ಸಿನಲ್ಲಿ ನೆಲೆಗೊಳಿಸಲು ನಿಶ್ಚಯಿಸಿದ್ದಳು. ಮೇಲಿಂದ ಯಾವ ಸೃಷ್ಟಿಕರ್ತ ದೇವಲೋಕ ಭೂಲೋಕಗಳಲ್ಲಿ ನಾನಾ ವರ್ಣಗಳನ್ನು ಎತ್ತಿ ಕೊಂಡು ರೂಪದ ಲೀಲೆ ಮಾಡುವನೋ ಅವನಿಗೂ ಸಹಾಯಮಾಡುವ ಯತ್ನಮಾಡಿದ್ದಳು. ಇಂತಹ ಸಮಯದಲ್ಲಿ ಶ್ಯಾಮಾ ಬಂದು ಅವಳ ಕನಸಿನಲ್ಲಿ ಹೆಣೆದ ಬಲೆಯನ್ನು ಹರಿದುಬಿಟ್ಟಳು. ಕುಮು ಕಣ್ಣು ಮುಚ್ಚಿ ಕೊಂಡು ಬಲವಂತವಾಗಿ ತನಗೆ ಹೇಳಿಕೊಳ್ಳತೊಡಗಿದಳು. "ಗಂಡನ ವಯಸ್ಸು ಹೆಚ್ಚೆಂದು ಅವನನ್ನು ಪ್ರೀತಿಸದಿರುವುದೆ? ಇದೆಂದಿಗೂ ಸತ್ಯ ವಲ್ಲ–ನಾಚಿಕೆಗೇಡು, ನಾಚಿಕೆಗೇಡು ಇದು ಸಾಮಾನ್ಯ ಹೆಂಗಸರ ನಡೆವಳಿಕೆ—ಶಿವನೊಡನೆ ಸತಿಯ ಮದುವೆಯ ಕಥೆ ಅವಳಿಗೆ ನೆನಪಿರಲಿಲ್ಲ

ವೇನು? ಶಿವನಿಂದಕರು ಅವನ ವಯಸ್ಸನ್ನು ಕುರಿತು ಹಂಗಿಸಿದ್ದರು. ಆದರೆ ಆ ಮಾತನ್ನು ಸತಿ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ”

ಗಂಡನ ವಯಸ್ಸು ಅಥವಾ ರೂಪವನ್ನು ಕುರಿತು ಇದುವರೆಗೆ ಕುಮು ಯೋಚನೆ ಮಾಡಿಯೇ ಇರಲಿಲ್ಲ. ಸಾಮಾನ್ಯವಾಗಿ ಯಾವ ಪ್ರೀತಿಯೊಡನೆ ಸ್ತ್ರೀ ಪುರುಷರ ವಿವಾಹ ಸತ್ಯವೆನಿಸುವುದೋ ಯಾವುದರಲ್ಲಿ ರೂಪ, ಗುಣ, ದೇಹ, ಮನಸ್ಸು ಎಲ್ಲವೂ ಹೊಂದಿಕೊಂಡಿವೆಯೋ ಅದರ ಆವಶ್ಯಕತೆಯಿದೆ ಎಂಬುದನ್ನು ಕುಮು ಯೋಚಿಸಲೇ ಇಲ್ಲ. ಒಪ್ಪಿ ಅಂಗೀ ಕರಿಸುವುದೆನ್ನುವ ಮಾತನ್ನೇ ಬಣ್ಣ ಬಳಿದು ಮರೆಮಾಡಿಬಿಡಲು ಬಯಸಿದಳು.

ಈ ಸಮಯದಲ್ಲಿ ಸರಿಗೆಯ ಹೂವನ್ನು ಹೆಣೆದ ಅಂಗಿ ಮತ್ತು ಜರ ತಾರಿ ಅಂಚಿನ ಪಂಚೆಯನ್ನು ತೊಟ್ಟ ಹುಡುಗನೊಬ್ಬನು—ಏಳೆಂಟು ವರ್ಷ ವಯಸ್ಸಿರಬಹುದು-ಕೋಣೆಯೊಳಕ್ಕೆ ಬಂದು, ಕುಮುವಿಗೆ ಒರಗಿ ಕೊಂಡು ನಿಂತುಕೊಂಡನು. ದೊಡ್ಡ ದೊಡ್ಡ ಸ್ನಿಗ್ಧವಾದ ಕಣ್ಣುಗಳುಳ್ಳ ಅವಳ ಮುಖದೆಡೆಗೆ ಕತ್ತೆತ್ತಿ ಅಂಜುತ್ತ ಅಂಜುತ್ತ ಮೆಲ್ಲಮೆಲ್ಲನೆ ಇಂಪಾದ ದನಿಯಲ್ಲಿ “ದೊಡ್ಡಮ್ಮಾ” ಎಂದನು. ಕುಮು ಅವನನ್ನು ಎದೆಗಪ್ಪಿ ಕೊಂಡು—“ಏನು ಮಗೂ, ನಿನ್ನ ಹೆಸರೇನು?” ಎಂದಳು. ಹುಡುಗ ಬಹು ಆಡಂಬರದೊಡನೆ, ಶ್ರೀ ಸಹ ಬಿಡದೆ “ಶ್ರೀ ಮೋತೀಲಾಲ್ ಘೋಷಾಲ್” ಎಂದನು. ಎಲ್ಲರೂ ಅವನನ್ನು ‘ಹಾಬಲೂ’ ಎಂದು ಕರೆಯುವುದು ವಾಡಿಕೆಯಾಗಿತ್ತು. ಅದರಿಂದ ತಕ್ಕ ದೇಶ, ಕಾಲ, ಪಾತ್ರ ದೊರೆತಲ್ಲಿ ತನ್ನ ಗೌರವ ಉಳಿಸುವುದಕ್ಕಾಗಿ ತಂದೆ ಇಟ್ಟ ಹೆಸರನ್ನು ಇಷ್ಟು ಸಂಪೂರ್ಣವಾಗಿ ಹೇಳಿದನು. ಆ ಸಮಯದಲ್ಲಿ ಕುಮುವಿನ ಹೃದಯ ತಲ್ಲಣಿಸುತ್ತಿತ್ತು. ಈ ಮಗುವನ್ನು ಎದೆಗಪ್ಪಿಕೊಂಡು ಬದುಕಿ ದಂತಾದಳು. ಎಷ್ಟೋ ದಿನಗಳಿಂದ ದೇವರ ಮನೆಯಲ್ಲಿ ಹೂವು ಹಾಕು ತ್ತಿದ್ದ ಗೋಪಾಲ ವಿಗ್ರಹವೇ ಈಗ ಈ ಮಗುವಿನ ರೂಪದಲ್ಲಿ ತನ್ನ ಬಳಿಗೆ ಬಂದು ತನ್ನ ಮಡಿಲಲ್ಲಿ ಕುಳಿತಿದೆಯೆಂದು ಹಠಾತ್ತಾಗಿ ಅವಳಿಗನ್ನಿಸಿತು. ಯಾವ ವೇಳೆಯಲ್ಲಿ ಕೂಗಿದಳೋ ಆ ವೇಳೆಗೆ ಸರಿಯಾಗಿ ಬಂದು “ಇದೋ ನಿನಗೆ ನೆಮ್ಮದಿಯುಂಟುಮಾಡಲು ನಾನಿರುವೆ” ಎಂದು ಹೇಳಿದಂತಾ

ಯಿತು. ಮೋತಿಯು ದುಂಡು ದುಂಡಾದ ಗಲ್ಲವನ್ನು ಹಿಡಿದುಕೊಂಡು ಕುಮು "ಗೋಪಾಲ, ಹೂ ಬೇಕೇನು?" ಎಂದಳು.

ಕುಮುವಿನ ಬಾಯಿಂದ ಗೋಪಾಲ ಎಂಬುದನ್ನು ಬಿಟ್ಟು ಮತ್ತಾವ ಹೆಸರೂ ಹೊರಬೀಳಲಿಲ್ಲ. ಹಠಾತ್ತಾಗಿ ತನ್ನ ಹೆಸರು ಮಾರ್ಪಟ್ಟದ್ದು ಹಾಬಲೂವಿಗೆ ವಿಸ್ಮಯವುಂಟುಮಾಡಿತು. ಆದರೆ ಇಂಥ ಮಧುರವಾದ ಧ್ವನಿ ಅವನ ಕಿವಿ ಮುಟ್ಟಿತೆಂದರೆ ಅವನ ಮನಸ್ಸಿಗೆ ಯಾವ ಬಗೆಯ ಆಕ್ಷೇಪಣೆಯೂ ತೋರಲಿಲ್ಲ.

ಈ ಸಮಯದಲ್ಲಿ ಪಕ್ಕದ ಕೋಣೆಯಿಂದ ಮೋತಿಯ ತಾಯಿ ಹುಡುಗನ ದನಿ ಕೇಳಿ ಓಡಿಬಂದು "ಅದೋ, ಮಂಗ ಹುಡುಗ ಬಂದಿರುವಂತೆ ಕಾಣುತ್ತೆ" ಎಂದಳು. ಶ್ರೀ ಮೋತೀಲಾಲ್ ಘೋಷಾಲನ ಗೌರವ ಇನ್ನು ಉಳಿಯದು. ಆಕ್ಷೇಪಣೆಯ ನೋಟ ತುಂಬಿದ ಕಣ್ಣುಗಳಿಂದ ತಾಯಿಯನ್ನು ನೋಡತೊಡಗಿದನು. ಬಲಗೈಯಲ್ಲಿ ದೊಡ್ಡಮ್ಮನ ಸೆರಗು ಹಿಡಿದುಕೊಂಡಿದ್ದನು. ಕುಮು ಹಾಬಲುವನ್ನು ತನ್ನ ಎಡಗೈಯಿಂದ ಹತ್ತಿರ ಸೆಳೆದುಕೊಂಡು—"ಇರಲಿ ಬಿಡು" ಎಂದಳು.

"ಇಲ್ಲಮ್ಮ, ರಾತ್ರಿ ಬಹಳ ಹೊತ್ತಾಗಿದೆ. ಈಗ ಮಲಗಲು ಹೋಗಲಿ. ಈ ಮನೆಯಲ್ಲಿ ಅವನಿಗೆ ಅತಿ ಸದರ. ಅವನಂತಹ ಅಗ್ಗದ ಮಗು ಬೇರೆ ಯಾರೂ ಇಲ್ಲ" ಎಂದು ಹೇಳಿ ಮೋತಿಯ ತಾಯಿ ಮನಸ್ಸಿಲ್ಲದ ಮಗುವನ್ನು ಮಲಗಿಸಲು ಕರೆದುಕೊಂಡು ಹೋದಳು. ಇಷ್ಟರಿಂದಲೇ ಕುಮುವಿನ ಮನಸ್ಸಿನ ಭಾರ ಹಗುರವಾಯಿತು. ಅವಳ ಮನಸ್ಸಿನ ಪ್ರಾರ್ಥನೆಗೆ ಉತ್ತರ ಸಿಕ್ಕಿತು. ಬಾಳುವೆಯ ಸಮಸ್ಯೆ ಈ ಹುಡುಗನಂತೆ ಅತಿ ಸರಳವಾಗುವುದು ಎಂದನ್ನಿಸಿತು.

## ೨೩

ರಾತ್ರಿ ಒಂದು ಹೊತ್ತಿನಲ್ಲಿ ಮೋತಿಯ ತಾಯಿ ಎಚ್ಚತ್ತು ನೋಡಿದಾಗ ಕುಮು ಹಾಸಿಗೆಯಲ್ಲಿ ಎದ್ದು ಕುಳಿತದ್ದನ್ನು ಕಂಡಳು. ಅವಳೆರಡು ಕೈಗಳೂ ಎದೆಯ ಬಳಿ ಜೋಡಿಸಿತ್ತು. ಧ್ಯಾನದಲ್ಲಿ ಮುಳುಗಿದ ಕಣ್ಣು, ಇದಿರಿನಲ್ಲಿ ಯಾರನ್ನೋ ಕಾಣುವಂತಿತ್ತು. ಮಧುಸೂದನನ್ನು ಹೃದಯ

ದಲ್ಲಿ ನೆಲಸಿಕೊಳ್ಳಲು ಅದೆಷ್ಟು ಬಾಧೆಯುಂಟಾದರೂ ತನ್ನ ಇಷ್ಟದೇವತೆ ಯಿಂದ ತನ್ನ ಗಂಡನನ್ನು ಮುಚ್ಚ ಬಯಸುತ್ತಿದ್ದಳು. ಗಂಡನನ್ನು ಸಾಧನ ವಾಗಿಟ್ಟುಕೊಂಡು ಅವಳು ತನ್ನನ್ನು ತನ್ನ ದೇವರಿಗೆ ಅರ್ಪಿಸಿಕೊಂಡಿ ದ್ದಳು. ದೇವರು ಅವಳ ಪೂಜೆಯನ್ನು ಬಹಳ ಕಠಿಣವಾಗಿ ಮಾಡಿರುವನು. ಈ ಪ್ರತಿಮೆ ಸ್ವಚ್ಛವಲ್ಲ. ಆದರೆ ಇದೇ ಮತ್ತೆ ಭಕ್ತಿಯ ಪರೀಕ್ಷೆ. ಸಾಲಿ ಗ್ರಾಮ ಶಿಲೆಯಂತೂ ಏನನ್ನೂ ತೋರದು. ಭಕ್ತಿ ಕೇವಲ ತನ್ನ ಶಕ್ತಿ ಯಿಂದ ಆ ರೂಪಹೀನತೆಯ ನಡುವೆ ವೈಕುಂಠನಾಥನ ರೂಪವನ್ನು ಪ್ರಕಟಗೊಳಿಸುವುದು. ಎಲ್ಲಿ ಕಾಣಿಸುವುದಿಲ್ಲವೋ ಅಲ್ಲಿಯೇ ಕಾಣು ವೆನು. ಇದೇ ನನ್ನ ಸಾಧನೆಯಾಗಲಿ. ದೇವರು ಎಲ್ಲಿ ಮರೆಯಾಗಿರು ವನೋ ಅಲ್ಲಿಯೇ ಹೋಗಿ ಅವನ ಚರಣದಲ್ಲಿ ನನ್ನನ್ನು ಅರ್ಪಿಸಿಕೊಳ್ಳುವೆ. ಆತ ನನ್ನನ್ನು ದೂಡಲಾರ ಎಂಬುದಾಗಿ ಸಮಾಧಾನ ತಾಳುವಳು.

"ಮೇರೇ ಗಿರಿಧರ ಗೋಪಾಲ್, ಜಾರ್ ನಾಹಿಕೋಯೀ"

ಅಣ್ಣನ ಹತ್ತಿರ ಕಲಿತ ಮೀರಾಬಾಯಿಯ ಈ ಕೀರ್ತನೆಯನ್ನು ಬಾರಿಬಾರಿಗೆ ಮನಸ್ಸಿನಲ್ಲಿ ಉಚ್ಚರಿಸತೊಡಗಿದಳು.

ಮಧುಸೂದನನ ಒರಟು ಪರಿಚಯವಾದಾಗ ಅವಳು ಅದನ್ನು ಲೆಕ್ಕಿಸದೆ, ನೀರ ಮೇಲಿನ ಗುಳ್ಳೆಯಂತೆ ಅದು ಕ್ಷಣಿಕವೆಂದು ಭಾವಿಸಿದ್ದಳು. ಶಾಶ್ವತವಾಗಿ ಯಾರು ಸತ್ಯವೊ, ಆತನೇ ಎಲ್ಲವನ್ನೂ ಆವರಿಸಿಕೊಂಡಿರುವನು. "ಔರ್ ನಾಹಿ ಕೋಹಿ, ಔರ್ ನಾಹಿ ಕೋಹಿ" ಇದಲ್ಲದೆ ಇನ್ನೊಂದು ಹಿಂಸೆಯಿದೆ. ಅದನ್ನೂ ಮಾಯೆಯೆಂದು ಕರೆಯಬೇಕು. ಅದು ಬಾಳುವೆಯ ಶೂನ್ಯತೆ—ಇಂದಿನವರೆಗೆ ಯಾರೊಡನೆ ಅವಳ ಬಾಳುವೆ ನಡೆಯಿತೋ, ಬೆಳೆದುಬಂದಿತೋ, ಯಾರನ್ನು ದೂರ ಮಾಡಿದರೆ ಬಾಳುವೆಯ ಅರ್ಥ ವಿರದೋ ಅವರ ವಿಚ್ಛೇದವುಂಟಾಗಿದೆ. ಅವಳೇ ಈ ಶೂನ್ಯತೆಯೂ ಪೂರ್ಣ ವಾಯಿತೆಂದು ತನಗೆ ಹೇಳಿಕೊಳ್ಳುತ್ತಿದ್ದಳು.

"ಬಾವೇ ಛಾಡೆ, ಮಾಯೀ ಛಾಡೆ, ಛಾಡೇ ಸಗಾ ಸಹೀ
ಮೀರಾ ಪ್ರಭು ಲಗನ್ ಲಗೀ ಜೋನ ಹೊಯಿ ಹೊಯೀ"

"ತಂದೆ ಬಿಟ್ಟರು, ತಾಯಿ ಬಿಟ್ಟಳು, ಸಂಗಡಿಗರು, ಸಖಿಯರು ಎಲ್ಲಾ ಬಿಟ್ಟರು—ಮೀರಾಳ ಪ್ರಭುವಿನ ಬಯಕೆಗಾಗಿ, ಯಾವುದು ಆಗಲಾರದೋ ಅದು ಆಯಿತು."

ತಂದೆ ಬಿಟ್ಟಿರುವರು, ತಾಯಿಯೂ ಬಿಟ್ಟಿರುವಳು. ಅವರುಗಳೊಳಗೆ ಯಾವನು ಶಾಶ್ವತನೋ ಆತನಂತೂ ಬಿಟ್ಟಿಲ್ಲ. ದೇವರು ಮತ್ತಾವುದನ್ನೂ ಬಿಡಿಸಲಿಲ್ಲವೇಕೆ? ಶೂನ್ಯತೆ ತುಂಬಲೆಂದು ಎಣಿಸಿಯೇ ಬಿಟ್ಟಿರುವನು. ನಾನು ಅಂಟಿಕೊಂಡೇ ಇರುವೆ. ಆಗುವುದೆಲ್ಲ ಆಗಲಿ! ಮನಸ್ಸಿನಲ್ಲಿದ್ದ ಕೀರ್ತನೆ ಯಾವ ವೇಳೆಯಲ್ಲಿ ಹೊರ ಹೊಮ್ಮಿತು ಎಂಬುದರ ಅರಿವೇ ಅವಳಿಗಿರಲಿಲ್ಲ. ಎರಡು ಕಣ್ಣುಗಳಿಂದಲೂ ನೀರು ಧಾರಾಕಾರವಾಗಿ ಹರಿಯತೊಡಗಿತು.

ಮೋತಿಯ ತಾಯಿ ಮಾತನಾಡಲಿಲ್ಲ. ತೆಪ್ಪನೆ ನೋಡಿದಳು ಮತ್ತು ಕೇಳಿದಳು. ಆನಂತರ ಕುಮು ಬಹು ಹೊತ್ತಿನವರೆಗೆ ನಮಸ್ಕರಿಸಿ ನಿಟ್ಟುಸಿರು ಬಿಟ್ಟು ಮಲಗಿದಳು. ಆಗ ಮೋತಿಯ ತಾಯಿಯ ಮನದಲ್ಲಿ ಹಿಂದೆಂದೂ ಭಾವಿಸಿರದ ಚಿಂತೆಯೊಂದು ತಲೆದೋರಿತು.

"ನಮಗೆ ಮದುವೆಯಾದಾಗ ನಾವುಗಳು ಎಳೆ ಹುಡುಗಿಯರಾಗಿದ್ದೆವು. ಮನಸ್ಸು ಎನ್ನುವ ಆಪತ್ತಿರಲಿಲ್ಲ. ಸಣ್ಣ ಹುಡುಗರು ಮಾಗದ ಕಾಯನ್ನು ಹೇಗೆ ಯಾವ ಸಹಕಾರವೂ ಬಯಸದೆ ಬಾಯಲ್ಲಿ ತುಂಬಿಕೊಳ್ಳುವರೋ ಹಾಗೆ ಗಂಡನ ಸಂಸಾರವನ್ನು ಹಿಂದು ಮುಂದು ನೋಡದೆ ನಾವುಗಳು ನುಂಗಿದೆವು. ಎಲ್ಲೂ ಯಾವ ತಡೆಯೂ ಉಂಟಾಗಲಿಲ್ಲ. ಎಂದು ನಿಷೇಕ ಪ್ರಸ್ತ ಆಗಬೇಕೆಂದರೋ ಅಂದೇ ನಿಷೇಕ ಪ್ರಸ್ತವಾಯಿತು. ಯಾಕೆಂದರೆ ನಿಷೇಕ ಪ್ರಸ್ತದ ಅರ್ಥವೇನೂ ತಿಳಿದಿರಲಿಲ್ಲ. ಅದೊಂದು ಆಟವಾಗಿತ್ತು. ಇಂದೋ—ನಾಳೆಯೋ ನಿಷೇಕ ಪ್ರಸ್ತ ಆಗುವುದಿದೆ. ಈ ಹೆಣ್ಣಿನ ಪಾಲಿಗೆ ಅದೆಷ್ಟು ದೊಡ್ಡ ವಿಡಂಬನೆ! ದೊಡ್ಡ ಮೈದುನ ಈಗ ಪರರು. ಸ್ವಂತದವರಾಗಲು ಬಹು ಕಾಲ ಆಗುವುದು. ಇವಳನ್ನು ಹೇಗೆ ತಾನೆ ಮುಟ್ಟುವರು? ಈ ಹೆಣ್ಣು ಆ ಅವಮಾನ ಸಹಿಸುವಳೇಕೆ? ಹಣ ಗಳಿಸಲು ಮೈದುನನಿಗೆ ಎಷ್ಟು ಕಾಲ ಬೇಕಾಯಿತು? ಮನಸ್ಸನ್ನು

ಸಂಪಾದಿಸಲು ಎರಡು ದಿನಗಳು ತಡೆಯಲಾಗುವುದಿಲ್ಲವೇನು? ಆ ಲಕ್ಷ್ಮಿಯ ಬಾಗಿಲಲ್ಲಿ ತೆವಳಿ ತೆವಳಿ ಜೀವ ಬಿಡಲು ಸಾಧ್ಯವಾಯಿತು. ಈ ಲಕ್ಷ್ಮಿಯ ಬಾಗಿಲಲ್ಲಿ ಒಮ್ಮೆ ಕೈ ನೀಡುವುದೂ ಬೇಡವೇನು?'' ಎಂದು ಅವಳು ಯೋಚಿಸಲಾರಂಭಿಸಿದಳು.

ಮೋತಿಯ ತಾಯಿಯ ಮನದಲ್ಲಿ ಇಷ್ಟೊಂದು ಮಾತು ಮೂಡುತ್ತಿರಲಿಲ್ಲ. ಮೂಡಿದ್ದಕ್ಕೆ ಕಾರಣ ಕುಮುವನ್ನು ನೋಡಿದ ಮಾತ್ರಕ್ಕೆ ಅವಳು ಅವಳನ್ನು ತನ್ನ ಸಂಪೂರ್ಣ ತನುಮನಗಳಿಂದ ಪೂಜಿಸತೊಡಗಿದಳು. ಈ ಪ್ರೀತಿಯ ಪೂರ್ವ ಭೂಮಿಕೆ ಅವಳಿಗೆ ಸ್ಟೇಷನ್ನಿನಲ್ಲಿ ವಿಪ್ರದಾಸನನ್ನು ನೋಡಿದಾಗ ಸಂಭವಿಸಿತ್ತು. ಮಹಾಭಾರತದಿಂದ ವೀರ ಭೀಷ್ಮ ಎದ್ದು ಬಂದಂತೆ—ವೀರರಂತೆ ತೇಜಸ್ವೀ ಮೂರ್ತಿ, ತಾಪಸರಂತೆ ಶಾಂತವಾದ ಮುಖ ಲಕ್ಷಣ, ಅದರೊಡನೆ ಒಂದು ವಿಧವಾದ ನಮ್ರತೆ, ಯಾರೂ ಏನೂ ಹೇಳದಿರುವುದಾದರೆ ಒಮ್ಮೆ ಅವರ ಪಾದಗಳೆರಡನ್ನು ಮುಟ್ಟಿ ಬರುವೆನು ಎಂದು ಮೋತಿಯ ತಾಯ ಮನಸ್ಸಿಗೆ ಅನ್ನಿಸಿತ್ತು. ಆ ರೂಪವನ್ನು ಇಂದಿಗೂ ಅವಳು ಮರೆಯಲಾಗಲಿಲ್ಲ. ಅನಂತರ ಕುಮುವನ್ನು ನೋಡಿದಾಗ "ಆ ಅಣ್ಣನ ತಂಗಿಯೇ ಸರಿ" ಎಂದು ಮನಸ್ಸಿನಲ್ಲಿ ಹೇಳಿಕೊಂಡಳು.

ಒಂದು ಬಗೆಯ ಜಾತಿ ಭೇದವಿದೆ—ಸಮಾಜದ್ದಲ್ಲ, ರಕ್ತದ್ದು. ಆ ಜಾತಿಯನ್ನು ಯಾವುದರಿಂದಲೂ ಮುರಿಯಲು ಸಾಧ್ಯವಿಲ್ಲ. ಈ ರಕ್ತಗತ ಜಾತಿ ಅಸಮಂಜಸತೆ ಹೆಣ್ಣಿಗೆ ಹೇಗೆ ಮರ್ಮಭೇಧಕವಾಗಿದೆಯೋ ಹಾಗೆಯೇ ಗಂಡಸರಿಗೆ ಇಲ್ಲ. ಎಳೆವಯಸ್ಸಿನಲ್ಲಿ ಮದುವೆಯಾಗಿದ್ದುದರಿಂದ ಮೋತಿಯ ತಾಯಿ ತನ್ನಲ್ಲಿ ಈ ರಹಸ್ಯವನ್ನು ಅರಿಯಲು ಅವಕಾಶವಾಗಲಿಲ್ಲ. ಆದರೆ ಕುಮು ಅಂತರ್ಯದಲ್ಲಿ ಈ ವಿಷಯವನ್ನು ಚೆನ್ನಾಗಿ ಅನುಭವಿಸಿರುವಳು. ಅವಳ ಮೈ ಹೇಗೋ ಆಯಿತು. ಅವಳು ಯಾವುದೋ ಒಂದು ವಿಭೀಷಿಕೆಯ ಚಿತ್ರ ನೋಡತೊಡಗಿದಳು. ಯಾವೆಡೆಯಲ್ಲಿ ಒಂದು ಅಪರಿಚಿತ ಜಂತು ನೀರೂರುವ ನಾಲಿಗೆ ಚಪ್ಪರಿಸುತ್ತ ಕಾಲು ಮಡಿಸಿಕೊಂಡು ಕುಳಿತಿದೆಯೋ ಅದೇ ಕಗ್ಗತ್ತಲೆಯ ಗವಿಯ ಬಾಯಲ್ಲಿ ಕುಮುದಿನಿ ನಿಂತುಕೊಂಡು ದೇವರನ್ನು ಕರೆಯುತ್ತಿದ್ದಳು.

ಮೋತಿಯ ತಾಯಿ ಕೋಪದಿಂದ ಕಿಡಿಕಿಡಿಯಾಗಿ ಮನಸ್ಸಿನಲ್ಲಿ "ದೇವರ ಬಾಯಿಗೆ ಬೂದಿ ಹಾಕಿತು. ಯಾವ ದೇವರು ಅವಳಿಗೆ ವಿಪತ್ತುಂಟು ಮಾಡಿದನೋ ಅವನೇ ಅವಳನ್ನು ಉದ್ಧಾರ ಮಾಡುವನೇನು! ಅಯ್ಯೋ, ಪಾಪ" ಎಂದಳು.

೨೪

ಮರುದಿನ ಬೆಳಗ್ಗೆಯೇ ಕುಮುವಿಗೆ ಅಣ್ಣನಿಂದ "ಭಗವಂತ ನಿನಗೆ ಆಶೀರ್ವಾದ ಮಾಡಲಿ" ಎಂದು ತಂತಿ ಬಂದಿತು. ಆ ಟೆಲಿಗ್ರಾಮಿನ ಕಾಗದವನ್ನು ರವಿಕೆಯಲ್ಲಿ ಎದೆಯ ಹತ್ತಿರ ಇಟ್ಟುಕೊಂಡಳು. ಆ ಟೆಲಿಗ್ರಾಮನ್ನು ಅಣ್ಣನ ಬಲಗೈಯ ಸ್ಪರ್ಶವೆಂದು ಭಾವಿಸಿದಳು. "ಆದರೆ ಅಣ್ಣ ತನ್ನ ದೇಹಸ್ಥಿತಿಯ ವಿಷಯ ಏನೂ ಬರೆದಿಲ್ಲವೇಕೆ? ಹಾಗಾದರೆ ಖಾಯಿಲೆ ಹೆಚ್ಚಿದೆಯೇನು?" ಎಂದು ಚಿಂತಿಸಿದಳು. ಅಣ್ಣನ ಎಲ್ಲ ಸುದ್ದಿಯೂ ಘಳಿಗೆ ಘಳಿಗೆಗೆ ಯಾರಿಗೆ ವಿವರವಾಗಿ ತಿಳಿದಿರುತ್ತಿತ್ತೋ ಅಂಥವಳಿಗೆ ಇಂದು ಎಲ್ಲ ಮರೆಯಾಗಿದೆ.

ಇಂದು ನಿಷೇಕ. ಮನೆಯಲ್ಲಿ ಜನರ ಗುಂಪು. ನೆಂಟರ ಹೆಂಗಸರು ಹಗಲೆಲ್ಲಾ ಕುಮುವನ್ನು ಹಾಸ್ಯಮಾಡುತ್ತಿದ್ದರು. ಯಾವ ಒಗೆಯಲ್ಲೂ ಅವಳನ್ನು ಒಂಟಿಯಾಗಿ ಬಿಟ್ಟಿರಲಾರರು. ಇಂದು ಒಂಟಿಯಾಗಿ ಇರುವುದು ಅವಳಿಗೆ ಅತ್ಯಾವಶ್ಯಕವಾಗಿತ್ತು.

ಮಲಗುವ ಮನೆಯ ಪಕ್ಕದಲ್ಲೇ ಸ್ನಾನದ ಮನೆಯಿತ್ತು. ಅಲ್ಲಿ ನಲ್ಲಿಯಿತ್ತು. ಹಾಗೆಯೇ ಎತ್ತರದಿಂದ ಧಾರೆ ಧಾರೆಯಾಗಿ ನೀರು ಬೀಳುವ ಏರ್ಪಾಡಿತ್ತು. ಯಾವುದೋ ನೆಪದಲ್ಲಿ ಅವಕಾಶ ದೊರೆತಾಗ ತನ್ನ ಪೆಟ್ಟಿಗೆಯಿಂದ ಕಟ್ಟುಹಾಕಿದ ರಾಧಾ ಕೃಷ್ಣರ ಚಿತ್ರವನ್ನು ಹೊರಗೆ ತೆಗೆದುಕೊಂಡು ಸ್ನಾನದ ಮನೆಗೆ ಹೋಗಿ ಕದ ಮುಚ್ಚಿಕೊಂಡಳು. ಬಿಳಿಯ ಕಲ್ಲಿನ ನೀರಿನ ತೊಟ್ಟಿಯ ಮೇಲೆ ಪಟವನ್ನಿಟ್ಟು ಇದಿರಿನಲ್ಲಿ ನೆಲದ ಮೇಲೆ ಕುಳಿತು ತನ್ನ ಮನದಲ್ಲೇ ಬಾರಿ ಬಾರಿಗೆ—"ನಾನು ನಿನ್ನ ವಳೇ, ಇಂದು ನನ್ನನ್ನು ಸ್ವೀಕರಿಸು. ಆತ ಮತ್ತಾರೂ ಅಲ್ಲ, ಆತ ನೀನೆ, ಆತ ನೀನೆ, ಆತ ನೀನೆ—ನಿನ್ನದೇ ಯುಗಲ ರೂಪ ನನ್ನ ಬಾಳುವೆಯಲ್ಲಿ ಬೆಳಗಲಿ" ಎಂದು ಅಂದುಕೊಂಡಳು.

ಡಾಕ್ಟರುಗಳು ವಿಪ್ರದಾಸನ ಇನ್‌ಫ್ಲೂಯಂಜಾ ನ್ಯೂಮೋನಿಯಾಕ್ಕೆ ತಿರುಗಿದೆಯೆಂದು ಹೇಳಿದರು. ನವಗೋಪಾಲ ಒಂಟಿಯಾಗಿ ನಿಷೇಕ ಪ್ರಸ್ತದ ಬಳುವಳಿ ಮುಟ್ಟಿಸಲು ಬಂದಿದ್ದನು. ಒಳ್ಳೆಯ ಆಡಂಬರದಿಂದಲೇ ಬಳುವಳಿ ಕೊಡುವುದಾಯಿತು. ವಿಪ್ರದಾಸ ಸ್ವತಃ ಇದ್ದಿದ್ದರೆ ಇಷ್ಟು ಆಡಂಬರ ಇರುತ್ತಿರಲಿಲ್ಲ.

ಕುಮುವಿನ ಮದುವೆಯ ಸಂದರ್ಭದಲ್ಲಿ ಅವಳ ಅಕ್ಕಂದಿರು ನಾಲ್ವರನ್ನೂ ಕರೆಯಕಳುಹಿಸಿದ್ದರು. ಆದರೆ ಘೋಷಾಲರುಗಳು ಸದ್‌ಬ್ರಾಹ್ಮಣರಲ್ಲವೆಂದು ಸುದ್ದಿ ಹರಡಿತ್ತು. ಮನೆಯವರು ಅವರುಗಳನ್ನು ಈ ಮದುವೆಗೆ ಕಳುಹಿಸಿಕೊಡಲು ಯಾವ ವಿಧದಲ್ಲೂ ಒಪ್ಪಲಿಲ್ಲ. ಕುಮುವಿನ ಮೂರನೆಯ ಅಕ್ಕ ಗಂಡನೊಡನೆ ಜಗಳವಾಡಿಕೊಂಡು ಮದುವೆಯ ಮರುದಿನ ಕಲ್ಕತ್ತೆಗೆ ಬಂದು ತಲುಪಿದಳು. ನವಗೋಪಾಲ—"ಆ ಮನೆಗೆ ನೀನು ಹೋದುದಾದರೆ ನಮ್ಮ ಮಾನ ಉಳಿಯದು" ಎಂದನು. ಮದುವೆಯ ರಾತ್ರಿಯ ಸಂಗತಿಯನ್ನು ಇಂದಿಗೂ ಅವನು ಮರೆತಿರಲಿಲ್ಲ. ಅದರಿಂದಲೇ ಬಹುಮಟ್ಟಿಗೆ ದೂರಸಂಬಂಧದ ಕೆಲವು ಸಣ್ಣ ಪುಟ್ಟ ಹುಡುಗಿಯರನ್ನು ಮುದಿ ದಾಸಿಯೊಬ್ಬಳ ಸಂಗಡ ಕಳುಹಿಸಿಕೊಟ್ಟು ಕರೆಗೆ ಗೌರವ ತೋರಿದರು. ಇನ್ನೂ ಸಂಧಿಯಾಗಿಲ್ಲ, ಪ್ರಾಯಶಃ ಯಾವ ಕಾಲಕ್ಕೂ ಆಗದೆ ಹೋಗಬಹುದು ಎಂದು ಕುಮು ಅರಿತಳು.

ಕುಮುವಿನ ಅಲಂಕಾರವಾಯಿತು. ಹಾಸ್ಯಮಾಡುವಷ್ಟು ಬಾಂಧವ್ಯವುಳ್ಳವರ ಹಾಸ್ಯವೆಲ್ಲ ಮುಗಿಯಿತು. ಕರೆದಿರುವವರೆಲ್ಲರ ಊಟ ಆರಂಭವಾಗುವ ಸಮಯ. ಮಧುಸೂದನ ಮುಂಚಿನಿಂದಲೇ 'ರಾತ್ರಿ ಬಹಳ ಹೊತ್ತಾದರೆ ಸಾಗದು. ಮರುದಿನ ತನಗೆ ಕೆಲಸವಿದೆ' ಎಂದು ತಿಳಿಸಿದ್ದ. ಒಂಭತ್ತು ಘಂಟೆ ಹೊಡೆದೊಡನೆ ಅಪ್ಪಣೆಯಂತೆ ಕೆಳಗಿನ ಅಂಗಳದಿಂದ ಘಂಟೆಯ ಸದ್ದಾಯಿತು. ಇನ್ನು ಒಂದು ಘಳಿಗೆಯೂ ಇರುವಂತಿರಲಿಲ್ಲ. ಕಾಲ ಮೀರಲು ಯಾರಿಗೂ ಸಾಧ್ಯವಿಲ್ಲ. ಸಭೆಯು ಮುಗಿಯಿತು. ಆಕಾಶದಲ್ಲಿ ಡೇಗೆಯ ಛಾಯೆ ನೋಡಿದರೆ ಪಾರಿವಾಳಕ್ಕೆ ಹೇಗೆನ್ನಿಸುವುದೋ ಹಾಗೆಯೇ ಕುಮುವಿನ ಎದೆ ನಡುಗತೊಡಗಿತು. ಅವಳ ತಣ್ಣನೆಯ ಕೈಗಳು ಕೊರೆಯುತ್ತಿದ್ದುವು. ಮುಖ ವಿವರ್ಣ

ವಾಗಿತ್ತು. ಕೋಣೆಯಿಂದ ಹೊರಗೆ ಬಂದವಳೇ ಮೋತಿಯ ತಾಯಿಯ ಕೈ ಹಿಡಿದುಕೊಂಡು "ನನ್ನನ್ನು ಸ್ವಲ್ಪ ಹೊತ್ತಿನವರೆಗೆ ಎಲ್ಲಿಯಾದರೂ ಕರೆದುಕೊಂಡು ಹೋಗು. ಹತ್ತು ನಿಮಿಷ ಕಾಲ ಒಂಟಿಯಾಗಿ ಇರಗೊಡು" ಎಂದಳು. ಮೋತಿಯ ತಾಯಿ ಅವಸರ ಅವಸರವಾಗಿ ತನ್ನ ಮಲಗುವ ಮನೆಗೆ ಕರೆದುಕೊಂಡು ಹೋಗಿ ಒಳಗೆ ಬಿಟ್ಟು ಕದ ಮುಚ್ಚಿದಳು. ಹೊರಗೆ ನಿಂತು ಕಣ್ಣೊರಸಿಕೊಳ್ಳುತ್ತ—"ಅದೃಷ್ಟದಲ್ಲಿ ಹೀಗೂ ಇತ್ತೆ" ಎಂದು ಅಂದುಕೊಂಡಳು.

ಹತ್ತು ನಿಮಿಷವಾಯಿತು. ಹದಿನೈದಾಯಿತು. ಜನ ಬಂದರು. ವರ ಮಲಗುವ ಮನೆಗೆ ಹೋಗಿರುವನು. ವಧು ಎಲ್ಲಿ? ಮೋತಿಯ ತಾಯಿಯೆಂದಳು "ಅಷ್ಟೊಂದು ಆತುರಪಟ್ಟರೆ ನಡೆಯದು. ಸೊಸೆ ಮೈ ಮೇಲಿನ ಒಡವೆಗಳನ್ನು ತೆಗೆದಿಟ್ಟು ಬಟ್ಟೆ ಬದಲಾಯಿಸಿಕೊಂಡು ಬರಬೇಡವೇನು?" ಎಂದಳು. ಮೋತಿಯ ತಾಯಿ ಎಷ್ಟು ಹೊತ್ತು ಸಾಧ್ಯವೋ ಅಷ್ಟು ಅವಕಾಶ ಕೊಡಬಯಸಿದಳು. ಕೊನೆಗೆ ಇನ್ನು ವಿಳಂಬವಾಗಲು ಅವಕಾಶವಿಲ್ಲವೆಂದು ಅರಿತಾಗ ಕದ ತೆರೆದು ನೋಡಿದಳು. ಕುಮು ಮೂರ್ಛೆಗೊಂಡು ನೆಲದ ಮೇಲೆ ಬಿದ್ದಿದ್ದಳು.

ಗಲಭೆಯಾಯಿತು. ಹಿಡಿದೆತ್ತಿ ಹಾಸಿಗೆಯ ಮೇಲೆ ಮಲಗಿಸಿ ಒಬ್ಬರು ನೀರು ಚಿಮುಕಿಸಿದರು, ಒಬ್ಬರು ಗಾಳಿ ಬೀಸಿದರು. ಸ್ವಲ್ಪ ಹೊತ್ತಿನ ಅನಂತರ ಎಚ್ಚರವಾದಾಗ ತಾನೆಲ್ಲಿರುವನೆಂಬುದನ್ನು ಕುಮು ಅರಿತಳು. "ಅಣ್ಣಾ" ಎಂದು ಕೂಗು ಹಾಕಿದಳು. ಮೋತಿಯ ತಾಯಿ ಅವಸರ ಅವಸರವಾಗಿ ಅವಳ ಕಡೆ ಬಗ್ಗಿ, "ಹೆದರಬೇಡ ಅಕ್ಕ, ಇದೋ ನಾನಿದ್ದೇನೆ" ಎಂದು ಹೇಳಿ ಅವಳ ಮುಖವನ್ನು ಎತ್ತಿ ಎದೆಗೆ ಅಪ್ಪಿಕೊಂಡಳು. ಎಲ್ಲರನ್ನೂ "ನೀವುಗಳು ಗುಂಪು ಕಟ್ಟಬೇಡಿ, ನಾನು ಈಗಲೇ ಅವಳನ್ನು ಕರೆತರುವೆ" ಎಂದಳು. ಕುಮುವಿನ ಕಿವಿಯಲ್ಲಿ "ಭಯಪಡಬೇಡಮ್ಮ, ಭಯಪಡಬೇಡ" ಎಂದಳು. ಕುಮು ಮೆಲ್ಲಮೆಲ್ಲನೆ ಎದ್ದಳು. ಮನಸ್ಸಿನಲ್ಲೇ ದೇವರ ಹೆಸರನ್ನು ಸ್ಮರಿಸಿ ನಮಸ್ಕಾರ ಮಾಡಿದಳು. ಕೋಣೆಯ ಮತ್ತೊಂದು ಪಾರ್ಶ್ವದಲ್ಲಿ ಮಂಚದ ಮೇಲೆ ಹಾಬಲೂ ನಿದ್ರೆಯಲ್ಲಿ ಮುಳುಗಿದ್ದ. ಅವನ ಹತ್ತಿರ ಹೋಗಿ ಅವನ ಕೆನ್ನೆಗೆ ಮುತ್ತಿಟ್ಟಳು.

ಮೋತಿಯ ತಾಯಿ ಅವಳನ್ನು ಮಲಗುವ ಮನೆಯವರೆಗೆ ಮುಟ್ಟಿಸಿ, “ಈಗಲೂ ಭಯವಾಗುತ್ತಿದೆಯ ಅಕ್ಕ?” ಎಂದಳು.

ಕುಮು ಕೈಯ್ಯನ್ನು ಬಿಗಿಯಾಗಿ ಅದುಮಿಕೊಂಡು ಸ್ವಲ್ಪ ನಕ್ಕು “ಇಲ್ಲ. ನನಗೆ ಏನೇನೂ ಭಯವಿಲ್ಲ.” ಎಂದಳು. ಮನಸ್ಸಿನಲ್ಲೇ “ಇದು ನನ್ನ ಅಭಿಸಾರ. ಹೊರಗೆ ಅಂಧಕಾರ, ಒಳಗೆ ಬೆಳಕು” ಎಂದುಕೊಂಡಳು.

“ಮೇರೆ ಗಿರಿಧರ ಗೋಪಾಲ ಜೌರ್ ನಾಹಿ ಕೋಹಿ”

(ನನ್ನವರು ಗಿರಿಧಾರಿ ಗೋಪಾಲ, ಮತ್ತಾರೂ ಇಲ್ಲ.)

೨೫

ಈ ಮಧ್ಯೆ ಶ್ಯಾಮಸುಂದರಿ ಮೇಲುಸಿರು ಬಿಡುತ್ತ ಬಿಡುತ್ತ ಮಧು ವಿನ ಬಳಿಗೆ ಬಂದು “ಬಉ ಮೂರ್ಛೆ ಹೋಗಿದ್ದಾಳೆ” ಎಂದಳು. ಮಧು ಸೂಧನನ ಮನಸ್ಸು ಥಪ್ಪನೆ ಉರಿದೆದ್ದಿತು. “ಯಾಕೆ, ಅವಳಿಗೇನಾ ಗಿದೆ?” ಎಂದನು.

“ಅದಂತೂ ಹೇಳಲಾರೆ. ಅಣ್ಣಾ, ಅಣ್ಣಾ ಎಂದು ಅನ್ನುತ್ತ ಅತಿ ವ್ಯಾಕುಲ ಗೊಂಡಿರುವಳು. ಏನಾಗಿದೆಯೆಂದು ಒಮ್ಮೆ ನೋಡಲು ಹೋಗುವಿಯೇನು”

“ಹೋಗಿ ಆಗುವುದೇನು. ನಾನಂತೂ ಅವಳ ಅಣ್ಣನಲ್ಲವಲ್ಲ”

“ವ್ಯರ್ಥವಾಗಿ ಕೋಪಿಸಿಕೊಳ್ಳುವೆ, ಅವಳು ದೊಡ್ಡವರ ಮನೆಯ ಹೆಣ್ಣು. ಅಂಕೆಗೆ ಸಿಕ್ಕಲು ಕಾಲ ಬೇಕು.”

“ದಿನ ದಿನ ಅವಳು ಮೂರ್ಛೆ ಹೋಗುತ್ತಿರಲಿ, ಮತ್ತೆ ನಾನು ತಲೆಗೆ ಕವಿರಾಜಿ ತೈಲ ಮಾಲೀಸ್ ಮಾಡುತ್ತೇನೆ. ಇದಕ್ಕಾಗೇನು ಅವಳನ್ನು ಮದುವೆಯಾದದ್ದು?”

“ನಿನ್ನ ಮಾತು ಕೇಳಿ ನಗು ಬರುತ್ತಿದೆ. ಹಾಗೆ ಮಾಡಿದರೆ ತಪ್ಪೇನು? ನಮ್ಮ ಕಾಲದಲ್ಲಿ ಮಾತುಮಾತಿಗೆ ಮಾನಿನಿಯ ದುಗುಡ ದೂರಮಾಡಬೇಕಾಗಿತ್ತು. ಈಗ ಅದಿಲ್ಲದಿದ್ದರೂ ಮೂರ್ಛೆಯನ್ನಾದರೂ ತಿಳಿಸಬೇಕಲ್ಲ.”

ಮಧುಸೂದನ ಮುಖ ಉಬ್ಬಿಸಿಕೊಂಡು ಕುಳಿತಿದ್ದನು. ಶ್ಯಾಮಾ ಸುಂದರಿ ಕರುಣೆಯಿಂದ ಕರಗಿದವಳಾಗಿ ಹತ್ತಿರ ಬಂದು ಕೈ ಹಿಡಿದು ಕೊಂಡು—"ಹಾಗೆ ಮನಸ್ಸು ಚಿಕ್ಕದು ಮಾಡಿಕೊಳ್ಳಬೇಡ. ನೋಡಿ ಸಹಿಸಲಾಗುವುದಿಲ್ಲ" ಎಂದಳು.

ಇಷ್ಟು ಹತ್ತಿರ ಮಧುಸೂದನನ ಬಳಿ ಹೋಗಿ ಅವನಿಗೆ ಸಮಾಧಾನ ಹೇಳುವಷ್ಟು ಸಾಹಸ ಇದಕ್ಕೆ ಮುಂಚೆ ಶ್ಯಾಮಾಳಿಗೆ ಇರಲಿಲ್ಲ. ಶ್ಯಾಮಾ ಅವನ ಬಳಿ ಬಹು ತೆಪ್ಪಗಿರುತ್ತಿದ್ದಳು. ಮಧುಸೂದನ ಹೆಚ್ಚು ಮಾತು ಸಹಿಸನೆಂಬುದನ್ನು ಬಲ್ಲಳು. ಹೆಂಗಸಿನ ಸಹಜ ಬುದ್ಧಿಯ ಸಹಾಯದಿಂದ ಮಧುಸೂದನ ಇಂದು ಆ ಹಳೆಯ ಮಧುಸೂದನನಲ್ಲವೆಂಬುದನ್ನು ಅರಿತಳು. ಇಂದು ಅವನು ಬಲಹೀನ. ತನ್ನ ಗೌರವದ ವಿಷಯದಲ್ಲಿ ಅವನಿಗೆ ಎಚ್ಚರಿಕೆಯಿರಲಿಲ್ಲ. ಮಧುವಿನ ಕೈಯಲ್ಲಿ ಕೈ ಇಟ್ಟು ಅದು ಅವನಿಗೆ ಕೆಟ್ಟುದೆನಿಸಲಿಲ್ಲವೆಂಬುದನ್ನು ಅರಿತಳು. "ನವವಧು ಅವನ ಹೆಮ್ಮೆ ನೋಯಿಸಿರುವಳಲ್ಲಾ, ಯಾವುದೋ ಒಂದು ಕಡೆಯಿಂದ ಚಿಕಿತ್ಸೆ ಪಡೆದು ಅದು ಒಳಗೊಳಗೆ ಸ್ವಲ್ಪ ನೆಮ್ಮದಿ ಹೊಂದೀತು. ಶ್ಯಾಮಾ ಕೊನೆಯ ಪಕ್ಷ ಅವನಲ್ಲಿ ಅನಾದರ ತೋರಳು. ಈ ಮಾತಾದರೂ ಸಂಪೂರ್ಣ ತುಚ್ಛವಾದುದಲ್ಲ. ಶ್ಯಾಮಾ ಕುಮುವಿಗಿಂತ ಕಡಿಮೆ ಸುಂದರಿಯೇನು? ಅವಳ ಬಣ್ಣ ಕಪ್ಪಿರಬಹುದು. ಆದರೆ ಅವಳ ಕಣ್ಣುಗಳು, ಅವಳ ತಲೆಗೂದಲು, ಅವಳ ತುಂಬು ತುಟಿಗಳು........" ಎಂಬ ಭಾವನೆಗಳು ಆಕೆಯಲ್ಲಿ ಉಂಟಾಗುತ್ತಿದ್ದುವು.

ಆ ವೇಳೆಗೆ ಶ್ಯಾಮಾ—"ಅದೋ ವಧು ಬರುತ್ತಿರುವಳು, ನಾನು ಹೊರಟೆ. ಆದರೆ ಒಂದು ಮಾತು, ಅವಳ ಮೇಲೆ ರೇಗಿ ಕೂಗಾಡಬೇಡ—ಪಾಪ ಅವಳಿನ್ನೂ ಎಳೆಯ ಹುಡುಗಿ" ಎಂದಳು.

ಕುಮು ಕೊಠಡಿಯೊಳಕ್ಕೆ ಕಾಲಿಡುತ್ತಲೇ ಮಧುಸೂದನ ಸುಮ್ಮನಿರ ಲಾರದೆ ಹೋದನು. "ಅಪ್ಪನ ಮನೆಯಿಂದ ಮೂರ್ಖೆಯ ಅಭ್ಯಾಸ ಮಾಡಿಕೊಂಡು ಬಂದಿರುವೆಯೆಂದು ಕಾಣುತ್ತೆ. ಆದರೆ ನಮ್ಮ ಮನೆ ಯಲ್ಲಿ ಅದೆಲ್ಲ ನಡೆಯದು. ನಿಮ್ಮ ಆ ನೂರನಗರೀ ಚಾಳಿಯನ್ನು ಬಿಡಬೇಕು" ಎಂದನು.

ಕುಮು ಎವೆಯಿಕ್ಕದೆ ನಿಂತಿದ್ದಳು. ಒಂದು ಮಾತನ್ನೂ ಆಡಲಿಲ್ಲ.

ಮಧುಸೂದನ ಅವಳ ಮೌನವನ್ನು ಕಂಡು ಮತ್ತೂ ರೇಗಿದನು. ಮನಸ್ಸಿನ ಅಂತರಾಳದಲ್ಲಿ ಆ ಹೆಣ್ಣಿನ ಮನಸ್ಸನ್ನು ಒಲಿಸಬೇಕೆಂಬ ಬಯಕೆಯೊಂದು ಮೂಡಿದೆಯೆಂದೇ ಈ ತೀವ್ರವಾದ ನಿಷ್ಫಲವಾದ ಕೋಪ. ಮಾತು ಮುಂದುವರಿಸಿದನು—"ನಾನು ಕೆಲಸದ ಮನುಷ್ಯ, ವಿರಾಮ ಬಹು ಕಡಮೆ. ಮೂರ್ಛೆ ಬೀಳುವ ಹೆಣ್ಣಿನ ಶುಶ್ರೂಷೆ ಮಾಡುವಷ್ಟು ಪುರುಸತ್ತು ನನಗಿಲ್ಲ. ಇದೋ ಸ್ಪಷ್ಟವಾಗಿ ಹೇಳುತ್ತೇನೆ."

ಕುಮು ಮೆಲ್ಲಮೆಲ್ಲನೆ ಹೇಳಿದಳು—"ನೀನು ನನಗೆ ಅವಮಾನ ಮಾಡಬಯಸುತ್ತೀಯೆ? ಸೋಲು ಒಪ್ಪಿಕೊಳ್ಳಬೇಕಾಗುತ್ತೆ. ನೀನು ಮಾಡುವ ಅವಮಾನವನ್ನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ."

ಕುಮು ಈ ಮಾತುಗಳನ್ನು ಯಾರಿಗೆ ಹೇಳುತ್ತಿರುವಳು? ಅವಳ ಅಗಲವಾದ ಕಣ್ಣುಗಳ ಇದಿರಿನಲ್ಲಿ ಯಾರು ನಿಂತಿರುವರು? ಮಧುಸೂದನ ಮಾತಿಲ್ಲದವನಾದನು. "ಈ ಹೆಣ್ಣು ಜಗಳವಾಡುವುದಿಲ್ಲವೇಕೆ? ಇವಳ ಎಣಿಕೆಯೇನು?" ಎಂದು ಯೋಚಿಸಿದನು.

ಮಧುಸೂದನ ಶ್ಲೇಷವಾಗಿ ಮಾತನಾಡಲಾರಂಭಿಸಿದನು. "ನೀನು ನಿಮ್ಮ ಅಣ್ಣನ ಶಿಷ್ಯೆ, ಆದರೆ ತಿಳಿದಿರಲಿ. ನಾನು ಆ ನಿಮ್ಮ ಅಣ್ಣನ ಸಾಹುಕಾರ. ಅವನನ್ನು ಈ ಸಂತೆಯಲ್ಲಿ ಕೊಂಡು ಆ ಸಂತೆಯಲ್ಲಿ ಮಾರಬಲ್ಲೆ."

ತಾನು ಅವಳ ಅಣ್ಣನಿಗಿಂತ ಶ್ರೇಷ್ಠನೆಂಬ ಮಾತನ್ನು ಕುಮುವಿನ ಮನಸ್ಸಿನಲ್ಲಿ ನೆಲೆಗೊಳಿಸುವುದಕ್ಕಾಗಿ ಮೂಢನಿಗೆ ಮಾತನಾಡಲು ಮತ್ತಾವ ವಿಷಯವೂ ಸಿಕ್ಕಲಿಲ್ಲ.

ಕುಮುವೆಂದಳು—"ನೋಡು, ನಿಷ್ಠುರನಾಗುವುದಾದರೆ ಆಗು. ಆದರೆ ಅಲ್ಪನಾಗಬೇಡ" ಎಂದು ಹೇಳಿ ಸೋಫಾದ ಮೇಲೆ ಕುಳಿತಳು.

ಕರ್ಕಶ ಸ್ವರದಲ್ಲಿ ಮಧುಸೂದನ ಹೇಳತೊಡಗಿದನು—"ಏನು ನಿಮ್ಮ ಅಣ್ಣನಿಗಿಂತ ನಾನು ಅಲ್ಪನೆ! ಮತ್ತೆ ನಿಮ್ಮ ಅಣ್ಣ ನನಗಿಂತಲೂ ದೊಡ್ಡವನೆ?"

ಕುಮು “ ನಿನ್ನನ್ನು ದೊಡ್ಡವನೆಂದು ಅರಿತೇ ನಿನ್ನ ಮನೆಗೆ ಬಂದಿರುವೆ” ಎಂದಳು.

ಆಗ ಕುಮು ಸೋಫಾದಿಂದ ಎದ್ದು ಕೋಣೆಯಿಂದ ಹೊರಬಿದ್ದು ಹೊರಗೆ ಬಿಸಿಲುಮಚ್ಚಿನಲ್ಲಿ ಕುಳಿತಳು.

ಕಲ್ಕತ್ತೆಯ ಶೀತಕಾಲದ ಕೃಪಣ ರಾತ್ರಿ. ಹೊಗೆ ಮತ್ತು ಇಬ್ಬನಿಗಳು ಕಲೆತು ಆಕಾಶವು ಅಪ್ರಸನ್ನವಾಗಿ ನಕ್ಷತ್ರಗಳ ಬೆಳಕು ಒಡೆದ ಗಂಟಲಿನಿಂದ ದನಿ ಹೊರಡುವಂತೆ ಇದೆ. ಕುಮುವಿನ ಮನಸ್ಸು ಆಗ ನಿಶ್ಚೇಷ್ಟಿತವಾಗಿತ್ತು. ಯಾವ ಯೋಚನೆಯೂ ಇರಲಿಲ್ಲ. ಯಾವ ನೋವೂ ಇರಲಿಲ್ಲ. ಬಲವಾಗಿ ಕವಿದಿದ್ದ ಮಂಜಿನ ನಡುವೆ ಅವಳು ಅಡಗಿಹೋದ ಹಾಗಿತ್ತು.

ಕುಮು ಈ ರೀತಿಯಲ್ಲಿ ನಿಶ್ಶಬ್ದವಾಗಿ ಕೋಣೆಯಿಂದ ಹೊರಗೆ ಹೋಗಿಬಿಡುವಳೆಂಬುವನ್ನು ಮಧುಸೂದನ ಒಮ್ಮೆಯಾದರೂ ಎಣಿಸಲಿಲ್ಲ. ತನ್ನ ಈ ಸೋಲಿಗಾಗಿ ಎಲ್ಲರಿಗಿಂತ ಹೆಚ್ಚಾಗಿ ಅವಳ ಅಣ್ಣನ ಮೇಲೆ ಕೋಪ ಬಂದಿತು. ಮಲಗುವ ಮನೆಯಲ್ಲಿ ಕುರ್ಚಿಯ ಮೇಲೆ ಕುಳಿತು ಶೂನ್ಯ ಆಕಾಶದ ಕಡೆಗೆ ದೃಷ್ಟಿ ಬೀರಿದನು. ಸ್ವಲ್ಪ ಹೊತ್ತು ಕುಳಿತಿದ್ದ ಅನಂತರ ನೆಮ್ಮದಿಯಿಂದಿರಲಾಗಲಿಲ್ಲ. ದಡದಡನೆ ಎದ್ದು ಬಿಸಿಲು ಮಹಡಿಗೆ ಹೋಗಿ ಅವಳ ಹಿಂದೆ ಹೋಗಿ ನಿಂತು “ ಬಡೊ ಬಉ ” ಎಂದನು.

ಕುಮು ಬೆಚ್ಚಿ, ಎದ್ದು ಹಿಂದಿರುಗಿ ನಿಂತುಕೊಂಡಳು.

“ ತಣ್ಣಗೆ ಹಿಮ ಸುರಿಯುವಾಗ ಹೊರಗೆ ಇಲ್ಲಿ ನಿಂತು ಏನು ಮಾಡುತ್ತಿರುವೆ. ಕೊಟಡಿಗೆ ನಡೆ” ಎಂದನು.

ಕುಮು ಸಂಕೋಚಗೊಳ್ಳದೆ ಮಧುಸೂದನನ ಮುಖದ ಕಡೆ ದಿಟ್ಟಿಸಿ ನೋಡುತ್ತ ನಿಂತಿದ್ದಳು. ಮಧುಸೂದನನ ಒಡೆತನದ ಬಲವೆಲ್ಲ ಹಾರಿಹೋಯಿತು. ಕುಮುವಿನ ಎಡಗೈ ಹಿಡಿದುಕೊಂಡು “ ಕೊಟಡಿಗೆ ನಡೆ” ಎಂದನು.

ಕುಮುವಿನ ಎಡಗೈಯಲ್ಲಿ ಅಣ್ಣನ ಆಶೀರ್ವಾದದ ಆ ತಂತಿ ಇತ್ತು. ಅದನ್ನು ಅವಳು ಎದೆಗೆ ಅಪ್ಪಿ ಹಿಡಿದುಕೊಂಡಿದ್ದಳು. ಗಂಡನ ಕೈಯಿಂದ

ಕೈ ಎಳೆದುಕೊಳ್ಳಲಿಲ್ಲ. ನೀರವವಾಗಿ ಮೆಲ್ಲಮೆಲ್ಲನೆ ಮಲಗುವ ಮನೆಗೆ ಹಿಂದಿರುಗಿದಳು.

೨೬

ಮರುದಿನ ಮುಂಜಾನೆ ಕುಮು ಹಾಸಿಗೆಯಲ್ಲಿ ಎದ್ದು ಕುಳಿತಾಗ ಅವಳ ಗಂಡ ಇನ್ನೂ ನಿದ್ರೆಯಲ್ಲಿದ್ದನು. ಕುಮು ಅವನ ಮುಖದ ಕಡೆ ನೋಡಲಿಲ್ಲ. ಅದರಿಂದ ಮನಸ್ಸು ಎಲ್ಲಿಯಾದರೂ ಕೆಟ್ಟೀತೆಂದು ಅಂಜಿದಳು. ಅತಿ ಜಾಗರೂಕತೆಯಿಂದ ಎದ್ದು ಕಾಲ ಬಳಿ ನಮಸ್ಕಾರಮಾಡಿದಳು. ಅನಂತರ ಸ್ನಾನದ ಮನೆಗೆ ಹೋದಳು. ಸ್ನಾನ ಮುಗಿಯಲು ಹಿಂಭಾಗದ ಕದ ತೆರೆದು ಮಹಡಿಯಲ್ಲಿ ಹೋಗಿ ಕುಳಿತಳು. ಆಗ ಮಂಜಿನೊಳಗಿನಿಂದ ಪೂರ್ವ ಆಕಾಶದಲ್ಲಿ ಹೊನ್ನ ರೇಖೆಯೊಂದು ಕಾಣಿಸತೊಡಗಿತ್ತು.

ಹೊತ್ತೇರಿತು. ಬಿಸಿಲು ಮೇಲಕ್ಕೇರಲು ಕುಮು ಮೆಲ್ಲಮೆಲ್ಲನೆ ಮಲಗುವ ಮನೆಗೆ ಹಿಂತಿರುಗಿ ಬಂದು ನೋಡಲು ಅವಳ ಗಂಡ ಹೊರಟು ಹೋಗಿದ್ದ. ಕನ್ನಡಿಯ ಡ್ರಾಯರಿನ ಮೇಲೆ ಅವಳ ಮಣಿಕೆಲಸಮಾಡಿದ್ದ ಚೀಲ ಇತ್ತು. ಅದರೊಳಗೆ ಅಣ್ಣನ ತಂತಿ ಇಡಬೇಕೆಂದು ತೆರೆಯಲು ಆ ನೀಲಿಕಲ್ಲಿನ ಉಂಗುರ ಇಲ್ಲದುದನ್ನು ಕಂಡಳು.

ಬೆಳಗಿನ ಜಾವದ ಮಾನಸಪೂಜೆಯ ಅನಂತರ ಅವಳ ಮುಖದಲ್ಲಿ ಮೂಡಿದ ಶಾಂತಿಯ ಭಾವ ಕಣ್ಮರೆಯಾಗಿ ಕಣ್ಣಿನಲ್ಲಿ ಬೆಂಕಿ ಜ್ವಲಿಸತೊಡಗಿತು. ಸ್ವಲ್ಪ ಮಿಠಾಯಿ ಮತ್ತು ಹಾಲು ಫಲಾಹಾರ ಮಾಡಿಸಬೇಕೆಂದು ಮೋತಿಯ ತಾಯಿ ಕರೆಯಲು ಬಂದಳು. ಕುಮುವಿನ ಬಾಯಿಂದ ಮಾತು ಹೊರಡಲಿಲ್ಲ. ಕಠಿಣವಾದ ಕಲ್ಲಿನ ಬೊಂಬೆಯಂತಿದ್ದಳು.

ಮೋತಿಯ ತಾಯಿ ಹೆದರಿ ಹತ್ತಿರ ಬಂದು ಕುಳಿತಳು. " ಏನಾಯಿತಕ್ಕ ? " ಎಂದು ಕೇಳಿದಳು. ಕುಮುವಿನ ಬಾಯಿಂದ ಮಾತು ಹೊರಡಲಿಲ್ಲ. ತುಟಿಗಳು ನಡುಗತೊಡಗಿದವು.

" ಹೇಳು, ಅಕ್ಕಾ, ನನಗೆ ಹೇಳು. ನಿನಗೆ ಎಲ್ಲಿ ನೋವಾಗಿದೆ.''

ಕುಮು ಬಿಗಿದ ಕೊರಲಿನಲ್ಲಿ "ಕದ್ದು ತೆಗೆದುಕೊಂಡು ಹೋಗಿದ್ದಾರೆ"

"ಏನು ತೆಗೆದುಕೊಂಡು ಹೋಗಿದ್ದಾರೆ ಅಕ್ಕ?"

"ನನ್ನ ಉಂಗುರ, ನಮ್ಮ ಅಣ್ಣನ ಆಶೀರ್ವಾದದ ಉಂಗುರ"

"ಯಾರು ಎತ್ತಿಕೊಂಡು ಹೋದರು?"

ಕುಮು ಎದ್ದು ನಿಂತು ಯಾರ ಹೆಸರನ್ನೂ ಹೇಳದೆ ಹೊರಗಡೆಗೆ ಕೈ ತೋರಿದಳು.

"ನೆಮ್ಮದಿಯಿಂದಿರು ಅಕ್ಕ, ನಿನ್ನ ಸಂಗಡ ತಮಾಷೆ ಮಾಡಿರುವರು. ಮತ್ತೆ ಹಿಂದಕ್ಕೆ ಕೊಡುವರು"

"ಹಿಂದಕ್ಕೆ ತೆಗೆದುಕೊಳ್ಳಲಾರೆ–ನೋಡೋಣ, ಅವರು ಅದೆಷ್ಟು ಅತ್ಯಾಚಾರ ಮಾಡಬಲ್ಲರು!"

"ಒಳ್ಳೇದು, ಅದು ಆಮೇಲೆ ಆಗಲಿ, ಈಗ ಬಾಯಿಗೆ ಏನಾದರೂ ಹಾಕಿಕೊಳ್ಳುವೆಯಂತೆ ಬಾ"

"ಇಲ್ಲ, ಸಾಧ್ಯವಿಲ್ಲ, ಇಲ್ಲಿಯ ತಿಂಡಿ ಗಂಟಲಲ್ಲಿ ಇಳಿಯದು"

"ನನ್ನ ಲಕ್ಷ್ಮಿ. ನನಗಾಗಿ ಸ್ವಲ್ಪ ತಿನ್ನು"

"ಒಂದು ಸಂಗತಿ ವಿಚಾರಿಸುತ್ತೇನೆ. ಇಂದಿನಿಂದ ನನ್ನ ಸ್ವಂತದ್ದೆಂದು ಏನೂ ಉಳಿದಿಲ್ಲ ಅಲ್ಲವೆ?"

"ಇಲ್ಲ, ಉಳಿದಿಲ್ಲ. ಯಾವುದಾದರೂ ಉಳಿದಿದ್ದರೆ ಅದು ಗಂಡಿನ ಮನಸ್ಸನ್ನನುಸರಿಸಿದೆ. ಅರಿಯೆಯೇನು–ಕಾಗದದಲ್ಲಿ ದಾಸೀ ಎಂದು ಕೈ ಬರಹ ಹಾಕಬೇಕೆಂಬುದನ್ನು."

ದಾಸೀ! ರಘುವಂಶದ ಇಂದುಮತಿಯ ಮಾತು ನೆನಪಾಯಿತು.

ಗೃಹಿಣೀ ಸಚಿವಃ ಸಖೀಮಿಥಃ
ಪ್ರಿಯಶಿಷ್ಯಾ ಲಲಿತೇ ಕಲಾವಿದೌ —

ಪಟ್ಟಿಯಲ್ಲಿ ದಾಸೀ ಎಂದು ಎಲ್ಲೂ ಇಲ್ಲವಲ್ಲ. ಸತ್ಯವಾನನ ಹೆಂಡತಿ ಸಾವಿತ್ರಿ ದಾಸಿಯಾಗಿದ್ದಾಳೇನು? ಅಥವಾ ಉತ್ತರರಾಮಚರಿತ್ರೆಯ ಸೀತೆಯಾದರೂ ದಾಸಿಯೆ?

"ಹೆಂಗಸರನ್ನು ದಾಸಿ ಎಂಬುದಾಗಿ ಭಾವಿಸುವವರು ಯಾವ ಜಾತಿಗೆ ಸೇರಿದವರು?" ಎಂದು ಕೇಳಿದಳು ಕುಮು.

"ಅವರು ಇನ್ನೂ ಮನುಷ್ಯರ ಮಟ್ಟವನ್ನರಿಯದವರು. ಅವರು ಕೇವಲ ಇತರರಿಂದ ಜೀತ ದುಡಿಸಿಕೊಳ್ಳುವುದಷ್ಟೇ ಅಲ್ಲ; ತಮ್ಮ ಜೀತವನ್ನು ತಾವೇ ಮಾಡುವರು. ಎಂದು ಆಫೀಸಿಗೆ ಹೋಗಲು ಸಾಧ್ಯವಿಲ್ಲವೋ ಆಗ ತಮ್ಮ ವರಮಾನಕ್ಕೆ ಅಂದಿನ ಹಣವನ್ನು ಲೆಕ್ಕಕ್ಕೆ ಸೇರಿಸಿಕೊಳ್ಳುವುದಿಲ್ಲ. ಒಮ್ಮೆ ಖಾಯಿಲೆ ಬಂದು ಒಂದು ತಿಂಗಳ ಹಣ ಕಡಮೆಯಾಯಿತೆನ್ನಿ. ಆನಂತರ ಎರಡು ಮೂರು ತಿಂಗಳ ಊಟ ತಿಂಡಿಯ ಖರ್ಚಿನವರೆಗೆ ಕಡಮೆ ಮಾಡಿ ನಷ್ಟವನ್ನು ಭರ್ತಿಮಾಡಿಕೊಳ್ಳುವರು. ಇಷ್ಟುದಿನ ನಾನು ಮನೆಗೆಲಸವನ್ನು ನಡೆಸುತ್ತ ಬಂದಿರುವೆ. ಅದಕ್ಕನುಸಾರವಾಗಿಯೇ ನನಗೂ ತಿಂಗಳಿಗೆ ಇಷ್ಟೆಂದು ನಿಗದಿಯಾಗಿದೆ.

ಆತ್ಮೀಯರೆಂದು ಅವರು ಯಾರನ್ನೂ ಲೆಕ್ಕಿಸರು. ಈ ಮನೆಯಲ್ಲಿ ಯಜಮಾನನಿಂದ ಆರಂಭಿಸಿ ದಾಸ ದಾಸಿಯರವರೆಗೆ ಎಲ್ಲರೂ ಜೀತದವರೇ."

ಕುಮು ಸ್ವಲ್ಪ ಸುಮ್ಮನಿದ್ದು "ನಾನೂ ಆ ಜೀತವನ್ನೇ ಮಾಡುವೆ. ನನ್ನ ನಿತ್ಯಗಟ್ಟಲೆಯ ಅಶನ ವಸನದ ಬೆಲೆಯನ್ನು ಲೆಕ್ಕದಂತೆ ನಿತ್ಯ ತೀರಿಸುವೆ. ನಾನು ಈ ಮನೆಯಲ್ಲಿ ಸಂಬಳವಿಲ್ಲದ ದಾಸಿಯಾಗಿ ಇರಲಾರೆ. ನಡೆ, ನನ್ನನ್ನು ಕೆಲಸಕ್ಕೆ ಸೇರಿಸಿಕೊ. ಮನೆಗೆಲಸವನ್ನು ನೋಡಿಕೊಳ್ಳುವ ಹೊಣೆ ನಿನ್ನದೇ ಅಲ್ಲವೆ. ನನ್ನನ್ನು ನೀನು ನಿನ್ನ ಕೈಕೆಳಗೆ ಇಟ್ಟುಕೊ. ನನ್ನನ್ನು ರಾಣಿಯೆಂದು ಯಾರೂ ಹಾಸ್ಯಮಾಡದೆ ಇರಿ." ಎಂದಳು.

ಮೋತಿಯ ತಾಯಿ ನಕ್ಕು ಕುಮುವಿನ ಗಲ್ಲ ಹಿಡಿದುಕೊಂಡು "ಹಾಗಾದರೆ ನನ್ನ ಮಾತು ಕೇಳಬೇಕು ನಾನು ಅಪ್ಪಣೆ ಮಾಡುತ್ತೇನೆ. ಈಗ ಫಲಾಹಾರಮಾಡಲು ನಡೆ" ಎಂದಳು.

ಕೋಣೆಯಿಂದ ಹೊರಗೆ ಘೋರಡುತ್ತ ಹೊರಡುತ್ತ "ನೋಡಮ್ಮ, ನನ್ನನ್ನು ಅರ್ಪಿಸಿಕೊಳ್ಳುವನೆಂದೇ ಸಿದ್ಧಳಾಗಿ ಬಂದಿದ್ದೆ. ಆದರೆ ಅವರು ಯಾವ ಬಗೆಯಲ್ಲೂ ಅರ್ಪಣೆಗೆ ಎಡೆಕೊಡಲಿಲ್ಲ. ಈಗ ದಾಸಿಯನ್ನೇ ಕಟ್ಟಿಕೊಂಡಿರಲಿ—ನನ್ನನ್ನು ಪಡೆಯರು."

ಮೋತಿಯ ತಾಯಿಯೆಂದಳು "ಕಟ್ಟಿಗೆಯುವನು ಮರ ಕಡಿಯುವುದನ್ನು ಮಾತ್ರ ಬಲ್ಲ. ಆತ ಮರವನ್ನು ಬೆಳೆಯುವುದಿಲ್ಲ, ಕಟ್ಟಿಗೆ ಪಡೆಯುವನು. ತೋಟಗಾರ ಗಿಡವನ್ನು ಪೋಷಿಸಲು ಬಲ್ಲ. ಅವನು ಹೂವು, ಹಣ್ಣುಗಳನ್ನು ಪಡೆಯುವನು. ನೀನು ಕಟ್ಟಿಗೆಯುವನ ಕೈಯಲ್ಲಿ ಬಿದ್ದಿರುವೆ. ಅವನು ವ್ಯಾಪಾರಿ. ಅವನ ಮನದಲ್ಲಿ ಎಲ್ಲಿಯೂ ನೋವಿಲ್ಲ."

ಒಂದು ಹೊತ್ತಿನಲ್ಲಿ ಕುಮು ಮಲಗುವ ಮನೆಯಲ್ಲಿ ಬಂದು ನೋಡಿದಳು. ಅವಳ ಟೀ ಪಾಯಿಯ ಮೇಲೆ ಒಂದು ಸೀಸೆ ಪೆಪ್ಪರಮೆಂಟ್ ಇತ್ತು. ಹಾಬಲೂ ತನ್ನ ತ್ಯಾಗದ ಅರ್ಘ್ಯವನ್ನು ಗುಟ್ಟಾಗಿ ಅರ್ಪಿಸಿ ತಾನು ಎಲ್ಲೋ ಅವಿತುಕೊಂಡಿದ್ದನು. ಇಂತಹ ಸಂದರ್ಭದಲ್ಲಿ ಕಲ್ಲ ಬಿರುಕಿನಲ್ಲೂ ಹೂ ಅರಳುವುದು. ಬಾಲಕನ ಈ ಪೆಪ್ಪರಮೆಂಟಿನ ಭಾಷೆ ಅವಳನ್ನು ಒಂದೇ ಕಾಲದಲ್ಲಿ ಅಳಿಸಿತು ಮತ್ತು ನಗಿಸಿತು. ಅವನನ್ನು ಹುಡುಕಲು ಹೊರಟಾಗ ಅವನು ಕದದ ಹಿಂದೆ ಸದ್ದಿಲ್ಲದೆ ನಿಂತಿದ್ದುದನ್ನು ಕಂಡಳು. ಅವನು ಈ ಕೋಣೆಗೆ ಬಂದು ಹೋಗುವುದನ್ನು ನಿಷೇಧಿಸಿದ್ದಳು. ಆಮೇಲೆ ಯಾವುದಾದರೊಂದು ಕಾರಣದಿಂದ ಯಜಮಾನನಿಗೆ ಕೋಪ ಬಂದೀತೆಂದು ಅವಳಿಗೆ ಭಯವಿತ್ತು. ಒಟ್ಟಿನ ಮೇಲೆ ಮಧುಸೂದನನ ಸ್ವಂತ ಕೆಲಸದ ಸಂದರ್ಭ ಬಿಟ್ಟು ಉಳಿದ ವಿಷಯಗಳಲ್ಲಿ ಅವನ ಬಳಿಯಿಂದ ಸಂಪೂರ್ಣವಾಗಿ ದೂರವಾಗಿರುವುದೇ ನಿರಾಪದವಾದದ್ದು. ಈ ಸಂಗತಿ ಆ ಮನೆಯವರೆಲ್ಲರೂ ತಿಳಿದೇ ಇದ್ದರು.

ಕುಮು ಹಾಬಲೂವನ್ನು ಹಿಡಿದು ಕೋಣೆಗೆ ಕರೆತಂದು ತೊಡೆಯ ಮೇಲೆ ಕೂರಿಸಿಕೊಂಡಳು. ಅವಳ ಕೋಣೆಯ ಅಲಂಕಾರದಲ್ಲಿ ಬೊಂಬೆಯ ಜಾತಿಯ ಪದಾರ್ಥ ಏನೇನಿತ್ತೋ ಅವನ್ನು ಅವರಿಬ್ಬರೂ ತಿರುವಿ ತಿರುವಿ ನೋಡತೊಡಗಿದರು. ಪೇಪರ್‌ವೆಯಿಟ್ ಒಂದು

ಹಾಬಲೂವಿನ ಮನಸ್ಸಿಗೆ ಬಹಳ ಒಪ್ಪಿಗೆಯೆಂದು ಕುಮುವಿಗೆ ಅರಿವಾಯಿತು ಗಾಜಿನ ಒಳಗಡೆಯಲ್ಲಿ ಬಣ್ಣದ ಹೂವು ಯಾವ ಬಗೆಯಲ್ಲಿ ಕಾಣಿಸುವುದು ಎನ್ನುವುವನ್ನು ಅವನು ಅರಿಯುಲಾರದೆ ಹೋದ.

ಕುಮು "ಇದನ್ನು ತೆಗೆದುಕೊಳ್ಳುವೆಯಾ, ಗೋಪಾಲ," ಎಂದಳು.

ಇಂತಹ ದೊಡ್ಡ ಅಸಂಭಾವ್ಯವಾದ ಸಲಹೆಯನ್ನು ಅವನ ವಯಸ್ಸಿನಲ್ಲಿ ಅವನೆಂದೂ ಕೇಳಿಯೇ ಇರಲಿಲ್ಲ. ಇಂತಹ ಪದಾರ್ಥ ಸಿಕ್ಕುವುದೆಂದು ಅವನು ಆಶಿಸಲು ಎಡೆಯಿತ್ತೇನು? ವಿಸ್ಮಯ ಮತ್ತು ಸಂಕೋಚದೊಡನೆ ಕುಮುವಿನ ಮುಖವನ್ನು ಸ್ಥಿರವಾಗಿ ನೋಡುತ್ತ ನಿಂತಿದ್ದನು.

ಕುಮು "ಇದನ್ನು ನೀನು ತೆಗೆದುಕೊಂಡು ಹೋಗು" ಎಂದಳು.

ಹಾಬಲೂವಿಗೆ ಆನಂದವನ್ನು ಅಡಗಿಸಲಾಗಲಿಲ್ಲ. ಅದನ್ನು ಕೈಯಲ್ಲಿ ಎತ್ತಿಕೊಂಡು ನೆಗೆಯುತ್ತ ನೆಗೆಯುತ್ತ ಹೊರಟು ಹೋದನು.

ಅಂದೇ ಸಂಜೆ ಹಾಬಲೂವಿನ ತಾಯಿ ಬಂದು "ನೀನು ಏನು ಮಾಡಿದೆಯಮ್ಮ? ಹಾಬಲೂವಿನ ಕೈಯಲ್ಲಿ ಗಾಜಿನ ಪೇಪರ್‌ವೆಯಿಟ್ ಕಂಡು ದೊಡ್ಡ ಯಜಮಾನರು ಗೊಂದಲವೆಬ್ಬಿಸಿಬಿಟ್ಟರು. ಕಿತ್ತುಕೊಂಡೂ ಬಿಟ್ಟರು. ಅಷ್ಟೇ ಅಲ್ಲದೆ ಕಳ್ಳನೆಂದು ಅವನನ್ನು ಹೊಡೆದರು. ಹುಡುಗನೂ ಹಾಗೆಯೆ—ನಿನ್ನ ಹೆಸರನ್ನು ಉಚ್ಚರಿಸಲೂ ಇಲ್ಲ. ಹಾಬಲೂವಿಗೆ ನಾನೆ ಸಾಮಾನುಗಳನ್ನು ಕದಿಯಲು ಕಲಿಸಿರುವೆನೆಂಬ ಮಾತೂ ಕ್ರಮೇಣ ಹೊರಬೀಳುವುದು" ಎಂದಳು.

ಕುಮು ಮರದ ಬೊಂಬೆಯಂತೆ ಬಿಮ್ಮನೆ ಕುಳಿತಿದ್ದಳು.

ಈ ಸಮಯದಲ್ಲಿ ಹೊರಗೆ ಮಚ್ ಮಚ್ ಶಬ್ದದಿಂದ ಮಧುಸೂದನ ಬರುತ್ತಿದ್ದ. ಮೋತಿಯ ತಾಯಿ ಅವಸರ ಅವಸರವಾಗಿ ಓಡಿದಳು. ಮಧುಸೂದನ ಗಾಜಿನ ಪೇಪರ್ ವೈಟನ್ನು ತಂದು ಅದರ ಸ್ಥಳದಲ್ಲಿ ಅದನ್ನು ಮೆಲ್ಲನೆ ಇಟ್ಟನು. ಅನಂತರ ಆಕ್ಷೇಪಣೆಯ ದನಿಯಲ್ಲಿ ಶಾಂತ ಗಂಭೀರ ಸ್ವರದಲ್ಲಿ "ಹಾಬಲೂ ನಿನ್ನ ಕೋಣೆಯಿಂದ ಇದನ್ನು ಕದ್ದು ತೆಗೆದುಕೊಂಡು

ಹೋಗಿದ್ದ. ಸಾಮಾನುಗಳನ್ನು ಎಚ್ಚರಿಕೆಯಿಂದ ಇಟ್ಟುಕೊಳ್ಳುವುದನ್ನು ಕಲಿ" ಎಂದನು.

ಕುಮು ತೀಕ್ಷ್ಣ ಸ್ವರದಲ್ಲಿ "ಅವನು ಕದಿಯಲಿಲ್ಲ"

"ಸರಿ. ಒಳ್ಳೆಯದಾಯಿತು-ಹಾಗಾದರೆ ಎತ್ತಿಕೊಂಡು ಹೋದ"

"ಇಲ್ಲ. ನಾನೇ ಅವನಿಗೆ ಕೊಟ್ಟೆ"

"ಹೀಗೆ ಮಾಡಿ ಅವನನ್ನು ಹಾಳುಮಾಡಲು ಹೊರಟಿರುವೆಯೇನು? ಒಂದು ಮಾತು ನೆನಪಿಡು. ನನ್ನ ಅಪ್ಪಣೆಯಿಲ್ಲದೆ ಪದಾರ್ಥಗಳನ್ನು ಯಾರಿಗೂ ಕೊಡಕೂಡದು. ನಾನು ಯಾವ ಬಗೆಯ ಅವ್ಯವಸ್ಥೆಯನ್ನೂ ಸಹಿಸಲಾರೆ".

ಕುಮು ಎದ್ದು ನಿಂತು "ನೀನು ನೀಲಿಕಲ್ಲಿನ ಉಂಗುರ ತೆಗೆದುಕೊಳ್ಳಲಿಲ್ಲವೇನು?" ಎಂದಳು.

ಮಧುಸೂದನ, "ಹೌದು ತೆಗೆದುಕೊಂಡಿದೇನೆ." ಎಂದನು.

"ಅದಕ್ಕಿಂತ ನಿನ್ನ ಗಾಜಿನ ಚೂರು ಬಹಳ ಬೆಲೆ ಬಾಳತಕ್ಕದೋ"

"ಅದನ್ನು ನೀನು ಇಟ್ಟುಕೊಳ್ಳಕೂಡದೆಂದು ನಾನು ಮೊದಲೇ ಹೇಳಲಿಲ್ಲವೆ?"

"ನಿನ್ನ ಸಾಮಾನನ್ನು ನೀನು ಇಟ್ಟುಕೊಳ್ಳಲು ಮಾತ್ರ ಸಾಧ್ಯವುಂಟು. ನಾನು ನನ್ನ ಸಾಮಾನನ್ನು ಇಟ್ಟುಕೊಳ್ಳಲು ಸಾಧ್ಯವಿಲ್ಲವೋ".

"ಈ ಮನೆಯಲ್ಲಿ ನಿನ್ನ ಸ್ವಂತದ್ದೆಂದು ಏನೂ ಇಲ್ಲವಲ್ಲ"

"ಏನೂ ಇಲ್ಲ! ಹಾಗಾದರೆ ಈ ನಿನ್ನ ಮನೆ ನಿನಗೇ ಇರಲಿ."

ಕುಮು ಹೊರಗೆ ಹೋದುದೇ ತಡ ದಡದಡನೆ ಶ್ಯಾಮಾ ಕೋಣೆಯೊಳಕ್ಕೆ ಬಂದು "ಸೊಸೆ ಎಲ್ಲಿಗೆ ಹೋದಳು?" ಎಂದು ಕೇಳಿದಳು.

"ಯಾಕೆ?"

"ಬೆಳಗ್ಗಿನಿಂದ ಅವಳ ಊಟ ಇಟ್ಟುಕೊಂಡು ಕಾಯುತ್ತಿದ್ದೇನೆ. ಈ ಮನೆಯೊಳಗೆ ಬಂದು ಊಟವನ್ನೂ ಬಿಟ್ಟುಬಿಟ್ಟಿರುವಳೇನು?"

“ಅಷ್ಟೇ ತಾನೆ, ನೂರ್‌ನಗರದ ರಾಜಕನ್ಯೆ ತಿನ್ನದೆ ಹೋದರೆ ಹೋಗಲಿ ನೀವುಗಳೆಲ್ಲ ಅವಳ ದಾಸಿಗಳೇನು ?”

“ಛೀ-ಛಿ, ಠಾಕೂರ್‌ಪೊ* ಎಳೆಹುಡುಗಿಯ ಮೇಲೆ ಅಷ್ಟೊಂದು ಕೋಪಗೊಳ್ಳಬಾರದು. ಅವಳು ಹೀಗೆ ಊಟಮಾಡದೆ ಇರುವುದನ್ನು ನೋಡುವುದಕ್ಕೆ ನಮ್ಮಿಂದ ಸಹಿಸಲಾಗುವುದಿಲ್ಲ. ಅವತ್ತು ಆಕೆ ಬಯಸಿ ಬಯಸಿ ಮೂರ್ಛೆ ಹೋಗಿದ್ದಳೇನು ?”

ಮಧುಸೂದನ ಗರ್ಜಿಸಿ “ಏನೂ ಮಾಡಬೇಕಾಗಿಲ್ಲ. ಹೊರಟು ಹೋಗು ! ಹಸಿವಾದರೆ ತಾನೇ ತಿನ್ನುವಳು” ಎಂದನು.

ಶ್ಯಾಮಾ ಬಲು ನೊಂದವಳಂತೆ ಹೊರಟು ಹೋದಳು.

ಮಧುಸೂದನನ ತಲೆಗೆ ರಕ್ತ ಏರತೊಡಗಿತು. ಅತಿ ವೇಗವಾಗಿ ಸ್ನಾನದ ಮನೆಗೆ ಹೋಗಿ ನಲ್ಲಿ ತಿರುವಿ ಅದರ ಕೆಳಗೆ ತಲೆ ಒಡ್ಡಿದನು.

೨೭

ಸಂಜೆಯಾಗುತ್ತ ಬಂದಿತು. ಅಂದು ಕುಮುವನ್ನು ಎಲ್ಲಿ ಹುಡುಕಿದರೂ ಕಾಣಲಿಲ್ಲ. ಕೊನೆಗೆ ಉಗ್ರಾಣದಲ್ಲಿ ಇಕ್ಕಟ್ಟಾದ ಒಂದು ಮೂಲೆಯಲ್ಲಿ ದೀಪ, ದೀಪಸ್ತಂಭ, ಎಣ್ಣೆಯ ಲ್ಯಾಂಪು ಮೊದಲಾದುವುಗಳನ್ನು ಇಟ್ಟಿರುವ ಕಡೆ ನೆಲದ ಮೇಲೆ ಚಾಪೆ ಹಾಸಿಕೊಂಡು ಕುಳಿತಿದ್ದುದನ್ನು ಕಂಡರು.

ಮೋತಿಯ ತಾಯಿ ಬಂದು “ಇದೇನು ಆಟ ಅಕ್ಕ !” ಎಂದಳು.

ಕುಮು—“ಈ ಮನೆಯಲ್ಲಿ ನಾನು ದೀಪನ ಬತ್ತಿ ಸರಿಮಾಡುವೆನು. ಇಲ್ಲೇ ನನ್ನ ಜಾಗ” ಎಂದಳು.

ಮೋತಿಯ ತಾಯಿ “ಒಳ್ಳೆಯ ಕೆಲಸವನ್ನೇ ವಹಿಸಿಕೊಂಡಿರುವೆಯಮ್ಮ. ನೀನು ಈ ಮನೆಯನ್ನು ಬೆಳಗುವುದಕ್ಕೇ ಬಂದಿರುವೆ. ಆದರೆ ಅದಕ್ಕಾಗಿ ನೀನು ದೀಪದ ಎಣ್ಣೆ ಬತ್ತಿ ಮೊದಲಾದವುಗಳ ಮೇಲ್ವಿಚಾರಣೆ ಮಾಡಬೇಕಾಗಿಲ್ಲ. ಈಗ ನಡೆ”—ಎಂದಳು.

---

* ಠಾಕೂರ್—ಪೊ = ಗಂಡನ ತಮ್ಮ—ಮೈದುನ.

ಕುಮು ಏಳಿದಷ್ಟೂ ಅಲುಗಲಿಲ್ಲ.

"ಹಾಗಾದರೆ ನಾನು ನಿನ್ನ ಹತ್ತಿರವೇ ಮಲಗುವೆನು" ಎಂದಳು ಮೋತಿಯ ತಾಯಿ.

ಕುಮು ದೃಢವಾದ ಸ್ವರದಲ್ಲಿ–"ಆಗದು" ಎಂದಳು. ಈ ಸಾಧು ಹೆಣ್ಣಿನಲ್ಲಿ ಅಧಿಕಾರ ಮಾಡಬಲ್ಲ ಶಕ್ತಿಯಿದೆಯೆಂಬುದನ್ನು ಮೋತಿಯು ಅರಿತಳು. ಅವಳು ಹೊರಟು ಹೋಗಬೇಕಾಯಿತು.

ಮಧುಸೂದನ, ರಾತ್ರಿ ಮಲಗಲು ಬಂದವನು ಕುಮುವಿನ ಸುದ್ದಿಯನ್ನು ವಿಚಾರಿಸಿದನು. ಸಂಗತಿ ತಿಳಿದಾಗ, ಮೊದಲು, "ಒಳ್ಳೆಯದಾಯಿತು, ಆ ಕೋಣೆಯಲ್ಲೇ ಇರಲಿ, ನೋಡೋಣ ಎಷ್ಟು ದಿನ ಇರಲು ಸಾಧ್ಯ; ಸಮಾಧಾನಮಾಡಿದಷ್ಟೂ ಹಟ ಹೆಚ್ಚಿ ಬಿಡುವುದು" ಎಂದು ಅಂದುಕೊಂಡನು.

ಹೀಗೆ ಅಂದುಕೊಂಡು ದೀಪ ಆರಿಸಿ ಮಲಗಲು ಹೋದನು. ಆದರೆ ಬಡಪೆಟ್ಟಿಗೂ ನಿದ್ರೆಬರಲಿಲ್ಲ....ಪ್ರತಿಯೊಂದು ಸಪ್ಪಳಾದಾಗಲೂ ಅವಳು ಬರುತ್ತಿರುವಳೆಂದು ಮನಸ್ಸಿಗನ್ನಿಸುತ್ತಿತ್ತು. ಒಮ್ಮೆ ಬಾಗಿಲ ಹೊರಗಡೆ ನಿಂತಿರುವಂತೆ ಮನಸ್ಸಿಗೆ ತೋರಿತು. ಹಾಸಿಗೆ ಬಿಟ್ಟು ಎದ್ದು ಬಂದು ನೋಡಲು ಎಲ್ಲೂ ಯಾರೂ ಇರಲಿಲ್ಲ. ರಾತ್ರಿ ಆವ ಹಾಗೆಲ್ಲ ಮನಸ್ಸು ತಳಮಳಗೊಳ್ಳುತ್ತಿತ್ತು. ಕುಮುವನ್ನು ಅಲಕ್ಷ್ಯಮಾಡುವ ಶಕ್ತಿ ಅವನಿಗೆ ಉಂಟಾಗಲಿಲ್ಲ. ಆದರೆ ಸ್ವತಃ ಮುಂದುವರಿದು ಅವಳ ಬಳಿ ಸೋಲನ್ನೊಪ್ಪಿಕೊಳ್ಳುವುದು ಅವನ ಪದ್ಧತಿಗೆ ತೀರ ವಿರುದ್ಧ. ತಣ್ಣೀರಿನಿಂದ ಮುಖ ತೊಳೆದುಕೊಂಡು ಬಂದು ಮಲಗಿದನು; ಆದರೆ ನಿದ್ರೆ ಬರಲಿಲ್ಲ. ಹೊರಳಾಡುತ್ತ ಎದ್ದು ಕುಳಿತನು. ಯಾವ ಬಗೆಯಲ್ಲಿಯೂ ಕುತೂಹಲವನ್ನು ಅಡಗಿಸಲು ಸಾಧ್ಯವಾಗಲಿಲ್ಲ. ಕೈಯಲ್ಲಿ ಒಂದು ಲಾಂದ್ರ ಹಿಡಿದುಕೊಂಡು ನಿದ್ದೆಹೋಗುವವರ ಕೊಟಡಿಗಳ ಸಾಲಿನ ಮಧ್ಯೆ ನಿಶ್ಶಬ್ದವಾಗಿ ಹೆಜ್ಜೆಯಿಡುತ್ತ, ಅಂತಃಪುರದ ಆ ಫರಾಶ್‌ಖಾನೆಯ ಇದಿರಿನಲ್ಲಿ ಬಂದು ಕ್ಷಣ ಹೊತ್ತು ಕಿವಿಗೊಟ್ಟು ನಿಂತಿದ್ದನು. ಒಳಗೆ ಯಾವ ಬಗೆಯ ಸದ್ದೂ ಕೇಳಲಿಲ್ಲ. ಎಚ್ಚರಿಕೆಯಿಂದ ಕದ ತೆರೆದು ನೋಡಿದನು. ಕುಮು ನೆಲದ

ಮೇಲೆ ಚಾಪೆ ಹಾಸಿಕೊಂಡು ಮಲಗಿದ್ದಳು. ಅದೇ ಚಾಪೆಯ ಒಂದು ಕೊನೆಯನ್ನು ಸುತ್ತಿ, ತಲೆದಿಂಬಾಗಿ ಮಾಡಿಕೊಂಡಿದ್ದಳು. ಮಧುಸೂದನನಿಗೆ ಹೇಗೆ ನಿದ್ರೆ ಇಲ್ಲವೋ ಕುಮುದಿಗೂ ಹಾಗೆ ನಿದ್ರೆ ಇಲ್ಲದಿರುವುದು ನ್ಯಾಯವಾಗಿತ್ತು. ಆದರೆ ಅವಳು ಹಾಯಾಗಿ ನಿದ್ರೆ ಹೋಗುತ್ತಿದ್ದುದನ್ನು ನೋಡಿದನು. ಅಷ್ಟೇ ಅಲ್ಲ; ಅವಳ ಮುಖದ ಮೇಲೆ ಲಾಂದ್ರದ ಬೆಳಕನ್ನು ಬಿಟ್ಟನು. ಆಗಲೂ ಅವಳಿಗೆ ಎಚ್ಚರವಾಗಲಿಲ್ಲ. ಈ ಸಮಯದಲ್ಲಿ ಕುಮು, ಏನೋ ಕನವರಿಸುತ್ತ ಒಂದು ಮಗ್ಗುಲಿಗೆ ಹೊರಳಿದಳು. ಮನೆಯವನು ಎಚ್ಚರವಾಗುವ ಲಕ್ಷಣ ನೋಡಿ ಕಳ್ಳ ಹೇಗೆ ಓಡಿ ಹೋಗುವನೋ ಮಧುಸೂದನ ಹಾಗೆಯೇ ಅವಸರ ಅವಸರವಾಗಿ ಓಡಿಹೋದನು. ಕುಮು ತನ್ನ ಸೋಲನ್ನು ಎಲ್ಲಿಯಾದರೂ ನೋಡಿಯಾಳು, ಎಲ್ಲಿಯಾದರೂ ಮನಸ್ಸಿನಲ್ಲೇ ನಕ್ಕಾಳು, ಎಂಬ ಭಯವಾಯಿತು ಅವನಿಗೆ.

ದೀಪದ ಮನೆಯಿಂದ ಮಧುಸೂದನ ಹೊರಬಿದ್ದು ವರಾಂಡಾ ಹಾದು ಸ್ವಲ್ಪದೂರ ಹೋಗುತ್ತಲೆ ಇದಿರಿನಲ್ಲಿ ಶ್ಯಾಮಾ ಕಾಣಿಸಿದಳು. ಅವಳ ಕೈಯಲ್ಲಿ ಒಂದು ಹಣತೆಯಿತ್ತು.

“ ಇದೇನು ಠಾಕೂರ್‌ಪೊ, ಇಲ್ಲಿ ಎಲ್ಲಿಂದ ಬಂದೆ ? ”

ಮಧುಸೂದನ ಅವಳ ಮಾತಿಗೆ ಏನೂ ಉತ್ತರ ಕೊಡದೆ- “ ನೀನೆಲ್ಲಿಗೆ ಹೊರಟೆ ? ” ಎಂದನು.

“ ನಾಳೆ ನನಗೆ ವ್ರತ, ಬ್ರಾಹ್ಮಣಭೋಜನ ಮಾಡಿಸಬೇಕು. ಅದರ ಏರ್ಪಾಡು ಮಾಡಲು ಹೋಗುತ್ತಿರುವೆ. ನಿನಗೂ ಕರೆಯಿದೆ. ಆದರೆ ನಿನಗೆ ದಕ್ಷಿಣೆ ಕೊಡುವಷ್ಟಿನ ಶಕ್ತಿ ನನಗಿಲ್ಲವಪ್ಪ ”

ಮಧುಸೂದನನ ಬಾಯಲ್ಲಿ ಉತ್ತರ ಹೊರಬೀಳುವುದರಲ್ಲಿತ್ತು. ಅದು ಅಲ್ಲೇ ಅಡಗಿಹೋಯಿತು—

ಆ ರಾತ್ರಿಯ ಕೊನೆಯ ಹೊತ್ತಿನ ಕತ್ತಲೆಯಲ್ಲಿ ಹಣತೆಯ ಬೆಳಕಿನಲ್ಲಿ ಶ್ಯಾಮಾ ಅಂದವಾಗಿ ಕಾಣುತ್ತಿದ್ದಳು. ಶ್ಯಾಮಾ ಸ್ವಲ್ಪ ನಕ್ಕು— “ ಇವತ್ತು ನಿದ್ರೆಯಿಂದ ಎದ್ದಕೂಡಲೆ ನಿನ್ನಂತಹ ಭಾಗ್ಯವಂತನ ಮುಖ

ನೋಡಿದೆ. ನನ್ನ ದಿನ ಒಳ್ಳೆಯದಾಗಿಯೇ ಕಳೆಯುವುದು. ನನ್ನ ವ್ರತ ಸಫಲವಾಯಿತು” ಎಂದಳು.

ಭಾಗ್ಯವಂತ ಎಂಬ ಶಬ್ದವನ್ನು ಸ್ವಲ್ಪ ಒತ್ತಿ ಹೇಳಿದಳು. ಮಧು ಸೂದನನ ಕಿವಿಗೆ ಅದು ಸ್ವಲ್ಪ ವಿಡಂಬನೆಯಂತೆ ಕೇಳಿಸಿತು. ಕುಮು ವಿನ ವಿಷಯವಾಗಿ ಯಾವ ಮಾತನ್ನೂ ಸ್ಪಷ್ಟವಾಗಿ ವಿಚಾರಿಸಲು ಶ್ಯಾಮಾ ವಿಗೆ ಧೈರ್ಯವಾಗಲಿಲ್ಲ. “ನಾಳೆ ನನ್ನ ಮನೆಗೆ ಊಟಕ್ಕೆ ಬರಬೇಕು. ನನ್ನಾಣೆ” ಎಂದು ಹೇಳಿ ಅವಳು ಹೊರಟುಹೋದಳು.

ಕೊಟಡಿಗೆ ಬಂದು ಮಧುಸೂದನ ಹಾಸಿಗೆಯಲ್ಲಿ ಮಲಗಿದನು. ಕುಮು ಬರಬಹುದೇನೋ ಎಂದು ಹೊರಗೆ ಲಾಂದ್ರ ಇಟ್ಟನು. ನಿದ್ರಾ ಪರವಶಳಾಗಿದ್ದ ಕುಮುದಿನಿಯ ಮುಖದ ಸೌಂದರ್ಯವು ಮನಸ್ಸಿನಿಂದ ಮರೆಯಾಗದೆ ಹೋಯಿತು. ಶಾಲಿನ ಹೊರಗೆ ಕಾಣುತ್ತಿದ್ದ ಕುಮುವಿನ ಆ ಎಣೆಯಿಲ್ಲದ ಕೈ, ಮತ್ತೆ ಮತ್ತೆ ನೆನಪಾಗುತ್ತಿತ್ತು. ಮದುವೆಯ ಕಾಲ ದಲ್ಲಿ ಆ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡಿದ್ದಾಗ ಅದನ್ನು ಸಂಪೂರ್ಣವಾಗಿ ನೋಡಿರಲಿಲ್ಲ; ಇಂದು ನೋಡುತ್ತ ನೋಡುತ್ತ ಕಣ್ಣಿನ ಆಶೆಯನ್ನು ತೃಪ್ತಿಪಡಿಸಲಾಗಲಿಲ್ಲ. ಆ ಕೈಯ ಒಡೆತನವನ್ನು ಅವನು ಪಡೆ ಯುವುದೆಂದು? ಹಾಸಿಗೆಯಲ್ಲಿ ಮಲಗಿರಲಾರದೆ ಹೋದನು; ಎದ್ದು ಬಿಟ್ಟನು. ದೀಪ ಹತ್ತಿಸಿ ಕುಮುವಿನ ಡೆಸ್ಕಿನ ಡ್ರಾಯರ್ ತೆರೆದನು. ಮಣಿಪೋಣಿಸಿ ಸಿಂಗರಿಸಿದ್ದ ಆ ಕೈಚೀಲ ಕಾಣಿಸಿತು. ಮೊದಲು ವಿಪ್ರ ದಾಸನ ತಂತಿ–ಈಶ್ವರ ನಿನಗೆ ಆಶೀರ್ವಾದ ಮಾಡಲಿ–ಎಂದಿದ್ದುದು ಸಿಕ್ಕಿತು. ಅದಾದ ಮೇಲೆ ಒಂದು ಫೋಟೋ. ಅವಳ ಅಣ್ಣಂದಿರಿಬ್ಬರ ಚಿತ್ರ–ಮತ್ತೊಂದು ಕಾಗದದ ತುಂಡು, ವಿಪ್ರದಾಸನ ಕೈಯಲ್ಲಿ ಬರೆದಿದ್ದ ಗೀತೆಯ ಈ ಶ್ಲೋಕ:—

ಯತ್ ಕರೋಷಿ ಯದಶ್ನಾಸಿ, ಯಜ್ಜುಹೋಷಿ ದದಾಸಿಯತ್
ಯತ್ ತಪಸ್ಯಸಿ, ಕೌಂತೇಯ ತತ್‌ಕುರುಷ ಮದರ್ಪಣಮ್

ಹೊಟ್ಟೆಕಿಚ್ಚಿನಿಂದ ಮಧುಸೂದನನ ಮನಸ್ಸು ಕ್ಷತವಿಕ್ಷತವಾಗ ತೊಡಗಿತು. ಹಲ್ಲು ಕಡಿಯುತ್ತ ವಿಪ್ರದಾಸನನ್ನು ಮನಸ್ಸಿನಲ್ಲೇ ಶಪಿ

ಸಿದನು. ಅವನ ಕಡೆಗಾಲ ಒಂದಲ್ಲ ಒಂದು ಬಾರಿ ಬಂದೇ ಬರುವುದು, ಎಂಬುದನ್ನು ಅವನು ಖಂಡಿತ ಬಲ್ಲನು. ಸ್ವಲ್ಪ ಸ್ವಲ್ಪವಾಗಿ ಸ್ಕ್ರೂ ಮೊಳೆಯನ್ನು ತಿರುವಬೇಕು. ಆದರೆ ಕುಮುದಿನಿಯ ಹತ್ತೊಂಭತ್ತು ವಯಸ್ಸು ಮಧುಸೂದನನ ಎಲ್ಲೆಯ ಹೊರಗೆ. ಅದನ್ನು ವಿಪ್ರದಾಸನ ಕೈಯಿಂದ ಈ ಕ್ಷಣ ಕಿತ್ತುಕೊಂಡು ಬಿಡುವುದು ಸಾಧ್ಯವಾಗುವುದಾದರೆ ಆಗ ಮನಸ್ಸಿಗೆ ನೆಮ್ಮದಿ ಉಂಟಾದೀತು. ಬಲಾತ್ಕಾರವಲ್ಲದೆ ಬೇರೆ ಯಾವ ಮಾರ್ಗವನ್ನೂ ಅರಿಯನು. ಮಣಿಯ ಚೀಲವನ್ನು ಇಂದು ಕೆಳಗೆ ಬಿಸುಡಲು ಧೈರ್ಯವುಂಟಾಗಲಿಲ್ಲ. ಉಂಗುರ ಕಳವು ಮಾಡಿದಾಗ ಅವನ ಧೈರ್ಯ ಇನ್ನೂ ಹೆಚ್ಚಾಗಿತ್ತು. ಆಗ, ಕುಮುದಿನಿ ಸಾಧಾರಣ ಹೆಂಗಸರಂತೆ ಸಹಜವಾಗಿ ಅಧಿಕಾರಕ್ಕೆ ಅಡಗುವಳು, ಹೆಚ್ಚೇಕೆ, ಅಧಿಕಾರವನ್ನೇ ಒಪ್ಪುವಳು– ಎಂದು ಎಣಿಸಿದ್ದನು. ಇಂದು, ಕುಮುದಿನಿ ಏನು ಮಾಡಬಲ್ಲಳು ; ಏನು ಮಾಡಲಾರಳು ಎಂಬುದನ್ನು ಹೇಳಲು ಸಾಧ್ಯವಿಲ್ಲ– ಎಂಬುದನ್ನು ಅರಿತಿದ್ದನು.

ಕುಮುದಿನಿಯನ್ನು ತನ್ನ ಬಾಳುವೆಯೊಂದಿಗೆ ಬಲವಾದ ಕಟ್ಟಿನಲ್ಲಿ ಬಿಗಿಯಲು ಒಂದೇ ಒಂದು ಮಾರ್ಗವಿದೆ. ಅದು ಕೇವಲ ಆಕೆ ಮಗುವಿನ ತಾಯಿಯಾಗುವುದು. ಆ ಕನಸನ್ನು ಕಾಣುತ್ತ ಕಾಣುತ್ತ ಅವನ ಮನಸ್ಸಿಗೆ ಸಮಾಧಾನವಾಯಿತು.

ಇಷ್ಟು ಹೊತ್ತಿಗೆ ಗಡಿಯಾರದಲ್ಲಿ ಐದು ಹೊಡೆಯಿತು. ಆದರೆ ಶೀತಕಾಲದ ರಾತ್ರಿಯ ಕತ್ತಲೆ ಇನ್ನೂ ಹೋಗಿರಲಿಲ್ಲ. ಇನ್ನು ಸ್ವಲ್ಪ ಹೊತ್ತಿಗೆಲ್ಲಾ ಬೆಳಕು ಹರಿಯುವುದು. ಈ ರಾತ್ರಿ ಸಂಪೂರ್ಣ ವ್ಯರ್ಥವಾಗುವುದು. ಮಧುಸೂದನ ವೇಗವಾಗಿ ಕೋಣೆಯಿಂದ ಹೊರಬಿದ್ದನು. ಫರಾಶಖಾನೆಯ ಇದಿರಿನಲ್ಲಿ ಸ್ವಲ್ಪ ಬಲವಾಗಿಯೇ ಹೆಜ್ಜೆಯ ಸಪ್ಪುಳ ಮಾಡಿದನು. ಶಬ್ದದೊಡನೆಯೇ ಕದ ತೆರೆದನು. ನೋಡಿದರೆ ಒಳಗೆ ಕುಮು ಇರಲಿಲ್ಲ !

ಅಂಗಳದ ನಲ್ಲಿಯಲ್ಲಿ ನೀರು ಬೀಳುವ ಸಪ್ಪುಳ ಕಿವಿಗೆ ಬಿದ್ದಿತು. ವರಾಂಡದಲ್ಲಿ ನಿಂತು ನೋಡಿದನು. ವಿಲಾಯಿತಿಯಿಂದ ತಂದ ಕಿಲುಬು ಕಟ್ಟಿದ ಹಳೆಯ ದೀಪದ ಕಂಭಗಳನ್ನು ತೆಗೆದುಕೊಂಡು ಕುಮು ಹುಣಿಸೇ

ಹಣ್ಣು ಹಾಕಿ ಉಜ್ಜಿ ತೊಳೆಯುತ್ತಿದ್ದಳು. ಇದು ಕೇವಲ ಬೇಕೆಂದೇ ಕೆಲಸ ಹೆಚ್ಚಿಸುವ ಪ್ರಯತ್ನ. ಶೀತದ ಬೆಳಗ್ಗಿನ ಹೊತ್ತಿನಲ್ಲಿ ನಿದ್ರೆಯಿಲ್ಲದ ದುಃಖವನ್ನು ಮತ್ತಷ್ಟು ಬೆಳಸುವದು.

ಮಧುಸೂದನ ಮೇಲಿನ ವರಾಂಡದಿಂದ ಮೂಕನಾಗಿ ನಿಂತು ನೋಡುತಿದ್ದನು. "ಅಬಲೆಯ ಬಲವನ್ನು ಹೇಗೆ ಸೋಲಿಸುವುದು—ಇದೇ ಅವನಿಗೆ ಯೋಚನೆಯಾಗಿತ್ತು—ಬೆಳಗ್ಗೆ ಎದ್ದು ಮನೆಯ ಜನ ಕುಮು ದೀಪದ ಕಂಭಗಳನ್ನು ತೊಳೆಯುತ್ತಿರುವುದನ್ನು ನೋಡಿದಾಗ ಏನೆಂದು ಕೊಳ್ಳುವರು ? ದೀಪಗಳನ್ನು ತಿಕ್ಕಿ ತೊಳೆಯುವ ಹೊಣೆ ಯಾವ ಕೆಲಸ ದವನದೋ ಅವನಾದರೂ ಏನು ಎಣಿಸಿಯಾನು ? ಪ್ರಪಂಚದ ಜನ ರೆಲ್ಲರ ಬಳಿ ತನ್ನ ಹಾಸ್ಯಕ್ಕೆ ಗುರಿಮಾಡಲು ಇಂತಹ ಉಪಾಯ ಇನ್ನಿಲ್ಲ ವಲ್ಲ." ಎಂದು ಆಲೋಚನೆ ಮಾಡತೊಡಗಿದನು.

ನಲ್ಲಿಯ ಹತ್ತಿರ ಹೋಗಿ ಕುಮುವನ್ನು ಸಮಾಧಾನಮಾಡಿ ಕರೆತರ ಬೇಕೆಂದು ಒಮ್ಮೆ ಮನಸ್ಸಿಗೆ ತೋರಿತು. ಆದರೆ ಬೆಳಗಿನ ಹೊತ್ತು ಆ ಅಂಗಳದಲ್ಲಿ ಇಬ್ಬರೂ ಜಗಳವಾಡುವುದು, ಆಮೇಲೆ ಮನೆಯ ಜನರೆಲ್ಲ ತಮಾಷೆ ನೋಡಲು ಹಾಸಿಗೆಯಿಂದೆದ್ದು ಬರುವುದು, ಈ ಪ್ರಹಸನವನ್ನು ಊಹಿಸಿ ಹಿಂಜರಿದನು. ನಡುಕಲ ತಮ್ಮ ನವೀನನನ್ನು ಕರೆದು "ಮನೆ ಯಲ್ಲಿ ಏನೇನು ನಡೆಯುತ್ತಿದೆ ಎನ್ನುವುದರ ಮೇಲೆ ಕಣ್ಣಿಟ್ಟಿರುವೆ ಯೇನು ?" ಎಂದನು.

ನವೀನ ಮನೆಯ ಮ್ಯಾನೇಜರು. ಅವನು ಹೆದರಿ "ಯಾಕಣ್ಣಾ, ಏನಾಯಿತು ?" ಎಂದನು.

ಅಣ್ಣನಿಗೆ ಕೋಪ ಬರಲು ಕಾರಣ ಸಿಕ್ಕಿದಾಗ ಶಿಕ್ಷಿಸಲು ಒಬ್ಬ ಮನುಷ್ಯ ಬೇಕು, ದೋಷಿ ಜಾರಿಕೊಂಡರೆ ನಿರ್ದೋಷಿಯಾದರೂ ಆಗ ಬಹುದು, ಇಲ್ಲದಿದ್ದರೆ ಶಿಸ್ತಿರದು. ಇಲ್ಲದಿದ್ದರೆ ಕುಟುಂಬದಲ್ಲಿ ಅವನ ರಾಜತಂತ್ರದ ಮೇಲ್ಮೆಗೆ ಕಳಂಕವುಂಟಾಗುವುದು, ಎಂಬುದನ್ನು ನವೀನ ಅರಿತಿದ್ದ.

ಮಧುಸೂದನ ಹೇಳಿದ, "ಹಿರಿಯ ಸೊಸೆ ಹುಚ್ಚಿಯಂತೆ ಆಡು ತ್ತಿರುವಳಲ್ಲ, ಅದರ ಕಾರಣವೇನು ಎಂಬುದನ್ನು ನಾಸರಿಯೆನೆಂದು ಎಣಿ ಸಿರುವೆಯೇನು ?"

ಹಿರಿಯ ಸೊಸೆಯ ಹುಚ್ಚಾಟವೇನು ಎಂಬುದನ್ನು ಕೇಳುವ ಸಾಹ ಸಕ್ಕೆ ನವೀನ ಹೋಗಲಿಲ್ಲ. ಆಮೇಲೆ ನಡೆಯುವ ಸಂಗತಿ ತಿಳಿದುಕೊಳ್ಳ ಲಿಲ್ಲವೆಂಬ ಅಪರಾಧ ಹೊರಿಸುವನೆಂಬ ಭಯ.

ಮಧುಸೂದನ, "ನಡುಕಲ ಸೊಸೆ ಅವಳ ತಲೆ ಕೆಡಿಸತೊಡಗಿರು ವಳು, ಸಂದೇಹವಿಲ್ಲ" ಎಂದನು.

ಬಹಳ ಸಂಕೋಚದೊಡನೆ ನವೀನ ಉತ್ತರ ಕೊಡಲೆತ್ನಿಸಿದನು, "ಇಲ್ಲ, ನಡುಕಲ ಸೊಸೆಯಂತೂ...."

ಮಧುಸೂದನ "ನಾನು ಕಣ್ಣಾರ ನೋಡಿದ್ದೇನೆ" ಎಂದನು.

ಇದರ ಮೇಲೆ ಇನ್ನು ಮಾತು ನಡೆಯುದು. ಕಣ್ಣಾರ ನೋಡುವುದ ರಲ್ಲಿ ಆ "ಪೇಪರ್ ವೈಟಿನ" ಕಥೆ ಅಡಗಿತ್ತು.

## ೨೮

ಮೋತಿಯ ತಾಯಿ ಅಕೃತ್ರಿಮವಾದ ಪ್ರೀತಿಯೊಡನೆ ಕುಮುವನ್ನು ಆದರಿಸಲಾರಂಭಿಸಿದ್ದಳು. ಆಗಲೆ, ಇದು ಸರಿಹೋಗದು, ಮನೆಯ ಹೆಂಗಸರು ಈ ವಿಷಯವಾಗಿ ಇಲ್ಲದ್ದು ಸಲ್ಲದ್ದನ್ನು ಆರೋಪಿಸುವರು ಎಂದು ನಿಶ್ಚಯಿಸಿದ್ದ. ಅಂಥಾದ್ದೇ ಏನೋ ನಡೆದಿದೆಯೆಂದು ನವೀನ ನಿರ್ಣಯಿಸಿದ. ಆದರೆ ಮಧುಸೂದನನ ಊಹೆಯ ದೋಷಾರೋಪಣೆಯ ವಿಷಯವಾಗಿ ಪ್ರತಿವಾದ ಹೂಡಿ ಯಾವ ಪ್ರಯೋಜನವೂ ಆಗದು : ಅದರಿಂದ ಹಟ ಹೆಚ್ಚಾಗುವುದು ಅಷ್ಟೆ, ಎಂದು ಭಾವಿಸಿದನು.

ಸಂಗತಿಯೇನು ಎಂಬುದನ್ನು ಮಧುಸೂದನ ಸ್ಪಷ್ಟವಾಗಿ ಹೇಳ ಲಿಲ್ಲ ; ಹೇಳಲು ನಾಚಿಕೆಪಟ್ಟನೆಂದು ತೋರುತ್ತೆ. ಏನು ಮಾಡಬೇಕು ಎಂಬುದೂ ಅಸ್ಪಷ್ಟವಾಗಿತ್ತು. ಅದರಲ್ಲಿ ಸ್ಪಷ್ಟವಾಗಿರುವ ಅಂಶ ಇಷ್ಟೆ ; ಎಲ್ಲ ಹೊಣೆ ನಡುಕಲ ಸೊಸೆಯದು. ದಾಂಪತ್ಯದಲ್ಲಿ ಇರಬೇಕಾದ

ಮರ್ಯಾದೆಯ ಅನುಸಾರ, ಹೋಣೆಗಾರಿಕೆಯಲ್ಲಿ ಬಹು ಮುಖ್ಯವಾದ ಭಾಗವೇ ನವೀನನ ಅದೃಷ್ಟದಲ್ಲಿರುತ್ತಿತ್ತು.

ನವೀನ ಹೋಗಿ ಮೋತಿಯ ತಾಯಿಯೊಡನೆ " ದಂಗೆ ಎಬ್ಬಿಸಿರುವೆ " ಎಂದನು.

" ಯಾಕೆ, ಏನಾಯಿತು ? "

" ಅದನ್ನು ಅಂತರ್ಯಾಮಿ ಬಲ್ಲ, ಅಣ್ಣ ಬಲ್ಲ, ಮತ್ತೆ ಪ್ರಾಯಶಃ ನೀನು ತಿಳಿದಿರಬಹುದು. ಆದರೆ ಅಣ್ಣ ಗದರಿಸಲು ತೊಡಗಿದ್ದಾರೆ "

" ಯಾಕೆ ಹೇಳು ನೋಡೋಣ "

" ನನ್ನ ಮೂಲಕ ನಿನ್ನನ್ನು ತಿದ್ದುವುದು ಆಗಬೇಕು ; ಮತ್ತೆ ನಿನ್ನ ಮೂಲಕ ಅವನ ಹೊಸವ್ಯಾಪಾರದ ಫಲವಾಗಿ ಹೊಸದಾಗಿ ಬಂದಿರುವ ಸರಕನ್ನು ತಿದ್ದುವುದಾಗಬೇಕು "

" ಹಾಗಾದರೆ ನನ್ನ ಮೇಲೆ ನಿನ್ನ ತಿದ್ದುವ ಕೆಲಸ ಪ್ರಾರಂಭಿಸು, ನೋಡೋಣ, ಅಣ್ಣನಿಗಿಂತ ಕೈಗುಣ ಉತ್ತಮವೇ ನೋಡೋಣ."

ನವೀನ ಕಾತರಗೊಂಡವನಾಗಿ " ಅಣ್ಣನ ಉಡಿಯಾ ಆಳು ಅವನ ಬೆಲೆ ಬಾಳುವ ಡಿನ್ನರ್ ಸೆಟ್ಟಿನ ಒಂದು ಸಾಸರ್ (Saucer) ಒಡೆದು ಹಾಕಿದ. ಅವನ ಜುಲ್ಮಾನೆಯ ಮುಖ್ಯಭಾಗವನ್ನು ನಾನೇ ಕೊಡಬೇಕಾಯಿತು. ಯಾಕೆಂದರೆ ಸಾಮಾನುಗಳು ಇರುವುದು ನನ್ನ ಅಧೀನದಲ್ಲಿ. ಆದರೆ ಈ ಬಾರಿ ಯಾವ ಪದಾರ್ಥ ಮನೆಗೆ ಬಂದಿದೆಯೋ ಅದೂ ನನ್ನ ಅಧೀನದಲ್ಲಿದೆಯೇನು ? ಆದರೂ ಜುಲ್ಮಾನೆಯನ್ನು ನೀನೂ ನಾನೂ ಹಂಚಿಕೊಳ್ಳಬೇಕು. ಆದ್ದರಿಂದ ಏನು ಮಾಡಬೇಕಾಗಿದೆಯೋ ಅದನ್ನು ಮಾಡು. ನನಗೆ ಹೆಚ್ಚು ಹಿಂಸೆ ಕೊಡಬೇಡ. " ಎಂದನು.

" ಜುಲ್ಮಾನೆಯೆಂದರೆ ಏನರ್ಥ ಹೇಳು ನೋಡೋಣ "

" ರಜಬ್‌ಪುರಕ್ಕೆ ಕಳುಹಿಸಿಬಿಡುವನು. ನಡುನಡುವೆ ಅದೇ ರೀತಿಯ ಭಯ ತೋರಿರುವನಲ್ಲ. "

" ಭಯಪಡುವಿಯೆಂದೇ ಭಯ ತೋರುವರು! ಹಿಂದೊಮ್ಮೆ ಕಳು ಹಿಸಿದಾಗ ಮತ್ತೆ ರೈಲ್ ಚಾರ್ಜು ಕೊಟ್ಟು ಕರೆಸಬೇಕಾಯಿತಲ್ಲವೆ? ನಿಮ್ಮ ಅಣ್ಣ ಕೋಪದಲ್ಲೂ ಕೂಡ ಲೆಕ್ಕದಲ್ಲಿ ತಪ್ಪು ಮಾಡುವುದಿಲ್ಲ. ಮನೆಗೆ ಲಸದ ಮೇಲುವಿಚಾರಣೆಯಿಂದ ನನ್ನನ್ನು ತೆಗೆದುಬಿಟ್ಟರೆ ಅದರಿಂದ ಏನೂ ಲಾಭವಾಗದೆಂದು ಅವರು ಚೆನ್ನಾಗಿ ಬಲ್ಲರು. ಮತ್ತೆ ಎಲ್ಲಿಯಾ ದರೂ ಮೂರುಕಾಸಿನಷ್ಟು ನಷ್ಟವಾದರೆ ಆ ಪೆಟ್ಟನ್ನು ಅವರು ಸಹಿಸ ಲಾರರು."

" ತಿಳಿದೆ. ಈಗ ಮಾಡಬೇಕಾದುದೇನು?"

" ನಿಮ್ಮಣ್ಣನಿಗೆ ಹೇಳು. ಎಷ್ಟೇ ದೊಡ್ಡ ರಾಜನಾದರೇನು, ತಿಂಗಳ ಸಂಬಳ ಕೊಟ್ಟು ಜನರನ್ನಿಟ್ಟು ರಾಣಿಯ ದುಗುಡವನ್ನು ದೂರ ಮಾಡಲು ಸಾಧ್ಯವಾಗದು. ಮಾನದ ಹೊರೆಯನ್ನು ತಾನೇ ತಲೆಕೊಟ್ಟು ಇಳಿಸಬೇಕು. ಒಸಗೆಯ ಮನೆಯ ನಡವಳಿಕೆಯಲ್ಲಿ ಕೂಲಿಯವನನ್ನು ಕರೆಯುವುದು ಬೇಡವೆನ್ನು"

" ನಡುಕಲ ಸೊಸೆ, ಅವನಿಗೆ ಉಪದೇಶ ಕೊಡುವುದಕ್ಕಾಗಿ ನನ್ನ ಆವಶ್ಯಕತೆಯಿರದು. ಎರಡು ದಿನಗಳು ಕಳೆದರೆ ಅವನಿಗೇ ಪ್ರಜ್ಞೆ ಉಂಟಾಗುವುದು. ಈ ನಡುವೆ ದೂತಿಯ ಕೆಲಸಮಾಡು. ಫಲ ಫಲಿಸಿ ದರೆ ಫಲಿಸಲಿ; ಇಲ್ಲದಿದ್ದರೆ ಹೋಗಲಿ. ಉಪ್ಪುತಿಂದು ಅದನ್ನು ತೆಪ್ಪನೆ ಕುಳಿತು ಅರಗಿಸಿಕೊಳ್ಳುತ್ತಿಲ್ಲವೆಂಬುದನ್ನು ತೋರಬಹುದು.

ಮೋತಿಯ ತಾಯಿ ಕುಮುವನ್ನು ಹುಡುಕಿಕೊಂಡು ಹೊರಟಳು.

ಬೆಳಗಿನ ಹೊತ್ತು ಬಿಸಿಲುಮಹಡಿಯಲ್ಲಿ ಅವಳನ್ನು ಕಾಣಬಹು ದೆಂಬುದನ್ನು ಬಲ್ಲಳು. ಎತ್ತರದ ಪೌಳಿಗೋಡೆ ಹಾಕಿದ ಮಹಡಿ. ನಡು ನಡುವೆ ರಂಧ್ರಗಳು. ಅಸ್ತವ್ಯಸ್ತವಾದ ಕೆಲವು ಕುಂಡಗಳು. ಅವುಗಳಲ್ಲಿ ಗಿಡಗಳಿಲ್ಲ. ಒಂದು ಮೂಲೆಯಲ್ಲಿ ಕಬ್ಬಿಣದ ಸಲಾಕೆಗಳಿಂದ ಮಾಡಿದ ದೊಡ್ಡದೊಂದು ಮುರುಕಲು ಪಂಜರ. ಅದರ ಕೆಳಭಾಗದ ಮರ ಸಂಪೂ ರ್ಣವಾಗಿ ಜೀರ್ಣವಾಗಿತ್ತು. ಯಾವುದೋ ಒಂದು ಕಾಲದಲ್ಲಿ ಇದರಲ್ಲಿ ಮೊಲವನ್ನೋ ಪಾರಿವಾಳವನ್ನೋ ಇಟ್ಟು ಸಾಕುತ್ತಿದ್ದರು. ಈಗ ಉಪ್ಪಿ

ಸಕಾಯಿ, ಬಾಳಕ, ಆಮ್‌ಸತ್ವ ಮೊದಲಾದುವುಗಳು ಕಾಗೆಗಳ ಬಾಯಿಗೆ ಬೀಳದೆ ಒಣಗಲು ಉಪಯೋಗವಾಗುತ್ತಿದೆ. ಈ ಮೇಲ್ಮಹಡಿಯಿಂದ ತಲೆಯ ಮೇಲಿನ ಆಕಾಶವನ್ನು ನೋಡಬಹುದು. ದಿಗಂತ ನೋಡಲು ಸಾಧ್ಯವಿಲ್ಲ. ಪಶ್ಚಿಮ ಆಕಾಶದಲ್ಲಿ ಕಬ್ಬಿಣದ ಕಾರ್ಖಾನೆಯೊಂದರ ಹೊಗೆಯ ಕೊಳವೆ. ಕುಮು ಈ ಬಿಸಿಲು ಮಚ್ಚಿನಲ್ಲಿ ಕೂತುಕೊಳ್ಳಲು ಪ್ರಾರಂಭಿಸಿದ ಈ ಎರಡು ದಿನಗಳಿಂದ ಈ "ಚಿಮ್ನಿ" ಯಿಂದ ಹೊರಡುತ್ತಿದ್ದ ಹೊಗೆಯ ಸುರುಳಿಗಳು ಮಾತ್ರವೇ ಅವಳು ನೋಡುವ ನೋಟವಾಗಿತ್ತು. ಇಡೀ ಆಕಾಶದಲ್ಲಿ ಅದೇ ಕೇವಲ ಒಂದು ಸಜೀವವಾದ ಪದಾರ್ಥ. ಯಾವುದೋ ಒಂದು ಆವೇಗದಿಂದ ಉಬ್ಬಿಉಬ್ಬಿ ಸುತ್ತುತ್ತ ಸುತ್ತುತ್ತ ಹೋಗುತ್ತಿದ್ದುವು.

ದೀಪದ ಕಂಭ ಮೊದಲಾದವುಗಳನ್ನು ತೊಳೆದು ಮುಗಿದ ಮೇಲೆ ಕತ್ತಲೆಯಿದ್ದಂತೆಯೇ ಸ್ನಾನಮಾಡಿ ಪೂರ್ವದಿಕ್ಕಿಗೆ ಮುಖಮಾಡಿಕೊಂಡು ಕುಮು ಬಿಸಿಲುಮಚ್ಚಿನ ಮೇಲೆ ಬಂದು ಕುಳಿತಿದ್ದಳು. ಒದ್ದೆ ಕೂದಲು ಬೆನ್ನ ಮೇಲೆ ಹರಡಿತ್ತು. ಯಾವ ಬಗೆಯ ಅಲಂಕಾರವೂ ಇಲ್ಲ. ದಪ್ಪ ನೂಲಿನ ಸಾಮಾನ್ಯವಾದೊಂದು ಸೀರೆ, ಸಣ್ಣ ಕರಿಯ ಅಂಚು ಮತ್ತು ಶೀತ ನಿವಾರಿಸಿಕೊಳ್ಳಲು ದಪ್ಪದೊಂದು ಇಂಡಿ ರೇಷ್ಮೆಯ ಹೊದಿಕೆ.

ಕೆಲವು ದಿನಗಳಿಂದ ನಿರೀಕ್ಷಿಸಿದ್ದ ಪ್ರಿಯತಮನ ಕಾಲ್ಪನಿಕ ಆದರ್ಶವನ್ನು ಹೃದಯದ ಒಳಗೆ ನೆಲೆಗೊಳಿಸಿ ಈ ಯುವತಿ ತನ್ನ ಹೃದಯದ ಹಸಿವನ್ನು ಅಡಗಿಸಲು ಬಯಸಿದ್ದಳು. ಅವಳ ಬಗೆಬಗೆಯಾದ ಪೂಜೆ, ವಿವಿಧ ವ್ರತ, ಹಲವಾರು ಪುರಾಣ ಪುಣ್ಯಕಥೆಗಳು ಎಲ್ಲವೂ ಈ ಕಲ್ಪನೆಯ ಮೂರ್ತಿಯನ್ನು ಸಜೀವವನ್ನಾಗಿ ಮಾಡಿದ್ದುವು. ಅವಳು ತನ್ನ ಮಾನಸ ವೃಂದಾವನದ ಅಭಿಸಾರಿಣಿಯಾಗಿದ್ದಳು. ಮುಂಜಾನೆ ಎದ್ದು ರಾಮ್‌ಕೇಲೀ ರಾಗದಲ್ಲಿ ಕೀರ್ತನೆ ಹಾಡಿದ್ದಳು.

ಹಮಾರೇ ತುಮಾರೇ ಸಂಪ್ರೀತಿ ಲಗೀ ಹೈ
ಶುನ್ ಮನಮೋಹನ್ ಪ್ಯಾರೇ
(ನನ್ನ ನಿನ್ನ ಸಂಪ್ರೀತಿ ಬೆಳೆಯುತಿದೆ
ಕೇಳು ಮನಮೋಹನ ಪ್ರಿಯಾ)

ಯಾವ ಬಾರದಿರುವ ಮನುಷ್ಯನನ್ನು ಉದ್ದೇಶಿಸಿ ಅವಳ ಆತ್ಮ ನಿವೇದನೆಯ ಅರ್ಘ್ಯ ಸಿದ್ಧವಾಗಿದೆಯೊ, ಇದಿರಿನಲ್ಲಿ ಬಂದು ತಲುಪುವ ಮುಂಚೆ ಅವಳು ಪ್ರತಿನಿತ್ಯ ಆತನೆಡೆಗೆ ತನ್ನ ಬಟ್ಟಲನ್ನು ಕಳುಹಿಸಿರು ವಳು. ಮಳೆಗಾಲದ ರಾತ್ರಿಯಲ್ಲಿ ಅಂತಃಪುರದ ತೋಟದ ಗಿಡಮರಗಳು ಎಡೆಬಿಡದೆ ಹೊಯ್ದು ಮಳೆಯ ಪೆಟ್ಟಿನಿಂದ ತನ್ನ ಎಲೆಗಳಿಂದ ಕೋಲಾ ಹಲ ಮಾಡುತ್ತಿರಲು ಆಗ ಕಾನಡಾ ರಾಗದಲ್ಲಿ ಅವಳ ಆ ಹಾಡು ನೆನ ಪಾಗುತ್ತಿತ್ತು.

ಬಾಜೇ ಝುನನನ ಮೊರಿ ಪಾಯಿರಿಯಾ
ಕೈಸೇ ಕರೋ ಜಾಊಂ ಘರೋಯಾರೇ

[ಬಾಜಸುತಿವೆ ಝುನನನ ಎಂದು ನನ್ನ ಪಾದಗಳು, ಹೇಗೆ ತಾನೆ ಹೋಗಲಿ ಮನೆಗೆ]

ತನ್ನ ಔದಾಸೀನ್ಯದಿಂದ ಕೂಡಿದ ಮನದ ಪಾದಗಳಲ್ಲಿ ನೂಪುರ ಗಳು ಝುನನನ ಎಂದು ಬಾಜಿಸುತ್ತಿದ್ದುವು. ಗುರಿತಪ್ಪಿದ ಹಾದಿಯಲ್ಲಿ ಹೊರಬಿದ್ದಿರುವಳು. ಯಾವ ಕಾಲಕ್ಕೇ ಆಗಲಿ ಹೇಗೆ ಮನೆಗೆ ಹಿಂದಿ ರುಗುವಳು ? ಯಾರನ್ನು ರೂಪದಲ್ಲಿ ಕಾಣಬಹುದೋ ಆತನನ್ನು ಹಾಗೆಯೇ ಕೆಲದಿನಗಳಿಂದ ಸ್ವರದಲ್ಲಿ ಕಂಡಿದ್ದಳು. ನಿಗೂಢವಾದ ಆನಂದ ವೇದನೆಯ ಪರಿಪೂರ್ಣತೆಯ ದಿನದಲ್ಲಿ ಮನಸ್ಸಿಗೊಪ್ಪಿದಂತೆ ಯಾರನ್ನಾದರೂ ದೈವ ವಶಾತ್ ಅವಳು ಹತ್ತಿರ ಪಡೆದಿದ್ದುದಾದರೆ, ಅಂತರ್ಯದಲ್ಲಿ ಗುಯಿ ಗುಟ್ಟುವ ಎಲ್ಲ ಕೀರ್ತನೆಗಳೂ ಆ ನಿಮಿಷದಲ್ಲೇ ಪ್ರಾಣಹೊಂದು ತಿದ್ದುವು. ಯಾವ ಪಥಿಕನೂ ಅವಳ ಮನೆಯ ಬಾಗಿಲಲ್ಲಿ ಬಂದು ನಿಲ್ಲ ಲಿಲ್ಲ. ಕಲ್ಪನೆಯ ನಿಭೃತ ನಿಕುಂಜ ಗೃಹದಲ್ಲಿ ಅವಳು ಒಂಟಿಯಾಗಿದ್ದಳು. ಅಷ್ಟೇ ಏಕೆ ; ಅವಳ ಸರಿವಯಸ್ಸಿನ ಸಂಗಡಿಗರೂ ಯಾರೂ ಇರಲಿಲ್ಲ. ಆದ ರಿಂದಲೇ ಇಷ್ಟು ದಿನಗಳು ಶ್ಯಾಮಸುಂದರನ ಕಾಲಬಳಿ ಅವಳು ಅಡ ಗಿದ್ದಳು. ಅವಳ ಪ್ರೀತಿ ಪೂಜೆಯ ಹೂವಿನ ಆಕಾರದಲ್ಲಿ ತನ್ನನ್ನು ಉದ್ದೇಶ ವಿಲ್ಲದೆ ಅರ್ಪಿಸಿದವಳ ಉದ್ದೇಶವನ್ನು ಅರಸುತಿತ್ತು. ಆದರಿಂದಲೇ ಘಟಕ ಮದುವೆಯ ಪ್ರಸ್ತಾಪ ಎತ್ತಿಕೊಂಡು ಬಂದಾಗ ಕುಮು ತನ್ನ ಇಷ್ಟ ದೇವತೆಯ ಅಪ್ಪಣೆಯೆನ್ನೇ ಬೇಡಿದಳು. "ಈಗ ನಿನ್ನನ್ನೇ ಅಲ್ಲವೆ ಪಡೆ

ಯುವೆನು ?''' ಎಂದು ಕೇಳಿದಳು. ಅಪರಾಜಿತಾ ಪುಷ್ಪ- " ಇದೋ ಪಡೆದಿರುವೆ" ಎಂದು ಉತ್ತರ ಕೊಟ್ಟಿತು.

ಹೃದಯದ ಇಷ್ಟು ದಿನಗಳ ಇಷ್ಟೊಂದು ಏರ್ಪಾಡು ವ್ಯರ್ಥವಾಯಿತು. ಕಲ್ಲು ಒಮ್ಮೆಗೆ ಠಸ್ ಎಂದು ಮೇಲೆದ್ದಿತು. ಮುಹೂರ್ತ ಮಾತ್ರದಲ್ಲಿ ಮುಳುಗಿಕೊಂಡಿತು. ವ್ಯಥೆಗೊಂಡ ಯೌವನ ಇಂದು ಮತ್ತೆ ತನ್ನ ಪುಷ್ಪವನ್ನು ಎಲ್ಲಿ ಅರ್ಪಿಸುವುದೆಂದು ಅರಸುತ್ತ ತಿರುಗುತ್ತಿದೆ. ತಟ್ಟೆಯಲ್ಲಿ ಅವಳ ಅರ್ಘ್ಯವಾಗಿ ಏನಿತ್ತೋ ಅದು ಇಂದು ಅತ್ಯಂತ ಭಾರವಾಗಿಬಿಟ್ಟಿದೆ. ಆದ್ದರಿಂದಲೇ ಇಂದು ಹೀಗೆ ಸರ್ವಪ್ರಯತ್ನದಿಂದ, " ಮೇರೇ ತೋಗಿರಿಧರ್ ಗೋಪಾಲ್ ಔರ್‌ನಾಹಿ ಕೋಹೀ" ಎಂದು ಹಾಡಿದ್ದು.

ಆದರೆ ಇಂದು ಈ ಹಾಡು ಶೂನ್ಯದಲ್ಲಿ ತಿರುಗಿ ತಿರುಗಿ ಸಂಚರಿಸುತ್ತಿದೆ. ಇಂದಿನಿಂದ ಬಾಳುವೆಯ ಕೊನೆಯ ದಿನದವರೆಗೆ ಮನಸ್ಸಿನ ಗಭೀರ ಆಕಾಂಕ್ಷೆ ಆ ಹೊಗೆಯ ಸುರುಳಿಯಂತೆಯೇ ಕೇವಲ ಜತೆಯಿಲ್ಲದೆ ಹೊರಬಿದ್ದು ಹೋಗುತ್ತಿರುವುದೇನು ?

ಮೋತಿಯ ತಾಯಿ ದೂರದಲ್ಲಿ ಹಿಂದೆ ಕುಳಿತಿದ್ದಳು. ಬೆಳಗಿನ ನಿರ್ಮಲವಾದ ಬೆಳಕಿನಲ್ಲಿ ನಿರ್ಜನವಾದ ಮೆಟ್ಟಿಲ ಹಡಿಯಲ್ಲಿ ಸಿಂಗರಿಸಿಕೊಳ್ಳದ ಈ ಸುಂದರಿಯ ಮಹಿಮೆ ಅವಳನ್ನು ವಿಸ್ಮಯಗೊಳಿಸಿತ್ತು. ಈ ಮನೆಯಲ್ಲಿ ಇವಳಿಗೆ ಒಗ್ಗುವುದಾದರೂ ಹೇಗೆ ? ಈ ಮನೆಯಲ್ಲಿ ಎಷ್ಟು ಜನ ಹೆಂಗಸರು ಇರುವರೋ, ಅವರೆಲ್ಲರನ್ನೂ ಇವಳೊಡನೆ ಹೋಲಿಸುವುದಾದರೆ ಅವರುಗಳು ಯಾವ ಮಟ್ಟದವರು ? ಅವರುಗಳು ತಾವಾಗಿಯೇ ಅವಳ ಬಳಿಯಿಂದ ಬೇರೆಯಾಗಿ ಬಿಡುವರು. ಅವಳ ಮೇಲೆ ಕೋಪಗೊಂಡಾರು, ಆದರೆ ಅವಳೊಡನೆ ಸರಿಗಟ್ಟಲು ಯಾರಿಗೂ ಸಾಹಸವಿಲ್ಲ.

ಕುಳಿತಿರುವಂತೆಯೇ ಕುಮು ಹಠಾತ್ತಾಗಿ ಸೆರಗಿನಿಂದ ತನ್ನ ಮುಖ ಮುಚ್ಚಿಕೊಂಡು ಅಳತೊಡಗಿದ್ದನ್ನು ಮೋತಿಯ ತಾಯಿ ನೋಡಿದಳು. ಅವಳಿಂದ ಸುಮ್ಮನಿರಲಾಗಲಿಲ್ಲ. ಹತ್ತಿರ ಬಂದು ಕೊರಳನ್ನು ಅಪ್ಪಿಕೊಂಡು " ಅಕ್ಕ, ನನ್ನ ಲಕ್ಷ್ಮಿ, ಏನಾಗಿದೆ, ಹೇಳು" ಎಂದಳು.

ಕುಮು ಬಹಳ ಹೊತ್ತು ಮಾತನಾಡಲಾರದೆ ಹೋದಳು. ಸ್ವಲ್ಪ ಸಮಾಧಾನವಾದ ಮೇಲೆ "ಇಂದೂ ಅಣ್ಣನವರಿಂದ ಕಾಗದ ಬರಲಿಲ್ಲ. ಅವರಿಗೆ ಏನಾಗಿದೆಯೋ, ಹೇಗಿದೆಯೋ ಕಾಣೆ" ಎಂದಳು.

"ಕಾಗದ ಬರುವ ದಿನ ವಾಗಿದೆಯೇನು?"

"ಖಂಡಿತ ಆಗಿದೆ. ನಾನು ಅವರ ಬಾಯಿಲೆ ನೋಡಿ ಬಂದಿರುವೆ. ಸುದ್ದಿ ತಿಳಿಯುವುದಕ್ಕಾಗಿ ನನ್ನ ಮನಸ್ಸು ಹೇಗೆ ತಲ್ಲಣಿಸುವುದೆಂದು ಅವರು ಬಲ್ಲರು."

ಮೋತಿಯ ತಾಯಿ "ನೀನು ಯೋಚನೆ ಮಾಡಬೇಡ. ಸುದ್ದಿ ತಿಳಿಯಲು ನಾನು ಏನಾದರೊಂದು ಉಪಾಯ ಮಾಡುವೆ" ಎಂದಳು.

ಕುಮು ತಂತಿ ಕಳುಹಿಸುವ ಸಂಗತಿ ಹಲವು ಬಾರಿ ಯೋಚಿಸಿದ್ದಳು. ಆದರೆ ಯಾರ ಕೈಯಲ್ಲಿ ಕಳುಹಿಸುವುದು? ಮಧುಸೂದನ ತಾನು ಅವ ರಣ್ಣನ ಸಾಹುಕಾರ ಎಂದು ಹೆಮ್ಮೆ ಕೊಚ್ಚಿಕೊಂಡ ದಿನದಿಂದ ಅವನ ಬಳಿ ತನ್ನ ಅಣ್ಣನ ಹೆಸರೆತ್ತಲು ಅವಳಿಗೆ ಬಾಯಿ ಬರುತ್ತಿರಲಿಲ್ಲ. ಇಂದು ಮೋತಿಯ ತಾಯಿಯೊಡನೆ, "ನೀನು ಅಣ್ಣನವರಿಗೆ ನನ್ನ ಹೆಸರಿನಲ್ಲಿ ತಂತಿ ಕಳುಹಿಸುವೆಯಾದರೆ ನಾನು ಬದುಕುವೆ" ಎಂದಳು.

ಮೋತಿಯ ತಾಯಿ "ಹಾಗೆಯೇ ಮಾಡುವೆ, ಹೆದರಿಕೆಯೇನು!" ಎಂದಳು.

ಕುಮು "ನೀನೇ ಬಲ್ಲೆ, ನನ್ನ ಹತ್ತಿರ ಒಂದು ರೂಪಾಯಿ ಕೂಡ ಇಲ್ಲ" ಎಂದಳು.

"ಏನಂದೆ ಅಕ್ಕ, ಅದಕ್ಕೆ ಅರ್ಥವೇ ಇಲ್ಲ. ಸಂಸಾರದ ವೆಚ್ಚಕ್ಕಾಗಿ ನನ್ನ ಹತ್ತಿರ ಇದೆಯಲ್ಲ, ಅವೆಲ್ಲ ನಿನ್ನ ಹಣವೇ. ಇಂದಿನಿಂದ ನಾನು ನಿನ್ನ ಉಪ್ಪನ್ನೇ ತಿನ್ನುತ್ತಿರುವೆ" ಎಂದಳು.

ಕುಮು ಬಲವಾಗಿ "ಇಲ್ಲ, ಇಲ್ಲ, ಈ ಮನೆಯಲ್ಲಿ ನನ್ನದಾಗಿ ಏನೂ ಇಲ್ಲ. ಒಂದು ಪಾವಲಿಯೂ ಇಲ್ಲ."

"ಒಳ್ಳೆಯದಮ್ಮ. ನಿನಗಿಲ್ಲದಿದ್ದರೆ ಹೋಗಲಿ; ನನ್ನ ಸ್ವಂತ ಹಣದಿಂದ ಸ್ವಲ್ಪ ಖರ್ಚುಮಾಡುವೆ. ತೆಪ್ಪನಿರುವೆಯೇಕೆ? ಅದರಿಂದ ತಪ್ಪೇನು? ಹಣವನ್ನು ನಾನು ಅಹಂಕಾರದಿಂದ ಕೊಡುವುದಾದರೆ ನೀನೂ ಅಹಂಕಾರದೊಡನೆ ತೆಗೆದುಕೊಳ್ಳದಿರ ಬಹುದು. ಪ್ರೀತಿಸಿ ಕೊಡುವೆನಾದರೆ ಆಗ ಪ್ರೀತಿಯಿಂದಲೇ ತೆಗೆದುಕೊಳ್ಳಬಾರದೇಕೆ?"

"ತೆಗೆದುಕೊಳ್ಳುವೆ" ಎಂದಳು ಕುಮು.

ಮೋತಿಯ ತಾಯಿ ವಿಚಾರಿಸಿದಳು–"ಅಕ್ಕಾ, ನಿನ್ನ ಮಲಗುವ ಮನೆ ಇಂದೂ ಬರಿದಾಗಿಯೇ ಇರುವುದೇನು?"

ಕುಮು "ಅಲ್ಲಿ ನನಗೆ ಜಾಗವಿಲ್ಲ" ಎಂದಳು.

ಮೋತಿಯ ತಾಯಿ ಬಲವಂತ ಮಾಡಲಿಲ್ಲ. ಅವಳ ಮನೋಭಾವ ಇಷ್ಟೆ. 'ಬಲವಂತ ಮಾಡುವ ಹೊಣೆ ನನ್ನದಲ್ಲ. ಯಾರ ಕೆಲಸವೋ ಅವರು ಮಾಡಲಿ' ಎಂದು. ಕೇವಲ ಮೆಲ್ಲಮೆಲ್ಲನೆ "ನಿನಗೆ ಸ್ವಲ್ಪ ಹಾಲು ತಂದು ಕೊಡಲೇನು?" ಎಂದಳು.

ಕುಮು "ಈಗ ಬೇಡ, ಸ್ವಲ್ಪ ಹೊತ್ತಾಗಲಿ" ಎಂದಳು. ಆಕೆಗೆ ತನ್ನ ದೇವರೊಡನೆ ಅರಿಕೆಮಾಡಿಕೊಳ್ಳುವುದು ಇನ್ನೂ ಉಳಿದಿತ್ತು. ಇನ್ನೂ ಮನಸ್ಸಿನಲ್ಲಿ ಯಾವ ಉತ್ತರವನ್ನೂ ಪಡೆದಿರಲಿಲ್ಲ.

ಮೋತಿಯ ತಾಯಿ ತನ್ನ ಕೋಣೆಗೆ ಹೋಗಿ ನವೀನನನ್ನು ಕರೆದು "ಒಂದು ಮಾತು, ದೊಡ್ಡ ಠಾಕೂರರ ಹೊರಗಿನ ಕೋಣೆಯಲ್ಲಿ ಅವರ ಮೇಜಿನ ಮೇಲೆ ಅಕ್ಕನಿಗೆ ಯಾವುದಾದರೂ ಕಾಗದ ಇದೆಯೇನು ನೋಡಿಕೊಂಡು ಬಾ, ಡ್ರಾಯರ್ ಒಳಗೂ ಹುಡುಕಿನೋಡು" ಎಂದಳು.

ನವೀನ–"ಸರ್ವನಾಶ" ಎಂದನು.

"ನೀನು ಹೋಗುವುದಿಲ್ಲವಾದರೆ ನಾನು ಹೋಗುವೆ."

"ಇದಂತೂ ಕರಡಿಯ ಗವಿಯಿಂದ ಮರಿಯನ್ನು ಕದ್ದು ತರಲು ಕಳುಹಿಸುವಂತಾಯಿತು"

"ಯಜಮಾನರು ಆಫೀಸಿಗೆ ಹೋಗಿರುವರು. ಅವರ ಕೆಲಸ ತೀರಿಸಿ ಕೊಂಡು ಬರಲು ಸ್ವಲ್ಪ ಹೊತ್ತಾಗುವುದು. ಈ ನಡುವೆ—"

"ನೋಡು, ಹಗಲ ಹೊತ್ತಿನಲ್ಲಿ ಈ ಕೆಲಸ ಯಾವ ಬಗೆಯಲ್ಲೂ ನನ್ನಿಂದ ಆಗದು. ಈಗ ನಾಲ್ಕು ದಿಕ್ಕಿನಲ್ಲೂ ಜನ. ಇವತ್ತು ರಾತ್ರಿ ನಿನಗೆ ಸಮಾಚಾರ ತಿಳಿಸಬಲ್ಲೆ."

ಮೋತಿಯ ತಾಯಿ "ಒಳ್ಳೆಯದು, ಹಾಗೆಯೇ ಆಗಲಿ. ಆದರೆ ನೂರ್‌ನಗರಕ್ಕೆ ಈಗಲೇ ತಂತಿ ಕಳುಹಿಸಿ ವಿಪ್ರದಾಸ್ ಬಾಬುಗಳು ಹೇಗಿರುವರೆಂದು ತಿಳಿಯಬೇಕಾಗಿದೆ" ಎಂದಳು.

"ಒಳ್ಳೆಯಮಾತು ಹೇಳಿದೆ. ಇದನ್ನು ಅಣ್ಣನಿಗೆ ತಿಳಿಸಿ ಮಾಡ ಬೇಕಷ್ಟೆ?"

"ಇಲ್ಲ"

"ನಡುಕಲ ಸೊಸೆ! ನೀನು ಮಿತಿಮೀರುತ್ತಿರುವುದು ಕಾಣು ತ್ತಿದೆ. ಈ ಮನೆಯಲ್ಲಿ ಯಜಮಾನರ ಅಪ್ಪಣೆಯಿಲ್ಲದೆ ಹಲ್ಲಿ ನೊಣವನ್ನು ಹಿಡಿಯುವುದೂ ಸಾಧ್ಯವಿಲ್ಲ. ಇನ್ನು ನಾನು—"

"ಅಕ್ಕನ ಹೆಸರಿನಲ್ಲಿ ತಂತಿ ಹೋಗುವುದು. ಅದರಿಂದ ನಿನಗೇನು? ದೊಡ್ಡ ಯಜಮಾನರ ಆಫೀಸಿನಲ್ಲಿ ಒಂದು ಹೊರೆ ತಂತಿ ಸಮಾಚಾರ ವನ್ನು ನಿತ್ಯ ದರ್ವಾನನ ಕೈಲಿ ಕೊಟ್ಟು ಕಳುಹಿಸುತ್ತಾರೆ. ಅವುಗಳ ಸಂಗಡ ಇದೂ ಒಂದನ್ನು ದಾಟಿಸಿ ಬಿಡು. ಇದೊ ತಗೋ ರೂಪಾಯಿ. ಅಕ್ಕ ಕೊಟ್ಟಿರುವಳು"

ಕುಮುವಿನ ವಿಷಯದಲ್ಲಿ ನವೀನನ ಮನಸ್ಸೂ ಕರುಣೆಯಿಂದ ವ್ಯಥೆಗೊಂಡಿಲ್ಲದಿದ್ದರೆ ಇಷ್ಟು ದೊಡ್ಡ ಅಸಾಧ್ಯವಾದ ಕೆಲಸದ ಹೊಣೆ ಯನ್ನು ಅವನು ಖಂಡಿತ ಹೊರುತ್ತಿರಲಿಲ್ಲ.

೨೯

ಪದ್ಧತಿಯಂತೆ ಮಧುಸೂದನ ಒಂದು ಘಂಟೆಯ ಅನಂತರ ಅಂತಃ ಪುರಕ್ಕೆ ಊಟಕ್ಕೆ ಬಂದನು. ವಾಡಿಕೆಯಂತೆ ಹತ್ತಿರ ಸಂಬಂಧದ ಹೆಂಗ ಸರು ಅವನನ್ನು ಸುತ್ತುಗಟ್ಟಿದರು. ಒಬ್ಬಳು ಬೀಸಣಿಗೆ ಬೀಸಿ ನೊಣ

ಗಳನ್ನು ಓಡಿಸಿದರೆ, ಒಬ್ಬಳು ಬಡಿಸುತ್ತಿದ್ದಳು. ಮಧುಸೂದನನ ಅಂತಃ ಪುರದ ಏರ್ಪಾಡಿನಲ್ಲಿ ಐಶ್ವರ್ಯದ ಆಡಂಬರ ಏನೂ ಇಲ್ಲವೆಂಬ ಮಾತನ್ನು ಹಿಂದೆಯೇ ಹೇಳಿದೆ. ಅವನ ಊಟದ ಏರ್ಪಾಡು ಹಿಂದಿನ ಅಭ್ಯಾಸ ದಂತೆಯೇ. ದಪ್ಪ ಅಕ್ಕಿಯ ಅನ್ನ ಇಲ್ಲದಿದ್ದರೆ ಬಾಯಿಗೆ ರುಚಿಸದು; ಹಾಗೂ ಹೊಟ್ಟೆ ತುಂಬದು ಆದರೆ ಪಾತ್ರೆಗಳು ಮಾತ್ರ ಹೆಚ್ಚು ಬೆಲೆಯವು. ಬೆಳ್ಳಿಯ ತಟ್ಟೆ, ಬೆಳ್ಳಿಯ ಬಟ್ಟಲು, ಬೆಳ್ಳಿಯ ಲೋಟ. ಸಾಮಾನ್ಯವಾಗಿ ಉದ್ದಿನ ಬೇಳೆಯ ತೊವ್ವೆ, ಮೀನಿನ ಸಾರು, ಹುಣಿಸೇ ಗೊಜ್ಜು, ಮೀನಿನ ಉಪ್ಪಿನಕಾಯಿ–ಇವೇ ಊಟದ ಸಾಮಗ್ರಿಗಳು. ಅನಂತರ ಎಲ್ಲಕ್ಕೂ ಕೊನೆ ಯಲ್ಲಿ ಒಂದು ದೊಡ್ಡ ಬಟ್ಟಲ ತುಂಬ ಹಾಲು ಸಕ್ಕರೆ ಬೆರಸಿ ಕೊನೆಯ ತೊಟ್ಟಿನವರೆಗೆ ಪೂರ್ತಿಯಾಗಿ ಕುಡಿದು ವೀಳೇದೆಲೆಯ ತೊಟ್ಟಿನಲ್ಲಿ ಸ್ವಲ್ಪ ಹೆಚ್ಚು ಸುಣ್ಣ ತೆಗೆದುಕೊಂಡು ಒಂದು ವೀಳ್ಯವನ್ನು ಬಾಯಲ್ಲಿ ಹಾಕಿ ಕೊಂಡು ಮತ್ತೆರಡನ್ನು ಡಬ್ಬಿಯಲ್ಲಿಟ್ಟುಕೊಂಡು ಹದಿನೈದು ನಿಮಿಷಕಾಲ ತಂಬಾಕು ಸೇದುತ್ತ ಸೇದುತ್ತ ವಿಶ್ರಮಿಸಿಕೊಂಡು ತಕ್ಷಣ ಆಫೀಸಿಗೆ ಹೋಗುತ್ತಿದ್ದನು. ಅಳತೆ ಮೀರಿದ ಬಡತನವಿದ್ದ ಕಾಲದಿಂದ ಇಂದಿನ ವರೆಗೆ ಇವನ ಈ ಕಾರ್ಯ ಕ್ರಮದಲ್ಲಿ ಏನೂ ವ್ಯತ್ಯಾಸವಾಗುತ್ತಿರಲಿಲ್ಲ. ಆಹಾರದ ಈ ವಿಷಯದಲ್ಲಿ ಮಧುಸೂದನನಿಗೆ ಹಸಿವಿತ್ತು; ಆದರೆ ಲೋಭವಿರಲಿಲ್ಲ.

ಶ್ಯಾಮಾಸುಂದರಿ ಹಾಲಿನ ಬಟ್ಟಲಲ್ಲಿ ಸಕ್ಕರೆ ತಿರುವುತ್ತಿದ್ದಳು. ಅನು ಜ್ವಲ ಶ್ಯಾಮಲವರ್ಣ, ದಪ್ಪ ಮೈ ಎಂದರೆ ಏನು ಅರ್ಥವಾಗುವುದೋ ಅದಲ್ಲ; ಆದರೆ ಪರಿಪುಷ್ಟವಾದ ಆಕೆಯ ಶರೀರ ತನ್ನನ್ನು ಚೆನ್ನಾಗಿ ಘೋಷಿಸಿಕೊಳ್ಳುತಿತ್ತು. ಸಾಧಾರಣವಾದೊಂದು ಸೀರೆಗಿಂತ ಹೆಚ್ಚಾಗಿ ಮೈಮೇಲೆ ಬಟ್ಟೆಗಳಿಲ್ಲ. ಆದರೆ ನೋಡಿದರೆ ಸರ್ವದಾ ಶುಭ್ರವಾಗಿ ಕಾಣುತ್ತಿದ್ದಳು. ವಯಸ್ಸು ಯೌವನದ ಎಲ್ಲೆಯನ್ನು ಮುಟ್ಟುತ್ತಿದೆ. ಆದರೆ ಜ್ಯೇಷ್ಠಮಾಸದ ಮಧ್ಯಾಹ್ನದಂತೆ ಹೊತ್ತು ಕಳೆಯುತ್ತಿರುವುದು. ಇನ್ನೂ ಗೋಧೂಳಿಯ ನೆರಳು ಬೀಳದು. ದಟ್ಟವಾದ ಹುಬ್ಬಿನ ಕೆಳಗೆ ತೀಕ್ಷ್ಣ ವಾದ ಕರಿಯ ಕಣ್ಣುಗಳು ಯಾರನ್ನೂ ಇದಿರಿನಲ್ಲಿ ನೆಟ್ಟಗೆ ನೋಡು ವಂತಿರಲಿಲ್ಲ. ಸ್ವಲ್ಪ ನೋಡಿ ಎಲ್ಲವನ್ನೂ ಕಂಡು ಬಿಡುವಂತೆ ಇದ್ದುವು.

ಅವಳ ತುಂಬಿದ ತುಟಿಗಳೆರಡರಲ್ಲಿ ಬಹಳ ಮಾತನ್ನು ಅವಳು ಅಡಗಿಸಿಟ್ಟು ಕೊಂಡಿರುವ ಭಾವ ಕಾಣುತಿತ್ತು. ಪ್ರಪಂಚ ಅವಳಿಗೆ ಏನೂ ಹೆಚ್ಚಿನ ರಸವನ್ನು ಕೊಟ್ಟಿರಲಿಲ್ಲ, ಆದರೂ ಅವಳು ತುಂಬಿದವಳು. ತಾನು ಬೆಲೆ ಬಾಳುವವಳೆಂದು ಅವಳು ಬಲ್ಲಳು. ಅವಳು ಜಿಪುಣಳೂ ಅಲ್ಲ, ಆದರೆ ತನ್ನ ಮಹಾ ಅರ್ಘ್ಯವು ಉಪಯೋಗಕ್ಕೆ ಬಾರದೆಂಡೇ ತನ್ನ ಅಕ್ಕಪಕ್ಕದ ಮೇಲೆ ಅವಳಿಗೆ ಒಂದು ವಿಧವಾದ ಅಹಂಕಾರ ಜೆರೆತ ಅಶ್ರದ್ಧೆ. ಮಧುಸೂದನನ ಐಶ್ವರ್ಯದ ಉಬ್ಬರದ ಸಂಗಡಲೇ ಶ್ಯಾಮಾ ಈ ಸಂಸಾರದಲ್ಲಿ ಕಾಲಿಟ್ಟಿದ್ದಳು. ಯೌವನದ ಮಾಯಾ ಮಂತ್ರದಿಂದ ಈ ಸಂಸಾರದ ಶಿಖರದಲ್ಲಿ ಎಡೆಮಾಡಿಕೊಳ್ಳುವೆನೆಂದು ಅವಳ ಸಂಕಲ್ಪವಾಗಿತ್ತು. ಮಧುಸೂದನನ ಮನಸ್ಸು ಎಂದೂ ಕದಲಲಿಲ್ಲವೆಂದು ಹೇಳಲಾಗುವುದಿಲ್ಲ. ಆದರೆ ಮಧುಸೂದನ ಯಾವ ಬಗೆಯಲ್ಲೂ ಸೋಲಲಿಲ್ಲ. ಕಾರಣವೇನೆಂದರೆ ಮಧುಸೂದನನ ವಿಷಯ ಬುದ್ಧಿ, ಕೇವಲ ಬುದ್ಧಿ ಮಾತ್ರವೇ ಆಗಿರಲಿಲ್ಲ. ಅದು ಪ್ರತಿಭೆಯೂ ಆಗಿತ್ತು. ಈ ಪ್ರತಿಭೆಯ ಬಲದಿಂದಲೇ ಅವನು ಸಂಪತ್ತನ್ನು ಸೃಷ್ಟಿಸುತ್ತಿದ್ದನು. ಆ ಸೃಷ್ಟಿಯ ಪರಮಾನಂದದಲ್ಲಿ ಅವನು ಗಂಭೀರವಾಗಿ ಮಗ್ನವಾಗಿರುತ್ತಿದ್ದನು. ಈ ಪ್ರತಿಭೆಯ ಪ್ರಭಾವದಿಂದಲೇ ತಾನು ಕೈಕೊಂಡಿರುವ ಧನಸೃಷ್ಟಿಯ ಮಹಾ ತಪಸ್ಸಿನ ಭಂಗಕ್ಕಾಗಿ ದೇವೇಂದ್ರಾದಿಗಳು ಹಲವು ಪ್ರಬಲ ವಿಘ್ನಗಳನ್ನು ಕಳುಹಿಸುತ್ತಿರುವರೆಂದು ಅವನು ದೃಢವಾಗಿ ಅರಿತಿದ್ದನು. ಕ್ಷಣಕ್ಷಣಕ್ಕೆ! ತಪೋಭಂಗದ ಪೆಟ್ಟು ತಗುಲಿದೆ. ಬಾರಿಬಾರಿಗೂ ಅವನು ಅದನ್ನು ಸುಧಾರಿಸಿಕೊಳ್ಳುತ್ತಿದ್ದನು. ಇದರ ಜೊತೆಗೆ ಅವನಿಗೆ ಇನ್ನೊಂದು ಅನುಕೂಲವಿತ್ತು. ಉದ್ಯೋಗದಿಂದ ತುಂಬಿದ್ದ ಹಗಲಲ್ಲಿ ಅವನಿಗೆ ವಿರಾಮವೇ ಇರುತ್ತಿರಲಿಲ್ಲ. ಈ ಕಠಿಣ ದುಡಿತದ ನಡುವೆ ಕಣ್ಣಿಂದ ಕಾಣುವುದು, ಮತ್ತು ಕಿವಿಯಿಂದ ಕೇಳುವುದು, ಈ ಮೂಲಕ ಶ್ಯಾಮಾಳ ಸಹವಾಸದಲ್ಲಿ ಮಧುಸೂದನನ ದಣಿವು ದೂರವಾಗುತ್ತಿತ್ತು. ಹಬ್ಬ ಹರಿದಿನಗಳ ಪಾರಣೆಯ ಸಂದರ್ಭಗಳಲ್ಲಿ ಶ್ಯಾಮಾಸುಂದರಿಯ ವಿಷಯದಲ್ಲಿ ಅವನಿಗೆ ಸ್ವಲ್ಪ ಹೆಚ್ಚಾಗಿಯೇ ಪಕ್ಷಪಾತವಿತ್ತೆಂದು ತಿಳಿದುಕೊಳ್ಳಬಹುದು. ಆದರೆ ಅಂತಃಪುರದಲ್ಲಿ ಅವಳ ಹೆಮ್ಮೆ ಹೆಚ್ಚುವಂತೆ ಶ್ಯಾಮಾಳಿಗೆ ಒಂದುದಿನವಾದರೂ ಸಲಿಗೆ ಕೊಡ

ಲಿಲ್ಲ. ಶ್ಯಾಮಾ ಮಧುಸೂದನನ ಮನಸ್ಸಿನ ಓಟವನ್ನು ಸರಿಯಾಗಿ ತಿಳಿದಿದ್ದಳು. ಆದರೆ ಅವನ ವಿಷಯದಲ್ಲಿ ಅವಳಿಗಿದ್ದ ಅಂಜಿಕೆ ಮಾತ್ರ ದೂರವಾಗಲಿಲ್ಲ.

ಮಧುಸೂಧನನ ಊಟದ ವೇಳೆಯಲ್ಲಿ ಪ್ರತಿನಿತ್ಯವೂ ಶ್ಯಾಮಾ ಇದಿರಿನಲ್ಲಿರುತ್ತಿದ್ದಳು. ಇಂದೂ ಇದ್ದಳು. ಆಗ ತಾನೆ ಸ್ನಾನಮಾಡಿ ಬಂದಿದ್ದಳು. ಅವಳ ಎಣ್ಣೆಯಿಲ್ಲದ ಕಪ್ಪಾದ ಉದ್ದನೆಯ ತಲೆಗೂದಲು ಬೆನ್ನಮೇಲೆ ತುದಿಯವರೆಗೂ ಜೋಲಾಡುತ್ತಿತ್ತು. ಅದರ ಮೇಲೆ ಅಚ್ಚ ಬಿಳಿಯ ಸೀರೆ; ತಲೆಯ ಮೇಲೆ ಮುಸುಕೆಳೆದುಕೊಂಡಿದ್ದಳು. ಒದ್ದೆ ಕೂದಲಿಂದ ತಲೆಗೆ ಉಜ್ಜಿಕೊಂಡಿದ್ದ ಸ್ನಾನಚೂರ್ಣ ಮೃದುಸುಗಂಧವನ್ನು ಬೀರುತಿತ್ತು.

ಹಾಲಿನ ಬಟ್ಟಲ ಕಡೆಯಿಂದ ಮುಖ ತಿರುಗಿಸದೆಯೇ ಒಮ್ಮೆ ಮೆಲ್ಲಮೆಲ್ಲನೆ "ಠಾಕೂರ್‌ಪೋ, ಸೊಸೆಯನ್ನು ಕರೆ ಕಳುಹಲೇನು ?" ಎಂದಳು.

ಮಧುಸೂದನ ಒಂದು ಮಾತನ್ನೂ ಆಡದೆ ತನ್ನ ಅತ್ತಿಗೆಯ ಮುಖದ ಕಡೆ ಗಂಭೀರಭಾವದಿಂದ ನೋಡಿದನು. ಆ ಅತ್ತಿಗೆ, ಶ್ಯಾಮಾ ಸುಂದರಿ ಭಯದಿಂದ ಕಕ್ಕಾವಿಕ್ಕಿಯಾಗಿ ಪ್ರಶ್ನೆಗೆ ವ್ಯಾಖ್ಯಾನಮಾಡಿ "ನಿನ್ನ ಊಟದ ವೇಳೆಯಲ್ಲಿ ಹತ್ತಿರ ಕುಳಿತಿದ್ದರೆ ಒಳ್ಳೆಯದು. ನಿನಗೆ ಸ್ವಲ್ಪ ಸೇವೆ ಮಾಡಲು—"

ಮಧುಸೂದನನ ಮುಖಭಾವದ ಅರ್ಥವನ್ನೇ ಅರಿಯಲಾರದೆ ಶ್ಯಾಮಾಸುಂದರಿ, ತನ್ನ ಮಾತನ್ನು ಪೂರ್ತಿಮಾಡದೆ ತೆಪ್ಪನಾಗಿ ಬಿಟ್ಟಳು. ಮಧುಸೂದನ ಪುನಃ ತಲೆಬಗ್ಗಿಸಿಕೊಂಡು ಊಟಮಾಡತೊಡಗಿದನು.

ಸ್ವಲ್ಪ ಹೊತ್ತಾದ ಮೇಲೆ ತಟ್ಟೆಯಿಂದ ತಲೆಯೆತ್ತದೆಯೇ "ಹಿರಿಯ ಸೊಸೆ ಈಗ ಎಲ್ಲಿರುವಳು ?" ಎಂದು ಕೇಳಿದನು.

ಶ್ಯಾಮಾಸುಂದರಿ ಅಸ್ಥಿರಳಾಗಿ "ನೋಡಿಕೊಂಡು ಬರುತ್ತೇನೆ" ಎಂದಳು.

ಮಧುಸೂದನ ಹುಬ್ಬು ಗಂಟಿಕ್ಕಿ ಬೆರಳು ಅಲುಗಿಸಿ ನಿಷೇಧಿಸಿದನು. ಪ್ರಶ್ನೆಗೆ ಯಾವ ಉತ್ತರ ಪಡೆಯುವ ಶಂಕೆಯಿದೆಯೋ ಅದನ್ನು ಇವಳ ಬಾಯಿಂದ ಕೇಳಿದರೆ ಹಿತವಾಗಿರದು. ಆದರೂ ಮನಸ್ಸಿನಲ್ಲಿ ಯಥೇಷ್ಟ ಕುತೂಹಲವಿತ್ತು. ಊಟವಾದ ಮೇಲೆ ಮೂರನೆಯ ಮಹಡಿಯಲ್ಲಿ ತನ್ನ ಮಲಗುವ ಮನೆಗೆ ಹೋದಾಗ ಮನಸ್ಸಿನ ಮೂಲೆಯಲ್ಲಿ ಅತಿ ಕ್ಷೀಣವಾದ ಆಶೆಯೊಂದು ತಲೆದೋರಿತ್ತು. ಒಮ್ಮೆ ಬಿಸಿಲು ಮಹಡಿಯ ಮೇಲೆ ತಿರುಗಾಡಿ ಬಂದನು. ಪಕ್ಕದ ಸ್ನಾನದ ಮನೆಯೊಳಕ್ಕೆ ನುಗ್ಗಿ ಕ್ಷಣಹೊತ್ತು ಸ್ತಬ್ಧನಾಗಿ ನಿಂತಿದ್ದನು. ಅನಂತರ ಹಾಸಿಗೆಯಲ್ಲಿ ಮಲಗಿ ಗುಡುಗುಡಿ ಸೇದಲು ತೊಡಗಿದನು. ಪದ್ಧತಿಯ ಮೇರೆಗೆ ಹದಿನೈದು ನಿಮಿಷ ಕಳೆಯಿತು. ಇಪ್ಪತ್ತು ನಿಮಿಷ ಕಳೆದು ಅರ್ಧಘಂಟೆ ಆಗುವ ಸಮಯವಾಗಲು ಆಗ ಎದೆಯ ಬಳಿಯ ಜೇಬಿನಿಂದ ಗಡಿಯಾರ ತೆಗೆದು ಒಮ್ಮೆ ಗಂಟೆಯನ್ನು ನೋಡಿದನು. ವರ್ಷಗಳ ಮೇಲೆ ವರ್ಷಗಳು ಉರುಳಿವೆ. ಕಚೇರಿಗೆ ಹೋಗುವ ಮುನ್ನ ಎಂದೂ ಐದು ನಿಮಿಷ ಹೊತ್ತು ಮೀರಿರಲಿಲ್ಲ. ಕಚೇರಿಯಲ್ಲಿ ಒಂದು ರಿಜಿಸ್ಟರಿತ್ತು. ಯಾರು ಯಾರು, ಎಷ್ಟು ಹೊತ್ತಿನಲ್ಲಿ ಬಂದರು, ಎಷ್ಟು ಹೊತ್ತಿಗೆ ಹೋದರು, ಎಂಬುದರ ಲೆಕ್ಕ ಅದರಲ್ಲಿ ಬರೆದಿರುತ್ತಿತ್ತು. ಈ ಲೆಕ್ಕಕ್ಕೆ ಅನುಗುಣವಾಗಿ ಸಂಬಳದ ಏಳಿಳಿತ ಇರುತ್ತಿತ್ತು. ಕಛೇರಿಯ ಕೆಲಸಗಾರರ ಪೈಕಿ ಮಧುಸೂದನನ ಜುಲ್ಮಾನೆಯ ಅಂಕಿ ಎಲ್ಲರದಕ್ಕಿಂತಲೂ ಕಡಮೆ. ವಾಸ್ತವವಾಗಿ ತನ್ನ ಲೆಕ್ಕದಲ್ಲಿ ಇತರರಿಗಿಂತ ಇಮ್ಮಡಿಯಾಗಿ ದಂಡ ವಸೂಲು ಮಾಡುತ್ತಿದ್ದ. ಮಧ್ಯಾಹ್ನ ಕಚೇರಿಗೆ ಹೊತ್ತುಮೀರಿ ಹೋದರೆ ಹೆಚ್ಚು ಹೊತ್ತು ಇದ್ದು ನಷ್ಟ ಸರಿತೂಗಿಸುವೆನೆಂದು ಇಂದು ಮನಸ್ಸಿನಲ್ಲೇ ಪ್ರತಿಜ್ಞೆ ಮಾಡಿದ್ದನು. ಹೊತ್ತು ಎಷ್ಟೇ ಕಳೆದರೂ ಕೆಲಸದಲ್ಲಿ ಇಂದು ಮನಸ್ಸಾಗಲಿಲ್ಲ. ಹೆಚ್ಚೇಕೆ; ಅರ್ಧಗಂಟೆ ಮುಂಚಿತವಾಗಿಯೇ ಕೆಲಸ ಬಿಟ್ಟು ಮನೆಗೆ ಬಂದನು. ಆವೇಳೆಯಲ್ಲಿ ಒಮ್ಮೆ ಮಲಗುವ ಮನೆಗೆ ಹೋಗಬೇಕೆಂದು ಮನಸ್ಸಿನಲ್ಲಿ ಬಯಸಿದ್ದನು. ಒಂದು ವೇಳೆ ಅಲ್ಲಿ ಯಾರನ್ನಾದರೂ ಕಂಡರೂ ಕಾಣಬಹುದು ಎನ್ನುವ ಭಾವನೆ. ಹಗಲು ವೇಳೆಯಲ್ಲಿ ಅವನು ಎಂದೂ ಮಲಗುವ ಮನೆಗೆ ಬಂದವನಲ್ಲ. ಇಂದು ಕಚೇರಿಯ ಉಡಿಗೆಯಲ್ಲೇ ಅಂತಃಪುರವನ್ನು ಹೊಕ್ಕನು.

ಅದೇ ಹೊತ್ತಿಗೆ ಸರಿಯಾಗಿ ಮೋತಿಯ ತಾಯಿ ಬಿಸಿಲು ಮಹಡಿಯ ಮೇಲೆ ಒಣಹಾಕಿದ್ದ ಮಾವಿನಕಾಯಿಯ ಬಾಳಕವನ್ನು ಬುಟ್ಟಿಯಲ್ಲಿ ತುಂಬುತ್ತಿದ್ದಳು. ಮಧುಸೂದನ ಅವೇಳೆಯಲ್ಲಿ ಮಲಗುವ ಮನೆಯೊಳಕ್ಕೆ ನುಗ್ಗುವುದನ್ನು ಕಂಡು ಒಂದು ಮೊಳದುದ್ದ ಮುಸುಕೆಳದುಕೊಂಡು ಅದರ ಮರೆಯಲ್ಲಿ ಯಥೇಷ್ಟವಾಗಿ ನಕ್ಕಳು. ನಡುಕಲ ಸೊಸೆಗೆ ತನ್ನ ಈ ನಿಯಮೋಲ್ಲಂಘನೆಯು ಗೊತ್ತಾಗಲು ಮಧುಸೂದನ ನಾಚಿದನು ಮತ್ತು ಬೇಸರಗೊಂಡನು. "ಅತ್ಯಂತ ನಿಶ್ಯಬ್ದವಾಗಿ ಕೋಣೆಯೊಳಗೆ ಹೋಗಬೇಕು. ಇಲ್ಲವಾದರೆ ಜಿಂಕೆ ಹೆದರಿ ಓಡಿಹೋದೀತು" ಎಂದು ಮನಸ್ಸಿನಲ್ಲಿ ಎಣಿಕೆ ಹಾಕಿದ್ದನು. ಆದರೆ ಅದು ಸಾಧ್ಯವಾಗಲಿಲ್ಲ. ಕೌತುಕ ದೃಷ್ಟಿಯ ಆ ಘಾತವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ವೇಗವಾಗಿ ಕೋಣೆಯೊಳಕ್ಕೆ ಹೊಕ್ಕನು. ನೋಡಿದಾಗ ಕಚೇರಿಗೆ ತಪ್ಪಿಸಿಕೊಂಡದ್ದು ಸಂಪೂರ್ಣ ವ್ಯರ್ಥವಾಯಿತೆಂದು ಅರಿವಾಯಿತು. ಕೋಣೆಯಲ್ಲಿ ಯಾರೂ ಇರಲಿಲ್ಲ. ಹಗಲಲ್ಲಿ ಯಾರಾದರೂ ಕ್ಷಣಹೊತ್ತಾದರೂ ಇದ್ದುದರ ಚಿಹ್ನೆಯೂ ಇರಲಿಲ್ಲ. ಕ್ಷಣಮಾತ್ರದಲ್ಲಿ ಅವನ ಧೈರ್ಯ ಅಸಹನೀಯವಾಯಿತು. ತಾನು ಮೈದುನನಾಗಿದ್ದರೂ ನಡುಕಲ ಸೊಸೆಯೊಡನೆ ಒಂದು ದಿನವಾದರೂ ಒಂದು ಮಾತನ್ನೂ ಆಡಿರಲಿಲ್ಲ. ಆದರೂ ಅವಳನ್ನು ಕರೆದು ಕುಮುವಿನ ವಿಷಯವಾಗಿ ಏನಾದರೂ ಹೇಳಬೇಕೆಂದು ಮನಸ್ಸು ತಲ್ಲಣಿಸತೊಡಗಿತ್ತು. ಒಂದಾವರ್ತಿ ಹೊರಕ್ಕೂ ಬಂದನು. ಆದರೆ ಆ ವೇಳೆಗೆ ಮೋತಿಯ ತಾಯಿ ಕೆಳಗಿಳಿದು ಹೋಗಿಬಿಟ್ಟಿದ್ದಳು.

ಮೊದಲಗಿತ್ತಿ ಪರಿತ್ಯಜಿಸಿದ ಮಲಗುವ ಮನೆಯಲ್ಲಿ ಕಾರಣವಿಲ್ಲದೆ, ಆ ವೇಳೆಯಲ್ಲಿ ಒಂಟಿಯಾಗಿ ಹೊತ್ತು ಕಳೆಯುವ ಅಗೌರವದಿಂದ ತನ್ನನ್ನು ಕಾಪಾಡಿಕೊಳ್ಳಲು ಹೊರಗಡೆಗೆ ವೇಗವಾಗಿ ದಡದಡನೆ ಹೋದನು. ಭಾರಿಯಾದೊಂದು ಅತ್ಯವಸರದ ಕೆಲಸ ಮಾಡುವವನಂತೆ ನಟಿಸುತ್ತ ಮೇಜಿನ ಮೇಲೆ ಬಗ್ಗಿದನು. ಇದಿರಿನಲ್ಲಿ ದಪ್ಪ ಪುಸ್ತಕವೊಂದಿತ್ತು. ಸಾಮಾನ್ಯವಾಗಿ ಅವನು ಅದನ್ನು ನೋಡುತ್ತಿರಲಿಲ್ಲ. ಇಂದು ತನ್ನನ್ನು ನೋಡುವದನ್ನು ಮೋಸಪಡಿಸುವ ಉದ್ದೇಶದಿಂದ ಅದನ್ನು ತೆರೆದನು. ಈ ಪುಸ್ತಕದಲ್ಲಿ ಅವನ ಮನೆಯಿಂದ ಪ್ರತಿದಿನ ಕಳುಹಿಸುವ ಕಾಗದಗಳು;

ಮತ್ತು ತಂತಿಗಳ ತಾರೀಖು, ವೇಳೆ ಮತ್ತು ಖರ್ಚು, ಮೊದಲಾದವು ಗಳನ್ನು ಗುರುತು ಹಾಕಿರುತಿತ್ತು. ಪುಸ್ತಕ ತೆರೆದು ಮೊದಲು ನೋಡಿದ ಕೂಡಲೇ ಅಂದಿನ ತಾರೀಖಿನಲ್ಲಿ ಟೆಲಿಗ್ರಾಮಿನ ಪಟ್ಟಿಯಲ್ಲಿ ವಿಪ್ರದಾಸನ ಹೆಸರು ಮತ್ತು ವಿಳಾಸವಿದ್ದುದನ್ನು ಕಂಡನು. ಕಳುಹಿಸಿದವರು ಸ್ವತಃ ದೊಡ್ಡ ಯಜಮಾನಮ್ಮನವರು.

" ದರವಾನನನ್ನು ಕರೆ "

ದರ್‌ವಾನ ಬಂದನು.

" ಈ ಟೆಲಿಗ್ರಾಮ್ ಕಳುಹಿಸಲು ಯಾರು ಕೊಟ್ಟಿದ್ದರು ? "

" ನಡುಕಲ ಯಜಮಾನರು "

" ಕರೆ ಅವನನ್ನು "

ನಡುಕಲ ಯಜಮಾನ ಬಿಳುಪೇರಿದ ಮುಖದೊಡನೆ ಬಂದು ನಿಂತನು.

" ನನ್ನ ಅಪ್ಪಣೆಯನ್ನು ಪಡೆಯದೆ ಟೆಲಿಗ್ರಾಮ್ ಕಳುಹಿಸಲು ಯಾರು ಹೇಳಿದರು ? "

ಯಾರು ಹೇಳಿದರೋ ಅವರ ಹೆಸರನ್ನು ಯಜಮಾನರ ಇದಿರಿನಲ್ಲಿ ಬಾಯಿಬಿಡುವುದು ಸಹಜವಾದ ಸಂಗತಿಯಲ್ಲ. ಏನು ಹೇಳಬೇಕೆಂಬು ದನ್ನರಿಯದೆ ಆ ಶೀತಕಾಲದಲ್ಲೂ ನವೀನನಿಗೆ ಬೆವರತೊಡಗಿತು.

ನವೀನ ನೀರವವಾಗಿದ್ದುದನ್ನು ಕಂಡು ಮಧುಸೂದನ ತಾನೇ " ನಡು ಕಲ ಸೊಸೆ ಎಂದು ಕಾಣುತ್ತೆ " ಎಂದನು. ತಲೆ ತಗ್ಗಿಸಿ ನಿರುತ್ತರನಾಗಿ ರುವುದರಿಂದಲೇ ಅದಕ್ಕೆ ಉತ್ತರ ಸ್ಪಷ್ಟವಾಯಿತು. ಸರ್ರನೆ ತಲೆಗೆ ರಕ್ತ ಏರಿತು. ಮುಖ ಕೆಂಪಗೆ ಆಯಿತು. ಕೋಪ ಎಷ್ಟು ಕೆರಳಿತೆಂದರೆ ಗಂಟ ಲಲ್ಲಿ ದನಿಯೇ ಹೊರಡಲಿಲ್ಲ. ವೇಗವಾಗಿ ಕೈ ಆಡಿಸಿ ನವೀನನನ್ನು ಕೋಣೆಯಿಂದ ಹೊರಗೆ ಹೋಗಲು ಸನ್ನೆಮಾಡಿ ಕೋಣೆಯ ಒಂದು ಕಡೆ ಯಿಂದ ಮತ್ತೊಂದು ಕಡೆಯವರೆಗೆ ಅತ್ತಿತ್ತ ತಿರುಗಾಡತೊಡಗಿದನು.

## ೩೦

ನವೀನ ತನ್ನ ಕೊಟಡಿಗೆ ಹೋಗಿ ಒಣಮುಖ ಹಾಕಿಕೊಂಡು ಮೋತಿಯ ತಾಯಿಯೊಡನೆ "ಇನ್ಯಾಕೆ? ಎಲ್ಲ ನೆಟ್ಟಗಾಯಿತಲ್ಲ" ಎಂದನು.

" ಏನಾಯಿತು ? "

" ಈ ಸಲ ಸಾಮಾನು ಸರಂಜಾಮನ್ನೆಲ್ಲ ಪೆಟ್ಟಿಗೆಯಲ್ಲಿ ತುಂಬು "

" ನಿನ್ನ ಬುದ್ಧಿ ಅನುಸರಿಸಿ ತುಂಬಿಟ್ಟರೆ ನಾಳೆಯೇ ಹೊರಕ್ಕೆ ತೆಗೆಯ ಬೇಕಾಗುತ್ತೆ. ಯಾಕೆ ? ನಿಮ್ಮ ಅಣ್ಣನವರ ಪ್ರಕೃತಿ ನೆಟ್ಟಗಿಲ್ಲವೆಂದು ಕಾಣುತ್ತೆ, ಅಲ್ಲವೆ ? "

" ನಾನು ಅವನನ್ನು ಬಲ್ಲೆ. ಈ ಬಾರಿ ಇಲ್ಲಿಯ ವಾಸಕ್ಕೆ ಸೊನ್ನೆ ಬಿದ್ದಂತೆಯೇ. "

" ಹಾಗಾದರೆ ನಡೆ ಮತ್ತೆ. ಅದಕ್ಕೆ ಅಷ್ಟೊಂದು ಯೋಚನೆಯೇಕೆ ? ಅಲ್ಲಿ ನೀರಿನಲ್ಲೇನೂ ಮುಳುಗಿ ಹೋಗುವುದಿಲ್ಲವಲ್ಲ. "

" ನನ್ನನ್ನು ಹೊರಡೆಂದು ಹೇಳುವುದೇಕೆ ? ಈ ಬಾರಿ ನಡುಕಲ ಸೊಸೆಯನ್ನೇ ತವರಿಗೆ ಕಳುಹಿಸಿ ಬಿಡು ಎಂದು ಅಪ್ಪಣೆ ಆಗುತ್ತೆ. "

" ಆ ಅಪ್ಪಣೆಯನ್ನು ನೀನು ಪಾಲಿಸಲಾರೆ ಎಂಬುದನ್ನು ನಾನು ಬಲ್ಲೆ "

" ಅದು ನಿನಗೆ ಹೇಗೆ ಗೊತ್ತಾಯಿತು ?

" ನಾನೊಬ್ಬಳು ಮಾತ್ರ ತಿಳಿದಿರುವೆನೆಂದು ಎಣಿಸಬೇಡ. ಮನೆಯ ಜನರೆಲ್ಲ ನಿನ್ನನ್ನು ಸ್ತ್ರೈಣನೆಂದು ಅರಿತಿರುವರು. ಗಂಡಸಾದವನು ಹೇಗೆ ಸ್ತ್ರೈಣನಾಗುವನು ಎಂಬುದನ್ನ ನಿಮ್ಮಣ್ಣ ಇದುವರೆಗೆ ಅರಿತಿರಲಿಲ್ಲ. ಈಗ ಸ್ವತಃ ಅರಿಯುವ ಸರದಿ ಅವನಿಗೂ ಬಂದಿದೆ. "

" ಏನಂದೆ ? "

" ನಿಮ್ಮ ವಂಶದಲ್ಲಿ ಆ ವ್ಯಾಧಿ ಇದೆಯೆನ್ನುವುದನ್ನ ನಾನು ಬಲ್ಲೆ. ಇಷ್ಟು ದಿನ ದೊಡ್ಡಣ್ಣನ ಸ್ವಭಾವ ಗೊತ್ತಾಗಿರಲಿಲ್ಲ. ಅದು ಬಹು ದಿನ ಗಳಿಂದ ಶೇಖರವಾಗಿರುವುದರಿಂದ ಅದರ ಉಗ್ರತೆ ಬಹಳ ತೀವ್ರವಾಗಿ ರುವುದು. ನೀನೇ ನೋಡುತ್ತೀರು; ನಾನು ಈಗಲೇ ಹೇಳಿದ್ದೇನೆ. ಎಷ್ಟು ಶಕ್ತಿಯಿಂದ ಪ್ರಪಂಚ, ಸಂಸಾರ ಎಲ್ಲವನ್ನೂ ಮರೆತು ಹಣದ ಚೀಲ ವನ್ನು ಅಪ್ಪಿಕೊಂಡು ಕುಳಿತಿದ್ದನೋ, ಅಷ್ಟು ಶಕ್ತಿಯೂ ಹೆಂಡತಿಯ ಕಡೆ ವಾಲುವುದು. ಸಂದೇಹವೇ ಇಲ್ಲ. "

" ಹಾಗೆಯೇ ಆಗಲಿ. ಹಿರಿಯ ಸ್ತ್ರೈಣ ಸಭೆ ಕೂಡಿಸಲಿ, ಆದರೆ ನಡುಕಲ ಸ್ತ್ರೈಣ ಯಾರನ್ನು ಕಟ್ಟಿಕೊಂಡು ಬದುಕುವುದು ? "

" ಆ ಯೋಚನೆಯ ಹೊಣೆ ನನ್ನ ಮೇಲಿರಲಿ. ಈಗ ನಾನು ನಿನಗೆ ಏನು ಹೇಳುತ್ತೇನೋ ಅದನ್ನು ಮಾಡು. ಅವರ ಡ್ರಾಯರನ್ನ ನೀನು ಶೋಧನೆ ಮಾಡಬೇಕಾಗಿದೆ "

ನವೀನ ಕೈ ಜೋಡಿಸಿಕೊಂಡು, " ನಿಮ್ಮ ದಮ್ಮಯ್ಯ ಮುಕುಂದ ರಾಯರೆ— ಹಾವಿನ ಹುತ್ತದಲ್ಲಿ ಕೈ ಇಡ ಹೇಳಿದರೂ ಇಡುವೆ ಆದರೆ ಆ ಡ್ರಾಯರಿನಲ್ಲಿ ಮಾತ್ರ ಸಾಧ್ಯವಿಲ್ಲ " ಎಂದನು.

" ಹಾವಿನ ಹುತ್ತದಲ್ಲಿ ಕೈ ಇಡಬೇಕಾದ ಸಂದರ್ಭವಿದ್ದರೆ ನಾನೇ ಮಾಡುತ್ತಿದ್ದೆ. ಡ್ರಾಯರಿನಲ್ಲಿ ನೀನೇ ಕೈಹಾಕಬೇಕು. ಈ ಮನೆಯಲ್ಲಿ ಯಾರಿಗೆ ಕಾಗದ ಬಂದರೂ ಮೊದಲು ಅವರಿಗೆ ತೋರಿಸದೆ ಯಾರಿಗೂ ಕೊಡಕೂಡದೆಂಬ ಪದ್ಧತಿಯಿರುವುದನ್ನು ನೀನು ಬಲ್ಲೆಯಲ್ಲವೆ ? ಅವರ ಕೈಗೆ ಕಾಗದ ಬಂದಿದೆಯೆಂದು ನನ್ನ ಮನಸ್ಸು ಹೇಳುತ್ತಿದೆ. "

" ನನ್ನ ಮನಸ್ಸೂ ಅದನ್ನೇ ಹೇಳುತ್ತಿದೆ. ಆದರೆ ಆ ಕಾಗದಕ್ಕೆ ನನ್ನ ಕೈ ಸೋಂಕಿದ್ದೇ ಆದರೆ ಅಣ್ಣ ನನ್ನ ತಪ್ಪಿಗೆ ಸರಿಯಾದ ಶಿಕ್ಷೆ ಹುಡುಕಿ, ಕಡೆಗೆ ಏಳು ವರ್ಷ ಕಠಿಣ ಘಾಸಿಶಿಕ್ಷೆಯನ್ನು ವಿಧಿಸಬಹುದೆಂದು ತೋರುತ್ತೆ. "

" ನೀನು ಏನೂ ಮಾಡಬೇಕಾಗಿಲ್ಲ. ಕಾಗದಕ್ಕೆ ಕೈ ಇಡ ಬೇಡ. ಅಕ್ಕನ ಹೆಸರಿನಲ್ಲಿ ಕಾಗದ ಇದೆಯೇ ಎನ್ನುವುಷ್ಟನ್ನು ಮಾತ್ರ ನೋಡಿ ಬಾ. "

ನಡುಕಲ ಸೊಸೆಯ ವಿಷಯದಲ್ಲಿ ನವೀನನಿಗೆ ಬಹಳ ಅಭಿಮಾನ. ಹೆಚ್ಚೇಕೆ ; ತಾನು ತನ್ನ ಹೆಂಡತಿಗೆ ಸರಿಯಾದವನಲ್ಲ ಎಂದು ಅವನ ಅಭಿಪ್ರಾಯ. ಅದರಿಂದಲೇ ಅವಳಿಗಾಗಿ ಯಾವುದಾದರೂ ದುಸ್ಸಾಧ್ಯ ವಾದ ಕೆಲಸಮಾಡಬೇಕಾದ ಸಂದರ್ಭ ಒದಗಿದರೆ ಎಷ್ಟೇ ಭಯವಾದರೂ ಅದರೊಂದಿಗೆ ಅಷ್ಟೆಷ್ಟೂ ಸಂತೋಷವೂ ಆಗುತ್ತಿತ್ತು.

ಆ ರಾತ್ರಿಯೇ ಕುಮುವಿನ ಹೆಸರಿಗೆ ಒಂದು ಕಾಗದ ಮತ್ತು ಒಂದು ತಂತಿ ಎರಡೂ ಡ್ರಾಯರಿನಲ್ಲಿ ಇದೆಯೆಂದು ನಡುಕಲ ಸೊಸೆಗೆ ನವೀನ ನಿಂದ ತಿಳಿಯಿತು.

ಯಾವ ಉತ್ಸಾಹದ ಭರದಲ್ಲಿ ಕುಮು ತನ್ನ ಮಲಗುವ ಮನೆ ಬಿಟ್ಟು ದಾಸ್ಯವೃತ್ತಿಯಲ್ಲಿ ಪ್ರವೃತ್ತಳಾದಳೋ ಆ ಉತ್ಸಾಹವೇ ಈಗ ಕಡಮೆ ಯಾಯಿತು. ಅವಮಾನದ ಅಸಂತೋಷ ಕಡಮೆಯಾಗಿ ವಿಷಾದದ ಮ್ಲಾನತೆಯಿಂದ ಈಗ ಅವಳ ಮನಸ್ಸು ಮೋಡ ಕವಿದಂತಾಗಿತ್ತು. ಈ ನಡೆವಳಿಕೆ ಶಾಶ್ವತವಾದುದಲ್ಲವೆಂದು ಅರಿತಳು. ಆದರೆ ಶಾಶ್ವತವಾದ ಏರ್ಪಾಡೊಂದು ಆಗದಿದ್ದರೆ ಕುಮು ಬದುಕುವುದಾದರೂ ಹೇಗೆ? ಸಂಸಾರದಲ್ಲಿ ಸಾಯುವವರೆಗೆ ರಾತ್ರಿ ಹಗಲು ಹಟಹಿಡಿದು ಈ ರೀತಿ ಹೊಂದಿಕೆಯಿಲ್ಲದೆ ಇರುವುದು ಸಾಧ್ಯವಲ್ಲ.

ಅವಳು ಕೊಟಡಿಯ ಬಾಗಿಲು ಮುಚ್ಚಿಕೊಂಡು ಈ ಸಂಗತಿಯನ್ನೇ ಆಲೋಚಿಸುತ್ತಿದ್ದಳು. ಕೊಟಡಿ ವರಾಂಡದ ಒಂದು ಮೂಲೆಯಲ್ಲಿ ಮರದ ಕಟಕಟೆಯಿಂದ ಸುತ್ತುವರಿದಿತ್ತು. ಒಳಗೆ ಹೋಗುವ ಬಾಗಿಲು ಬಿಟ್ಟರೆ ಬೇರೆ ಯಾವ ದಾರಿಯೂ ಇಲ್ಲ. ಗೋಡೆಯಲ್ಲಿ ಮೇಲಿನವರೆಗೆ ಮರದ ಹಲಗೆಯ ಮಾಡಗಳಿದ್ದುವು. ಅವುಗಳಲ್ಲಿ ದೀಪ ಹಚ್ಚಲು ಆವಶ್ಯಕವಾಗುವ ವಿಚಿತ್ರಸಾಧನಗಳಿದ್ದವು. ಎಣ್ಣೆ ಸುರಿದು ಕೊಳಕಿನಿಂದ ಕೊಟಡಿ ಸಂಪೂರ್ಣ ವಾಗಿ ಅಶುದ್ಧವಾಗಿತ್ತು. ಗೋಡೆಯ ಯಾವ ಭಾಗದಲ್ಲಿ ಬಾಗಿಲಿತ್ತೋ ಅದೇ ಕಡೆ ಲಾಂದ್ರಗಳಿಗೆ ಸುತ್ತಿ ಬರುತ್ತಿದ್ದ ಕಾಗದಗಳಿಂದ ಚಿತ್ರಗಳನ್ನು ಕತ್ತರಿಸಿ ಅಂಟಿಸಿ ಯಾವನೋ ಒಬ್ಬ ಆಳು ಸೌಂದರ್ಯಬೋಧದ ತೃಪ್ತಿ ಯನ್ನು ಸಾಧಿಸಿಕೊಂಡಿದ್ದ. ಮೂಲೆಯೊಂದರಲ್ಲಿ ತವರದ ಪೆಟ್ಟಿಗೆಯಲ್ಲಿ ಸುಣ್ಣದ ಹುಡಿ, ಅದರ ಪಕ್ಕದಲ್ಲಿ ಕುಕ್ಕೆಯಲ್ಲಿ ಒಣಗಿದ ಹುಣಿಸೇಹಣ್ಣು, ಮತ್ತು ಕೆಲವು ಕೊಳಕು ಬಟ್ಟೆಗಳಿದ್ದವು. ಇನ್ನು ಸಾಲುಸಾಲಾಗಿ ಶೀಮೆಎಣ್ಣೆ ಟಿನ್ನುಗಳಿದ್ದವು. ಆ ಪೈಕಿ ಎಲ್ಲ ಬರಿಯದು; ಒಂದೋ ಎರಡೋ ತುಂಬಿದ್ದವು.

ಅಭ್ಯಾಸವಿಲ್ಲದೆ ಕೈಯಲ್ಲಿ ಇಂದು ಬೆಳಗಿನಿಂದ ಕುಮು ತನ್ನ ಕೆಲಸ ದಲ್ಲಿ ತೊಡಗಿದ್ದಳು. ಉಗ್ರಾಣದ ಕೆಲಸ ತೀರಿಸಿಕೊಂಡು ಮೋತಿಯ ತಾಯಿ

ಇಣಿಕಿನೋಡಿ ಕುಮುವಿನ ಕರ್ತವ್ಯನಿಷ್ಠೆಯಲ್ಲಿನ ಅಸಾಧ್ಯ ಸಂಕಟವನ್ನು ನಿಂತುಕೊಂಡೇ ಅರಿತಳು. ಒಂದೆರಡು ಕ್ಷಣಭಂಗುರ ಪದಾರ್ಥಗಳಿಗೆ ಕೊನೆಗಾಲ ಹತ್ತಿರವಾಗಿದೆಯೆಂದು ಅರಿತಳು ಈ ಮನೆಯಲ್ಲಿ ಸಾಮಾನ್ಯ ಸಾಮಾನುಗಳ ನಷ್ಟವೂ ದೃಷ್ಟಿಗೆ ಅಥವಾ ಲೆಕ್ಕಕ್ಕೆ ಬೀಳದೆ ತಪ್ಪಿಸಿಕೊಳ್ಳಲಾರದು

ಮೋತಿಯ ತಾಯಿ ಸುಮ್ಮನಿರಲಾರದೆ ಹೋದಳು. "ಕೈಯಲ್ಲಿ ಕೆಲಸವೇನೂ ಇಲ್ಲ. ಅದರಿಂದಲೇ ಬಂದೆ. ಅಕ್ಕನ ಕೆಲಸದಲ್ಲಿ ಸ್ವಲ್ಪ ಕೈ ಕೂಡಿಸಿದರೆ ಪುಣ್ಯ ಬರುವುದು" ಎಂದು ಯೋಚಿಸಿದೆ. ಇಷ್ಟು ಹೇಳಿ ಗಾಜಿನ ಗುಳೋಪು ಮತ್ತು ಚಿಮಣಿಯುಬುಟ್ಟಿ, ಇವುಗಳನ್ನು ಹತ್ತಿರಕ್ಕೆ ಎಳೆದುಕೊಂಡು ಉಜ್ಜುವುದಕ್ಕೂ ಮತ್ತು ಒರಸುವುದಕ್ಕೂ ಆರಂಭಿಸಿದಳು.

ಅಡ್ಡಿಮಾಡಲು ಕುಮುವಿಗೆ ಈಗ ಬಲವಿರಲಿಲ್ಲ. ಯಾಕೆಂದರೆ ಈ ಮಧ್ಯೆ ತನ್ನ ಅನುಭವದ ವಿಷಯ ಸ್ವಂತ ಅನುಭವದಿಂದಲೇ ಅರಿವಾಗಿತ್ತು. ಮೋತಿಯ ತಾಯಿಯ ಸಹಾಯಪಡೆದು ಬದುಕಿದ್ದಳು. ಆದರೆ ಮೋತಿಯ ತಾಯಿಗೂ, ಕಲಿಸದೆ ಕಲಿತವಿದ್ಯೆಗೆ ಒಂದು ಎಲ್ಲೆಯಿದೆ. ಸೀಮೆ ಎಣ್ಣೆಯ ಲ್ಯಾಂಪಿಗೆ ಅಳತೆಯಂತೆ ಬತ್ತಿ ಕತ್ತರಿಸಿ ಸರಿಪಡಿಸುವುದು ಅವಳಿಂದ ಅಸಾಧ್ಯ. ಕೆಲಸ ಅವಳ ಮೇಲ್ವಿಚಾರಣೆಯಲ್ಲೇ ಆಗುತ್ತಿತ್ತು. ನಿಗದಿಯಂತೆ ಎಣ್ಣೆ ಮೊದಲಾದುವುಗಳ ಅಳತೆ ಅವಳ ಅಧಿಕಾರದಲ್ಲಿತ್ತು. ಆದರೆ ಕೈಯಾರ ಬತ್ತಿ ಕತ್ತರಿಸುವುದು ಇಂದಿನವರೆಗೆ ಅವಳಿಂದ ಆಗಿರಲಿಲ್ಲ. ಅದರಿಂದಲೇ ವಿಧಿಯಿಲ್ಲದೆ ಮುದುಕನಾದ ಬಂಕೂ ಫರಾಶನನ್ನು ಸಹಕಾರಕ್ಕಾಗಿ ಕರೆಯುವ ಮಾತನ್ನೆತ್ತಿದಳು.

ಸೋಲನ್ನೊಪ್ಪಿಕೊಳ್ಳಬೇಕಾಯಿತು. ಬಂಕೂ ಬಂದ. ದ್ರುತಹಸ್ತದಿಂದ ಬಹಳ ಸ್ವಲ್ಪ ಹೊತ್ತಿನಲ್ಲಿ ಕೆಲಸ ಮುಗಿಸಿದನು. ಸಂಜೆಗೆ ಮುಂಚೆಯೇ ದೀಪಗಳನ್ನು ಒಂದೊಂದು ಕೊಟಡಿಯಾಗಿ ಹಚ್ಚಲು ಬರಬೇಕಾಗಿತ್ತು. ಆ ಕೆಲಸಕ್ಕಾಗಿ ಇದುವರೆಗಿನ ಪದ್ಧತಿಯಂತೆ ತಾನು ಸಕಾಲದಲ್ಲಿ ಬರಬೇಕೇ ಇಲ್ಲವೇ ಎಂದು ಬಂಕೂ ವಿಚಾರಿಸಿದನು. ಮನುಷ್ಯ

ನೇನೋ ಸರಳ ಸ್ವಭಾವದವನು. ಆದರೆ ಆಗಲೂ ಪ್ರಶ್ನೆಯಲ್ಲಿ ಒಂದು ಶ್ಲೇಷವಿತ್ತು. ಕುಮುವಿನ ಕಿವಿಯ ಅಂಚು ಕೆಂಪಡರಿತು.

ಅವಳು ಯಾವ ವಿಧವಾದ ಪ್ರತ್ಯುತ್ತರವನ್ನು ಕೊಡುವ ಮೊದಲೇ ಮೋತಿಯ ತಾಯಿ "ಬರದೆ ಮತ್ತೆ ?" ಎಂದಳು. ಕುಮುವಿಗೆ ಕ್ಷೌರ ಮಾಡಿ ಕೊಡಲು ಹೊರಟು ತಾನು ಕೆಲಸಕ್ಕೆ ಅಡ್ಡಿಮಾಡುತ್ತಿರುವೆನೆಂಬ ಅಂಶವನ್ನು ಅರಿಯಲು ಸಾವಕಾಶವಾಗಲಿಲ್ಲ.

೩೧

ಮಧ್ಯಾಹ್ನ ಊಟವಾದ ಮೇಲೆ ಕದ ಮುಚ್ಚಿಕೊಂಡು ಕುಳಿತು ಕುಮು ಇನ್ನು ಮುಂದೆ ತನ್ನ ಮನದಲ್ಲಿ ಕೋಪದ ಕಿಡಿಗೆ ಎಂದೆಂದಿಗೂ ಅವಕಾಶ ಕೊಡುವುದಿಲ್ಲವೆಂದು ತನಗೆ ತಾನೇ ಪ್ರತಿಜ್ಞೆ ಮಾಡಿದ್ದಳು. "ಇವೊತ್ತಿನ ದಿನ ಮನಸ್ಸನ್ನು ಸ್ಥಿರಪಡಿಸಿಕೊಳ್ಳುವುದರಲ್ಲಿ ಉಪಯೋಗಿಸುವೆ. ಭಗವಂತನ ಆಶೀರ್ವಾದವನ್ನು ಹೊತ್ತು ನಾಳೆ ಬೆಳಗ್ಗಿನಿಂದ ಸಂಸಾರ ಧರ್ಮದ ಸತ್ಯಪಥದಲ್ಲಿ ಪ್ರವೃತ್ತಳಾಗುವೆನು." ಎಂದು ಕುಮು ತನ್ನ ಮನಸ್ಸಿನಲ್ಲೇ ತೀರ್ಮಾನಿಸಿದಳು. ಮಧ್ಯಾಹ್ನ ಊಟದ ಅನಂತರ ಅವಳು ಮರದ ಕೋಣೆಯ ಕದವನ್ನು ಒಳಗಿನಿಂದ ಮುಚ್ಚಿ ತನ್ನನ್ನು ತಾನು ಅರಿಯುವ ಪ್ರಯತ್ನಕ್ಕೆ ತೊಡಗಿದ್ದಳು. ಈ ಕೆಲಸದಲ್ಲಿ ತನ್ನ ಅಮ್ಮ ಮತ್ತು ಅಣ್ಣನ ಸ್ಮರಣೆ ಹೆಚ್ಚು ಸಹಾಯಮಾಡಿತು. ಅವಳು ತನ್ನ ಅಣ್ಣನ ಧೈರ್ಯಕ್ಕೆ ಆಶ್ಚರ್ಯಪಡುತ್ತಿದ್ದಳು. ಅವನ ಮುಖದಲ್ಲಿ ತನ್ನ ಅಂತರ್ಯದ ಮಹತ್ವದ ಛಾಯೆಯ ವಿಷಾದವು, ವ್ಯಕ್ತವಾಗಿತ್ತು. ಅವಳ ಅಣ್ಣ ಆಗಿನ ಕಾಲದ ಕಲಿತವರ ಗುಂಪಿನಲ್ಲಿ ನಡೆವಳಿಕೆಯಲ್ಲಿದ್ದ ಪ್ರಮಾಣವಾದವನ್ನು ಅನುಸರಿಸುತಿದ್ದವನು. ದೇವರನ್ನು ತಾನಾಗಿ ಬಹಿರಂಗದಲ್ಲಿ ಪೂಜಿಸದೆ ಇದ್ದರೂ ಆತನ ದೇವತೆ ಅವನ ಜೀವನಕ್ಕೆ ಒಂದು ಪೂರ್ಣತೆಯನ್ನು ಉಂಟುಮಾಡಿದ್ದಳು.

ಮಧ್ಯಾಹ್ನ ಬಂಕೂಫರಾಶ್ ಬಂದು ಕದ ತಟ್ಟಿದಾಗ ಕದ ತೆರೆದು ಕುಮು ಹೊರಗೆ ಹೊರಟುಹೋದಳು. ಮೋತಿಯ ತಾಯಿಯೊಡನೆ ಆ ರಾತ್ರಿ ತಾನು ಊಟ ಮಾಡುವುದಿಲ್ಲವೆಂದು ಹೇಳಿದಳು. ಮನಸ್ಸನ್ನು ಪರಿಶುದ್ಧಗೊಳಿಸುವುದಕ್ಕಾಗಿಯೇ ಈ ಉಪವಾಸ. ಮೋತಿಯ ತಾಯಿ

ಕುಮುದಿನಿಯ ಮುಖನೋಡಿ ಆಶ್ಚರ್ಯಪಟ್ಟಳು. ಆ ಮುಖದಲ್ಲಿ ಇಂದು ಚಿತ್ತಜ್ವಾಲೆಯ ರಕ್ತದ ಹೊಳವಿರಲಿಲ್ಲ. ಹಣೆಯಲ್ಲಿಯೂ ಕಣ್ಣುಗಳಲ್ಲಿಯೂ ಪ್ರಶಾಂತವಾದ ಸ್ನಿಗ್ಧಕಾಂತಿಯಿತ್ತು. ಆಗತಾನೆ ಅವಳು ಪೂಜೆ ಮುಗಿಸಿ ತೀರ್ಥಸ್ನಾನ ಮಾಡಿಕೊಂಡು ಬಂದಂತಿತ್ತು. ಅಂತರ್ಯಾಮಿಯಾದ ದೇವತೆಯು ಅವಳ ಎಲ್ಲ ಅಭಿಮಾನವನ್ನೂ ಹರಣಮಾಡಿದಂತೆಯೂ, ಹೃದಯದ ಅಂತರ್ಯದಲ್ಲಿ ಅವಳು ನಿರ್ಮಲವಾದ ಪುಷ್ಪವನ್ನು ಹೊತ್ತು ತಂದಂತೆಯೂ, ಅದರ ಸುಗಂಧವೇ ಅವಳನ್ನು ಸುತ್ತುವರಿದಿದ್ದಂತೆಯೂ ತೋರುತ್ತಿತ್ತು. ಅದರಿಂದಲೇ ಕುಮು ಉಪವಾಸ ಮಾಡಲು ಬಯಸಿದಾಗ ಇದು ಅಭಿಮಾನದ ಆತ್ಮವೇದನೆಯಲ್ಲವೆಂದು ಮೋತಿಯ ತಾಯಿ ಅರಿತಳು. ಅದರಿಂದಲೇ ಅವಳು ಅಡ್ಡಿಮಾಡಲೇ ಇಲ್ಲ.

ಕುಮು ತನ್ನ ದೇವರ ಮೂರ್ತಿಯನ್ನು ಅಂತರ್ಯದಲ್ಲಿ ಪ್ರತಿಷ್ಠಾಪನೆಮಾಡಿ ಬಿಸಿಲುಮಹಡಿಯ ಒಂದು ಮೂಲೆಯಲ್ಲಿ ಹೋಗಿ ಕುಳಿತುಕೊಂಡಳು. ದುಃಖ ಅವಳನ್ನು ಇಷ್ಟೊಂದು ಪೀಡಿಸದೆ ಇದ್ದಿದ್ದರೆ ತನ್ನ ದೇವತೆಗೆ ಇಷ್ಟು ಸಮೀಪವಾಗಿ ತಾನು ಬರಲಾಗುತ್ತಿರಲಿಲ್ಲವೆಂದು ಇಂದು ಅವಳು ಸ್ಪಷ್ಟವಾಗಿ ತಿಳಿದಿದ್ದಳು. ಅಂತಃಸೂರ್ಯನ ಬೆಳಕಿನ ಕಡೆಗೆ ದಿಟ್ಟಿಸಿ ನೋಡಿ, ಕುಮು ಕೈಜೋಡಿಸಿ, "ದೇವರೇ, ಇನ್ನೆಂದಿಗೂ ನಿನ್ನೊಡನೆ ನನ್ನ ವಿಚ್ಛೇದ ಘಟಿಸದಿರಲಿ ನೀನು ನನ್ನನ್ನು ನಿನ್ನವಳನ್ನಾಗಿ ಮಾಡಿಕೊ" ಎಂದಳು.

ಶೀತದ ದಿನಗಳು ಕ್ರಮೇಣ ಮ್ಲಾನವಾಗತೊಡಗಿದವು. ಧೂಳು, ಇಬ್ಬನಿ ಮತ್ತು ಮಿಲ್ಲಿನ ಹೊಗೆ ಇವುಗಳಿಂದ ಬೆರೆತ ಒಂದು ವಿವರ್ಣದ ಆವರಣದಲ್ಲಿ ಸಂಜೆಯು ಸ್ವಚ್ಛವಾದ ಕತ್ತಲೆಯ ಗಾಂಭೀರ್ಯದ ಮಹಿಮೆಯಿಂದ ಕವಿದಿತ್ತು. ಅದೇ ಆಕಾಶ ಎಲ್ಲೆಡೆ ಹರಡಿದ್ದ ಮಲಿನತೆಯ ಹೊರೆಯನ್ನು ಹೊತ್ತು ಭೂಮಿಯ ಕಡೆಗೆ ಹೇಗೆ ಇಳಿದಿದ್ದಿತೋ ಹಾಗೆಯೇ ಅಣ್ಣನಿಗಾಗಿ ಪಟ್ಟ ಚಿಂತೆಯ ಭಾರದಿಂದ ಕುಮುವಿನ ಮನಸ್ಸು ಕೆಳಗೆ ಇಳಿದಿತ್ತು.

ಈ ರೀತಿಯಲ್ಲಿ ಒಂದು ಕಡೆ ಕುಮು ಅಭಿಮಾನದ ಕಟ್ಟನಿಂದ ಬಿಡುಗಡೆ ಹೊಂದಿ ಮುಕ್ತಿಯ ಆನಂದವನ್ನೂ ಮತ್ತೊಂದು ಕಡೆ ಅಣ್ಣನಿ

ಗಾಗಿ ಯೋಚನೆಯಿಂದ ನೊಂದು ಹೃದಯದ ಭಾರವನ್ನೂ ಒಂದೇ ಸಮನಾಗಿ ಹೊತ್ತು ಪುನಃ ತನ್ನನ್ನು ತಾನೇ ಅರಿತಳು. ಈ ಮುಂದು ಗಾಣದ ಚಿಂತೆಯ ಭಾರವನ್ನೂ ದೃಢನಂಬಿಕೆಯಿಂದ ಭಗವಂತನ ಮೇಲೆ ಹಾಕಿಬಿಡಬೇಕೆಂದು ಅವಳಿಗೆ ಬಹಳ ಆಶೆ. ಆದರೆ ತನ್ನನ್ನು ಬಾರಿ ಬಾರಿಗೆ ಧಿಕ್ಕರಿಸಿಕೊಂಡರೂ ಯಾವ ಬಗೆಯಲ್ಲೂ ಆ ನಂಬಿಕೆ ಉಂಟಾಗಲಿಲ್ಲ. ಟೆಲಿಗ್ರಾಫ್ ಕಳುಹಿಸಿದ್ದಂತೂ ಆಗಿದೆ. ಅದಕ್ಕೆ ಯಾಕೆ ಉತ್ತರ ಬರಲಿಲ್ಲ ಎಂಬ ಪ್ರಶ್ನೆ ಸದಾ ಮನದಲ್ಲಿ ಮೂಡುತ್ತಲೇ ಇತ್ತು.

ನಾರೀ ಹೃದಯದ ಆತ್ಮಸಮರ್ಪಣದ ಸೂಕ್ಷ್ಮ ಬಾಧೆಯ ಮೇಲೆ ಮಧುಸೂದನ ಎಲ್ಲೂ ತಲೆ ಹಾಕಲು ಸಾಧ್ಯವಾಗಲಿಲ್ಲ. ಮದುವೆಯಾದ ಹೆಂಗಸಿನ ದೇಹ ಮತ್ತು ಮನಸ್ಸಿನ ಮೇಲೆ ಇರಬಹುದಾದ ಸಂಪೂರ್ಣ ಹಕ್ಕೂ ಅವನ ಪಾಲಿಗೆ ದುರ್ಗಮವಾಗಿತ್ತು. ಊಹಿಸಲಸಾಧ್ಯವಾದ ಒಳಸಂಚಿನ ಮೇಲೆ ಯಾವ ದಿಕ್ಕಿನಿಂದ ಯಾವ ಬಗೆಯಲ್ಲಿ ಮುತ್ತಿಗೆ ಹಾಕ ಬೇಕೆಂಬುದೂ ಅವನಿಗೆ ಹೊಳೆಯಲಿಲ್ಲ. ಎಂದೂ ಯಾವುದೇ ಕಾರಣ ದಿಂದಾಗಲಿ ಮಧುಸೂದನ ತನ್ನ ವ್ಯಾಪಾರದ ವಿಷಯವಾಗಿ ಲೇಶ ಮಾತ್ರವೂ ಗಮನ ತಪ್ಪುತ್ತಿರಲಿಲ್ಲ. ಈಗ ಆ ದುರ್ಲಕ್ಷಣವೂ ಕಾಣಿಸಿ ಕೊಂಡಿತು. ಸ್ವಂತ ತಾಯಿಯ ಖಾಯಿಲೆ ಮತ್ತು ಸಾವಿನ ಸಂದರ್ಭ ದಲ್ಲೂ ಮಧುಸೂದನನ ಕೆಲಸದಲ್ಲಿ ಸ್ವಲ್ಪಮಾತ್ರವೂ ಅಡ್ಡಿ ಒದಗಿರ ಲಿಲ್ಲವೆಂಬ ಅಂಶವನ್ನು ಎಲ್ಲರೂ ತಿಳಿದಿದ್ದರು. ಆಗ ಅವನ ಅಚಲವಾದ ದೃಢಚಿತ್ತತೆಯನ್ನು ಕಂಡು ಅನೇಕರು ಅವನಲ್ಲಿ ಭಕ್ತಿತೋರಿದರು. ಮಧುಸೂದನ ಇಂದು ಹಠಾತ್ತಾಗಿ ತನ್ನದೊಂದು ಹೊಸ ರೂಪದ ಪರಿ ಚಯವನ್ನು ಪಡೆದು ದಿಗ್ಭ್ರಾಂತನಾದನು. ವಾಡಿಕೆಯ ಹಾದಿಯಿಂದ ತನ್ನನ್ನು ಈ ರೀತಿಯಲ್ಲಿ ಹೊರಕ್ಕೆ ಎಳೆಯುವ ಶಕ್ತಿ ತನ್ನನ್ನು ಎತ್ತ ಎಳೆದೊಯ್ಯುವುದು ಎಂಬುದು ಎಷ್ಟು ಯೋಚಿಸಿದರೂ ಅವನಿಗೆ ಹೊಳೆಯಲಿಲ್ಲ.

ರಾತ್ರಿ ಊಟ ಮುಗಿಸಿಕೊಂಡು ಮಧುಸೂದನನು ಮಲಗಲು ಕೊಟ ಡಿಗೆ ಬಂದನು. ನಂಬಿಕೆ ಇರದಿದ್ದರೂ ಕುಮುವನ್ನು ಮಲಗುವ ಮನೆಯಲ್ಲಿ ಕಂಡೇನು ಎಂಬ ಆಶೆಯಿತ್ತು. ಆದರಿಂದಲೇ ನಿಯಮದ ಹೊತ್ತು

ಮೀರಿ ಮಲಗಲು ಬಂದನು. ಆರೋಗ್ಯದಿಂದ ಕೂಡಿ, ಶರೀರದ ನೇಮ ನಿಯಮಗಳನ್ನು ಮೀರದಂತೆ ಗಡಿಯಾರದ ಹಾಗೆ ಹೊತ್ತುಗೊತ್ತಿಗೆ ಸರಿಯಾಗಿ ಅವನು ನಿದ್ರೆಹೋಗುತ್ತಿದ್ದನು. ಕ್ಷಣಮಾತ್ರವೂ ಹೊತ್ತಾಗುತ್ತಿರಲಿಲ್ಲ. ತಾನು ನಿದ್ದೆಹೋದ ಮೇಲೆ ಕುಮು ಕೋಣೆಗೆ ಬಂದು ತನಗೆ ಗೊತ್ತಾಗದಂತೆ ಹೊರಟು ಹೋದಾಳು ಎಂದು ಹೆದರಿ ಇಂದು ಹಾಸಿಗೆಯಲ್ಲಿ ಮಲಗಲಿಲ್ಲ. ಸ್ವಲ್ಪ ಹೊತ್ತು ಸೋಫಾದ ಮೇಲೆ ಕುಳಿತಿದ್ದನು, ಬಿಸಿಲು ಮಹಡಿಯ ಮೇಲೆ ಸ್ವಲ್ಪ ಹೊತ್ತು ಅಡ್ಡಾಡಿದನು. ಮಧುಸೂದನ ಸಾಧಾರಣವಾಗಿ ಮಲಗುವುದು ಒಂಭತ್ತು ಘಂಟೆಗೆ. ಇಂದು ಒಂದು ಹೊತ್ತಿನಲ್ಲಿ ಬೆಚ್ಚಿ ಕಿವಿಗೊಟ್ಟು ಕೇಳಿದಾಗ ಅವನ ಮನೆಯ ಹೆಬ್ಬಾಗಿಲಲ್ಲಿ ಕಾವಲಿನವನು ಹನ್ನೊಂದು ಘಂಟೆ ಹೊಡೆದನು. ನಾಚಿಕೆಯಾಯಿತು. ಆದರೆ ಹಾಸಿಗೆಯ ಇದಿರಿನಲ್ಲಿ ಎರಡು ಮೂರು ಸಲ ಬಂದು ತೆಪ್ಪನೆ ನಿಂತಿದ್ದನು. ಯಾವ ವಿಧದಲ್ಲೂ, ಮಲಗುವುದಕ್ಕೆ ಮನಸ್ಸಾಗಲಿಲ್ಲ. ಆಗ ಹೊರಮನೆಗೆ ಹೋಗಿ ಆ ರಾತ್ರಿಯೇ ನವೀನನ ಸಂಗಡ ಒಂದು ತೀರ್ಮಾನ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದನು.

ಹೊರಮನೆಯ ಇದಿರಿನ ವರಾಂಡಕ್ಕೆ ಹೋಗಿ ನೋಡಿದಾಗ ಕೊಟಡಿಯಲ್ಲಿ ಇನ್ನೂ ದೀಪ ಉರಿಯುತ್ತಿತ್ತು. ಅವನು ಕೊಟಡಿಯೊಳಕ್ಕೆ ಹೋಗುವುದರಲ್ಲಿದ್ದನು. ಆ ಸಮಯದಲ್ಲಿ ನವೀನನು ಕೈಯಲ್ಲಿ ಲಾಂದ್ರ ಹಿಡಿದುಕೊಂಡು ಕೊಟಡಿಯಿಂದ ಹೊರಗೆ ಬಂದನು. ಹಗಲ ಹೊತ್ತಾಗಿದ್ದರೆ ನವೀನನ ಮುಖ ಕ್ಷಣಮಾತ್ರದಲ್ಲಿ ಹೇಗೆ ರಕ್ತವಿಲ್ಲದುದಾಯಿತೆಂಬುದನ್ನು ನೋಡುತ್ತಿದ್ದನು.

"ರಾತ್ರಿ ಇಷ್ಟು ಹೊತ್ತಿನಲ್ಲಿ ನೀನು ಇಲ್ಲಿ ಏನು ಮಾಡುತ್ತಿರುವೆ" ಎಂದು ಮಧುಸೂದನ ಕೇಳಿದನು.

ನವೀನನ ಮೆದುಳಿನಲ್ಲಿ ಉಪಾಯ ಹೊಳೆಯಿತು. ಅವನು "ಮಲಗುವುದಕ್ಕೆ ಮುಂಚೆ ಗಡಿಯಾರಕ್ಕೆ ಕೀಲುಕೊಟ್ಟು, ತಾರೀಖಿನ ಕಾರ್ಡು ಸರಿಪಡಿಸಿ ಹೋಗುವುದು ನನ್ನ ವಾಡಿಕೆ" ಎಂದನು.

"ಒಳ್ಳೆಯದು, ಒಳಗೆ ಬಾ. ಒಂದು ಮಾತು ಹೇಳುತ್ತೇನೆ ಕೇಳು"

ನವೀನ ಹೆದರಿದವನಾಗಿ ಕಟಕಟೆಯಲ್ಲಿ ನಿಂತ ಅಪರಾಧಿಯಂತೆ ತೆಪ್ಪನೆ ನಿಂತಿದ್ದನು.

ಮಧುಸೂದನ "ಹಿರಿಯ ಸೊಸೆಯ ಕಿವಿಯಲ್ಲಿ ಮಂತ್ರ ಊದುವವರು ಯಾರಾದರೂ ಇರುವರೆನ್ನುವುದನ್ನು ನಾನು ಒಪ್ಪುವುದಿಲ್ಲ. ನನ್ನ ಮನೆಯ ಹೆಂಗಸು ನನ್ನ ಇಚ್ಛೆಯಂತೆ ನಡೆಯುವಳು. ಮತ್ತಾರ ಸಲಹೆಯಂತೆಯೂ ಅಲ್ಲ—ಇದೀಗ ನಿಯಮ" ಎಂದನು.

ನವೀನ ಗಂಭೀರ ಭಾವದಿಂದ—"ಅದು ಸರಿಯಾದ ಮಾತೇ" ಎಂದನು.

"ಆದಕ್ಕೇ ನಾನು ಹೇಳುವುದು. ನಡುಕಲ ಸೊಸೆಯನ್ನು ತವರು ಮನೆಗೆ ಕಳುಹಿಸಿಬಿಡಬೇಕು ಎಂದು."

ನವೀನ ಪೂರ್ತಿ ನಿಶ್ಚಿಂತನಾದವನಂತೆ "ಒಳ್ಳೆಯದೇ ಆಯಿತ್ತು ಅಣ್ಣಾ. ನಿನಗೆ ಒಪ್ಪಿಗೆ ಇರದೇನೋ ಎಂದು ನಾನು ಯೋಚನೆಯಲ್ಲಿ ಮುಳುಗಿದ್ದೆ" ಎಂದನು.

ಮಧುಸೂದನ ವಿಸ್ಮಿತನಾಗಿ "ಹಾಗೆಂದರೆ ?" ಎಂದು ಕೇಳಿದನು.

ನವೀನ ಉತ್ತರ ಕೊಟ್ಟನು.—"ಕೆಲವು ದಿನಗಳಿಂದ ತವರಿಗೆ ಹೋಗುವುದಕ್ಕಾಗಿ ಅವಳು ಹಿಂಸಿಸುತ್ತಿದ್ದಾಳೆ. ಸಾಮಾನು ಸರಂಜಾಮು ಎಲ್ಲ ಸಿದ್ಧಪಡಿಸಿ ಇಟ್ಟುಕೊಂಡಿರುವಳು. ಒಂದು ಒಳ್ಳೆಯ ದಿನ ನೋಡಿಕೊಂಡು ತಕ್ಷಣ ಹೊರಡುವಳು."

ಇದಿಷ್ಟೂ ಸಂಪೂರ್ಣ ಕಲ್ಪಿತ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ತನ್ನ ಮನೆಯಲ್ಲಿ ಮಧುಸೂದನ ಮನಸ್ಸು ಬಂದವರನ್ನ ಕಳುಹಿಸಿ ಬಿಡುವನೆಂದು ಯಾರಾದರೂ ತಾವೇ ತಾವಾಗಿ ಹೋಗ ಬಯಸುವುದೆ ? ಇದು ಸಂಪೂರ್ಣವಾಗಿ ಅಕ್ರಮವಾದುದು. ಬೇಸರದ ದನಿಯಲ್ಲಿ "ಯಾಕೆ, ಹೋಗುವುದಕ್ಕಾಗಿ ಅವಳಿಗೆ ಇಷ್ಟೊಂದು ಅವಸರವೇಕೆ ?"

"ಮನೆಯ ಯಜಮಾನಿ ಈ ಮನೆಗೆ ಬಂದಿರುವಳು. ಈಗ ಈ ಮನೆಯ ಎಲ್ಲ ಹೊಣೆಯನ್ನೂ ಅವಳೇ ಹೊರಬೇಕು. ನಡುವೆ ನಾನು

ಇದ್ದುದಾದರೆ ಯಾವ ಸಮಯದಲ್ಲಿ ಯಾವ ಮಾತು ತಲೆ ಹಾಕು ವುದೋ ಯಾರು ಬಲ್ಲರು" ಎಂದು ನಡುಕಲ ಸೊಸೆ ಹೇಳುತ್ತಾಳೆ, ಎಂಬುದಾಗಿ ನವೀನ ಹೇಳಿದ.

ಮಧುಸೂದನ "ಇವೆಲ್ಲ ವಿಷಯಗಳನ್ನು ಆಲೋಚಿಸುವ ಭಾರ ಅವಳ ಮೇಲೆಯೇ ಏನು ?" ಎಂದನು.

ನವೀನ ಏನೂ ಅರಿಯದವನಂತೆ—"ಏನು ಮಾಡಲಿ ಹೇಳು, ಹೆಂಗಸಿನ ಹಟ, ಯಾರು ಬಲ್ಲರು. ಯಾವುದಾದರೂ ಮಾತನ್ನೆತ್ತಿಕೊಂಡು ನೀನು ಒಂದು ವೇಳೆ ಇದ್ದಕ್ಕಿದ್ದ ಹಾಗೆ ಅವಳನ್ನು ಹೊರಡಿಸಬಿಡ ಬಹುದು. ಆ ಅಪಮಾನ ಅವಳಿಗೆ ಸಹಿಸಲಾಗುವುದಿಲ್ಲ. ಅದಕ್ಕೇ ಅವಳು ತಾನು ಖಂಡಿತ ಹೊರಟೇ ಹೋಗುವೆನೆಂದು ಪ್ರತಿಜ್ಞೆಮಾಡಿ ಕುಳಿತಿರುವಳು. ಮುಂದಿನ ತ್ರಯೋದಶಿ ದಿನ ಚೆನ್ನಾಗಿದೆ—ಈ ಮಧ್ಯೆ ಕೆಲಸಕಾರ್ಯಗಳನ್ನು ಸರಿಪಡಿಸಿಟ್ಟು ಲೆಕ್ಕ ಪಕ್ಕಗಳನ್ನು ತೀರಿಸಿಬಿಟ್ಟು ಅವಳು ಹೊರಟುಹೋಗ ಬಯಸುತ್ತಾಳೆ" ಎಂದನು.

ಅದಕ್ಕೆ ಮಧುಸೂದನ "ನೋಡು, ನವೀನ್, ನಡುಕಲ ಸೊಸೆಗೆ ಬಹಳ ಸಲಿಗೆ ಕೊಟ್ಟು ನೀನೇ ಕೆಡಿಸಿಬಿಟ್ಟಿದ್ದೀಯೆ. ಅವಳಿಗೆ ಸ್ವಲ್ಪ ಕಠಿಣ ವಾಗಿಯೇ ಹೇಳು. ಅವಳು ಹೋಗುವುದು ಖಂಡಿತ ಸಾಧ್ಯವಿಲ್ಲ. ನೀನು ಗಂಡಸು. ಮನೆಯಲ್ಲಿ ನಿನ್ನ ಅಧಿಕಾರ ನಡೆಯುವುದಿಲ್ಲ. ಇದು ನನ್ನಿಂದ ನೋಡಲು ಸಾಧ್ಯವಿಲ್ಲ." ಎಂದನು.

ನವೀನ ತಲೆ ಕೆರೆದುಕೊಳ್ಳುತ್ತ ಹೇಳಿದನು– "ಪ್ರಯತ್ನಪಟ್ಟು ನೋಡುತ್ತೇನೆ, ಅಣ್ಣಾ, ಆದರೆ—"

"ಒಳ್ಳೆಯದು, ನನ್ನ ಪರವಾಗಿ ಹೇಳು. ಈಗ ಅವಳು ಹೋಗು ವುದು ಸಾಧ್ಯವಿಲ್ಲ. ಸರಿಯಾದ ಕಾಲವೆಂದು ಗೊತ್ತಾದಾಗ, ಹೋಗುವ ದಿನವನ್ನು ನಾನೇ ಗೊತ್ತು ಮಾಡುವೆ."

"ನೀನು ಹೇಳಲಿಲ್ಲವೆ, ನಡುಕಲ ಸೊಸೆಯನ್ನು ತವರುಮನೆಗೆ ಕಳುಹಿಸಿ ಬಿಡಬೇಕು ಎಂದು–ಅದಕ್ಕೇ ಯೋಚಿಸುತ್ತಿರುವೆ" ಎಂದನು ನವೀನ.

ಮಧುಸೂದನ ಉತ್ತೇಜಿತನಾಗಿ—"ನಾನು ಏನು ಹೇಳಿದೆ. ಈ ಕ್ಷಣದಲ್ಲಿ ಕಳುಹಿಸಿ ಬಿಡಬೇಕು ಎಂದು ಹೇಳಿದೆನೇನು" ಎಂದನು.

ನವೀನ ಮೆಲ್ಲಮೆಲ್ಲನೆ ಹೊರಟುಹೋದನು. ಮಧುಸೂದನ ಗ್ಯಾಸ್ ದೀಪವೊಂದನ್ನು ಹಚ್ಚಿ ಉದ್ದವಾದ ಆರಾಮ ಕುರ್ಚಿಯ ಮೇಲೆ ಕುಳಿತಿದ್ದನು. ಮನೆಯ ಪಹರೆಯವನು ರಾತ್ರಿ ಒಮ್ಮೊಮ್ಮೆ ಮನೆಯ ಕೊಟಡಿಗಳ ಇದಿರಿನಲ್ಲಿ ಅಡ್ಡಾಡಿ ಬರುತ್ತಿದ್ದನು. ಮಧುಸೂದನನಿಗೆ ಸ್ವಲ್ಪ ನಿದ್ರೆಯ ಜಂಪು ಹತ್ತಿತ್ತು. ಈ ಸಮಯದಲ್ಲಿ ಹಠಾತ್ತಾಗಿ ಬೆಚ್ಚಿ ಎಚ್ಚರಗೊಂಡು ನೋಡಲು ಪಹರೆಯವನು ಕೋಣೆಯ ಒಳಹೊಕ್ಕು ಕೈಯಲ್ಲಿದ್ದ ಲಾಂಪ್ರ ಎತ್ತಿ ಹಿಡಿದುಕೊಂಡು ತನ್ನ ಮುಖ ನೋಡುತ್ತಿದ್ದುದನು ಕಂಡನು. ಪ್ರಾಯಶಃ ಅವನು "ಮಹರಾಜರು ಮೂರ್ಛೆಹೋಗಿರುವರು; ಅಥವಾ ಸತ್ತೇ ಹೋಗಿರುವರು" ಎಂದು ಭಾವಿಸಿರಬೇಕು. ಮಧುಸೂದನ ನಾಚಿಕೆಗೊಂಡು ದಡಬಡನೆ ಎದ್ದು ನಿಂತನು. ಹೊರಗಿನ ಆಫೀಸು ಕೋಣೆಯಲ್ಲಿ ಕುಳಿತು ಹೊಸದಾಗಿ ಮದುವೆಯಾದ ರಾಜಾ ಬಹದ್ದೂರರು ರಾತ್ರಿ ಕಳೆಯುತ್ತಿರುವ ಶೋಕಾವಹದೃಶ್ಯ ಪಹರೆಯವನ ಬಳಿ ಅದೆಷ್ಟು ಅವಮಾನಕರವೆಂಬ ಮಾತು ಮುಹೂರ್ತ ಮಾತ್ರದಲ್ಲಿ ಅವನಿಗೆ ಹೊಳೆದಂತಾಯಿತು. ಎದ್ದವನೇ ಸ್ವಲ್ಪ ಕೋಪದ ದನಿಯಲ್ಲೇ ಪಹರೆಯವನೊಡನೆ "ಕೋಣೆಯ ಕದ ಮುಚ್ಚಿಬಿಡು" ಎಂದನು. ಕೋಣೆಯ ಕದ ಮುಚ್ಚದಿರುವುದು ಅವನ ತಪ್ಪು ಎನ್ನುವಂತಿತ್ತು ಇವನ ವ್ಯವಹಾರ. ಹೆಬ್ಬಾಗಿಲಲ್ಲಿ ಎರಡು ಗಂಟೆ ಹೊಡೆಯಿತು.

ಮಧುಸೂದನ ಕೋಣೆಯಿಂದ ಹೊರಗೆ ಹೋಗುವುದಕ್ಕೆ ಮುಂಚೆ ಒಮ್ಮೆ ಡ್ರಾಯರ್ ತೆರೆದನು. ಹಿಂದುಮುಂದು ನೋಡುತ್ತ ನೋಡುತ್ತ ಕುಮುವಿನ ಹೆಸರಿನ ಟೆಲಿಗ್ರಾಮನ್ನು ಜೇಬಿನಲ್ಲಿ ತುರುಕಿಕೊಂಡು ಅಂತಃಪುರದ ಕಡೆಗೆ ಹೊರಟನು. ಮೂರನೆಯ ಅಂತಸ್ತಿಗೆ ಹತ್ತುವ ಮೆಟ್ಟಲ ಇದಿರಿನಲ್ಲಿ ಸ್ವಲ್ಪ ಹೊತ್ತು ನಿಂತಿದ್ದನು.

ಮಧ್ಯರಾತ್ರಿಯಲ್ಲಿ ಮೊದಲ ನಿದ್ದೆಯಿಂದ ಎಚ್ಚೆತ್ತ ಮನುಷ್ಯ ತನ್ನ ಎಲ್ಲ ಶಕ್ತಿಯನ್ನೂ ಸಂಪೂರ್ಣವಾಗಿ ಪಡೆಯಲಾರ. ಆದರಿಂದಲೇ ಅವನ

ಹಗಲ ನಡೆವಳಿಕೆಗೂ ರಾತ್ರಿಯ ನಡೆವಳಿಕೆಗೂ ಬಹಳ ಭೇದವಿರುವುದು. ರಾತ್ರಿ ಎರಡು ಗಂಟೆ ಹೊಡೆಯುವ ವೇಳೆಯಲ್ಲಿ, ನಾಲ್ಕೂ ಕಡೆ ಜನರ ದೃಷ್ಟಿ ಬೀಳದೆ ಇರುವಾಗ, ಪ್ರಪಂಚದಲ್ಲಿ ತನ್ನೊಬ್ಬನಹೊರತುಗಲ್ಲದೆ ಮತ್ತಾರ ಬಳಿಯಲ್ಲೂ ಜಬಾಬುದಾರನಾಗಿರಬೇಕಾಗಿಲ್ಲ. ಆ ಸಮಯ ದಲ್ಲಿ ಕುಮುವಿನ ಬಳಿ ಮನಸ್ಸಿನಲ್ಲೇ ಸೋಲು ಒಪ್ಪಿಕೊಳ್ಳುವುದು ಅವನ ಪಾಲಿಗೆ ಅಸಂಭವವಾಗಲಿಲ್ಲ.

೩೨

ಮೆಟ್ಟಿಲ ಹತ್ತಿರದಿಂದ ಮಧುಸೂದನ ಹಿಂದಿರುಗಿದ. ಎದೆಯಲ್ಲಿ ರಕ್ತ ವೇಗವಾಗಿ ಹರಿಯತೊಡಗಿತು. ಯಾವದೋ ಕದ ಮುಚ್ಚಿದ ಒಂದು ಕೋಣೆಯ ಬಳಿ ಒಂದು ಲಾಂದ್ರ ಉರಿಯುತ್ತಿತ್ತು. ಅದನ್ನು ಎತ್ತಿ ಕೊಂಡು ಮೆಲ್ಲಮೆಲ್ಲನೆ ದೀಪದ ಮನೆಯ ಮುಂದೆ ಬಂದು ನಿಂತನು. ಮೆಲ್ಲಮೆಲ್ಲನೆ ಕದವನ್ನು ತಳ್ಳಿ ನೋಡಲು ಚಿಲುಕ ಹಾಕಿದ್ದುದು ಕಂಡಿತು. ಕದ ತೆರೆದುಕೊಂಡಿತು. ಮೈಮೇಲೆ ಒಂದು ದುಪ್ಪಟಿಯನ್ನು ಹೊದ್ದು ಕೊಂಡು, ಕುಮು ಚಾಪೆಯ ಮೇಲೆ ಗಾಢ ನಿದ್ರೆಯಲ್ಲಿ ಮಗ್ನಳಾಗಿ ದ್ದಳು. ಎದೆಯ ಮೇಲೆ ಎಡಗೈ ಇಟ್ಟುಕೊಂಡಿದ್ದಳು. ಮಧುಸೂದನ ಗೋಡೆಯ ಮೂಲೆಯಲ್ಲಿ ಲಾಂದ್ರವನ್ನಿಟ್ಟು, ಕುಮುವಿನ ಮುಖದ ಕಡೆ ಮುಖಮಾಡಿಕೊಂಡು ಎಡಗಡೆ ಬಂದು ಕುಳಿತನು. ಅವನ ಮನಸ್ಸನ್ನು ಪ್ರಬಲ ಶಕ್ತಿಯಿಂದ ಆಕರ್ಷಿಸುತ್ತಿದ್ದುದಕ್ಕೆ ಆಕೆಯ ಮುಖದ ಅನಿರ್ವಚ ನೀಯ ಸಂಪೂರ್ಣತೆಯೇ ಕಾರಣ. ಕುಮುವಿಗೆ ತನ್ನಲ್ಲೇ ತನ್ನ ವಿಷಯ ವಾಗಿ ಎಂದೂ ವಿರೋಧ ಘಟಿಸಿರಲಿಲ್ಲ. ಅವಳು ಯಾವ ಕುಟುಂಬದಲ್ಲಿ ದ್ದಳೋ ಅಲ್ಲಿ ಎಲ್ಲವೂ ಅವಳ ಸ್ವಭಾವಕ್ಕೆ ಎಲ್ಲ ವಿಧದಲ್ಲೂ ಅನುಕೂಲ ವಾಗಿತ್ತು. ಅದರಿಂದಲೇ ಅವಳ ಮುಖಭಾವದಲ್ಲಿ ಅಂತಹದೊಂದು ಮುಚ್ಚುಮರೆಯಿಲ್ಲದ ಸರಳತೆಯಿತ್ತು. ಅವಳ ನಡೆ ನುಡಿಯಲ್ಲಿ, ಅವಳ ವ್ಯವಹಾರದಲ್ಲಿ ಅಂತಹದೊಂದು ಕೊರೆಯಿಲ್ಲದ ಮರ್ಯಾದೆಯಿತ್ತು. ಯಾವ ಮಧುಸೂದನ ತನ್ನ ಬಾಳುವೆಯ ಸಾಧನೆಗಾಗಿ ಕೇವಲ ಸರ್ವಶಕ್ತಿ ಯಿಂದಲೂ ಯುದ್ಧಮಾಡುತ್ತಿರಬೇಕೋ, ಪ್ರತಿನಿತ್ಯ ತಲೆಯೆತ್ತುವ ಸಂಶ ಯವನ್ನು ಕುರಿತು ಯಾವ ಸದಾ ಜಾಗರೂಕನಾಗಿರಬೇಕೋ ಅವನ ಬಳಿ

ಕುಮುವಿನ ಈ ಪರಿಪೂರ್ಣವಾದ ಅಂಗಸೌಷ್ಠವಾದ ಅಪೂರ್ವ ಗಾಂಭೀರ್ಯವು ವಿಸ್ಮಯಕರವಾಗಿತ್ತು. ಅವನು ಸ್ವತಃ ಎಳ್ಳಷ್ಟೂ ಸಹಜವಾಗಿರಲಿಲ್ಲ. ಆದರೆ ಕುಮು ಒಮ್ಮೆಗೇ ದೇವತೆಯಂತೆ ಸಹಜವಾಗಿದ್ದಳು. ಕುಮುವಿನ ಈ ವೈಪರೀತ್ಯವೇ ಅವನನ್ನು ಅವಳ ಕಡೆಗೆ ಇಷ್ಟು ವೇಗವಾಗಿ ಸೆಳೆಯುತ್ತಿದ್ದುದು. ಮದುವೆಯ ಅನಂತರ ವಧುವು ಅತ್ತೆಯ ಮನೆಗೆ ಮೊದಲು ಬಂದಕೂಡಲೆ ಯಾವ ಗೊಂದಲ ನಡೆಯುತ್ತೋ ಅದರ ಸಂಪೂರ್ಣ ಚಿತ್ರವನ್ನು ಅವನು ಮನದಲ್ಲಿ ಊಹಿಸಿಕೊಂಡನು. ಆಗ ತನ್ನ ಕಡೆಯಿಂದ ವ್ಯರ್ಥವಾದ ಅಧಿಕಾರ ತೋರಿರುವುದೂ, ಇನ್ನೊಂದು ಕಡೆ ವಧುವಿನ ಮನಸ್ಸಿನಲ್ಲಿ ತಲೆತಗ್ಗಿಸದ ಆತ್ಮಮರ್ಯಾದೆಯು ಸಹಜವಾಗಿ ಪ್ರಕಟವಾಗಿರುವುದೂ ಕಂಡುಬಂದಿತು. ಸಾಮಾನ್ಯ ಹೆಂಗಸರಂತೆ ಅವಳ ನಡೆವಳಿಕೆಯಲ್ಲಿ ಎಲ್ಲೂ ಎಷ್ಟು ಮಾತ್ರವೂ ಲಕ್ಷಣ ಕೆಟ್ಟ ನಾಚಿಕೆಯಿಲ್ಲದ ನಡತೆ ಕಾಣಿಸಿರಲಿಲ್ಲ. ಇದು ಹೀಗೆ ಇಲ್ಲದಿದ್ದರೆ, ಅವಳನ್ನು ಅವಮಾನಗೊಳಿಸುವ ಯಾಜಮಾನ್ಯವನ್ನು ವಹಿಸಿ ಆ ಅಧಿಕಾರವನ್ನು ಚಲಾಯಿಸಲು ಮಧುಸೂದನ ಲೇಶಮಾತ್ರವೂ ಹಿಂಜರಿಯುತ್ತಿರಲಿಲ್ಲ. ಆದರೆ ಏನಾಯಿತು ಎಂಬುದನ್ನು ಅವನು ಸ್ವತಃ ಅರಿಯಲಾರದೆ ಹೋದನು. ಯಾವುದೋ ಒಂದು ಅದ್ಭುತವಾದ ಕಾರಣದಿಂದ ಅವನು ಕುಮುವನ್ನು ತನ್ನ ಹಿಡಿತದಲ್ಲಿ ಪಡೆಯಲಾರದೆ ಹೋದನು.

ಕುಮುವನ್ನು ಎಚ್ಚರಗೊಳಿಸದೆ ಇಡೀ ರಾತ್ರಿ ಹೀಗೆಯೇ ಅವಳ ಮಗ್ಗುಲಲ್ಲಿ ಕುಳಿತು ಕಳೆಯಬೇಕೆಂದು ಮಧುಸೂದನ ನಿಶ್ಚಯಿಸಿದ್ದ. ಸ್ವಲ್ಪ ಹೊತ್ತು ಕುಳಿತಿದ್ದ. ಅನಂತರ ಅವನಿಂದ ಸುಮ್ಮನಿರಲಾಗಲಿಲ್ಲ. ಮೆಲ್ಲಮೆಲ್ಲನೆ ಕುಮುವಿನ ಎದೆಯ ಮೇಲಿನಿಂದ ಅವಳ ಕೈ ತೆಗೆದು ತನ್ನ ಕೈಯಲ್ಲಿ ಹಿಡಿದುಕೊಂಡನು. ಕುಮು ನಿದ್ರೆಯ ಭರದಲ್ಲಿ ಚಂಚಲಳಾಗಿ ಕೈ ಎಳೆದುಕೊಂಡು ಮಧುಸೂದನನಿಗೆ ಎದುರಾಗಿ ಹೊರಳಿ ಮಲಗಿದಳು.

ಮಧುಸೂದನ ಇನ್ನು ಸುಮ್ಮನಿರಲಾರದೆ ಹೋದ. ಕುಮುವಿನ ಕಿವಿಯ ಹತ್ತಿರ ಬಾಯಿತಂದು "ಬಡೊ ಬಉ, ನಿಮ್ಮ ಅಣ್ಣನಿಂದ ತಂತಿ ಬಂದಿದೆ" ಎಂದನು.

ಆ ಕ್ಷಣ ನಿದ್ರೆ ತಿಳಿದು ಕುಮು ಬೇಗನೆ ಎದ್ದು ಕುಳಿತಳು. ವಿಸ್ಮಯ ದಿಂದ ಮಧುಸೂದನನ ಮುಖದ ಕಡೆ ಮಾತಾಡದೆ ನೋಡುತ್ತಿದ್ದಳು. ಮಧುಸೂದನ ಟೆಲಿಗ್ರಾಮನ್ನು ಇದಿರಿನಲ್ಲಿಟ್ಟು "ನಿಮ್ಮ ಅಣ್ಣನಿಂದ ಬಂದಿದೆ" ಎಂದನು. ಹೀಗೆ ಹೇಳಿ ಕೋಣೆಯ ಮೂಲೆಯಿಂದ ಲಾಂದ್ರ ವನ್ನು ಹತ್ತಿರ ತಂದನು.

ಕುಮು ಟೆಲಿಗ್ರಾಮನ್ನು ಓದಿ ನೋಡಿದಳು. ಅದರಲ್ಲಿ "ನನ ಗಾಗಿ ಉದ್ವಿಗ್ನಳಾಗದಿರು. ಕ್ರಮೇಣ ಗುಣಹೊಂದಿ ಏಳುವೆನು. ನಿನಗೆ ನನ್ನ ಆಶೀರ್ವಾದ" ಎಂದು ಇಂಗ್ಲೀಷಿನಲ್ಲಿತ್ತು. ಕಠಿಣವಾದ ಉದ್ವೇಗ ದಿಂದ ಅತಿಶಯವಾದ ನೋವಿನ ನಡುವೆ ಈ ಸಮಾಧಾನದ ಸುದ್ದಿ ಓದಿ ಮುಹೂರ್ತ ಮಾತ್ರದಲ್ಲಿ ಕುಮುವಿನ ಕಣ್ಣಿನಲ್ಲಿ ಗಳಗಳನೆ ನೀರು ಹರಿ ಯಿತು. ಕಣ್ಣು ಒರಸಿಕೊಂಡು ತಂತಿಯನ್ನು ಜಾಗರೂಕತೆಯಿಂದ ಸೆರಗಿ ನಲ್ಲಿ ಕಟ್ಟಿಕೊಂಡಳು. ಅಷ್ಟರಿಂದಲೇ ಮಧುಸೂದನನ ಹೃದಯಕ್ಕೆ ಧಕ್ಕೆ ತಗುಲಿದಂತಾಯಿತು. ಅನಂತರ ಏನು ಹೇಳಬೇಕೆಂಬುದನ್ನು ಯೋಚಿಸ ಲಾರದೆ ಹೋದನು. ಕುಮು ತಾನಾಗಿಯೇ "ಅಣ್ಣನಿಂದ ಕಾಗದ ಬರ ಲಿಲ್ಲವೇನು ?" ಎಂದು ಕೇಳಿದಳು.

ಅನಂತರ ಮಧುಸೂದನನು ಕಾಗದ ಬಂದಿದೆಯೆಂದು ಹೇಳಲಾರದೆ ಹೋದನು. ಥಟ್ಟನೆ "ಇಲ್ಲ ಕಾಗದ ಬಂದಿಲ್ಲವಲ್ಲ" ಎಂದನು.

ಈ ಕೋಣೆಯಲ್ಲಿ ರಾತ್ರಿಯಲ್ಲಿ ಇಬ್ಬರೂ ಹೀಗೆ ಕುಳಿತಿರುವುದರಲ್ಲಿ ಕುಮುವಿಗೆ ಸಂಕೋಚವಾಯಿತು. ಅವಳು ಏಳುವುದಕ್ಕೆ ಯತ್ನಿಸುತ್ತಿ ರಲು ಮಧುಸೂದನನು ಹಠಾತ್ತಾಗಿ–"ಬಡೊಬಉ, ನನ್ನ ಮೇಲೆ ಕೋಪ ಗೊಳ್ಳಬೇಡ" ಎಂದನು.

ಇದಂತೂ ಒಡೆಯನ ಬಲಾತ್ಕಾರವಲ್ಲ. ಇದು ಪ್ರಣಯಿಯ ಬೇಡಿಕೆ. ಸಾಲದುದಕ್ಕೆ ಇದರಲ್ಲಿ ಅಪರಾಧಿಯ ಆತ್ಮಗ್ಲಾನದ ಸುಳಿವಿದೆ. ಕುಮು ವಿಸ್ಮಯಗೊಂಡಳು. ಇದು ದೈವದ ಲೀಲೆಯೆಂದೇ ಬಗೆದಳು. ಯಾಕೆಂದರೆ ಅವಳು ಹಗಲಲ್ಲಿ ಬಾರಿಬಾರಿಗೆ ತನಗೆ ತಾನೇ "ನೀನು ಕೋಪಗೊಳ್ಳ ಬೇಡ" ಎಂದು ಹೇಳಕೊಂಡಿದ್ದಳು. ಆ ಮಾತನ್ನೇ ಇಂದು ಅರ್ಧರಾತ್ರಿ

ಯಲ್ಲಿ ಅನಿರೀಕ್ಷಿತವಾದ ರೀತಿಯಲ್ಲಿ ಮಧುಸೂದನನ ಬಾಯಿಂದ ಹೇಳಿಸಿದವರಾರು !

ಮಧುಸೂದನ ಮತ್ತೆ "ನೀನು ಇನ್ನೂ ನನ್ನ ಮೇಲೆ ಕೋಪಗೊಂಡಿರುವೆಯೇನು ?" ಎಂದು ಅವಳನ್ನು ಕೇಳಿದನು.

ಕುಮು "ಇಲ್ಲ. ನನಗೆ ಕೋಪವಿಲ್ಲ. ಸ್ವಲ್ಪವೂ ಇಲ್ಲ" ಎಂದಳು.

ಮಧುಸೂದನ ಅವಳ ಮುಖದ ಕಡೆ ನೋಡಿ ಆಶ್ಚರ್ಯಗೊಂಡನು. ಉದ್ದೇಶವಿಲ್ಲದೆ ಯಾರಿಗೋ ಹೇಳುವಂತಿತ್ತು ಅವಳ ಮಾತುಗಳು.

ಮಧುಸೂದನ "ಹಾಗಾದರೆ ಈ ಕೋಣೆಯಿಂದ ನಿನ್ನ ಸ್ವಂತ ಕೊಟಡಿಗೆ ಬಾ" ಎಂದನು.

ಕುಮು ಆ ರಾತ್ರಿ ಸಿದ್ಧಳಾಗಿರಲಿಲ್ಲ. ನಿದ್ರೆಯಿಂದ ಎಚ್ಚೆತ್ತ ಕೂಡಲೆ ಹಠಾತ್ತಾಗಿ ಮನಸ್ಸನ್ನು ದೃಢಪಡಿಸಿಕೊಳ್ಳುವುದು ಬಹು ಕಠಿಣವಾಗಿತ್ತು. ನಾಳೆ ಬೆಳಗ್ಗೆ ಸ್ನಾನಮಾಡಿ ದೇವರ ಬಳಿ ತನ್ನ ನಿತ್ಯ. ಗಟ್ಟಲೆಯ ಪ್ರಾರ್ಥನಾ ಮಂತ್ರವನ್ನು ಜಪಿಸಿ ಅನಂತರ ನಾಳೆಯಿಂದ ಸಂಸಾರದಲ್ಲಿ ತನ್ನ ಸಾಧನೆ ಆರಂಭಿಸಬೇಕು ಎಂಬ ಸಂಕಲ್ಪವನ್ನು ಅವಳು ಮಾಡಿದ್ದಳು. ಆಗ "ದೇವರು ನನಗೆ ವಿರಾಮ ಕೊಡಲಿಲ್ಲ. ಇಂದು ಈ ಗಭೀರ ರಾತ್ರಿಯಲ್ಲೇ ಕರೆದಿರುವನು. ಅವನಿಗೆ 'ಆಗದು' ಎಂದು ಹೇಗೆ ತಾನೆ ಹೇಳಲಿ" ಎಂದು ಅವಳ ಮನಸ್ಸಿಗೆ ತೋರಿತು. ಮನಸ್ಸಿನಲ್ಲಿ ಒಳಗಡೆ ಮೂಡಿದ್ದ ಒಂದು ಬಗೆಯ ನಿರಪೇಕ್ಷೆಯನ್ನು ಅಪರಾಧವೆಂದು ಭಾವಿಸಿ ಕುಮು ಹೆದರಿದಳು. ಈ ಬಾಧೆ ಅವಳನ್ನು ಹಿಂದೆಗೆಯುವಂತೆ ಮಾಡುವುದೆಂದು ಕುಮು ವೇಗವಾಗಿ ಎದ್ದು ನಿಂತು "ನಡೆ" ಎಂದಳು.

ಎದ್ದವಳು ಮಲಗುವ ಮನೆಯ ಇದಿರಿನಲ್ಲಿ ಸ್ವಲ್ಪ ಬೆಚ್ಚಿನಿಂತು "ನಾನು ಈಗಲೇ ಬರುತ್ತೇನೆ. ಹೊತ್ತು ಮಾಡುವುದಿಲ್ಲ" ಎಂದಳು.

ಹೀಗೆ ಹೇಳಿ ಮೇಲಿನ ಮಹಡಿಯ ಮೂಲೆಯಲ್ಲಿ ಹೋಗಿ ಕುಳಿತಳು. ಕೃಷ್ಣಪಕ್ಷದ ಖಂಡಚಂದ್ರ ಆಗ ನಡುನೆತ್ತಿಯ ಮೇಲಿದ್ದನು.

ತನ್ನ ಮನಸ್ಸಿನಲ್ಲೇ ಕುಮು ಬಾರಿಬಾರಿಗೆ ಹೀಗೆ ಹೇಳ ತೊಡಗಿದಳು—“ಪ್ರಭು ನೀನು ನನ್ನನ್ನು ಕರೆದಿರುವೆ. ನೀನೇ ಕರೆದಿರುವೆ. ನನ್ನನ್ನು ಮರೆತಿಲ್ಲವೆಂದೇ ಕರೆದಿರುವೆ. ನನ್ನನ್ನು ಮುಳ್ಳಿನ ಹಾದಿಯಲ್ಲೇ ಕರೆದೊಯ್ಯುವೆಯೇನು ?—ಅದು ನೀನೇ. ಅದು ನೀನೆ, ಅದು ಮತ್ತಾರೂ ಅಲ್ಲ—”

ಉಳಿದುದೆಲ್ಲವನ್ನೂ ಕುಮು ಅಳಿಸಿಬಿಡಲು ಬಯಸಿದಳು ಉಳಿದುದೆಲ್ಲ ಮಾಯೆ. ಉಳಿದುದೆಲ್ಲ ತನ್ನ ದಾರಿಗೆ ಅಡ್ಡವಾಗಿರುವ ಮುಳ್ಳು. ಆದರೆ, ಆಕೆಯ ಬಳಿಯಲ್ಲಿ ತನ್ನ ಅಣ್ಣನ ಆಶೀರ್ವಾದದ ಬುತ್ತಿಯಿದೆ. ಆ ಆಶೀರ್ವಾದವನ್ನು ಅವಳು ಸೆರಗೊಡ್ಡಿ ತೆಗೆದುಕೊಂಡಿರುವಳು. ಆ ಸೆರಗಿನಲ್ಲಿ ಕಟ್ಟಿದ್ದ ಆಶೀರ್ವಾದವನ್ನು ಮತ್ತೆ ಮತ್ತೆ ಹಣೆಗೆ ಒತ್ತಿಕೊಂಡಳು. ಅನಂತರ ನೆಲಕ್ಕೆ ಹಣೆ ಮುಟ್ಟಿಸಿ ಬಹು ಹೊತ್ತಿನವರೆಗೆ ನಮಸ್ಕರಿಸಿದಳು. ಈ ಸಮಯದಲ್ಲಿ ಬೆಚ್ಚಿ ಬಿದ್ದಳು. ಹಿಂದುಗಡೆ ಮಧುಸೂದನನ ದನಿ ಕೇಳಿಸಿತು—“ಬಡೊಬಉ, ಶೀತವಾಗುವುದು ಒಳಗೆ ಬಾ.” ಹೃದಯದಲ್ಲಿ ಕುಮು ಯಾವ ವಾಣಿ ಕೇಳಲು ಆಶಿಸಿದ್ದಳೋ ಆದರೊಡನೆ ಈ ಕಠಿಣ ಸ್ವರವಂತೂ ಹೊಂದದಂತಿತ್ತು. ಇದೀಗ ಪರೀಕ್ಷೆ. ದೇವರು ಇಂದೂ ಅವಳನ್ನು ಕೊಳಲ ಗಾನದಿಂದ ಕರೆಯನು. ಇನ್ನೂ ಅವನು ವೇಷಮರೆಸಿಕೊಂಡೇ ಇರುವನು.

೩೩

ಕುಮು, ತನಗೆ ವಿರುದ್ಧವಾಗಿ ಎಷ್ಟೇ ಧಿಕ್ಕಾರವುಂಟಾಗಲಿ, ವಿತೃಷ್ಣೆಯುಂಟಾಗಲಿ, ಅಥವಾ ಅವಮಾನವುಂಟಾಗಲಿ, ಅವುಗಳನ್ನು, ತನ್ನ ವ್ಯಕ್ತಿತ್ವದ ಪ್ರಭಾವದಿಂದ ಸಹಿಸುವ ಸಾಮರ್ಥ್ಯವನ್ನು ಪಡೆದಿದ್ದಳು. ತನ್ನ ಹಿತ, ಅಹಿತಗಳೆರಡನ್ನೂ ತೃಣೀಕರಿಸುವುದಕ್ಕೂ ಹಿಂದೆಗೆದವಳಲ್ಲ. ಎಂದರೆ, ತನ್ನ ಆತ್ಮಾಭಿಮಾನವನ್ನು ಬಿಡುವುದಕ್ಕೂ ಆಕೆ ಸಿದ್ಧವಾಗಿದ್ದಳು. ಇದನ್ನು “ಕ್ಲೋರೋಫಾರಮ್ಮಿನ” ವಿಧಾನ ಎನ್ನಬಹುದು. ಆದರೆ ಇದು ಎರಡು ಮೂರು ಘಂಟೆಗಳ ಪರಿಣಾಮ ಮಾತ್ರವೇ ಅಲ್ಲ. ಹಗಲು, ರಾತ್ರಿಗಳಲ್ಲಿ ಒಂದೇ ಬಗೆಯಾಗಿ ನಾನಾ ನೋವುಗಳನ್ನೂ

ನಾನಾ ಆಶೆಗಳನ್ನೂ ತ್ಯಜಿಸುವ ವಿಧಾನವಿದು. ಇಂಥ ಸ್ಥಿತಿಯಲ್ಲಿ ಹೆಂಗಸರಿಗೆ ಯಾರಾದರೂ ಒಬ್ಬ ಗುರುವು ದೊರೆತರೆ ಆಗ, ಅವರ ಆತ್ಮ ವಿಸ್ಮೃತಿಗೆ ತಕ್ಕ ಚಿಕಿತ್ಸೆ ದೊರಕೀತು. ಆದರೆ ಕುಮುದಿನಿಗೆ ಹಾಗಾಗಲಿಲ್ಲ. ಆದ್ದರಿಂದಲೇ ಮನಸ್ಸಿನಲ್ಲೇ ಪೂಜೆಯ ಮಂತ್ರವನ್ನು ಸದಾ ಜಪಿಸುತ್ತಿರಲು ಪ್ರಯತ್ನಿಸಿದಳು. ರಾತ್ರಿ ಹಗಲೂ ಅವಳ ಜಪವಾದರೂ ಇಷ್ಟೆ.

ತಸ್ಮಾತ್ ಪ್ರಣಮ್ಯ ಪ್ರಣಿಧಾಯಕಾಯಂ
ಪ್ರಸಾದಯೇ ತ್ವಾಮ್ ಅಹಮೀಶ ಮೀಡ್ಯಂ
ಪಿತೇವ ಪುತ್ರಸ್ಯ ಸಖೇವ ಸಖ್ಯುಃ
ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢು ಮ್

"ಓ ನನ್ನ ಪೂಜ್ಯವಸ್ತುವೆ, ನಿನ್ನ ಬಳಿ ನನ್ನ ಶರೀರಾದ್ಯಂತವನ್ನೂ ಬಾಗಿಸಿ ಈ ಪ್ರಸಾದವನ್ನು ಬಯಸುವೆ. ಯಾವ ರೀತಿಯಲ್ಲಿ ತಂದೆ ಮಗನನ್ನೂ, ಯಾವ ವಿಧದಲ್ಲಿ ಗೆಳೆಯ ಗೆಳೆಯನನ್ನೂ, ಯಾವ ರೀತಿಯಲ್ಲಿ ಪ್ರಿಯ ಪ್ರಿಯೆಯನ್ನೂ ಸಹಿಸುವನೋ, ಓ ದೇವ, ನೀನೂ ಹಾಗೆಯೇ ನನ್ನನ್ನು ಸಹಿಸು. ನೀನು ನಿನ್ನ ಪ್ರೀತಿಯಿಂದ ನನ್ನನ್ನು ಸಹಿಸು. ಅದಕ್ಕೆ ಪ್ರಮಾಣವಿಷ್ಟೆ. ನಿನ್ನ ಪ್ರೀತಿಯಿಂದ ನಾನೂ ಎಲ್ಲವನ್ನೂ ಕ್ಷಮಿಸುವಂತಾಗುವೆನು". ಕುಮು ಕಣ್ಣುಮುಚ್ಚಿಕೊಂಡು ಮನಸ್ಸಿನಲ್ಲೇ ಅವನನ್ನು ಕರೆದು, "ನೀನೇ ಹೇಳಿರುವೆಯಲ್ಲ, ಯಾವ ಮನುಷ್ಯ ನನ್ನನ್ನು ಎಲ್ಲೆಡೆಯಲ್ಲೂ ಕಾಣುವನೋ, ನನ್ನಲ್ಲಿ ಎಲ್ಲವನ್ನೂ ಕಾಣುವನೋ ಅವನು ನನ್ನನ್ನು ಎಂದಿಗೂ ಬಿಟ್ಟಿರಲಾರ; ನಾನು ಅವನನ್ನು ಎಂದಿಗೂ ಬಿಟ್ಟಿರಲಾರೆ." ಎಂದು. ಈ ಸಾಧನೆಯಲ್ಲಿ ನನಗೆ ಸ್ವಲ್ಪವೂ ಭಂಗವುಂಟಾಗದಿರಲಿ.

ಇಂದು ಬೆಳಗ್ಗೆ ಸ್ನಾನಮಾಡಿ ಗಂಧವನ್ನು ಕದಡಿದ ನೀರಿನಿಂದ ಬಹಳ ಹೊತ್ತು ತನ್ನ ಮೈಗೆ ಅಭಿಷೇಕ ಮಾಡಿಕೊಂಡಳು. ಮೈಯನ್ನು ನಿರ್ಮಲವಾಗಿ ತೊಳೆದು, ಸುಗಂಧ ದ್ರವ್ಯವನ್ನು ಲೇಪಿಸಿ, ಆತನಿಗೆ ಅರ್ಪಣೆ ಮಾಡಿದಳು. ಮನಸ್ಸಿನಲ್ಲೇ ಏಕಾಗ್ರತೆಯಿಂದ "ಕ್ಷಣ ಕ್ಷಣದಲ್ಲೂ ಅವಳ ಕೈಯಲ್ಲಿ ಆತನ ಕೈ ಇದೆ. ತನ್ನ ದೇಹಾ

ದ್ಯಂತವೂ ಆತನ ಸ್ಪರ್ಶ ಮಾತ್ರದಿಂದ ಎಡೆಬಿಡದೆ ವಿರಾಜಿಸುತ್ತಿದೆ. ವಾಸ್ತವವಾಗಿ ಈ ದೇಹವು ಸಂಪೂರ್ಣವಾಗಿ ಆತನಿಗೆ ಸೇರಿದುದು. ಆತನಿಗೆ ಸೇರದ ಭಾಗವಿದ್ದರೆ ಅದು ಕೇವಲ ಮಿಥ್ಯೆ, ಮಾಯೆ, ಮಣ್ಣು; ನೋಡ ನೋಡುತ್ತ ಮಣ್ಣಿನಲ್ಲಿ ಬೆರೆತು ಹೋಗುವುದು. ಅದೆಷ್ಟು ಹೊತ್ತು ಆತನ ಸ್ಪರ್ಶ ಅನುಭವವಾಗುವುದೋ ಅಲ್ಲಿಯವರೆಗೆ ಈ ದೇಹ ಯಾವ ಬಗೆಯಲ್ಲೂ ಅಪವಿತ್ರವಾಗದು" ಎಂದು ಧ್ಯಾನಿಸ ತೊಡಗಿದಳು. ಈ ಮಾತುಗಳನ್ನು ಮನನ ಮಾಡುತ್ತ ಮಾಡುತ್ತ ಆನಂದ ದಿಂದ ಅವಳ ಕಣ್ಣ ರೆಪ್ಪೆಗಳು ತೊಯ್ದುವು. ಅವಳ ಮೈ ಮಾಂಸದ ಸ್ಥೂಲ ಬಂಧನದಿಂದ ಬಿಡುಗಡೆ ಹೊಂದಿದಂತಾಯಿತು. ಪುಣ್ಯ ಸಮ್ಮಿ ಲನದ ನಿತ್ಯಕ್ಷೇತ್ರವೆಂದು ತನ್ನ ದೇಹದ ಮೇಲೆ ಅವಳಿಗೆ ಭಕ್ತಿಯುಂಟಾ ಯಿತು. ಜಾಜೀ ಹೂವಿನ ಮಾಲೆಯೇನಾದರೂ ಕೈಗೆ ಸಿಕ್ಕಿದ್ದುದಾದರೆ ಅವಳು ತಕ್ಷಣ ಕೊರಳಲ್ಲಿ ಹಾಕಿಕೊಳ್ಳುತ್ತಿದ್ದಳು, ಹೆರಳಲ್ಲಿ ಮುಡಿಯು ತಿದ್ದಳು. ಅವಳು ಸ್ನಾನಮಾಡಿ ಅಗಲವಾದ ಕೆಂಪಂಚಿನ ಬಿಳಿಯ ಸೀರೆ ಯೊಂದನ್ನು ಉಟ್ಟಳು. ಬಿಸಿಲು ಮಹಡಿಯ ಮೇಲೆ ಕುಳಿತಾಗ, ಸೂರ್ಯನ ಬೆಳಕು ಮೂಡಿ, ಆಕಾಶ ತುಂಬಿದ ಪವಿತ್ರವಾದ ಸ್ಪರ್ಶವೊಂದು ಅವಳ ದೇಹವನ್ನು ಅಭಿನಂದಿಸುತ್ತಿರುವಂತೆ ತೋರಿತು.

ಮೋತಿಯ ತಾಯಿಯ ಬಳಿಗೆ ಬಂದು "ನನ್ನನ್ನು ನಿನ್ನ ಕೆಲಸ ದಲ್ಲಿ ಸೇರಿಸಿಕೋ" ಎಂದಳು.

ಮೋತಿಯ ತಾಯಿ ನಕ್ಕು. "ಬಾ, ಹಾಗಾದರೆ, ಕಾಯಿಪಲ್ಯ ಹೆಚ್ಚುವೆಯಂತೆ" ಎಂದಳು.

ದೊಡ್ಡ ದೊಡ್ಡ ಮರಗೆಗಳು, ಅಗಲವಾದ ಹಿತ್ತಾಳೆಯ ತಟ್ಟೆಗಳು, ಬುಟ್ಟಿ ಬುಟ್ಟಿಗಳಲ್ಲಿ ಕಾಯಿ ಸೊಪ್ಪು, ಹತ್ತು ಹನ್ನೆರಡು ಈಳಿಗೆಯ ಮಣೆಗಳು.—ಇವುಗಳ ಮಧ್ಯೆ ಆಶ್ರಯಸ್ಥರು, ನಂಟರು ಮೊದಲಾದವರು ಮಾತನಾಡುತ್ತ ಆಡುತ್ತ ಚುರುಕಾಗಿ ಕೈ ಓಡಿಸುತ್ತಿದ್ದರು. ತುಂಡು ತುಂಡುಮಾಡಿದ ಕಾಯಿಪಲ್ಯದ ರಾಶಿ ಬೆಟ್ಟದ ಹಾಗೆ ಬೀಳುತ್ತಿತ್ತು. ಅವರ ಮಧ್ಯದಲ್ಲೇ ಕುಮು ಒಂದೆಡೆಯಲ್ಲಿ ಕುಳಿತಳು. ಇದಿರಿನಲ್ಲಿ

ಸಲಾಕೆಯ ಕಿಂಡಿಯಲ್ಲಿ ಹತ್ತಿರದಲ್ಲಿದ್ದ ದರಿದ್ರಕೊಂಪೆಗೆ ಸೇರಿದ ಮುದಿ ಹುಣಿಸೇಮರ ತನ್ನ ಚಿರಚಂಚಲ ಎಲೆಗಳಿಂದ ಸೂರ್ಯನ ಬೆಳಕನ್ನು ಕತ್ತರಿಸಿ ಕತ್ತರಿಸಿ ಸುತ್ತಮುತ್ತಲೂ ಹರಡುತ್ತಿದ್ದುದು ಕಾಣಿಸುತ್ತಿತ್ತು.

ಮೋತಿಯ ತಾಯಿ ನಡುನಡುವೆ ಕುಮುವಿನ ಮುಖದ ಕಡೆ ದೃಷ್ಟಿಸಿ ನೋಡುತ್ತಿದ್ದಳು ಮತ್ತು ಹೀಗೆಂದು ಭಾವಿಸುತ್ತಿದ್ದಳು. "ಅವ ಳೇನು ಕೆಲಸ ಮಾಡುತ್ತಿದ್ದಾಳೆಯೆ. ಇಲ್ಲ, ಅವಳ ಬೆರಳ ಓಟವನ್ನು ಆಶ್ರ ಯಿಸಿ ಅವಳ ಮನಸ್ಸು ಯಾವುದೋ ಒಂದು ತೀರ್ಥದ ಹಾದಿಯಲ್ಲಿ ಹೋಗುತ್ತಿದೆ. ಅವಳನ್ನು ಕಂಡರೆ ಪಟಕಟ್ಟಿದ ದೋಣಿಯ ನೆನಪಾಗು ವುದು. ಗಾಳಿಗೆ ಎದುರಾಗಿ ಎತ್ತಿ ಕಟ್ಟಿದ ಪಟದಲ್ಲಿ ಗಾಳಿ ಬಂದು ತುಂಬು ವುದು. ನಾವೆ ಆ ಸ್ಪರ್ಶದಲ್ಲೇ ವ್ಯೈಮರೆತಂತಿರುವುದು ಮತ್ತೆ ಅದರ ಇಕ್ಕೆ ಲದಲ್ಲಿ ನೀರು ಛಿದ್ರಛಿದ್ರವಾಗುತ್ತಿರುವುದು ಅದರ ಗಮನಕ್ಕೇ ಬಾರದಂತೆ ಇರುವುದು." ಮನೆಯಲ್ಲಿ ಇತರರು ಯಾರ್ಯಾರು ಕೆಲಸ ಮಾಡುವವ ರಿದ್ದರೋ ಅವರು ಕುಮುವಿನ ಸಂಗಡ ಮಾತುಕತೆ ಆಡುವಂತಹ ಒಂದು ಸಹಜಮಾರ್ಗವನ್ನು ಕಾಣದೆ ಹೋದರು. ಶ್ಯಾಮಾಸುಂದರಿ ಒಮ್ಮೆ– "ಬಲು, ಮುಂಜಾನೆಯೇ ಸ್ನಾನ ಮಾಡಬೇಕಾದರೆ ಬಿಸಿನೀರಿಗೆ ಹೇಳು ವುದಿಲ್ಲವೇಕೆ. ಶೀತವಾಗುವುದಿಲ್ಲವೇನು ?" ಎಂದಳು.

ಕುಮು "ನನಗೆ ಅಭ್ಯಾಸವಿದೆ" ಎಂದಳು.

ಮಾತುಕತೆ ಮುಂದುವರಿಯಲಿಲ್ಲ. ಕುಮುವಿನ ಮನದಲ್ಲಿ ಆಗ ನೀರವವಾದ ಜಪದ ಪ್ರವಾಹವೊಂದು ಹರಿಯುತ್ತಿತ್ತು.

ಪಿತೇವ ಪುತ್ರಸ್ಯ ಸಖೇವ ಸಖ್ಯುಃ,
ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್

ಕಾಯಿಪಲ್ಯ ಹೆಚ್ಚುವುದು, ಮತ್ತು ಅಡಿಗೆಯ ಸಾಮಗ್ರಿಗಳನ್ನು ತೆಗೆದುಕೊಡುವ ಕೆಲಸ ಮುಗಿಯಿತು. ಹೆಂಗಸರು ಸ್ನಾನಕ್ಕಾಗಿ ಒಳಗಿನ ಅಂಗಳದ ನಲ್ಲಿಯ ಬಳಿಗೆ ಹೋಗಿ ಗದ್ದಲ ಮಾಡತೊಡಗಿದರು.

ಮೋತಿಯ ತಾಯಿಯನ್ನು ಒಂಟಿಯಾಗಿ ಕಂಡು ಕುಮು "ಅಣ್ಣ ನಿಂದ ತಂತಿಯ ಉತ್ತರ ಪಡೆದೆ" ಎಂದಳು.

ಮೋತಿಯ ತಾಯಿ ಸ್ವಲ್ಪ ಆಶ್ಚರ್ಯದೊಡನೆ "ಯಾವಾಗ ಬಂದಿತು!" ಎಂದಳು.

ಕುಮು "ನೆನ್ನೆ ರಾತ್ರಿ" ಎಂದಳು.

"ರಾತ್ರಿಯಲ್ಲೆ!"

"ಹೌದು, ರಾತ್ರಿ ಒಂದು ಹೊತ್ತಿನಲ್ಲಿ, ಆಗ ಅವರು ತಾವೇ ಬಂದು ನನ್ನ ಕೈಯಲ್ಲಿ ಕೊಟ್ಟರು"

ಮೋತಿಯ ತಾಯಿ "ಹಾಗಾದರೆ ಕಾಗದವೂ ಖಂಡಿತ ಸಿಕ್ಕಿದೆ" ಎಂದಳು

"ಯಾವ ಕಾಗದ?"

"ನಿಮ್ಮ ಅಣ್ಣನ ಕಾಗದ"

ವ್ಯಸ್ತಳಾಗಿ "ಇಲ್ಲ. ನನಗೆ ಸಿಕ್ಕಲಿಲ್ಲ! ಅಣ್ಣನಿಂದ ಕಾಗದ ಬಂದಿದೆಯೇನು?" ಎಂದಳು.

ಮೋತಿಯ ತಾಯಿ ತೆಪ್ಪನಿದ್ದಳು.

ಕುಮು ಅವಳ ಕೈ ಅದುಮಿ ಹಿಡಿದುಕೊಂಡು ಉತ್ಕಂಠಿತಳಾಗಿ "ಅಣ್ಣನ ಕಾಗದ ಎಲ್ಲಿದೆ. ನನಗೆ ತಂದು ಕೊಡು ಮತ್ತೆ" ಎಂದಳು.

ಮೋತಿಯ ತಾಯಿ ಪಿಸುಮಾತಿನಲ್ಲಿ "ಆ ಕಾಗದ ತರಲು ಸಾಧ್ಯವಾಗದು. ಅದು ದೊಡ್ಡ ಯಜಮಾನರ ಹೊರಗಿನ ಕೊಟಡಿಯಲ್ಲಿ ಡ್ರಾಯರಿನಲ್ಲಿದೆ" ಎಂದಳು.

"ನನ್ನ ಕಾಗದ ನನಗೆ ತಂದುಕೊಡಲು ಸಾಧ್ಯವಿಲ್ಲವೇಕೆ?"

"ಅವರ ಡ್ರಾಯರು ತೆರೆದಿರುವೆನೆಂದು ತಿಳಿದರೆ ಪ್ರಳಯವೇ ಆದೀತು"

ಕುಮು ಧೃತಿಗೆಟ್ಟವಳಾಗಿ "ಅಣ್ಣ ಬರೆದ ಕಾಗದವನ್ನ ಹಾಗಾದರೆ ನಾನು ಓದಲು ಸಾಧ್ಯವಿಲ್ಲವೆ" ಎಂದಳು.

"ದೊಡ್ಡ ಯಜಮಾನರು ಆಫೀಸಿಗೆ ಹೋಗುವರಲ್ಲ, ಆಗ ಆ ಕಾಗದ ಓದಿ ಪುನಃ ಡ್ರಾಯರಿನಲ್ಲಿ ಇಟ್ಟು ಬಿಡು."

ಕೋಪವಂತೂ ಅಡಗಿಸಿಡುವಂಥಾದ್ದಲ್ಲ. ಮನಸ್ಸಿನಲ್ಲಿ ಕಾವೇರಿತು. "ಸ್ವಂತ ಕಾಗದವನ್ನೂ ಕಳ್ಳತನದಿಂದ ಓದಬೇಕೇನು?"

"ಯಾವುದು ಸ್ವಂತ, ಯಾವುದು ಸ್ವಂತವಲ್ಲ ಎನ್ನುವ ಮಾತನ್ನ ಈ ಮನೆಯ ಯಜಮಾನರು ತೀರ್ಮಾನಿಸುವರು"

ಕುಮು ತನ್ನ ಪ್ರತಿಜ್ಞೆಯನ್ನು ಮರೆಯುವುದರಲ್ಲಿದ್ದಳು. ಈ ಸಮಯದಲ್ಲಿ ಹಠಾತ್ತಾಗಿ ಮನಸ್ಸಿನ ಅಂತರ್ಯ ಬೆರಳುತೋರಿ "ಕೋಪಗೊಳ್ಳಬೇಡ" ಎಂದಿತು. ಕ್ಷಣಕಾಲದವರೆಗೆ ಕುಮು ಕಣ್ಣುಮುಚ್ಚಿಕೊಂಡಳು. ನಿಶ್ಶಬ್ದವಾದ ದನಿಯಲ್ಲಿ ತುಟಿಗಳೆರಡು ಅಲುಗತೊಡಗಿದುವು. "ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್"

ಕುಮುವೆಂದಳು "ನನ್ನ ಕಾಗದ ಯಾರಾದರೂ ಕದಿಯುವುದಾದರೆ ಕದಿಯಲಿ. ಹಾಗೆಂದು ನಾನು ಕಳ್ಳತನದ ಮುಯ್ಯನ್ನು ಕಳ್ಳತನದಿಂದಲೇ ತೀರಿಸಿಕೊಳ್ಳಲು ಇಷ್ಟವಿಲ್ಲ"

ಹೀಗೆ ಹೇಳಿದೊಡನೆ ಮಾತು ಕಠಿಣವಾಯಿತೆಂದು ಕುಮುವಿನ ಮನಸ್ಸಿಗನ್ನಿಸಿತು. ಒಳಗಿರುವ ರೋಗ ತನ್ನ ಅರಿವಿಲ್ಲದೆಯೇ ಕಾಣಿಸಿಕೊಳ್ಳುವುದೆಂದು ತಿಳಿದಳು. ಅದನ್ನು ಕಿತ್ತೊಗೆಯಬೇಕು. ಆದರೊಡನೆ ಯುದ್ಧಮಾಡ ಬಯಸಿದರೆ ಎಲ್ಲ ವೇಳೆಯಲ್ಲೂ ಅದರ ಆಳ ಸಿಕ್ಕುವುದಿಲ್ಲವಷ್ಟೆ. ಗುಹೆಯ ನಡುವೆ ಅದು ಕೋಟೆ ಕಟ್ಟಿಕೊಂಡಿರುವುದು. ಹೊರಗಿನಿಂದ ಅಲ್ಲಿಗೆ ಹೋಗುವುದಕ್ಕೆ ಮಾರ್ಗವಿಲ್ಲದಂತಾಗಿದೆ? ಆದ್ದರಿಂದ, ತನ್ನ ಪ್ರತಿಬಂಧಕವನ್ನು ಹೋಗಲಾಡಿಸುವುದಕ್ಕೂ ಮತ್ತು ಸ್ಥಿರವಾಗಿ ಬೇರೂರಿರುವುದನ್ನು ನಿರ್ಮೂಲ ಮಾಡುವುದಕ್ಕೂ ತಕ್ಕ ಪ್ರೇಮದ ಪ್ರವಾಹವೇ ಹರಿದುಬರಬೇಕಾಗಿದೆ. ಹಲವಾರು ದುಃಖಗಳನ್ನು ಮರೆಸಿ ಬಿಡಲು ಅವಳಿಗೆ ಒಂದು ಉಪಾಯವಿತ್ತು. ಅದು ಸಂಗೀತ. ಆದರೆ ಈ ಮನೆ

ಯಲ್ಲಿ ಏಸರಾಜ್ ಬಾರಿಸಲು ಅವಳಿಗೆ ನಾಚಿಕೆ. ಜೊತೆಗೆ ಏಸ್‌ರಾಜೂ ಇಲ್ಲ; ಕುಮು ಹಾಡಬಲ್ಲಳು. ಆದರೆ ಕುಮುವಿನ ಕಂಠದಲ್ಲಿ ಅಂತಹ ಶಕ್ತಿಯಿರಲಿಲ್ಲ. ಹಾಡಿನ ಹೊಳೆಯಲ್ಲಿ ದುಗುಡದ ಹಾಡಿನಲ್ಲಿ ಆಕಾಶ ವನ್ನೇ ತೇಲಿಸಿ ಬಿಡಬೇಕು ಎಂದು ಬಯಸಿದಳು. ಯಾವ ಹಾಡಿನಲ್ಲಿ ಅವಳು "ನಾನಂತೂ ನಿನ್ನ ಕರೆಗೇ ಬಂದಿರುವೆ, ಆದರೆ ನೀನೇಕೆ ಮರೆಯಾಗಿರುವೆ? ನಾನಂತೂ ಕ್ಷಣಮಾತ್ರವೂ ಹಿಂಜರಿಯೆನು. ಆದರೂ, ಇಂದೇಕೆ ನನ್ನನ್ನು ಇಂತಹ ಸಂದೇಹದಲ್ಲಿ ಮುಳುಗಿಸಿರುವೆ ?" ಎಂದು ಹೇಳಬಲ್ಲಳೋ, ಆ ಮಾತುಗಳನ್ನೆಲ್ಲ ಇಂದು ಪೂರ್ಣವಾಗಿ ದೊಡ್ಡ ದನಿ ಯಲ್ಲಿ ಹಾಡಲು ಅವಳು ಅಪೇಕ್ಷಿಸಿದಳು. ಹಾಗಾದರೇನೇ ಸ್ವರದಲ್ಲಿ ಅದಕ್ಕೆ ಉತ್ತರ ಸಿಕ್ಕೀತೆಂದು ಅವಳಿಗನ್ನಿಸಿತು.

೩೪

ಕುಮು ಓಡಿ ಹೋಗಲು ಒಂದೇ ಒಂದು ಜಾಗವಿತ್ತು. ಅದು ಈ ಮನೆಯ ಬಿಸಿಲುಮಹಡಿ. ಅಲ್ಲಿಗೇ ಹೊರಟು ಹೋದಳು. ಹೊತ್ತೇರಿತ್ತು. ಬಿಸಿಲು ಮಹಡಿಯಲ್ಲಿ ಬಲವಾದ ಬಿಸಿಲುಹರಡಿದೆ. ಪೌಳೀಗೋಡೆಯ ಅರುಗಿನಲ್ಲಿ ಒಂದೆಡೆ ಸ್ವಲ್ಪ ನೆರಳಿತ್ತು ಅಲ್ಲಿಗೇ ಹೋಗಿ ಕುಳಿತಳು. ಒಂದು ಹಾಡು ನೆನಪಾಯಿತು. ಅದರ ರಾಗ ಆಸಾವರೀ. ಆ ಕೀರ್ತನೆಯ ಆರಂಭ—ಬಾಂಶರೀ ಹಮಾರೀರೇ—ಎಂದು. ಆದರೆ ಮುಂದಿನ ಅಂಶ ಉಸ್ತಾದರ ಬಾಯ ವಿಕೃತವಾಣಿ—ಅವುಗಳ ಅರ್ಥ ತಿಳಿದುಕೊಳ್ಳಲಾಗು ವುದಿಲ್ಲ. ಕುಮು ಆ ಅಸಂಪೂರ್ಣ ಅಂಶವನ್ನೇ ತನ್ನ ಮನಬಂದಂತೆ ಹೊಸಹೊಸ ರಾಗದಲ್ಲಿ ಮತ್ತೆ ಮತ್ತೆ ಹಾಡತೊಡಗಿದಳು. ಅದೊಂದು ಮಾತು ಅರ್ಥಭರಿತವಾಯಿತು. ಆ ವಾಕ್ಯದಲ್ಲಿ "ಓ ನನ್ನ ಕೊಳಲೇ, ನಿನ್ನಲ್ಲಿ ಸ್ವರ ತುಂಬದೇಕೆ ? ಕತ್ತಲೆ ಹಾಯ್ದು ಕದ ಮುಚ್ಚಿರು ಪೆಡೆಗೆ, ನಿದ್ರೆ ತಿಳಿಯದಿರುವೆಡೆಗೆ ಮುಟ್ಟಲಾರದೇಕೆ ? ನನ್ನ ಕೊಳಲೇ ಓ, ನನ್ನ ಕೊಳಲೇ"—ಎಂದು ಹೇಳುವಂತಿತ್ತು.

ಮೋತಿಳು ತಾಯಿ ಬಂದು "ಬಾ, ಊಟಕ್ಕೆ ಹೋಗೋಣ" ಎಂದು ಕರೆದಾಗ ಆ ಬಿಸಿಲುಮಹಡಿಯ ಮೇಲೆ ಮೂಲೆಯ ನೆರಳು

ಮಾಯವಾಗಿತ್ತು. ಆದರೆ ಆಗ ಅವಳ ಮನಸ್ಸು ಸ್ವರದಿಂದ ತುಂಬಿ ತುಳುಕುತ್ತಿತ್ತು. ಸಂಸಾರದಲ್ಲಿ ಯಾರು ಅವಳ ಮೇಲೆ ಯಾವ ಅನ್ಯಾಯ ಮಾಡಿದ್ದರೋ ಅದೆಲ್ಲ ತುಚ್ಛವಾಗಿಬಿಟ್ಟಿತ್ತು. ಅವಳ ಕಾಗದದ ವಿಷಯ ವಾಗಿ ವರ್ತಿಸಿದ ಮಧುಸೂದನನ ಸಣ್ಣತನದಿಂದ ಅವಳ ಮನದಲ್ಲಿ ಯಾವ ಅವಜ್ಞೆ ಮೂಡಿದ್ದಿತೋ ಅದು ಬಿಸಿಲು ಹರಡಿದ್ದ ಈ ಆಕಾಶದಲ್ಲಿ ಚಿಟ್ಟೆಯಂತೆ ಎಲ್ಲಿಯೋ ಕಣ್ಮರೆಯಾಗಿ ಹೋಗಿತ್ತು. ಅದರ ಕ್ರುದ್ಧ ಗುಂಜನ ಎಲ್ಲೆಯಿಲ್ಲದ ಆಕಾಶದಲ್ಲಿ ಕಲೆತು ಹೋಗಿತ್ತು. ಆದರೆ ಕಾಗದದಲ್ಲಿದ್ದ ಅಣ್ಣನ ಸ್ನೇಹವಾಕ್ಯವನ್ನು ಪಡೆಯಲು, ಅವಳ ಮನಸ್ಸು ಹಾತೊರೆಯುತ್ತಿತ್ತು.

ಆ ವ್ಯಗ್ರತೆ ಅವಳ ಮನಸ್ಸಿನಲ್ಲಿ ಎಚ್ಚರವಾಗಿಯೇ ಇತ್ತು. ಊಟ ವಾದ ಮೇಲೆ ಅವಳಿಂದ ಸುಮ್ಮನಿರಲಾಗಲಿಲ್ಲ. ಮೋತಿಯ ತಾಯಿ ಯೊಡನೆ– "ನಾನು, ಹೊರಗಿನ ಮನೆಗೆ ಹೋಗಿ ಕಾಗದ ಓದಿ ಬರುವೆ" ಎಂದಳು.

ಮೋತಿಯ ತಾಯಿ "ಇನ್ನು ಸ್ವಲ್ಪ ಹೊತ್ತಾಗಲಿ. ಆಳುಗಳೆಲ್ಲ ವಿರಾಮ ಪಡೆದು ಊಟಕ್ಕೆ ಹೋಗುವರಲ್ಲ, ಆಗ ಹೋಗು" ಎಂದಳು.

ಕುಮು "ಆಗದು, ಅದು ದೊಡ್ಡ ಕಳ್ಳತನ ಮಾಡಲು ಹೋಗು ವಂತೆ ಆಗುವುದು. ನಾನು ಎಲ್ಲರ ಇದಿರಿನಲ್ಲೇ ಹೋಗಬಯಸುವೆ. ಅದರಿಂದ ಏನು ಎಣಿಸಿದರೂ ಎಣಿಸಿಕೊಳ್ಳಲಿ" ಎಂದಳು.

ಮೋತಿಯ ತಾಯಿ "ಹಾಗಾದರೆ ನಡೆ, ನಾನೂ ನಿನ್ನ ಸಂಗಡ ಬರುತ್ತೇನೆ" ಎಂದಳು.

"ಊಹೂಂ, ಅದು ಖಂಡಿತ ಸಾಧ್ಯವಿಲ್ಲ. ನೀನು ಯಾವ ಕಡೆ ಯಿಂದ ಹೋಗಬೇಕೆಂಬುದನ್ನು ಮಾತ್ರ ಹೇಳಿಬಿಡು" ಎಂದಳು.

ಮೋತಿಯ ತಾಯಿ ಅಂತಃಪುರದ ಕಿಟಕಿಯ ಕಿಂಡಿಯಿಂದ ಕೊಟಡಿ ಯನ್ನು ತೋರಿಸಿದಳು. ಕುಮು ಹೊರಗೆ ಬಂದಳು. ಭೃತ್ಯರು ಚಕಿತರಾಗಿ ಎದ್ದು ನಿಂತು ಅವಳಿಗೆ ಪ್ರಣಾಮ ಮಾಡಿದರು. ಕುಮು ಕೋಣೆಯೊಳಗೆ ಹೋಗಿ ಮೇಜಿನ ಡ್ರಾಯರ್ ತೆರೆಯಲು ಅವಳ ಕಾಗದ ಕಾಣಿಸಿತು.

ಎತ್ತಿಕೊಂಡು ನೋಡಲು ಲಕ್ಕೋಟೆ ಒಡೆದಿತ್ತು. ಎದೆಯ ಒಳಭಾಗ ಉಬ್ಬತೊಡಗಿತು. ಸಹಿಸಲಸಾಧ್ಯವಾಯಿತು. ಯಾವ ಕುಟುಂಬದಲ್ಲಿ ಕುಮು ಬೆಳೆದು ದೊಡ್ಡವಳಾದಳೋ ಅಲ್ಲಿ ಈ ಬಗೆಯ ಅವಮಾನವನ್ನು ಯಾವ ರೀತಿಯಲ್ಲೂ ಯೋಚಿಸುವುದಕ್ಕೂ ಸಾಧ್ಯವಿರಲಿಲ್ಲ. ತನ್ನ ಆ ವೇಗದ ಈ ತೀವ್ರ ಪ್ರಬಲತೆಯೇ ಅವಳನ್ನು ಬಡಿದೆಬ್ಬಿಸಿ ಎಚ್ಚರಗೊಳಿಸಿತು. ಅವಳು–" ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ " ಎಂದು ಅನ್ನ ತೊಡಗಿದಳು. ಆಗಲೂ ಬಿರುಗಾಳಿ ಶಾಂತವಾಗಲಿಲ್ಲ. ಅದರಿಂದಲೇ ಬಾರಿಬಾರಿಗೆ ಅಂದುಕೊಂಡಳು. ಹೊರಗಿದ್ದ ಬಾಗಿಲು ಕಾಯುವವನು ಆಫೀಸು ಕೋಣೆಯಲ್ಲಿ ಯಜಮಾನಿಯ ಈ ಮಂತ್ರ ಪಠಣವನ್ನು ಕೇಳಿ ಆಶ್ಚರ್ಯದಲ್ಲಿ ಮುಳುಗಿದನು. ಬಹಳ ಹೊತ್ತು ಹೇಳುತ್ತ ಹೇಳುತ್ತ ಕುಮುವಿನ ಮನಸ್ಸು ಶಾಂತವಾಯಿತು. ಆಗ ಕಾಗದವನ್ನು ಇದಿರಿನಲ್ಲಿಟ್ಟು ಕುರ್ಚಿಯ ಮೇಲೆ ಕುಳಿತು ಕೈಮುಗಿದುಕೊಂಡು ಸ್ಥಿರವಾಗಿದ್ದಳು. ಕಾಗದವನ್ನು ತಾನು ಕದ್ದು ಓದಿದೆನೆಂಬುದೇ ಅವಳ ಪಣ.

ಈ ಸಮಯದಲ್ಲಿ ಮಧುಸೂದನ ಕೋಣೆಯೊಳಕ್ಕೆ ಕಾಲಿಟ್ಟವನು ಬೆಚ್ಚಿನಿಂತನು. ಕುಮು ಅವನ ಕಡೆಗೆ ತಿರುಗಿಯೂ ನೋಡಲಿಲ್ಲ. ಹತ್ತಿರ ಬಂದು ನೋಡಿದನು. ಮೇಜಿನ ಮೇಲೆ ಆ ಕಾಗದವಿತ್ತು. " ನೀನು ಇಲ್ಲಿ ಏಕೆ ಬಂದೆ ? " ಎಂದು ವಿಚಾರಿಸಿದನು.

ಕುಮು ನೀರವವಾಗಿ ಶಾಂತದೃಷ್ಟಿಯಿಂದ ಮಧುಸೂದನನ ಮುಖದ ಕಡೆ ನೋಡಿದಳು. ಆ ನೋಟದಲ್ಲಿ ಆಕ್ಷೇಪಣೆ ಇರಲಿಲ್ಲ. ಮಧುಸೂದನ " ಈ ಕೋಣೆಯಲ್ಲಿ ನೀನೇಕೆ ಬಂದೆ ? " ಎಂದು ಪುನಃ ಕೇಳಿದನು.

ಈ ಹೆಚ್ಚಿನ ಪ್ರಶ್ನೆಗೆ ಕುಮು ಅಧೈರ್ಯದ ದನಿಯಲ್ಲೇ–" ನನ್ನ ಹೆಸರಿಗೆ ಅಣ್ಣನಿಂದ ಕಾಗದ ಬಂದಿದೆಯೋ ಇಲ್ಲವೋ ನೋಡಲು ಬಂದಿದ್ದೆ. "

' ಆ ಮಾತು ನನ್ನನ್ನು ಕೇಳಲಿಲ್ಲವೇಕೆ ? ' ಇಂತಹ ಪ್ರಶ್ನೆಗೆ ಅವಕಾಶವಿಲ್ಲದಂತೆ ಹಿಂದಿನ ರಾತ್ರಿಯೇ ಮಧುಸೂದನ ತಾನಾಗಿಯೇ

ಕುಮುವಿನ ಬಾಯಿ ಮುಚ್ಚಿದ್ದ. ಆದರಿಂದಲೇ "ಈ ಕಾಗದ ನಾನೇ ನಿನ್ನ ಹತ್ತಿರ ತೆಗೆದುಕೊಂಡು ಬರುತ್ತಿದ್ದೆ. ಅದಕ್ಕಾಗಿ ನೀನು ಇಲ್ಲಿಗೆ ಬರಬೇಕಾದ ಆವಶ್ಯಕತೆಯಿರಲಿಲ್ಲ." ಎಂದನು.

ಕುಮು ಸ್ವಲ್ಪ ಹೊತ್ತು ಸುಮ್ಮನಿದ್ದಳು. ಮನಸ್ಸನ್ನು ಶಾಂತ ಗೊಳಿಸಿ ಅನಂತರ "ಈ ಕಾಗದವನ್ನು ನೀನು ನನಗೆ ಓದಲು ಕೊಡ ಬಯಸುವುದಿಲ್ಲ. ಅದಕ್ಕಾಗಿ ಈ ಕಾಗದವನ್ನು ನಾನೇ ಓದಿದೆನು. ಇದೋ ನಾನು ಹರಿದು ಬಿಸುಡುವೆನು. ಆದರೆ ಇಂತಹ ಕಷ್ಟ ನನಗೆ ಪುನಃ ಎಂದೂ ಕೊಡಬೇಡ. ಇದಕ್ಕಿಂತ ಹೆಚ್ಚು ಕಷ್ಟವಾದುದು ನನಗೆ ಬೇರೆ ಯಾವುದೂ ಇಲ್ಲ" ಎಂದಳು.

ಹೀಗೆ ಹೇಳಿ ಮುಖದ ಮೇಲೆ ಬಟ್ಟೆ ಎಳೆದುಕೊಂಡು ವೇಗವಾಗಿ ಹೊರಟು ಹೋದಳು.

ಇದಕ್ಕೆ ಮುಂಚೆ ಮಧ್ಯಾಹ್ನ ಊಟವಾದ ಮೇಲೆ ಮಧು ಸೂದನನ ಮನಸ್ಸು ಚಂಚಲಗೊಂಡಿತ್ತು. ಚಂಚಲತೆ ಯಾವ ವಿಧ ದಲ್ಲೂ ಸಮಾಧಾನಗೊಳ್ಳಲಿಲ್ಲ. ಕುಮುವಿನ ಊಟ ಆದೊಡನೆ ಅವ ಳನ್ನು ಕರೆತರಬೇಕು ಎಂದು ನಿಶ್ಚಯಿಸಿದ್ದನು. ಅಂದು ಬೆಳಗ್ಗೆಯೇ ಆಂಗ್ಲ ನಾಪಿತನೊಬ್ಬನ ಅಂಗಡಿಯಿಂದ ಸ್ಪಿರಿಟ್ ಬೆರಸಿದ ಸುಗಂಧದ ಕೇಶ ತೈಲ ಮತ್ತು ಬೆಲೆ ಬಾಳುವ ಎಸೆನ್ಸ್ ಕೊಂಡು ತಂದಿದ್ದನು. ತನ್ನ ಬಾಳುವೆಯಲ್ಲಿ ಅವುಗಳನ್ನು ಅವನು ಉಪಯೋಗಿಸುತ್ತಿದ್ದುದು ಇದೇ ಮೊದಲಬಾರಿ. ಸುಗಂಧದ್ರವ್ಯವನ್ನು ಸಿಂಗರಿಸಿಕೊಂಡು ಅವನು ಸಿದ್ಧ ನಾಗಿದ್ದ. ಆಫೀಸಿನ ವೇಳೆ ಇಂದು ಕೊನೆಯುಪಕ್ಷ ನಲವತ್ತೈದು ನಿಮಿಷ ದಷ್ಟು ಮೀರಿ ಹೋಗಿತ್ತು.

ಮೆಟ್ಟಿಲ ಮೇಲೆ ಹೆಜ್ಜೆಯ ಸದ್ದು ಕೇಳುತ್ತಲೇ ಮಧುಸೂದನ ಬೆಚ್ಚಿ ಎದ್ದು ಕುಳಿತ. ಕೈಯ ಹತ್ತಿರ ಬೇರೆ ಏನೂ ಸಿಕ್ಕದಿರಲು ಒಂದು ಹಳೆಯ ಸಮಾಚಾರಪತ್ರದ ಪ್ರಕಟನೆಯ ಭಾಗವನ್ನು ಎತ್ತಿಕೊಂಡು ಅದು ಅತ್ಯಗತ್ಯವಾದ ಆಫೀಸಿನ ಕೆಲಸವೋ ಎನ್ನುವಂತೆ ನೋಡಲಾ

ರಂಭಿಸಿದನು. ಅಷ್ಟೇ ಅಲ್ಲ. ಜೇಬಿನಿಂದ ದಪ್ಪವಾದ ಒಂದು ನೀಲೀ ಪೆನ್ಸಿಲ್ಲನ್ನು ತೆಗೆದು ಒಂದೆರಡು ಗೀರನ್ನೂ ಎಳೆದನು.

ಈ ಸಮಯದಲ್ಲಿ ಕೋಣೆಯೊಳಕ್ಕೆ ಶ್ಯಾಮಾಸುಂದರಿ ಬಂದಳು. ಹುಬ್ಬು ಗಂಟಿಕ್ಕಿ ಮಧುಸೂದನ ಅವಳ ಕಡೆ ನೋಡಿದನು. ಶ್ಯಾಮಾ ಸುಂದರಿ–" ನೀನು ಇಲ್ಲಿ ಕುಳಿತಿರುವೆ. ಯಜಮಾನಿ ನಿನ್ನನ್ನು ಹುಡುಕಿ ಕೊಂಡು ತಿರುಗುತ್ತಿರುವಳು." ಎಂದಳು.

" ಹುಡುಕಿಕೊಂಡು ತಿರುಗುತ್ತಿರುವಳೇ, ಎಲ್ಲಿ ?"

" ಈಗ ತಾನೆ ನೋಡಿದೆ. ಹೊರಗೆ ನಿನ್ನ ಆಫೀಸು ಕೋಣೆಗೆ ಹೋದಳು. ಆದರೆ ಅದರಿಂದ ಇಷ್ಟು ಆಶ್ಚರ್ಯ ಪಡುವುದೇಕೆ ? ಅವಳು ಯೋಚಿಸುವುದು ನೀನೊಂದು ಸಮಯ—"

ಮಧುಸೂದನ ಅವಸರ ಅವಸರವಾಗಿ ಹೊರಗೆ ಹೋದ. ಅನಂತ ರವೇ ಆ ಕಾಗದದ ಸಂಭವ.

ಪಟಕಟ್ಟಿದ ನಾವೆಯು ಪಟ ಹರಿದುಹೋದರೆ ಅದರ ಸ್ಥಿತಿ ಹೇಗಾ ಗುವುದೋ ಮಧುಸೂದನನದೂ ಅದೇ ಸ್ಥಿತಿಯಾಗಿತ್ತು. ಆಗ ಇನ್ನು ವಿಳಂಬಮಾಡಲು ಸ್ವಲ್ಪವೂ ಅವಕಾಶವಿರಲಿಲ್ಲ. ಆಫೀಸಿಗೆ ಹೊರಟು ಹೋದನು. ಆದರೆ ಎಲ್ಲ ಕೆಲಸದಲ್ಲೂ ಆ ಅಸಂಪೂರ್ಣವಾದ ಭಗ್ನ ಚಿಂತೆಯ ಮೊನೆಯಾದ ಅಲಗುಗಳು ಸುಮ್ಮನೆ ಚುಚ್ಚಿ ಚುಚ್ಚಿ ಕೊರೆಯು ತಿದ್ದುವು. ಈ ಮಾನಸಿಕ ಭೂಕಂಪದ ನಡುವೆ ಮನಸ್ಸಿಟ್ಟು ಕೆಲಸ ಮಾಡಲು ಅಂದು ಅವನಿಂದ ಆಗಲಿಲ್ಲ. ಯಾಕೊ ವಿಪರೀತ ತಲೆ ನೋಯುವುದೆಂದು ಆಫೀಸಿನಲ್ಲಿ ತಿಳಿಸಿ, ಕೆಲಸ ಮುಗಿಯುವುದಕ್ಕೆ ಬಹಳ ಮುಂಚೆಯೇ ಮನೆಗೆ ಹಿಂದಿರುಗಿದನು.

೩೫

ಇತ್ತ ನವೀನನೂ ಮೋತಿಯತಾಯಿಯೂ ಈ ಬಾರಿ ಗೋಡೆ ಕುಸಿಯಿತೆಂದು ಅರಿತರು. ಓಡಿಹೋಗಿ ರಕ್ಷಣೆಹೊಂದಲು ಅವರಿಗೆ ಮತ್ತೆಲ್ಲೂ ಎಡೆಯಿರಲಿಲ್ಲ. ಮೋತಿಯತಾಯಿ ಹೇಳಿದಳು, " ಇಲ್ಲಿ

ಯಾವ ವಿಧದಲ್ಲಿ ದುಡಿಯುವೆನೋ ಹಾಗೆಯೇ ದುಡಿದು ಹೊಟ್ಟೆ ತುಂಬಿಸಿ ಕೊಳ್ಳುವುದಕ್ಕೆ ಬೇರೆಯ ಸ್ಥಳ ಪ್ರಪಂಚದಲ್ಲಿ ನನಗೇನೋ ಸಿಕ್ಕುವುದು. ಆದರೆ ನನಗಿರುವ ಸಂಕಟವೆಂದರೆ, ನಾನು ಹೊರಟು ಹೋದರೆ ಈ ಮನೆಯಲ್ಲಿ ಅಕ್ಕನನ್ನು ನೋಡಿಕೊಳ್ಳುವ ಜನ ಮತ್ತಾರೂ ಇಲ್ಲವಲ್ಲ ಎಂಬುದೊಂದೇ."

ಅದಕ್ಕೆ ನವೀನ, "ನೋಡು ನಡುಕಲ ಯಜಮಾನಿ, ಈ ಕುಟುಂಬದಲ್ಲಿ ನಾನು ಬಹಳ ಅಪಮಾನವನ್ನು ಅನುಭವಿಸಿದ್ದೇನೆ. ಈ ಮನೆಯ ಅನ್ನ ನೀರಿನಲ್ಲಿ ಅನೇಕ ಬಾರಿ ನನಗೆ ಅರುಚಿ ಹುಟ್ಟಿದೆ. ಆದರೆ ಈ ಬಾರಿ ಅಸಹ್ಯವಾಗುವುದು ಯಾವುದೆಂದರೆ, ಇಂತಹ ಸೊಸೆ ಮನೆಗೆ ಬಂದಿದ್ದೂ, ಅವಳನ್ನು ಬರಮಾಡಿಕೊಳ್ಳುವುದು ಹೇಗೆ, ಅವಳನ್ನು ಹೇಗೆ ಇಟ್ಟುಕೊಳ್ಳಬೇಕು, ಎನ್ನುವುದನ್ನು ಅಣ್ಣ ಅರಿಯಲಾರದೆ ಹೋದ. ಎಲ್ಲವನ್ನೂ ಹಾಳು ಮಾಡಿದ. ಒಳ್ಳೆಯ ಪದಾರ್ಥದ ಮುರಿದ ಚೂರಿನಿಂದಲೇ ಮೂದೇವಿ ಮನೆ ಕಟ್ಟಿಕೊಳ್ಳುವುದು" ಎಂದು ಹೇಳಿದನು.

"ಆ ಮಾತು ನಿಮ್ಮ ಅಣ್ಣನಿಗೆ ಗೊತ್ತಾಗುವುದಕ್ಕೆ ಇನ್ನು ಹೆಚ್ಚು ಕಾಲ ಹಿಡಿಸುವುದಿಲ್ಲ. ಆದರೆ ಆಗ ಮುರಿದಹ್ದನ್ನು ಮತ್ತೆ ಜೋಡಿಸಲು ಆಗುವುದಿಲ್ಲ" ಎಂದಳು ಮೋತಿಯತಾಯಿ.

ನವೀನ "ಲಕ್ಷ್ಮಣನಂತಹ ಮೈದುನನಾಗುವ ಅದೃಷ್ಟ ನನ್ನ ಹಣೆಯಲ್ಲಿ ಬರೆಯಲಿಲ್ಲ. ಇದೇ ನನ್ನ ಮನಸ್ಸನ್ನು ಚುಚ್ಚುತ್ತಿದೆ. ಆದದ್ದಾಗಲಿ, ನೀನು ಸಾಮಾನು ಸರಂಜಾಮುಗಳನ್ನು ಈಗಲೇ ಅಣಿಮಾಡಿ ಇಟ್ಟುಕೊ. ಈ ಮನೆಯಲ್ಲಿ ವೇಳೆ ಬಂದ ಕಾಲದಲ್ಲಿ ವಿಳಂಬಕ್ಕೆ ಎಡೆಯಿರದು" ಎಂದನು.

ಮೋತಿಯ ತಾಯಿ ಹೊರಟು ಹೋದಳು. ನವೀನನಿಗೆ ಸುಮ್ಮನಿರಲು ಸಾಧ್ಯವಾಗಲಿಲ್ಲ. ಮೆಲ್ಲಮೆಲ್ಲಗೆ ತನ್ನ ಅತ್ತಿಗೆಯ ಕೋಣೆಯ ಇದಿರಿನಲ್ಲಿ ಬಂದು ನೋಡಲು ಕುಮು ತನ್ನ ಮಲಗುವ ಮನೆಯಲ್ಲಿ ನೆಲದ ಮೇಲೆ ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದುದನ್ನು ಕಂಡನು.

ಯಾವ ಕಾಗದವನ್ನು ಹರಿದು ಎಸೆದಳೋ ಅದರ ವೇದನೆ ಯಾವ ಬಗೆಯಲ್ಲೂ ಮನಸ್ಸಿನಿಂದ ದೂರವಾಗಲಿಲ್ಲ.

ನವೀನನನ್ನು ಕಂಡು ಅವಸರ ಅವಸರವಾಗಿ ಎದ್ದು ಕುಳಿತಳು. ನವೀನ "ಅತ್ತಿಗೆ, ಪ್ರಣಾಮ ಸಲ್ಲಿಸಲು ಬಂದಿರುವೆ. ನಿನ್ನ ಪಾದ ಧೂಳಿ ಸ್ವಲ್ಪ ಕೊಡು" ಎಂದನು.

ಕುಮು, "ಬಾ ಕುಳಿತುಕೊ" ಎಂದಳು.

ನವೀನ ನೆಲದ ಮೇಲೆ ಕುಳಿತು, "ನಿನ್ನ ಸೇವೆ ಮಾಡಲು ಸಾಧ್ಯವಾಯಿತೆನ್ನುವ ಸಂತೋಷದಿಂದಲೇ ಎದೆ ತುಂಬಿರುತ್ತಿತ್ತು. ಆದರೆ ನವೀನನ ಹಣೆಯಲ್ಲಿ ಅಂತಹ ಸೌಭಾಗ್ಯವಿದೆಯೆ? ಕೆಲವು ದಿನಗಳು ಮಾತ್ರ ನಿನ್ನ ಸೇವೆ ಲಭಿಸಿತು. ಏನು ಮಾಡಲೂ ಸಾಧ್ಯವಾಗಲಿಲ್ಲ. ಈ ವ್ಯಸನವೇ ಮನಸ್ಸಿನಲ್ಲಿ ಉಳಿದಿದೆ" ಎಂದನು.

"ನೀವುಗಳು ಎಲ್ಲಿಗೆ ಹೋಗುವಿರಿ?" ಎಂದು ಕುಮು ವಿಚಾರಿಸಿದಳು.

ನವೀನ ಉತ್ತರ ಕೊಟ್ಟನು. "ಅಣ್ಣ ನಮ್ಮನ್ನು ಊರಿಗೆ ಕಳುಹಿಸುವರು. ಇನ್ನು ಮೇಲೆ ನಿನ್ನನ್ನು ಪುನಃ ನೋಡುವ ಅವಕಾಶ ಸಿಕ್ಕದೆಂದು ತೋರುತ್ತೆ. ಅದಕ್ಕೇ ಪ್ರಣಾಮ ಸಲ್ಲಿಸಿ ಬೀಳ್ಕೊಡಬೇಕೆಂದು ಬಂದಿರುವೆ" ಎಂದು ಹೇಳಿ ನಮಸ್ಕರಿಸಿದನೋ ಇಲ್ಲವೊ ಮೋತಿಯ ತಾಯಿ ಓಡಿ ಬಂದು "ಬೇಗ ಹೊರಟು ಬಾ. ಯಜಮಾನರು ನಿನ್ನನ್ನು ಹುಡುಕುತ್ತಿರುವರು" ಎಂದಳು.

ನವೀನ ಅವಸರ ಅವಸರವಾಗಿ ಎದ್ದು ಹೊರಟುಹೋದನು. ಮೋತಿಯ ತಾಯಿಯೂ ಅವನ ಸಂಗಡ ಹೊರಟುಹೋದಳು.

ಆ ಹೊರಮನೆಯ ಕೊಟಡಿಯಲ್ಲಿ ಅಣ್ಣ ತನ್ನ ಮೇಜಿನ ಬಳಿ ಕುಳಿತಿದ್ದನು. ನವೀನ ಬಂದು ನಿಂತ. ಇತರ ದಿನಗಳಲ್ಲಿ ಇಂತಹ ಸಂದರ್ಭಗಳಲ್ಲಿ ಅವನ ಮುಖದಲ್ಲಿ ಯಾವ ಬಗೆಯ ಶಂಕೆಯ ಭಾವನೆಯಿರುತ್ತಿತ್ತೋ ಅದು ಇಂದು ಕಾಣಿಸಲಿಲ್ಲ.

"ಮೇಜಿನಲ್ಲಿದ್ದ ಕಾಗದದ ಸುದ್ದಿಯನ್ನು ದೊಡ್ಡ ಯಜಮಾನಿಗೆ ತಿಳಿಸಿದವರು ಯಾರು ?" ಎಂದು ಮಧುಸೂದನ ಕೇಳಿದ.

"ನಾನೇ ಹೇಳಿದೆ" ಎಂದು ನವೀನ ಉತ್ತರ ಕೊಟ್ಟ.

"ಇದ್ದಕ್ಕಿದ್ದಂತೆ ನಿನ್ನ ಸಾಹಸ ಇಷ್ಟು ಹೆಚ್ಚಿದ್ದು ಹೇಗೆ ?"

"ಅತ್ತಿಗೆಯವರು ತಮ್ಮ ಅಣ್ಣನಿಂದ ಕಾಗದ ಬಂದಿದೆಯೇ ಎಂದು ನನ್ನನ್ನು ಕೇಳಿದರು. ಈ ಮನೆಗೆ ಬಂದ ಕಾಗದಗಳು ಮೊದಲು ನಿನ್ನ ಹತ್ತಿರ ಬಂದು ಆ ಮೇಜಿನಲ್ಲಿ ಶೇಖರವಾಗುವವು. ಆದರಿಂದಲೇ ನಾನು ನೋಡಲು ಬಂದಿದ್ದೆ."

"ನನ್ನನ್ನು ವಿಚಾರಿಸುವಷ್ಟು ಸಾವಕಾಶವಿರಲಿಲ್ಲ ಅಲ್ಲವೆ ?"

"ಆಕೆ ಕಾತರಗೊಂಡಿದ್ದರು ಅದರಿಂದಲೇ—"

"ಅದರಿಂದಲೇ ನನ್ನ ಅಪ್ಪಣೆಯನ್ನು ಮೀರಬೇಕೋ....?"

"ಆಕೆಯೂ ಈ ಮನೆಯ ಯಜಮಾನಿಯೇ. ಆಕೆಯ ಅಪ್ಪಣೆ ಈ ಮನೆಯಲ್ಲಿ ನಡೆಯದು ಎನ್ನುವುದನ್ನು ನಾನು ಹೇಗೆ ತಿಳಿಯಲಿ ? ಆಕೆ ಹೇಳಿದ್ದನ್ನು ಕೇಳದೆ ಹೋಗುವಂತಹ ಗರ್ವ ನನಗೆ ಇಲ್ಲ. ಇದೊ ನಿನಗೆ ಸ್ಪಷ್ಟವಾಗಿ ಹೇಳುತ್ತೇನೆ. ಆಕೆ ನನಗೆ ಯಜಮಾನಿ ಮಾತ್ರವೇ ಅಲ್ಲ; ಪರಮ ಪೂಜ್ಯಳೂ ಹೌದು. ಆಕೆಯ ಮಾತನ್ನು ಕೇಳುವುದು ಉಪ್ಪು ತಿಂದುದಕ್ಕಲ್ಲ, ಅದು ನನ್ನ ಭಕ್ತಿಯಿಂದ."

"ನವೀನ್, ನಿನ್ನನ್ನು ಸಣ್ಣ ವಯಸ್ಸಿನಿಂದ ನಾನು ಬಲ್ಲೆ. ಈ ಬುದ್ಧಿವಂತಿಕೆಯೆಲ್ಲಾ ನಿನ್ನ ಸ್ವಂತದ್ದಲ್ಲ. ನಿನಗೆ ಇದನ್ನೆಲ್ಲ ಯಾರು ಹೇಳಿಕೊಡುವರು ಎನ್ನುವದನ್ನೂ ಬಲ್ಲೆ. ಇರಲಿ, ಇವೊತ್ತು ಇನ್ನು ಅವಕಾಶವಿಲ್ಲ. ನಾಳೆ ಬೆಳಗ್ಗಿನ ಗಾಡಿಯಲ್ಲಿ ನೀವುಗಳು ಊರಿಗೆ ಹೊರಡಬೇಕು."

"ಹಾಗೆಯೇ ಆಗಲಿ" ಎಂದು ನವೀನನು ಮರುಮಾತಾಡದೆ ಬೇಗ ಬೇಗನೆ ಹೊರಟುಹೋದ.

ಇಷ್ಟು ಸಂಕ್ಷೇಪವಾಗಿ ನವೀನನು "ಹಾಗೆಯೇ ಆಗಲಿ" ಎಂದದ್ದು ಮಧುಸೂದನನಿಗೆ ಸ್ವಲ್ಪವೂ ರುಚಿಸಲಿಲ್ಲ. ನವೀನ ಅತ್ತು ಗೋಳಾಡುವುದು ಉಚಿತವಾಗಿತ್ತು. ಆದರಿಂದ ಮಧುಸೂದನನ ಸಂಕಲ್ಪ ಎಂದಿಗೂ ವಿಕಲ್ಪ ವಾಗುತ್ತಿರಲಿಲ್ಲ. ನವೀನನನ್ನು ಮತ್ತೆ ಹಿಂದಕ್ಕೆ ಕರೆದು "ಸಂಬಳ ಪೂರ್ತಿ ಯಾಗಿ ತೆಗೆದುಕೊಂಡುಹೋಗು. ಇನ್ನು ಮುಂದೆ ನಿಮ್ಮ ವೆಚ್ಚ ಒದ ಗಿಸುವುದಕ್ಕೆ ನನ್ನಿಂದ ಸಾಧ್ಯವಿಲ್ಲ." ಎಂದನು.

ನವೀನ "ಅದನ್ನು ಬಲ್ಲೆ, ಊರಿನಲ್ಲಿ ನನ್ನ ಪಾಲಿನ ಜಮಿನು ಇದೆಯಲ್ಲಾ ಅದನ್ನು ವ್ಯವಸಾಯ ಮಾಡಿಕೊಂಡು ಬದುಕುತ್ತೇನೆ" ಎಂದ.

ಇಷ್ಟು ಹೇಳಿದವನೇ ಮತ್ತಾವ ಮಾತನ್ನೂ ನಿರೀಕ್ಷಿಸದೆಯೇ ಹೊರಟುಹೋದ.

ಮನುಷ್ಯನ ಸ್ವಭಾವ, ವಿರುದ್ಧವಾದ ನಾನಾ ಧಾತುಗಳ ಮಿಶ್ರ ದಿಂದ ಅಭಿವೃದ್ಧಿಯಾಗುವದು. ಅದಕ್ಕೊಂದು ಉದಾಹರಣೆ ಇದೇ. ಮಧುಸೂದನ ನವೀನನನ್ನು ಬಹಳ ಪ್ರೀತಿಸುತ್ತಿದ್ದ. ಅವರ ಉಳಿದ ಇಬ್ಬರು ತಮ್ಮಂದಿರು ರಜಬ್‌ಪುರದಲ್ಲಿ ಜಮೀನನ್ನು ರೂಢಿಸುವ ಕೆಲಸ ಒಪ್ಪಿಕೊಂಡು ಹಳ್ಳಿಗಾಡಿನಲ್ಲಿ ನೆಲಸಿದ್ದರು. ಮಧುಸೂದನ ಅವರ ವಿಷಯ ವಾಗಿ ಅಷ್ಟಾಗಿ ಗಮನವಿಡುತ್ತಿರಲಿಲ್ಲ. ತಂದೆಯ ಸಾವಿನ ಅನಂತರ ನವೀನನನ್ನು ಮಧುಸೂದನ ಕಲ್ಕತ್ತೆಗೆ ಕರೆತಂದು ಓದಿಸಿದನು. ಆಮೇಲೆ ಅವನನ್ನು ತನ್ನ ಹತ್ತಿರದಲ್ಲೇ ಇಟ್ಟುಕೊಂಡನು. ಅದಕ್ಕೆ ಕಾರಣ ಅವನು ಬಹು ಸತ್ಯವಂತನೆಂಬುದೇ ; ಮತ್ತೊಂದು ಕಾರಣ, ಅವನ ಮಾತು ಕತೆ ಮತ್ತು ನಡವಳಿಕೆಯಿಂದ ಎಲ್ಲರೂ ಅವನನ್ನು ಪ್ರೀತಿಸುತ್ತಿದ್ದುದು. ಈ ಮನೆಯಲ್ಲಿ ಯಾವುದೇ ಜಗಳ ತಲೆದೋರಲಿ ತಕ್ಷಣ ನವೀನ ಅದನ್ನು ಸಹಜ ರೀತಿಯಲ್ಲಿ ಪರಿಹಾರ ಮಾಡುತ್ತಿದ್ದ. ನವೀನ ಎಲ್ಲ ಮಾತಿ ನಲ್ಲಿಯೂ ನಗುವುದನ್ನು ಬಲ್ಲ. ಉಳಿದ ಜನರಿಗೆ ಒಳ್ಳೆಯ ಮಾತು ಹೇಳು ವುದಷ್ಟೇ ಅಲ್ಲ. ಯಾವ ರೀತಿಯಲ್ಲಿ ನಡೆದುಕೊಳ್ಳುತಿದ್ದನೆಂದರೆ, ಪ್ರತಿಯೊ ಬ್ಬರೂ ಅವನಿಗೆ ತಮ್ಮಲ್ಲೇ ಪಕ್ಷಪಾತವಿದೆಯೆಂದು ಎಣಿಸಿಕೊಳ್ಳುತ್ತಿದ್ದರು.

ನವೀನನನ್ನು ಮಧುಸೂದನ ಎಷ್ಟು ಮನಃಪೂರ್ವಕವಾಗಿ ಪ್ರೀತಿಸುತಿದ್ದ ಎನ್ನಲು ಮತ್ತೊಂದು ಸಾಕ್ಷಿ, ಮೋತಿಯಠಾಯನ್ನು ಅವನು ಸಹಿಸದಿದ್ದುದು. ಯಾರಲ್ಲಿ ಅವನಿಗೆ ಮಮತೆಯೊ ಅವರ ವಿಷಯದಲ್ಲಿ ತನ್ನ ಏಕಾಧಿಪತ್ಯ ಇರಬೇಕೆಂದು ಅವನ ಅಭಿಪ್ರಾಯ. ಅದರಿಂದಲೇ ಮೋತಿಯ ತಾಯಿ ನವೀನನ ಮನಸ್ಸನ್ನು ಕೆಡಿಸುವುದರಲ್ಲೇ ಸದಾ ನಿರತಳಾಗಿರುವಳೆಂದು ಅವನ ಊಹೆ. "ತಮ್ಮನ ಮೇಲೆ ತನಗೆ ಪಿತ್ರಾರ್ಜಿತ ಅಧಿಕಾರವಿದೆ. ಹೊರಗಿನ ಹೆಣ್ಣೊಬ್ಬಳು ಬಂದು ಅದಕ್ಕೆ ಸದಾ ಅಡ್ಡಿ ಒಡ್ಡುತ್ತಿರುವಳು." ಎಂದು ಭಾವಿಸಿದ್ದ. ನವೀನನನ್ನು ಮಧುಸೂದನ ಬಹಳವಾಗಿ ಪ್ರೀತಿಸದೆ ಇದ್ದಿದ್ದರೆ ಬಹು ದಿನಗಳ ಹಿಂದೆಯೇ ಮೋತಿಯ ತಾಯಿಗೆ ಗಡೀಪಾರಿನ ಶಿಕ್ಷೆ ಆಗಿಬಿಡುತ್ತಿತ್ತು.

ಇದೊಂದು ಕೆಲಸ ಮಾತ್ರ ಮಾಡಿ ಆಫೀಸಿಗೆ ಹೊರಟು ಹೋಗುವುದೆಂದು ಮಧುಸೂದನ ತೀರ್ಮಾನಿಸಿದ್ದ. ಆದರೆ ಯಾವ ಬಗೆಯಲ್ಲೂ ಮನಸ್ಸಿನಲ್ಲಿ ಉತ್ಸಾಹ ಮೂಡಲಿಲ್ಲ. ಕುಮು ಆ ಕಾಗದವನ್ನು ಹರಿದು ಬಿಟ್ಟು ಹೊರಟುಹೋದ ಆ ಚಿತ್ರ, ಅವನ ಮನದಲ್ಲಿ ಗಭೀರವಾಗಿ ಚಿತ್ರಿತವಾಗಿತ್ತು. ಅದೊಂದು ಆಶ್ಚರ್ಯಕರವಾದ ಚಿತ್ರ. ಇಂತಹದು ಯಾವುದನ್ನೂ ಎಂದೂ ಅವನು ಯೋಚಿಸಿರಲಿಲ್ಲ. ಒಂದಾವರ್ತಿ ಅವನ ಚಿರಕಾಲದ ಸಂದೇಹ ಪ್ರಕೃತಿಯ ಸ್ವಭಾವದಿಂದ, ಖಂಡಿತವಾಗಿಯೂ ಕುಮು ಮುಂಚೆಯೇ ಕಾಗದ ಓದಿಬಿಟ್ಟಿರುವಳೆಂದು ಅನುಮಾನಿಸಿದ್ದ. ಆದರೆ ಕುಮುವಿನ ಮುಖದಲ್ಲಿ ಬೆಳಗುತ್ತಿದ್ದ ನಿರ್ಮಲವಾದ ಸತ್ಯದ ಕಾಂತಿಯಿಂದ ಹೆಚ್ಚುಕಾಲ ಅವಳನ್ನು ನಂಬದಿರುವುದು ಮಧುಸೂದನನಿಗೆ ಅಸಾಧ್ಯವಾಗಿತ್ತು.

ಕುಮುವಿನ ಮೇಲೆ ತನ್ನ ಅಧಿಕಾರವನ್ನು ಚಲಾಯಿಸುವ ಶಕ್ತಿಯನ್ನು ಮಧುಸೂದನನು ಅವಳ ಪರಿಚಯ ಹೆಚ್ಚಿದಂತೆಲ್ಲ ಕಳೆದುಕೊಂಡಿದ್ದ. ಈಗ ತನ್ನಲ್ಲಿದ್ದ ಕೊರತೆಗಳೇ ಅವನನ್ನು ಪೀಡಿಸಲು ಆರಂಭಿಸಿದವು. ತನ್ನ ವಯಸ್ಸು ಹೆಚ್ಚು. ಈಗ ಈ ಸಂಗತಿಯನ್ನು ಮರೆಯಲು ಅವನಿಗೆ ಸಾಧ್ಯವಿರಲಿಲ್ಲ. ಹೆಚ್ಚೇಕೆ ಅವನ ತಲೆಗೂದಲಲ್ಲಿ ಬಂದಿದ್ದ ನರೆಯನ್ನು ಮುಚ್ಚಿಟ್ಟರೆ ಅವನು ಬದುಕಿದಂತೆ. ಅವನ ಬಣ

ಕಪ್ಪು. ಬ್ರಹ್ಮ ಮಾಡಿದ ಈ ಅನ್ಯಾಯ ಇಷ್ಟು ದಿನಗಳ ಮೇಲೆ ಈಗ ಅವನನ್ನು ಪೀಡಿಸುತ್ತಿತ್ತು. ಕುಮುವಿನ ಮನಸ್ಸು ಸುಮ್ಮನೆ ಅವನ ಹಿಡಿತದಿಂದ ಜಾರಿಹೋಗುತ್ತಿದೆ. ಅದಕ್ಕೆ ಕಾರಣ, ಮಧುಸೂದನನ ರೂಪ ಮತ್ತು ಯೌವನದ ಅಭಾವ. ಇದರಲ್ಲಿ ಅವನಿಗೆ ಸಂದೇಹವೇ ಇಲ್ಲ. ಈ ವಿಷಯದಲ್ಲೇ ಅವನು ಖಿನ್ನನಾಗಿ ಬಲಹೀನರಾಗಿದ್ದ ಚಟರ್ಜಿಗಳ ಮನೆಯ ಹೆಣ್ಣನ್ನು ಮದುವೆಯಾಗಲು ಬಯಸಿದ್ದ. ಆದರೆ ಬ್ರಹ್ಮ ಮೊದಲಿಂದಲೇ ಅವನ ಸೋಲನ್ನು ನಿರ್ಧರಿಸಿ ಇಟ್ಟಿರುವಂತಹ ಹೆಣ್ಣು ಅವನಿಗೆ ಸಿಕ್ಕುವುದೆಂದು ಅವನು ಯೋಚಿಸಿಯೇ ಇರಲಿಲ್ಲ. ಆದರೂ ತನ್ನ ಅಧಿಕಾರ ಯಾರ ಮೇಲೆ ನಡೆದೀತೋ ಅಂತಹ ಸಾಮಾನ್ಯ ಹೆಣ್ಣೇ ತನ್ನ ಅದೃಷ್ಟದಲ್ಲಿದ್ದರೆ ಸಾಕಾಗಿತ್ತೆಂದು ಅವನು ಹೇಳುವ ಹಾಗೂ ಇಲ್ಲ.

ಮಧುಸೂದನ ಒಂದೇ ಒಂದು ವಿಷಯದಲ್ಲಿ ಜಯವನ್ನು ಸಂಪಾದಿಸಲು ಶಕ್ತನಾಗಿದ್ದ. ಆ ಶಕ್ತಿಯನ್ನು ಅವನು ತನ್ನ ಅಪಾರವಾದ ಹಣದಿಂದ ಪಡೆದಿದ್ದನು. ಅದರಿಂದಲೇ ಇಂದು ಬೆಳಗ್ಗೆಯೇ ಮನೆಗೆ ಬಂದಿದ್ದ ಜವಾಹರೀ ವ್ಯಾಪಾರಿಯಿಂದ ಮೂರು ಉಂಗುರಗಳನ್ನು ಕೊಂಡು ಕೊಂಡಿದ್ದ. ಅವುಗಳಲ್ಲಿ ಕುಮುವಿಗೆ ಯಾವುದು ಒಪ್ಪಿಗೆಯಾಗುವುದೆಂದು ನೋಡಬಯಸಿದ್ದ. ಆ ಮೂರು ಉಂಗುರಗಳ ಪೆಟ್ಟಿಗೆಗಳನ್ನು ಜೇಬಿನಲ್ಲಿಟ್ಟು ಕೊಂಡು ಅವನು ತನ್ನ ಮಲಗುವ ಮನೆಗೆ ಹೋದ. ಒಂದು ಕೆಂಪಿನದು, ಒಂದು ಪಚ್ಚೆಯದು, ಒಂದು ವಜ್ರದ ಉಂಗುರ. ಮಧುಸೂದನ ಮನಸ್ಸಿನಲ್ಲೇ ಒಂದು ದೃಶ್ಯ ಕಲ್ಪಿಸಿಕೊಂಡು ನೋಡುತ್ತಿದ್ದ. ಅವನು ಮೊದಲು ಕೆಂಪಿನ ಉಂಗುರದ ಡಬ್ಬಿಯ ಮುಚ್ಚಳ ತೆರೆಯಲು ಕುಮುವಿನ ಆಸೆ ತುಂಬಿದ ಕಣ್ಣುಗಳು ಉಜ್ವಲವಾದವು. ಅನಂತರ ಪಚ್ಚೆಯುಂಗುರ. ಅದರಿಂದ ಕಣ್ಣುಗಳು ಮತ್ತೂ ಅರಳಿದುವು. ಆಮೇಲೆ ವಜ್ರದುಂಗುರ. ಅದರ ಬಹು ಬೆಲೆಯ ಹೊಳಪಿನಿಂದ ರಮಣಿಯ ವಿಸ್ಮಯಕ್ಕೆ ಎಲ್ಲೆಯೇ ಇಲ್ಲ. ಮಧುಸೂದನ ರಾಜನ ಠೀವಿಯಿಂದ "ನಿನಗೆ ಯಾವುದು ಒಪ್ಪಿಗೆಯೋ ಅದನ್ನು ತೆಗೆದುಕೋ" ಎಂದ. ವಜ್ರವನ್ನೇ ಕುಮು ಆಯ್ದುಕೊಳ್ಳಲು ಅವಳ ಆಸೆಯ ಅಲ್ಪ ಸಾಹಸಕ್ಕೆ ನಕ್ಕು, ಹಾಸ್ಯಮಾಡಿ

ಮಧುಸೂದನ ಮೂರು ಉಂಗುರಗಳನ್ನೂ ಕುಮುವಿನ ಮೂರು ಬೆರಳು ಗಳಿಗೆ ತೊಡಿಸಿದನು. ಅನಂತರವೇ ರಾತ್ರಿ ಶಯ್ಯಾಗೃಹಕ್ಕೆ ಅವನಿಗೆ ಸ್ವಾಗತ ದೊರೆಯಿತು.

ಇಷ್ಟು ಉಪಚಾರವನ್ನೂ ರಾತ್ರಿ ಊಟವಾದ ಮೇಲೆ ಮಾಡಬೇಕೆಂದು ಮಧುಸೂದನನು ಅಂದುಕೊಂಡಿದ್ದನು. ಆದರೆ ಮಧ್ಯಾಹ್ನದ ಆ ರಗಳೆ ರಾದ್ಧಾಂತವಾದ ಮೇಲೆ ಮಧುಸೂದನನಿಗೆ ಸುಮ್ಮನಿರಲಾಗ ಲಿಲ್ಲ. ರಾತ್ರಿಯ ನಾಟಕವನ್ನು ಮಧ್ಯಾಹ್ನವೇ ಮುಗಿಸಬೇಕೆಂದು ಅಂತಃಪುರಕ್ಕೆ ಹೋದ.

ಹೋಗಿ ನೋಡಿದಾಗ ಕುಮು, ಒಂದು ತವರದ ಪೆಟ್ಟಿಗೆ ತೆರೆದು ಕೊಂಡು ಮಲಗುವ ಮನೆಯ ನೆಲದ ಮೇಲೆ ಕುಳಿತಿದ್ದಳು. ಸುತ್ತಲೂ ಬಟ್ಟೆ ಬರೆ ಕೆದರಿ ಹರಡಿತ್ತು.

" ಇದೇನು ಸಮಾಚಾರ ಎಲ್ಲಿಗಾದರೂ ಹೋಗುವೆಯೋನು ? "

" ಹೂಂ "

" ಎಲ್ಲಿಗೆ ? "

" ರಜಬ್‌ಪುರಕ್ಕೆ "

" ಅದರ ಅರ್ಥವೇನು ? "

" ನಿನ್ನ ಡ್ರಾಯರ್ ತೆರೆದದ್ದಕ್ಕೆ ಮೈದುನನಿಗೆ ಶಿಕ್ಷೆ ವಿಧಿಸಿರುವೆ ಯಂತೆ. ಆ ಶಿಕ್ಷೆ ನನಗೆ ಆಗಬೇಕಾದದ್ದು— "

" ಹೋಗಬೇಡ " ಎಂದು ಬಲವಂತ ಮಾಡುವುದು ಮಧುಸೂದ ನನ ಸ್ವಭಾವಕ್ಕೆ ತೀರ ವಿರುದ್ಧ. ಅವನ ಮನಸ್ಸಿನಲ್ಲಿ ಮೊದಲು—" ಹೋದರೆ ಹೋಗಲಿ, ನೋಡೋಣ, ಎಷ್ಟು ದಿನ ತಾನೆ ಇರುವಳು, ನೋಡೋಣ " ಎಂದು ಅಂದುಕೊಂಡನು. ಕ್ಷಣಕಾಲವೂ ವಿಳಂಬ ಮಾಡದೆ ದಡದಡನೆ ಹಿಂದಿರುಗಿ ಹೊರಟು ಹೋದನು.

೩೬

ಮಧುಸೂದನ ಹೊರಗೆ ಹೋಗಿ ನವೀನನನ್ನು ಕರೆದು, "ದೊಡ್ಡ ಯಜಮಾನಿಯನ್ನು ನೀವುಗಳು ಹುಚ್ಚುಹುಚ್ಚಾಗಿ ಕುಣಿಸುವಿರಿ ಅಲ್ಲವೆ" ಎಂದನು.

"ಅಣ್ಣಾ, ನಾವುಗಳಂತೂ ನಾಳೆಯೇ ಹೋಗುತ್ತೇವೆ. ಇನ್ನು ನಿನ್ನ ಹತ್ತಿರ ಹೆದರಿ ಹೆದರಿ ತಗ್ಗಿ ಮಾತನಾಡಲಾರೆ. ಇದೋ, ಇವೊತ್ತು ನಾನು ಸ್ಪಷ್ಟವಾಗಿ ಹೇಳುವೆ. ದೊಡ್ಡ ಯಜಮಾನಿಗೆ ಹುಚ್ಚು ಹಿಡಿಸಲು ಪ್ರಪಂಚದಲ್ಲಿ ಬೇರೆ ಯಾರೂ ಬೇಕಾಗಿಲ್ಲ. ನೀನು ಒಬ್ಬನೇ ಸಾಕು. ನಾವುಗಳು ಇದ್ದರೆ ಆಗ ಏನಾದರೂ ಸಮಾಧಾನ ಮಾಡುತ್ತಿದ್ದೆವು. ಆದರೆ ಇದು ನಿನಗೆ ಸಹಿಸಲಾಗಲಿಲ್ಲ."

ಮಧುಸೂದನ ಗರ್ಜಿಸುತ್ತ, "ದೊಡ್ಡಸ್ತಿಕೆ ತೋರಿಸಬೇಡ. ರಜಬ್ ಪುರಕ್ಕೆ ಹೋಗುವ ಮಾತು ನೀವುಗಳೇ ಅವಳಿಗೆ ಕಲಿಸಿಕೊಟ್ಟಿರುವಿರಿ" ಎಂದನು.

"ಈ ಮಾತು ಯೋಚಿಸುವುದೇ ಸಾಧ್ಯವಿಲ್ಲದಾಗ ಕಲಿಸಿಕೊಡುವುದಾದರೂ ಹೇಗೆ?"

"ನೋಡು, ಈ ವಿಷಯವನ್ನೆತ್ತಿಕೊಂಡು ಅವಳನ್ನು ಕುಣಿಸುವಿರಾದರೆ ನಿಮ್ಮುಗಳ ಗತಿ ನೆಟ್ಟಗಾಗದು. ಸ್ಪಷ್ಟವಾಗಿ ಹೇಳಿದ್ದೇನೆ."

"ಅಣ್ಣಾ, ಈ ಮಾತೆಲ್ಲಾ ಯಾರಿಗೆ ಹೇಳುವೆ? ಯಾರ ಹತ್ತಿರ ಹೇಳಿದರೆ ಪ್ರಯೋಜನವಾಗುವುದೊ ಅವರಿಗೆ ಹೇಳು."

"ನೀವುಗಳು ಏನೂ ಹೇಳಲಿಲ್ಲವೆ?"

"ಇದೋ ನಿನ್ನ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಆ ಮಾತನ್ನು ನಾವು ಯೋಚಿಸಿಯೂ ಇಲ್ಲ."

"ಯಜಮಾನಿ ಏನಾದರೂ ಹಟಹಿಡಿದು ಕುಳಿತಳಾದರೆ ನೀವುಗಳು ಏನು ಮಾಡುವಿರಿ?"

"ನಿನ್ನನ್ನು ಕರೆಯುತ್ತೇನೆ. ನಿನ್ನ ಭಲ್ಯದವರು, ಬಂದೂಕದವರು, ಪ್ಯಾದೆಗಳು ಇದ್ದಾರೆ. ನೀನು ತಡೆಯಬಲ್ಲೆ. ಆಮೇಲೆ ನಿನ್ನ ಶತ್ರುಪಕ್ಷದವರು ಈ ಯುದ್ಧ ಸುದ್ದಿಯನ್ನು ಪತ್ರಿಕೆಯಲ್ಲಿ ಪ್ರಚಾರಮಾಡಿದರೆ ನಡುಕಲ-ಸೊಸೆಯಮೇಲೆ ಸಂಶಯಪಟ್ಟು ಸುಮ್ಮನಿರಬೇಡ"

ಮಧುಸೂದನ ಪುನಃ ಅವನನ್ನು ಗದರಿಸಿ "ಸಾಕು, ಸುಮ್ಮನಿರು. ದೊಡ್ಡ ಯಜಮಾನಿಯೇನಾದರೂ ರಜಬ್‌ಪುರಕ್ಕೆ ಹೋಗಬೇಕಾದರೆ ಹೋಗಲಿ. ನಾನೇನೂ ಅವಳನ್ನು ತಡೆಯುವುದಿಲ್ಲ" ಎಂದನು.

"ನಾವು ಅವಳ ಊಟ ಉಪಚಾರ ನಡೆಸುವುದು ಹೇಗೆ?"

"ನಿನ್ನ ಹೆಂಡತಿಯ ಒಡವೆ ಆಭರಣಗಳನ್ನು ಮಾರಿ ನಡಸು, ನಡೆ ಹೋಗಾಚೆ! ಮನೆಯಿಂದ ಹೊರಟು ಹೋಗು!"

ನವೀನ ಹೊರಟುಹೋದ. ಮಧುಸೂದನ "ಯೂ-ಡಿ,-ಕಲೊನಿ" ನಲ್ಲಿ ತೋಯಿಸಿದ ಪಟ್ಟೆಯನ್ನು ಹಣೆಯ ಮೇಲಿಟ್ಟುಕೊಂಡು ಮತ್ತೊಮ್ಮೆ ಆಫೀಸಿಗೆ ಹೊರಡುವ ಸಂಕಲ್ಪವನ್ನು ದೃಢಪಡಿಸತೊಡಗಿದ.

ನವೀನನಿಂದ, ಮೋತಿಯ ತಾಯಿ, ಸಂಗತಿಯನ್ನೆಲ್ಲ ಕೇಳಿ, ಕುಮುವಿನ ಮಲಗುವ ಮನೆಗೆ ಓಡಿದಳು. ನೋಡಿದರೆ ಆಗಲೂ ಅವಳು ಬಟ್ಟೆ ಬರೆಗಳನ್ನು ಎತ್ತಿಡಲು ಮಡಿಸುತ್ತಿದ್ದಳು. "ಇದೇನು ಮಾಡುತ್ತಿರುವೆ ಅಕ್ಕ?"

"ನಿಮ್ಮ ಸಂಗಡ ಬರುತ್ತೇನೆ."

"ನಿನ್ನನ್ನು ಕರೆದುಕೊಂಡು ಹೋಗಲು ನಮ್ಮಿಂದ ಸಾಧ್ಯವೇನು?"

"ಯಾಕೆ?"

"ದೊಡ್ಡ ಯಜಮಾನರು ಆಗ ನಮ್ಮ ಮುಖ ನೋಡರು."

"ಹಾಗಾದರೆ ನನ್ನನ್ನೂ ಅವರು ನೋಡರು."

"ಅದೇನೋ? ಆದ ಹಾಗೆ ಆಗಲಿ. ಆದರೆ ನಾವುಗಳು ಬಹಳ ಬಡವರಲ್ಲ?"

"ನಾನೂ ಬಡವಳೇ. ನನಗೂ ನಡೆಯುತ್ತೆ."

" ಜನ ದೊಡ್ಡ ಯಜಮಾನರ ವಿಷಯವಾಗಿ ನಗುವರು."

" ಹಾಗೆಂದು ನನಗಾಗಿ ನೀವು ಶಿಕ್ಷೆ ಪಡೆಯುವುದೆ, ಇದನ್ನು ನಾನು ಸಹಿಸಲಾರೆ"

" ಆದರೆ, ಅಕ್ಕ. ನಿನಗಾಗಿ ಶಿಕ್ಷೆಯಲ್ಲವಲ್ಲ, ಇದು ನಮ್ಮ ಪಾಪಕ್ಕಾಗಿಯೇ."

" ಯಾವುದರ ಪಾಪ ನಿಮ್ಮದು ?"

" ನಾವೆ ತಾನೆ ನಿನಗೆ ಸುದ್ದಿ ಕೊಟ್ಟದ್ದು."

" ನಾನು ಒಂದು ಸಮಯ ಸುದ್ದಿ ತಿಳಿಯ ಬಯಸಿದರೆ ಸುದ್ದಿ ತಿಳಿಸುವುದು ಅಪರಾಧವೇನು ?"

" ಯಜಮಾನರಿಗೆ ಹೇಳದೆ ತಿಳಿಸಿದ್ದು ಅಪರಾಧ."

" ಒಳ್ಳೆಯದೇ ಆಯಿತು. ನೀವೂ ಅಪರಾಧ ಮಾಡಿದಿರಿ, ನಾನೂ ಮಾಡಿರುವೆ ; ಒಂದುಗೂಡಿಯೇ ಫಲ ಅನುಭವಿಸೋಣ."

" ಸರಿ. ಒಳ್ಳೆಯದು. ಹಾಗಾದರೆ ನಿನಗಾಗಿ ಪಲ್ಲಕ್ಕಿಗೆ ಹೇಳಿ ಕಳುಹಿಸುವೆನು. ನಿನಗೆ ಅಡ್ಡಿ ಮಾಡಕೂಡದೆಂದು ದೊಡ್ಡ ಯಜಮಾನರ ಅಪ್ಪಣೆಯಾಗಿದೆ. ಈಗ ಮತ್ತೆ ನಿನ್ನ ಸಾಮಾನುಗಳನ್ನು ಅಣಿಮಾಡೋಣ. ಅವುಗಳನ್ನು ಕಟ್ಟಿ ಕಟ್ಟಿ ಬೆವರುತ್ತಿರುವೆಯಲ್ಲಾ—"

ಇಬ್ಬರೂ ಅಣಿಮಾಡತೊಡಗುವರು.

ಈ ಸಮಯದಲ್ಲಿ ಹೊರಗಡೆ 'ಚರ್' 'ಚರ್' ಎಂದು ಎಕ್ಕಡದ ಸದ್ದಾಯಿತು. ಮೋತಿಯಾತಾಯಿ ಓಡಿದಳು.

ಮಧುಸೂದನ ಕೋಣೆಯೊಳಗೆ ಕಾಲಿಟ್ಟವನೇ, " ಯಜಮಾನೀ, ನೀನು ಹೋಗುವುದು ಸಾಧ್ಯವಿಲ್ಲ."

" ಏಕೆ ಸಾಧ್ಯವಿಲ್ಲ ?"

" ನಾನು ಅಪ್ಪಣೆ ಮಾಡುತ್ತೇನೆ."

“ ಸರಿ. ಹಾಗಾದರೆ ಹೋಗುವುದಿಲ್ಲ. ಆಮೇಲೆ, ಬೇರೆ ಏನು ಅಪ್ಪಣೆ ? ”

“ ನಿನ್ನ ಈ ಸಾಮಾನು ಕಟ್ಟುವುದನ್ನು ನಿಲ್ಲಿಸು. ”

“ ಇದೋ ನಿಲ್ಲಿಸಿದೆ. ” ಎಂದಳು. ಕುಮು ಎದ್ದು ಕೋಣೆಯಿಂದ ಹೊರಕ್ಕೆ ಹೊರಟಳು. ಮಧುಸೂದನ ‘ ಇದೋ ಕೇಳು, ಕೇಳು’ ಎಂದನು.

ಆ ಕ್ಷಣ ಕುಮು ಹಿಂದಿರುಗಿದವಳು “ ಏನು ಹೇಳು ? ” ಎಂದಳು.

ಹೆಚ್ಚಾಗಿ ಹೇಳಬೇಕಾದುದು ಏನೂ ಇರಲಿಲ್ಲ. ಆದರೂ ಸ್ವಲ್ಪ ಯೋಚಿಸಿ “ ನಿನಗೋಸ್ಕರ ಉಂಗುರ ತಂದಿದ್ದೇನೆ ” ಎಂದ.

“ ನನಗೆ ಯಾವ ಉಂಗುರದ ಆಸೆಯಿತ್ತೋ ಅದನ್ನು ಇಟ್ಟು ಕೊಳ್ಳಲು ನೀನು ಅಡ್ಡಿ ಮಾಡಿರುವೆ ; ಮತ್ತೆ ನನಗೆ ಉಂಗುರದ ಆವಶ್ಯ ಕತೆಯಿಲ್ಲ. ”

“ ಒಂದು ಸಲ ನೋಡಿಯಾದರೂ ನೋಡು — ”

ಮಧುಸೂದನ ಒಂದೊಂದಾಗಿ ಪೆಟ್ಟಿಗೆಗಳನ್ನು ತೆರೆದು ತೋರಿಸಿದನು. ಕುಮು ಒಂದು ಮಾತನ್ನೂ ಆಡಲಿಲ್ಲ.

“ ಇದರಲ್ಲಿ ಯಾವುದು ನಿನಗೆ ಒಪ್ಪಿಗೆಯೋ ಅದನ್ನೇ ನೀನೂ ಹಾಕಿಕೊಳ್ಳಬಹುದು. ”

“ ನೀನು ಯಾವುದಕ್ಕೆ ಅಪ್ಪಣೆ ಕೊಡುವೆಯೋ ಅದನ್ನೇ ಹಾಕಿಕೊಳ್ಳುವೆ. ”

“ ನಾನಂತೂ ಮೂರೂ ಮೂರು ಬೆರಳಿಗೆ ಒಪ್ಪುವುದೆಂದು ಎಣಿಸುತ್ತೇನೆ. ”

“ ಅಪ್ಪಣೆ ಮಾಡು, ಮೂರನ್ನೂ ಹಾಕಿಕೊಳ್ಳುವೆ. ”

“ ನಾನೇ ತೊಡಿಸುವೆನು. ”

“ ತೊಡಿಸು. ”

ಮಧುಸೂದನ ತೊಡಿಸಿದ.

ಕುಮು "ಇನ್ನೇನಾದರೂ ಅಪ್ಪಣೆಯುಂಟೋ" ಎಂದಳು.

"ಯಜಮಾನೀ, ಕೋಪಿಸಿಕೊಂಡಿರುವೆಯೇನು?"

"ನಾನು ಸ್ವಲ್ಪವೂ ಕೋಪಗೊಂಡಿಲ್ಲ" ಎಂದು ಅಂದವಳೇ ಕುಮು ಕೋಣೆಯಿಂದ ಹೊರಗೆ ಹೊರಟು ಹೋದಳು.

ಮಧುಸೂದನ ಅಸ್ಥಿರನಾಗಿ "ಓ! ಎಲ್ಲಿಗೆ ಹೊರಟೆ ಕೇಳು, ಕೇಳು."

ಕುಮು ಒಡನೆಯೇ ಹಿಂದಿರುಗಿ ಬಂದು "ಏನು?" ಎಂದಳು.

ಏನೋ ಹೇಳಬೇಕೆಂದು ಯೋಚಿಸಿ ಹೊಳೆಯಲಿಲ್ಲ.

ಮಧುಸೂದನನ ಮುಖ ಕೆಂಪೇರಿತು. ಗದರಿಸಿಕೊಂಡನು. "ಒಳ್ಳೆಯದು ಹೋಗು" ಎಂದನು. ರೇಗಿ "ಉಂಗುರಗಳನ್ನು ಹಿಂದಕ್ಕೆ ಕೊಟ್ಟು ಬಿಡು" ಎಂದನು.

ಆ ಕ್ಷಣವೇ ಕುಮು ಮೂರು ಉಂಗುರಗಳನ್ನೂ ಕಳಚಿ ಟೇಪಾಯಿಯ ಮೇಲಿಟ್ಟಳು.

ಮಧುಸೂದನ ಗದರಿಸಿಕೊಂಡು "ಹೊರಟುಹೋಗು" ಎಂದ.

ಕುಮು ಒಡನೆ ಹೊರಟು ಹೋದಳು.

ಈ ಬಾರಿ ತಾನು ಆಫೀಸಿಗೆ ಹೋಗಿಯೇ ತೀರುವುದಾಗಿ ಮಧುಸೂದನ ದೃಢಪ್ರತಿಜ್ಞೆ ಮಾಡಿದ. ಆಗ ಕೆಲಸದ ಹೊತ್ತು ಮೀರಿತ್ತು. ಆಂಗ್ಲ ಅಧಿಕಾರಿಗಳೆಲ್ಲರೂ ಟೆನಿಸ್ ಆಡಲು ಹೊರಟು ಹೋಗಿದ್ದರು. ಮೇಲಂತೆಸ್ತಿನ ಗುಮಾಸ್ತರುಗಳು ಹೊರಡುವುದರಲ್ಲಿದ್ದರು. ಈ ಸಮಯದಲ್ಲಿ ಮಧುಸೂದನ ಆಫೀಸಿಗೆ ಬಂದ ಕೂಡಲೆ ಒಮ್ಮೆಗೆ ಬಲು ಪಟ್ಟು ಹಿಡಿದು ಕೆಲಸಮಾಡತೊಡಗಿದ. ಆರು ಹೊಡೆಯಿತು. ಏಳಾಯಿತು. ಎಂಟು ಹೊಡೆಯಿತು. ಆಗ ಲೆಕ್ಕಪತ್ರವನ್ನು ಮುಚ್ಚಿಟ್ಟು ಹೊರಟ.

೩೭

ಇಷ್ಟು ದಿನ ಮಧುಸೂದನನ ಜೀವನಯಾತ್ರೆಯಲ್ಲಿ ಎಂದೂ ಒಂದು ಎಳೆಯೂ ಕಿತ್ತು ಹೋಗಿರಲಿಲ್ಲ. ಪ್ರತಿದಿನದ ಪ್ರತಿಯೊಂದು ಘಳಿಗೆಗೂ

ನಿಯಮ ಏರ್ಪಟ್ಟಿತ್ತು. ಇಂದು ಹಠಾತ್ತಾಗಿ ಅನಿಶ್ಚಿತ ಎನ್ನುವುದು ತಲೆ ಯಿಟ್ಟು ಎಲ್ಲವನ್ನೂ ಅಸ್ತವ್ಯಸ್ತಮಾಡಿಬಿಟ್ಟಿದೆ. ಇದೋ ಈಗ ಆಫೀಸಿ ನಿಂದ ಮನೆಯ ಕಡೆಗೆ ಹೋಗುತ್ತಿದ್ದಾನೆ. ರಾತ್ರಿ ಯಾವ ವಿಧದಲ್ಲಿ ಕಳೆ ಯುವುದೆನ್ನುವುದು ನಿಶ್ಚಯವಿಲ್ಲ. ಮಧುಸೂದನ ಅಂಜುತ್ತ ಅಂಜುತ್ತ ಮನೆಗೆ ಬಂದ. ಮೆಲ್ಲ ಮೆಲ್ಲನೆ ಊಟಮಾಡಿದ. ಊಟಮಾಡಿ, ಆಗಲೇ ಮಲಗುವ ಮನೆಗೆ ಹೋಗಲು ಧೈರ್ಯವಾಗಲಿಲ್ಲ. ಮೊದಲು ಸ್ವಲ್ಪ ಹೊತ್ತು ಹೊರಗೆ ದಕ್ಷಿಣ ದಿಕ್ಕಿನ ವರಾಂಡದಲ್ಲಿ ಅತ್ತಿತ್ತ ತಿರುಗಾಡತೊಡ ಗಿದ. ಮಲಗುವ ಸಮಯ; ಒಂಭತ್ತು ಹೊಡೆಯಲು ಆಗ ಅಂತಃ ಪುರಕ್ಕೆ ಹೋದ. "ಕಾಲಕ್ಕೆ ಸರಿಯಾಗಿ ಹಾಸಿಗೆಯಲ್ಲಿ ಮಲಗಬೇಕು. ಬೇರೆ ಏನೂ ಮಾಡೆನು" ಎಂದು ಅಂದು ದೃಢ ಪ್ರತಿಜ್ಞೆ ಮಾಡಿದ್ದ. ಬರಿ ದಾಗಿದ್ದ ಮಲಗುವ ಮನೆಗೆ ಹೋದವನೇ, ಸೊಳ್ಳೆಯಪರದೆಯನ್ನು ಸರಿಸಿ ಧೊಪ್ಪನೆ ಹಾಸಿಗೆಯ ಮೇಲೆ ಉರುಳಿದ. ನಿದ್ರೆಬರಲಿಲ್ಲ. ರಾತ್ರಿ ಬೆಳೆ ದಂತೆಲ್ಲಾ, ಉಪವಾಸವಿದ್ದ ಜೀವ, ಕತ್ತಲೆಯಲ್ಲಿ ಮೆಲ್ಲ ಮೆಲ್ಲನೆ ಹೊರಗೆ ಬರುವುದು. ಆಗ ಅದನ್ನು ಅಟ್ಟುವವರು ಯಾರೂ ಇಲ್ಲ. ಪಹರೆಯ ವರೆಲ್ಲ ದಣಿದಿರುವರು.

ಗಡಿಯಾರದಲ್ಲಿ ಒಂದು ಗಂಟೆ ಹೊಡೆಯಿತು. ಕಣ್ಣಿಗೆ ಸ್ವಲ್ಪವೂ ನಿದ್ರೆ ಹತ್ತಲಿಲ್ಲ. ಇನ್ನು ಇರಲಾರದೆ ಹೋದ. ಹಾಸಿಗೆಯಿಂದ ಎದ್ದು ಕುಮು ಎಲ್ಲಿ ಎಂದು ಯೋಚಿಸತೊಡಗಿದ. ಬಂಕೂಫರಾಶನಿಗೆ ಫರಾಶ್ ಖಾನೆ ಯನ್ನು ಬೀಗ ಹಾಕಿ ಮುಚ್ಚಿರಬೇಕೆಂದು ಕಟ್ಟಪ್ಪಣೆಯಾಗಿತ್ತು. ಬಿಸಿಲು ಮಹಡಿ ಸುತ್ತಿ ಬಂದ. ಯಾರೂ ಇರಲಿಲ್ಲ. ಕಾಲಿನ ಮೆಟ್ಟನ್ನು ಕಳಚಿಟ್ಟು, ಕೆಳಗಿನ ವರಾಂಡದ ಮಾರ್ಗವಾಗಿ ಮೆಲ್ಲನೆ ನಡೆಯತೊಡಗಿದ. ಮೋತಿಯ ತಾಯಿಯ ಕೊಟಡಿಯ ಇದಿರಿನಲ್ಲಿ ಬಂದಾಗ ಮಾತನಾಡುವ ದನಿ ಕೇಳಿಸಿತು. ಮರುದಿನ ಹೊರಟು ಹೋಗಲಿರುವುದರಿಂದ ಗಂಡಹೆಂಡಿ ರಲ್ಲಿ ಆಲೋಚನೆ ನಡೆಯುತ್ತಿದ್ದಿರಬಹುದು ಎನ್ನಿಸಿತು. ಬಾಗಿಲ ಬಳಿ ಕಿವಿಗೊಟ್ಟು ಕೇಳಿದ. ಇಬ್ಬರಲ್ಲಿಯೂ "ಗುಯ್ ಗುಯ್" ಎಂದು ಮಾತು ಕತೆ ನಡೆಯುತಿತ್ತು. ಮಾತು ಕೇಳಲು ಸಾಧ್ಯವಿರಲಿಲ್ಲ. ಆದರೆ ಎರಡೂ ಹೆಂಗಸರ ಕೊರಳೆಂದು ಖಂಡಿತ ತಿಳಿಯುತ್ತಿತ್ತು! ಹಾಗಾದರೆ ವಿಚ್ಛೇದದ

ಹಿಂದಿನ ರಾತ್ರಿ ಮೋತಿಯ ತಾಯೊಡನೆ ಕುಮುವಿನ ಹೃದಯದ ಮಾತು ಕತೆ ನಡೆಯುತ್ತಿದೆ ಎಂದುಕೊಂಡನು. ಕೋಪದಿಂದ, ಕ್ಷೋಭದಿಂದ ಬಲವಾಗಿ ಝಾಡಿಸಿ, ಒದ್ದು, ಕದ ತೆರೆದು ಗೊಂದಲ ಎಬ್ಬಿಸುವ ಮನಸ್ಸಾಯಿತು. ಆದರೆ ಈಗ ನವೀನನೆಲ್ಲಿ? ಖಂಡಿತ ಹೊರಗೆ ಹೋಗಿರ ಬೇಕು ಎಂದು ಊಹಿಸಿದನು.

ಅಂತಃಪುರದಿಂದ ಹೊರಗೆ ಹೋಗಲು ಪರದೆ ಹಾಕಿದ ಹಾದಿಯಲ್ಲಿ ಒಂದು ಲಾಂದ್ರದ ಮಿಣುಕು ದೀಪ ಉರಿಯುತ್ತಿತ್ತು. ಅಲ್ಲಿಗೆ ಬಂದವನೇ ಮಧುಸೂದನ, ಮೈಮೇಲೆ ಒಂದು ಕೆಂಪುಶಾಲು ಹೊದೆದುಕೊಂಡು ಶ್ಯಾಮಾಸುಂದರಿ ನಿಂತಿರುವುದನ್ನು ಕಂಡನು. ಅವಳಿದಿರಿನಲ್ಲಿ ನಾಚಿಕೆ ಯಾಗಲು ಕೋಪದಿಂದ ಕಿಡಿಕಿಡಿಯಾದನು. "ರಾತ್ರಿ ಇಷ್ಟು ಹೊತ್ತಿ ನಲ್ಲಿ ಇಲ್ಲೇನು ಮಾಡುತ್ತಿರುವೆ?" ಎಂದು ಕೇಳಿದನು.

ಶ್ಯಾಮಾ ಉತ್ತರ ಕೊಟ್ಟಳು. "ಮಲಗಿದ್ದೆ. ಹೊರಗೆ ಹೆಜ್ಜೆಯ ಸಪ್ಪು ಕೇಳಿ ಭಯವಾಯಿತು. ಏನೋ ಹೇಗೋ ಎಂದು—"

ಮಧುಸೂದನ ಗದರಿಸಿಕೊಂಡು "ಅಧಿಕ ಪ್ರಸಂಗತನ ಹೆಚ್ಚಿಬಿಟ್ಟ ಹಾಗೆ ಕಾಣುತ್ತೆ. ನನ್ನ ಹತ್ತಿರ ಈ ಆಟವೆಲ್ಲ ಆಡಬೇಡ. ಎಚ್ಚರಿಕೆ! ಹೋಗು ಮಲಗು" ಎಂದನು.

ಶ್ಯಾಮಾಸುಂದರಿ ಕೆಲವು ದಿನಗಳಿಂದ ಸ್ವಲ್ಪಸ್ವಲ್ಪವಾಗಿ ತನ್ನ ಸಾಹಸದ ಕ್ಷೇತ್ರವನ್ನು ವಿಸ್ತರಿಸುತ್ತ ವಿಸ್ತರಿಸುತ್ತ ನಡೆದಿದ್ದಳು. ಆ ವೇಳೆ ಯಲ್ಲಿ ಸರಿಯಲ್ಲದ ಜಾಗದಲ್ಲಿ ಹೆಜ್ಜೆ ಇಟ್ಟೆನೆಂದು, ಇಂದು ಅವಳಿಗೆ ಅರಿ ವಾಯಿತು. ಹೊರಟಿದ್ದವಳು ಮತ್ತೆ ಹಿಂದಿರುಗಿ ನಿಂತುಕೊಂಡು "ಆಟ ಏನೂ ಆಡುತ್ತಿಲ್ಲ. ಇಲ್ಲಿಯ ಸ್ಥಿತಿ ನೋಡುತ್ತಿರುವೆನು. ಅದರಿಂದ ಕಣ್ಣಿಗೆ ನಿದ್ರೆ ಹತ್ತುವುದಿಲ್ಲ. ನಾವುಗಳಂತೂ ಇವತ್ತು ಬಂದವರಲ್ಲ. ಎಷ್ಟೋ ದಿನದ ಸಂಬಂಧ, ನಾವುಗಳು ಹೇಗೆ ತಾನೆ ಸಹಿಸಿಯೇವು" ಎಂದು ಹೇಳಿ ಶ್ಯಾಮಾ ವೇಗವಾಗಿ ಹೆಜ್ಜೆಯಿಡುತ್ತ ಹೊರಟು ಹೋದಳು.

ಮಧುಸೂದನ ಒಂದು ಕ್ಷಣ ತೆಪ್ಪನೆ ನಿಂತಿದ್ದ. ಆಮೇಲೆ ಹೊರ ಮನೆಗೆ ಹೋದ. ನೆಟ್ಟಗೆ ಪಹರೆಯವನ ಇದಿರಿಗೆ ಬಂದು ಸೇರಿದ.

ಅವನು ಆಗ ಗಸ್ತು ತಿರುಗಲು ಹೊರಟಿದ್ದ. ಮಧುಸೂಧನನು ಏರ್ಪಡಿಸಿದ ಕಠಿಣವಾದ ನಿಯಮದ ದೆಸೆಯಿಂದ, ತನ್ನ ಮನೆಯಲ್ಲೇ ಯಾರಿಗೂ ಗೊತ್ತಿಲ್ಲದಂತೆ ತಿರುಗಾಡಲು ಅವನಿಗೇ ಎಡೆಯಿರಲಿಲ್ಲ. ನಾಲ್ಕು ದಿಕ್ಕಿನಲ್ಲೂ ಕಾವಲುಗಾರರು ಎಚ್ಚರದಿಂದಿದ್ದರು. ರಾಜಾಬಹದ್ದೂರರು ರಾತ್ರಿ ಈ ವೇಳೆಯಲ್ಲಿ ಹಾಸಿಗೆ ಬಿಟ್ಟು ಬರಿಯ ಕಾಲಿನಲ್ಲಿ ಕತ್ತಲಿನಲ್ಲಿ ಹೊರಗಿನ ವರಾಂಡದಲ್ಲಿ ದೆವ್ವದಂತೆ ಹೊರಬಿದ್ದಿರುವದು ಅಭೂತಪೂರ್ವವಾದುದು. ಪಹರೆಯವನು ಮೊದಲು ದೂರದಿಂದ ಗುರುತಿಸಲಾರದೆ ಹೋಗಲು, "ಯಾರದು ?" ಎಂದು ಕೂಗುಹಾಕಿ, ಹತ್ತಿರ ಬಂದು, ರಾಜಾಬಹದ್ದೂರರನ್ನು ಕಂಡು, ನಾಲಗೆ ಕಚ್ಚಿಕೊಂಡು, ದೊಡ್ಡ ನಮಸ್ಕಾರ ಮಾಡಿದ. "ರಾಜಾ ಬಹದ್ದೂರರೇ, ಏನಾದರೂ ಅಪ್ಪಣೆ ಉಂಟೇ ?" ಎಂದನು.

ಮಧುಸೂದನ "ಎಲ್ಲ ಸರಿಯಾಗಿದೆಯೋ ಇಲ್ಲವೊ ನೋಡಲು ಬಂದೆ" ಎಂದ. ಈ ಮಾತು ಮಧುಸೂದನನ ವಿಷಯದಲ್ಲಿ ಅಸಂಗತವಾಗಿರಲಿಲ್ಲ.

ಅನಂತರ ಮಧುಸೂದನ ಬೈಠಕ್‌ಖಾನೆಗೆ ಹೋಗಿ ನೋಡಲು ತಾನು ಎಣಿಸಿದ್ದಂತೆಯೇ ಇತ್ತು. ನವೀನನು ಕೂಡುವ ಗದ್ದಿಗೆಯ ಮೇಲೆ ದಿಂಬು ಒರಗಿಕೊಂಡು ನಿದ್ರೆಮಾಡುತ್ತಿದ್ದ. ಮಧುಸೂದನ ಕೊಟಡಿಯಲ್ಲಿ ಗ್ಯಾಸ್ ದೀಪವೊಂದನ್ನು ಹಚ್ಚಿದ. ಅದರಿಂದಲೂ ನವೀನನ ನಿದ್ರೆ ತಿಳಿಯಲಿಲ್ಲ. ಅವನನ್ನು ತಟ್ಟಲು ಅವನು ದಡಬಡನೆ ಎಚ್ಚರಗೊಂಡು ಎದ್ದು ಕುಳಿತ. ಮಧುಸೂದನ ಅವನಿಂದ ಯಾವ ತರಹದ ವಿವರವನ್ನೂ ಕೇಳದೆಯೆ "ಈಗಲೇ ಹೋಗು, ಯಜಮಾನಿಗೆ, ಅವಳನ್ನು ನಾನು ಮಲಗುವ ಮನೆಗೆ ಕರೆದೆನೆಂದು ಹೇಳು" ಎಂದ. ಹೀಗೆ ಹೇಳಿ, ಕೂಡಲೆ ಅಂತಃಪುರಕ್ಕೆ ಹೊರಟು ಹೋದ.

ಸ್ವಲ್ಪ ಹೊತ್ತಿನಲ್ಲೇ ಕುಮು ಮಲಗುವ ಮನೆಗೆ ಬಂದಳು. ಮಧುಸೂದನ ಅವಳ ಮುಖ ನೋಡಿದ. ಸಾಧಾರಣವಾದ ಕೆಂಪಂಚಿನ ಸೀರೆಯೊಂದನ್ನು ಕಟ್ಟಿಕೊಂಡಿದ್ದಳು. ಸೀರೆಯ ಸೆರಗನ್ನು ತಲೆಯ ಮೇಲೆ ಎಳೆದುಕೊಂಡಿದ್ದಳು. ನಿರ್ಜನವಾದ ಆ ಕೊಟಡಿಯ ಮಂಕಾದ ಬೆಳಕಿನಲ್ಲಿ

ಅದೆಂತಹ ರೂಪದ ಆವಿರ್ಭಾವ ! ಕುಮು ಕೋಣೆಯ ಒಂದು ಅರುಗಿನಲ್ಲಿದ್ದ ಸೋಫಾದ ಮೇಲೆ ಕುಳಿತಳು.

ಮಧುಸೂದನ ಆ ಕ್ಷಣ ಬಂದು ಅವಳ ಕಾಲಬಳಿ ನೆಲದ ಮೇಲೆ ಕುಳಿತ. ಕುಮು ಸಂಕೋಚಗೊಂಡು ಅವಸರದಿಂದ ಏಳಲು ಯತ್ನಿಸಿದೊಡನೆ ಮಧುಸೂದನ ಕೈಹಿಡಿದು ಅವಳನ್ನು ಎಳೆದು ಕೂಡಿಸಿದ. " ಏಳಬೇಡ. ನನ್ನ ಮಾತು ಕೇಳು. ನನ್ನನ್ನು ಕ್ಷಮಿಸು. ನಾನು ತಪ್ಪು ಮಾಡಿದೆ " ಎಂದ.

ಮಧುಸೂದನನ ಈ ಅಯಾಚಿತವಾದ ಬೇಡಿಕೆಯನ್ನು ನೋಡಿ ಕುಮುವಿಗೆ ಆಶ್ಚರ್ಯವಾಯಿತು. ಮಧುಸೂದನ ತನ್ನ ಮಾತನ್ನು ಮುಂದುವರಿಸಿದ. " ನವೀನನೂ ನಡುಕಲ ಸೊಸೆಯೂ ರಜಬ್‌ಪುರಕ್ಕೆ ಹೋಗುವುದನ್ನು ಬೇಡವೆಂದು ಹೇಳುತ್ತೇನೆ. ಅವರುಗಳು ನಿನ್ನ ಸೇವೆಯಲ್ಲೇ ಇರುವರು. "

ಕುಮುವಿಗೆ ಏನು ಹೇಳಬೇಕೆಂಬುದು ಹೊಳೆಯಲಿಲ್ಲ. ತನ್ನ ಹೆಮ್ಮೆಯನ್ನು ಅಡಗಿಸಿಕೊಂಡು, ತಾನು ಯಜಮಾನಿಯನ್ನು ಒಲಿಸಿಕೊಳ್ಳುವೆನೆಂದು ಮಧುಸೂದನ ಯೋಚಿಸಿದ್ದ. ಕೈಹಿಡಿದುಕೊಂಡು, ಬೇಡುವ ದನಿಯಲ್ಲಿ " ನಾನು ಈಗಲೇ ಬರುವೆ. ನೀನು ಹೊರಟು ಹೋಗುವುದಿಲ್ಲವಷ್ಟೆ " ಎಂದ.

ಕುಮು " ಇಲ್ಲ. ಹೋಗುವುದಿಲ್ಲ " ಎಂದಳು.

ಮಧುಸೂದನ ಕೆಳಗೆ ಹೋದ. ಅವನು ತೀರ ಅಲ್ಪನಂತೆ ಕಠೋರವಾಗಿ ವರ್ತಿಸಿದಾಗ ಕುಮುದಿನಿಗೆ ಅಷ್ಟು ಕಠಿಣವಾಗುತ್ತಿರಲಿಲ್ಲ. ಆದರೆ ಅವನ ಈ ನಮ್ರತೆ, ತನ್ನನ್ನು ತಾನೇ ಸಣ್ಣವನಾಗಿ ಮಾಡಿಕೊಳ್ಳುವ ನಡತೆಗಳಿಗೆ, ಏನು ಉತ್ತರ ಕೊಡಬೇಕೆಂದು ಅವಳಿಗೆ ಹೊಳೆಯಲಿಲ್ಲ. ಹೃದಯದಲ್ಲಿ ಯಾವದನ್ನು ಸಂಗ್ರಹಿಸಿಕೊಂಡು ಬಂದಿದ್ದಳೋ ಅದೆಲ್ಲ ಮಾಯವಾಯಿತು. ಮತ್ತೆ ಅದನ್ನು ಧೂಳಿನಿಂದ ಆಯ್ದು ಎತ್ತಿಕೊಂಡರೆ ಕೆಲಸಕ್ಕೆ ಬಾರದು. ಪುನಃ ಅವಳು ದೇವರಲ್ಲಿ ಮೊರೆಯಿಡತೊಡಗಿದಳು—
" ಪ್ರಿಯಪ್ರಿಯಾಯಾರ್ಹಸಿ ದೇವ ಸೋಢುಮ್ "

ಸ್ವಲ್ಪ ಹೊತ್ತಾದ ಮೇಲೆ ಮಧುಸೂದನ, ನವೀನ ಮತ್ತು ಮೋತಿಯ ತಾಯಿ ಇವರುಗಳನ್ನು ಕಂಡು, ಅವರನ್ನು ಕುಮುವಿನ ಬಳಿಗೆ ಕರೆದು ಕೊಂಡು ಬಂದನು.

ಅನಂತರ ಅವರನ್ನು ಕುರಿತು—" ನಾಳೆ ನಿಮ್ಮನ್ನು ರಜಬ್‌ಪುರಕ್ಕೆ ಹೋಗಬೇಕೆಂದು ಹೇಳಿದ್ದೆ. ಆದರೆ ಈಗ ಅದರ ಆವಶ್ಯಕತೆಯಿಲ್ಲ. ನಾಳೆ ಯಿಂದ ಯಜಮಾನಿಯ ಸೇವೆಯಲ್ಲೇ ನಿಮ್ಮನ್ನು ನೇಮಿಸಿದ್ದೇನೆ." ಎಂದ.

ಇದನ್ನು ಕೇಳಿ ಅವರಿಬ್ಬರೂ ಮಾತನಾಡದೆ ನಿಂತರು. ಒಂದನೆ ಯದು, ಇಂತಹ ಅಪ್ಪಣೆಯನ್ನು ಅವರು ನಿರೀಕ್ಷಿಸಲಿಲ್ಲ. ಅದರ ಮೇಲೆ ರಾತ್ರಿ ಈ ಹೊತ್ತಿನಲ್ಲಿ ಅವರನ್ನು ಕರೆತಂದು ಈ ಮಾತು ಹೇಳಬೇಕಾದ ಅವಸರದ ಆವಶ್ಯಕತೆಯಾದರೂ ಏನಿತ್ತೋ ಏನೋ ಊಹಿಸುವುದು ಅಸಾಧ್ಯವಾಗಿತ್ತು.

ಮಧುಸೂದನನ ಸ್ಥೈರ್ಯ ಸಾವಕಾಶವನ್ನು ಸಹಿಸುತ್ತಿರಲಿಲ್ಲ. ಆ ರಾತ್ರಿಯೇ ಕುಮುವಿನ ಮನಸ್ಸನ್ನು ಒಲಿಸಿಕೊಳ್ಳುವ ಪ್ರಯತ್ನದಲ್ಲಿ ನಿಪುಣತನ ಅಥವಾ ಸಂಕೋಚವನ್ನು ತೋರಲು ಸಾಧ್ಯವಾಗಲಿಲ್ಲ. ಅವನು ತನ್ನ ಜೀವಮಾನದಲ್ಲಿಯೇ ಹೀಗೆ ತನ್ನ ಗೌರವವನ್ನು ಬಿಟ್ಟು ಕೊಟ್ಟವನಲ್ಲ. ಅವನು ಯಾವುದನ್ನು ಬಯಸಿದ್ದನೋ ಅದನ್ನು ಪಡೆಯು ವುದಕ್ಕಾಗಿ ಎಲ್ಲಕ್ಕಿಂತಲೂ ಅಸಾಧ್ಯವಾದ ಬೆಲೆ ಕೊಟ್ಟಿದ್ದ. "ನಿನ್ನ ಬಳಿ ನಾನು ನಿಸ್ಸಂಕೋಚವಾಗಿ ಸೋಲನ್ನೊಪ್ಪಿಕೊಂಡಿದ್ದೇನೆ" ಎಂದು ಅವನು ಈ ತನ್ನ ನಡವಳಿಕೆಯಿಂದ ಕುಮುವಿಗೆ ತಿಳಿಸಿದ್ದ.

ಈ ಬಾರಿ ಕುಮುವಿನ ಮನಸ್ಸಿನಲ್ಲಿ ಬಹಳ ಸಂಕೋಚವುಂಟಾ ಯಿತು. ಇದನ್ನು ಯಾವ ವಿಧದಲ್ಲಿ ಸ್ವೀಕರಿಸಬೇಕೆಂದು ಅವಳು ಯೋಚಿಸ ತೊಡಗಿದಳು. ಇದಕ್ಕೆ ಬದಲಾಗಿ ಕೊಡಲು ಅವಳ ಬಳಿ ಏನಿದೆ ? ಹೊರಗಿ ನಿಂದ ಬಾಳುವೆಗೆ ಬಾಧೆ ಒದಗಿದಾಗ ಯುದ್ಧ ಮಾಡುವ ಸಾಹಸ ಉಂಟಾಗುವುದು. ಆಗ ಸ್ವತಃ ದೇವರೇ ನೆರವಾಗುತ್ತಾನೆ. ಹಠಾತ್ತಾಗಿ ಆ ಹೊರಗಿನ ವಿರುದ್ಧತೆಯೆ ಒಮ್ಮೆಗೆ ಶಸ್ತ್ರವನ್ನು ಕೆಳಗಿಟ್ಟರೆ ಯುದ್ಧವೇನೋ

ನಿಲ್ಲುವುದು ; ಆದರೆ ಸಂಧಿಯಾಗದು. ಆಗ ವ್ಯಕ್ತಿಯ ಅಂತರ್ಯದ ಪ್ರತಿಕೂಲತೆ ಹೊರಬೀಳುವುದು. ಮಧುಸೂದನ ಉದ್ಧತನಾಗಿದ್ದಾಗ ಅವನೊಡನೆ ವ್ಯವಹಾರ ಅಪ್ರಿಯವಾಗಿದ್ದರೂ ಸಹಜವಾಗಿದ್ದಿತೆಂದು ಕುಮು ಹಠಾತ್ತಾಗಿ ಅರಿತಳು. ಮಧುಸೂದನ ನಮ್ರನಾದಾಗ ಅವನೊಡನೆ ವ್ಯವಹರಿಸುವುದು ಕುಮುವಿಗೆ ಬಹಳ ಕಠಿಣವಾಯಿತು. ಈಗ ಅವಳ ಸ್ವಭಾವ ದುಗುಡಕ್ಕೆ ಆಶ್ರಯವಿಲ್ಲವಾಯಿತು. ಅವಳ ಆ ದೀಪದ ಕೋಣೆಯ ಆಶ್ರಯ ತಪ್ಪಿ ಬಿಟ್ಟಿತು. ಈಗ ದೇವರ ಬಳಿ ಕೈಮುಗಿಯುವುದರ ಅರ್ಥವೇನೂ ಇಲ್ಲ.

ಮೋತಿಯ ತಾಯಿಯನ್ನು ಯಾವ ನೆಪದಿಂದಲಾದರೂ ಉಳಿಸಿಕೊಳ್ಳುವುದು ಕುಮುವಿಗೆ ಸಾಧ್ಯವಾಗುವುದಾಗಿದ್ದರೆ ಅವಳಿಗೆ ಜೀವ ಬರುತ್ತಿತ್ತು. ಆದರೆ ನವೀನ ಹೊರಟೇ ಹೋದ. ಬುದ್ಧಿಗೆಟ್ಟ ಮೋತಿಯ ತಾಯಿಯೂ, ಮೆಲ್ಲಮೆಲ್ಲನೆ ಅವನ ಹಿಂದೆಯೇ ನಡೆದುಬಿಟ್ಟಳು. ಬಾಗಿಲ ಬಳಿ ಬಂದಾಗ ಒಮ್ಮೆ ಮುಖ ಮರೆಮಾಡಿಕೊಂಡು ಉದ್ವಿಗ್ನ ಭಾವದಿಂದ ಕುಮುದಿನಿಯ ಮುಖದ ಕಡೆಗೆ ನೋಡಿದಳು. ಗಂಡನ ಪ್ರಸನ್ನತೆಯ ಹಿಡಿತದಿಂದ ಈ ಹೆಣ್ಣನ್ನು ಈಗ ರಕ್ಷಿಸುವವರು ಯಾರು ?

ಮಧುಸೂದನ "ಯಜಮಾನಿ, ಬಟ್ಟೆ ಬದಲುಮಾಡಿ ಮಲಗಲು ಬರುವುದಿಲ್ಲವೇನು ?" ಎಂದ.

ಕುಮು ಮೆಲ್ಲಮೆಲ್ಲನೆದ್ದು ಪಕ್ಕದ ಸ್ನಾನದ ಮನೆಗೆ ಹೋಗಿ ಕದ ಮುಚ್ಚಿಕೊಂಡಳು. ಬಿಡುಗಡೆಯ ವಾಯಿದೆ ಎಷ್ಟುಹೊತ್ತು ಸಾಧ್ಯವಾದರೆ ಅಷ್ಟು ಹೊತ್ತು ಹೆಚ್ಚಿಸಿಕೊಳ್ಳಲು ಆಕೆಯ ಬಯಕೆ. ಆ ಕೋಣೆಯಲ್ಲಿ ಗೋಡೆಯ ಹತ್ತಿರ ಒಂದು ಕುರ್ಚಿ ಇತ್ತು. ಅದರಲ್ಲೇ ಕುಳಿತಿದ್ದಳು. ಅವಳ ವ್ಯಾಕುಲ ದೇಹ ತನ್ನಲ್ಲೇ ತನ್ನ ಅಂತರ್ಯವನ್ನು ಅರಸುವಂತಿತ್ತು. ಮಧುಸೂದನ ಬಾರಿ ಬಾರಿಗೆ ಗೋಡೆಯ ಗಡಿಯಾರ ನೋಡುತ್ತ ಬಟ್ಟೆ ಬದಲುಮಾಡಲು ಎಷ್ಟುಹೊತ್ತು ಬೇಕು, ಎಂದು ಲೆಕ್ಕ ಹಾಕುತ್ತಿದ್ದ, ಈ ಮಧ್ಯೆ ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಂಡ. ತಲೆಯ ಮೇಲ್ಭಾಗದಲ್ಲಿ ಒರಟು ಕೂದಲುಗಳು ಹೊಂದಿಕೆಯಾಗದ ರೀತಿಯಲ್ಲಿ

ಎದ್ದು ನಿಂತುದ್ದುದನ್ನು ಕಂಡು ವ್ಯರ್ಥವಾಗಿ ಹಲವು ಬಾರಿ ಬ್ರಷ್ ಮಾಡಿದ. ಮೈಯ್ಯ ಬಟ್ಟೆಯ ಮೇಲೆ ಧಾರಾಳವಾಗಿ ಲವೆಂಡರ್ ಎರಚಿಕೊಂಡ.

ಹದಿನೈದು ನಿಮಿಷವಾಯಿತು. ಉಡುಪು ಮಾರ್ಪಡಿಸಲು ಇಷ್ಟು ಹೊತ್ತು ಸಾಕಲ್ಲವೆ? ಮಧುಸೂದನ ಸದ್ದಿಲ್ಲದೆ ಒಮ್ಮೆ ಸ್ನಾನದ ಮನೆಯ ಬಾಗಿಲ ಬಳಿ ಕಿವಿಗೊಟ್ಟು ಆಲಿಸಲು ಒಳಗೆ ನಡೆದಾಡುವ ಸದ್ದೇ ಕೇಳಲಿಲ್ಲ. ಕುಮು ಒಂದು ವೇಳೆ ತಲೆಯ ಕೂದಲನ್ನು ಸರಿಪಡಿಸಿಕೊಳ್ಳುತ್ತಿರಬಹುದು; ಹೆರಳು ತಿದ್ದುಕೊಳ್ಳುತ್ತಿರಬಹುದು, ಎಂದು ಯೋಚನೆಮಾಡಿದ. ಹೆಂಗಸರು ಸಿಂಗರಿಸಿಕೊಳ್ಳಲು ಆಸೆಪಡುವರು ಎನ್ನುವುದು ಮಧುಸೂದನನಿಗೂ ತಿಳಿದಿತ್ತು. ಆದ್ದರಿಂದ ಕಾಯಲೇಬೇಕು. ಅರ್ಧಘಂಟೆಯಾಯಿತು ಮಧುಸೂದನ ಪುನಃ ಬಾಗಿಲಿಗೆ ಕಿವಿಗೊಟ್ಟು ಕೇಳಿದ. ಯಾವ ಶಬ್ದವೂ ಕೇಳಿ ಬರಲಿಲ್ಲ. ಹಿಂದಿರುಗಿ ಆರಾಮ ಕುರ್ಚಿಯಲ್ಲಿ ಕುಳಿತು ಮಂಚದ ಹತ್ತಿರ ಗೋಡೆಗೆ ನೇತುಹಾಕಿದ್ದ ವಿಲಾಯಿತಿ ಚಿತ್ರಗಳ ಕಡೆಗೆ ನೋಡುತ್ತಿದ್ದ. ಹಠಾತ್ತಾಗಿ ಒಮ್ಮೆ ದಡದಡನೆ ಎದ್ದವನು ಮುಚ್ಚಿದ್ದ ಬಾಗಿಲ ಬಳಿ ಹೋಗಿ ನಿಂತುಕೊಂಡು "ಯಜಮಾನಿ, ಇನ್ನೂ ಆಗಲಿಲ್ಲವೆ?" ಎಂದು ಒಂದು ಕೂಗು ಹಾಕಿದ.

ಸ್ವಲ್ಪಹೊತ್ತಿನಲ್ಲೇ ಕದ ತೆರೆಯಿತು. ಕುಮುದಿನಿ ಹೊರಗೆ ಬಂದಳು. ಅವಳು ಕನಸಿನಲ್ಲಿ ನಡೆದಂತೆ ಇತ್ತು. ಯಾವ ಬಟ್ಟೆ ಉಟ್ಟಿದ್ದಳೋ ಅದೇ ಇತ್ತು. ಇದಂತೂ ರಾತ್ರಿ ಮಲಗುವ ಉಡುಪಲ್ಲ. ಮೈಮೇಲೆ, ತೋಳು ಮುಚ್ಚಿಕೊಂಡಿರುವ ಒಂದು ಬೂದುಬಣ್ಣದ ಸರ್ಜ್ ಜಾಕೆಟ್ಟು; ಕೆಂಪಂಚಿನ ಬಾದಾಮಿ ಬಣ್ಣದ ಸೀರೆ, ಇವುಗಳಿದ್ದವು. ಸೆರಗನ್ನು ತಲೆಯ ಮೇಲೆ ಎಳೆದುಕೊಂಡಿದ್ದಳು. ಕದದ ಒಂದು ಪಾರ್ಶ್ವವನ್ನು ಕೈಯಲ್ಲಿ ಹಿಡಿದುಕೊಂಡು ಏನೋ ಸಂದೇಹದಲ್ಲಿರುವಂತೆ ನಿಂತಿದ್ದಳು. ಅದೊಂದು ಅಪೂರ್ವದ ನೋಟ. ಅಂದವಾದ ಬಿಳಿಯ ಕೈಗಳಲ್ಲಿ ಸಿಂಹಲಲಾಟದ ಭಂಗಾರದ ಕಡಗ. ಹಿಂದಿನಕಾಲದ ಮಾದರಿಯದು. ಒಂದು ಕಾಲದಲ್ಲಿ ಅವಳ ತಾಯಿಯದಾಗಿತ್ತೆಂದು ತೋರುತ್ತೆ. ಈ ದಪ್ಪವಾಗಿದ್ದ ತೂಕವಾದ ಕಡಗ ಅವಳ ಕೋಮಲವಾದ ಕೈಗಳಿಗೆ ಐಶ್ವ

ರ್ಯಾದ ಕಳೆ ಕೊಟ್ಟಿತ್ತು. ಅದು ಅವಳ ಪಾಲಿಗೆ ಸಹಜವಾಗಿತ್ತು. ಆ ಅಲಂಕಾರ ಅವಳ ಮೈಗೆ ಸ್ವಲ್ಪವಾದರೂ ಆಡಂಬರದ ಬಣ್ಣ ಕೊಟ್ಟಿರಲಿಲ್ಲ. ಮಧುಸೂದನ ಅವಳನ್ನು ಮತ್ತೆ ಹೊಸ ರೂಪಿನಲ್ಲಿ ಕಂಡಂತೆ ನೋಡಿದ. ಅವಳ ಸೊಬಗಿನಿಂದ ವಿಸ್ಮಯಗೊಂಡ. ಮಧುಸೂದನನ ಚಿರಾರ್ಜಿತ ಸಂಪತ್ತು ಇಷ್ಟು ದಿನಗಳ ಅನಂತರ ಲಕ್ಷ್ಮಿಯನ್ನು ಪಡೆಯಿತು ಎಂಬುದಾಗಿ ಅವನಿಗೆ ಅರಿಯಲು, ಇನ್ನು ಹೆಚ್ಚು ಕಾಲ ಬೇಕಾಗಲಿಲ್ಲ. ಪ್ರಪಂಚದಲ್ಲಿ ತಾನು ಯಾರ್ಯಾರನ್ನು ನೋಡುವನೋ, ಯಾರೊಡನೆ ಬೆರೆಯುವನೋ ಅವರೆಲ್ಲರಿಗಿಂತ ತಾನು ಮೇಲು ಎಂದು ಮಧುಸೂದನನ ಭಾವನೆ. ಇಂದು ಗ್ಯಾಸ್ ದೀಪದ ಬೆಳಕಿನಲ್ಲಿ ಮಲಗುವ ಮನೆಯ ಬಾಗಿಲ ಹತ್ತಿರ ಸ್ತಬ್ಧಳಾಗಿ ನಿಂತಿದ್ದ ಆ ಹೆಣ್ಣನ್ನು ಕಂಡು, ಅವನು "ನನ್ನಲ್ಲಿ ಸಾಕಷ್ಟು ಅಳತೆಯಲ್ಲಿ ಧನವಿಲ್ಲ, ಒಂದು ವೇಳೆ ರಾಜಾಧಿರಾಜ ಚಕ್ರವರ್ತಿಯಾಗಿದ್ದಲ್ಲಿ ಅವಳು ಈ ಸ್ಥಳಕ್ಕೆ ತಕ್ಕವಳಾಗುತ್ತಿದ್ದಳು" ಎಂದು ಅಂದುಕೊಂಡ. ಜನ್ಮಾವಧಿ ಲಾಲಿಸಿ ಬೆಳೆಸಿದ ಪರಿಶುದ್ಧವಾದ ವಂಶಮರ್ಯಾದೆಯ ನಡುವೆ ಇರುವುದು ಅವಳ ಸ್ವಭಾವವಾಗಿತ್ತು. ಅಲ್ಲಿ ಹೊರಗಿನವರು ಯಾರೂ ಪ್ರವೇಶಮಾಡುವ ಹಾಗಿಲ್ಲ. ಅಲ್ಲೇ ತನ್ನ ಸಹಜವಾದ ಸ್ವಾತ್ತ್ವಿನೊಡನೆ ವಿಪ್ರದಾಸ ವಿರಾಜಿಸುತ್ತಿರುವನು. ಅವನನ್ನೂ ಕುಮುದಿನಿಯಂತೆಯೇ, ಅವನಿಗೇ ಗೊತ್ತಿಲ್ಲದಂತೆ ಗೌರವವೊಂದು ಸುತ್ತುವರಿದಿರುವುದ.—ಎಂಬುದಾಗಿ ಮಧುಸೂದನನ ಮನಸ್ಸಿಗೆ ಮಂದಟ್ಟಾಯಿತು.

ಮಧುಸೂದನ ಈ ಸಂಗತಿಯನ್ನು ಸ್ವಲ್ಪವೂ ಸಹಿಸಲಾರದೆ ಹೋದ. ವಿಪ್ರದಾಸನಲ್ಲಿ ಔದ್ಧತ್ಯ ಏನೇನೂ ಇಲ್ಲ. ಇರುವುದು ಒಂದು ಬಗೆಯ ದೂರತ್ವ ಮಾತ್ರ. ಅತಿ ಸಚ್ಚಿನ ಗೆಳೆಯನಾದರೂ ಹಠಾತ್ತಾಗಿ ಹತ್ತಿರ ಬಂದು ಬೆನ್ನು ತಟ್ಟಿ "ಏನು? ಹೇಗಿರುವೆ?" ಎಂದು ಕೇಳುವುದು ಸಾಧ್ಯವಿರಲಿಲ್ಲ. ವಿಪ್ರದಾಸನನ್ನು ಕಂಡರೆ ಮಧುಸೂದನನ ಮನಸ್ಸು ಕಲಕಿಹೋಗಿ ಅವನಿಗೆ ಕೋಪಬರುತ್ತಿತ್ತು. ಆ ಸೂಕ್ಷ್ಮ ಕಾರಣದಿಂದಲೇ ಕುಮುವಿನ ಮೇಲ್ಕೆ ಮಧುಸೂದನನಿಗೆ ತನ್ನ ಬಲಾತ್ಕಾರವನ್ನು ಪ್ರಯೋಗಿಸಲಾಗುತ್ತಿರಲಿಲ್ಲ. ತನ್ನ ಸಂಸಾರದಲ್ಲಿ ಎಲ್ಲಿ ಎಲ್ಲಿ ಹೆಚ್ಚಿನ ಒಡೆತನ

ತೋರುವ ಅಧಿಕಾರವುಂಟೋ ಅಲ್ಲೇ ಅವನು ಅತ್ಯಂತ ಹಿಂದೆಬಿದ್ದಿದ್ದ. ಆದರೆ ಇದರಿಂದ ಅವನಿಗೆ ಹೆಚ್ಚಿನ ಕೋಪವಾಗುತ್ತಿರಲಿಲ್ಲ. ಕುಮುವಿನ ಕಡೆಗೆ ಹರಿಯುತ್ತಿದ್ದ ತನ್ನ ಮನಸ್ಸನ್ನು ಹಿಡಿದು ನಿಲ್ಲಿಸಲು ಅವನಿಗೆ ಅಸಾಧ್ಯವಾಗುತ್ತಿತ್ತು. ಇಂದು ಕುಮುವನ್ನು ಕಂಡು, "ಅವಳು ಸಿದ್ಧವಾಗಿ ಬಂದಿಲ್ಲ, ಕಣ್ಣಿಗೆ ಕಾಣಿಸದ ಮರೆಯೊಂದರ ಹಿಂದೆ ನಿಂತಿರುವಳು" ಎಂದು ಸ್ಪಷ್ಟವಾಗಿ ಅರಿತ. ಆದರೆ ಅವಳ ಆ ಸೌಂದರ್ಯವಾದರೋ ದೇದೀಪ್ಯಮಾನವಾದ ಶುಚಿ, ಶುಭ್ರತೆಗಳಂತೆಯೂ ಮತ್ತು ನಿರ್ಜನವಾದ ಮಂಜಿನ ಬೆಟ್ಟದ ತುದಿಯಲ್ಲಿ ಕಂಡುಬರುವ ನಿರ್ಮಲವಾದ ಉಷೆಯಂತೆಯೂ ಇತ್ತು.

ಮಧುಸೂದನ ಸ್ವಲ್ಪ ಹತ್ತಿರ ಬಂದು ಮೆಲುದನಿಯಲ್ಲಿ "ಮಲಗಲು ಬರುವುದಿಲ್ಲವೇ ಯಜಮಾನಿ" ಎಂದ.

ಕುಮು ಆಶ್ಚರ್ಯದಲ್ಲಿ ಮುಳುಗಿದಳು ಮಧುಸೂದನ ಖಂಡಿತವಾಗಿಯೂ ಕೋಪಗೊಂಡು, ತನ್ನೊಂದಿಗೆ ಅವಮಾನದ ಮಾತುಗಳನ್ನಾಡುವನು ಎಂದು ಅವಳು ಎಣಿಸಿದ್ದಳು. ಹಠಾತ್ತಾಗಿ ಬಹುಕಾಲದಿಂದ ಪರಿಚಿತವಾಗಿದ್ದ ದನಿಯೊಂದು ಅವಳಿಗೆ ನೆನಪಾಯಿತು. ಅವಳ ತಂದೆ ಮೆಲುದನಿಯಲ್ಲಿ ಯಾವ ವಿಧದಲ್ಲಿ ತನ್ನ ತಾಯಿಯನ್ನು "ಯಜಮಾನಿ" ಎಂದು ಕರೆಯಲು ಕೂಡಲೇ ತನ್ನ ತಾಯಿ ತನ್ನ ತಂದೆಯನ್ನು ಹತ್ತಿರ ಬರಲು ಅವಕಾಶ ಕೊಡದೆ ಹೇಗೆ ಹೊರಟುಹೋಗಿದ್ದಳು, ಎನ್ನುವುದು ನೆನಪಾಯಿತು. ಮುಹೂರ್ತಮಾತ್ರದಲ್ಲಿ ಅವಳ ಕಣ್ಣುಗಳಲ್ಲಿ ನೀರು ಉಕ್ಕಿ ಹರಿಯಿತು. ನೆಲದ ಮೇಲೆ ಮಧುಸೂದನನ ಕಾಲಬಳಿ ಕುಳಿತುಕೊಂಡು ಬಿಟ್ಟು "ನನ್ನನ್ನು ಕ್ಷಮಿಸು" ಎಂದಳು.

ಮಧುಸೂದನನಿಗೆ ಇನ್ನು ಸುಮ್ಮನಿರಲಾಗಲಿಲ್ಲ. ಅವಸರದಿಂದ ಅವಳ ಕೈ ಹಿಡಿದು ಎತ್ತಿ ಕುರ್ಚಿಯ ಮೇಲೆ ಕೂಡಿಸಿ "ನಿನ್ನನ್ನು ಕ್ಷಮಿಸಲು, ಯಾವ ತಪ್ಪುಮಾಡಿರುವೆ?" ಎಂದು ಕೇಳಿದ.

ಕುಮು "ಇನ್ನೂ ನನ್ನ ಮನಸ್ಸು ಸಿದ್ಧವಾಗಿಲ್ಲ. ನನಗೆ ಸ್ವಲ್ಪ ಕಾಲ ಅವಕಾಶ ಕೊಡು" ಎಂದಳು.

ಮಧುಸೂದನನ ಮನಸ್ಸು ಕಠಿಣವಾಯಿತು. "ಯಾವುದಕ್ಕಾಗಿ ಅವಕಾಶ ಕೊಡಬೇಕು. ವಿವರವಾಗಿ ತಿಳಿಯುವಂತೆ ಹೇಳು?" ಎಂದ.

"ಸರಿಯಾಗಿ ಹೇಳಲು ಸಾಧ್ಯವಿಲ್ಲ. ಯಾರಿಗಾದರೂ ತಿಳಿಯುವಂತೆ ವಿವರಿಸುವುದು ಕಷ್ಟ."

ಮಧುಸೂದನನಿಗೆ ಇನ್ನು ತಾಳ್ಮೆ ತಪ್ಪಿತು. "ಏನೂ ಕಷ್ಟವಿಲ್ಲ. ನನಗೆ ನಿನ್ನಲ್ಲಿ ಪ್ರೀತಿಯಿಲ್ಲ ಎಂದು ನೀ ಹೇಳ ಬಯಸುವೆ" ಎಂದ.

ಕುಮುವಿಗೆ ಸಹಿಸಲಶಕ್ಯವಾಯಿತು. ಆ ಮಾತು ಸತ್ಯವೇ ಸರಿ. ಮನಃಪೂರ್ವಕವಾಗಿ ನೈವೇದ್ಯವನ್ನು ಅರ್ಪಿಸುವುದಕ್ಕೆ ಅವಳು ಮನಸ್ಸು ಮಾಡಿದ್ದಳು. ಇನ್ನೂ ನೈವೇದ್ಯ ಮಾತ್ರ ಬಂದು ತಲುಪಿರಲಿಲ್ಲ. ಸ್ವಲ್ಪ ಸಾವಕಾಶ ಮಾಡಿದರೆ, ಹಾದಿಯಲ್ಲಿ ಯಾವ ಅಡ್ಡಿಯೂ ಉಂಟಾಗದಿದ್ದರೆ, ಅದು ಬಂದು ತಲುಪುವುದು ಎಂದು ಮನಸ್ಸಿಗೆ ಅನ್ನಿಸಿತು. ಸಾವಕಾಶ ಆದೀತು ಎನ್ನುವಂತೆಯೂ ಇಲ್ಲ. ಆದರೂ ತಟ್ಟೆ ಇನ್ನೂ ಬರಿದು ಎನ್ನುವ ಮಾತನ್ನು ಒಪ್ಪಲೇಬೇಕಾಗಿತ್ತು.

ಮಧುಸೂದನ ಕ್ರಮೇಣ ಸಹನೆಯಿಲ್ಲದವನಾದ. ಕಠಿಣ ದನಿಯಲ್ಲೇ "ಅವಕಾಶ ಕೊಟ್ಟರೆ ಅನುಕೂಲವಾಗುವುದೇನು? ನಿಮ್ಮ ಅಣ್ಣನ ಸಂಗಡ ಪರ್ಯಾಲೋಚನೆ ನಡಸಿ ಗಂಡನ ಸಂಸಾರ ನಡಸ ಬಯಸುವೆಯೇನು" ಎಂದ.

ಮಧುಸೂದನನಿಗೆ ವಿಪ್ರದಾಸನ ಅಪೇಕ್ಷೆಯಿಂದಲೇ ಕುಮುವಿನದೆಲ್ಲ ತಡೆದು ನಿಂತಿದೆ. ಅಣ್ಣ ಹೇಗೆ ನಡಸಿದರೆ ಅವಳು ಹಾಗೆ ನಡೆಯುವಳು, ಎಂದು ಅಭಿಪ್ರಾಯ. ಕುಚೇಷ್ಟೆಯ ದನಿಯಲ್ಲಿ "ನಿಮ್ಮ ಅಣ್ಣ ನಿನ್ನ ಗುರು" ಎಂದ.

ಕುಮುದಿನಿ ಆ ಕ್ಷಣ ನೆಲದ ಮೇಲಿಂದ ಎದ್ದು ನಿಂತು—"ಹೌದು ನಮ್ಮಣ್ಣ ನನ್ನ ಗುರು" ಎಂದಳು.

"ಅವನ ಅಪ್ಪಣೆ ಆಗದಿದ್ದರೆ ಇಂದು ಬಟ್ಟೆಯನ್ನೂ ಬದಲಿಸುವುದಿಲ್ಲ. ಹಾಸಿಗೆಯಲ್ಲಿ ಮಲಗಲೂ ಬರುವುದಿಲ್ಲ, ಅಲ್ಲವೆ?"

ಕುಮುದಿನಿ ಕೈಯ ಮುಷ್ಟಿಯನ್ನು ಬಿಗಿಯಾಗಿ ಹಿಡಿದುಕೊಂಡು ಮರದಂತೆ ನಿಂತಿದ್ದಳು.

" ಹಾಗಾದರೆ ಟೆಲಿಗ್ರಾಮ್ ಕಳುಹಿಸಿ ಅಪ್ಪಣೆ ತರಿಸುವೆ.—ರಾತ್ರಿ ಬಲು ಹೊತ್ತಾಯಿತು "

ಕುಮು ಏನೂ ಉತ್ತರ ಕೊಡದೆ ಬಿಸಿಲುಮಹಡಿಗೆ ಹೋಗುವ ಬಾಗಿಲಕಡೆ ಹೋದಳು.

ಮಧುಸೂದನ ಗರ್ಜನೆಯ ದನಿಯಲ್ಲಿ " ಹೋಗಬೇಡ ಹೇಳಿದ್ದೇನೆ " ಎಂದು ಗದರಿಸಿದ.

ಕುಮು ಆ ಕ್ಷಣ ಹಿಂದಿರುಗಿ, " ಏನು ಮಾಡಬೇಕು, ಹೇಳು ? " ಎಂದಳು.

" ಈಗಲೇ ಬಟ್ಟೆ ಬದಲಿಸಿ ಬಾ. " ಗಡಿಯಾರ ತೆಗೆದಿಟ್ಟು, " ಐದು ನಿಮಿಷ ಅವಕಾಶ ಕೊಡುತ್ತೇನೆ " ಎಂದ.

ಕುಮು ತಕ್ಷಣವೇ ಸ್ನಾನದ ಮನೆಗೆ ಹೋಗಿ ಬಟ್ಟೆ ಬದಲುಮಾಡಿ ಸೀರೆಯ ಮೇಲೆ ದಪ್ಪ ದುಪ್ಪಟಿಯೊಂದನ್ನು ಹೊದೆದುಕೊಂಡು ಹೊರಟು ಬಂದಳು. ಈಗ ಎರಡನೆಯ ಅಪ್ಪಣೆಯನ್ನು ಅವಳು ಕಾಯುತ್ತಿದ್ದಳು. ಮಧುಸೂದನ ನೋಡಿದವನೇ, ಇದೂ ಯುದ್ಧದ ವೇಷವೆ, ಎಂದು ಚೆನ್ನಾಗಿ ಅರಿತ. ಕೋಪ ಕೆರಳಿತು. ಆದರೆ ಏನು ಮಾಡಬೇಕು ಎನ್ನುವುದು ಹೊಳೆಯಲಿಲ್ಲ. ಪ್ರಬಲವಾದ ಕೋಪದ ಭರದಲ್ಲೂ ಮಧುಸೂದನನ ಬುದ್ಧಿ ಹತೋಟಿಯಲ್ಲಿರುತ್ತಿತ್ತು. ಆದರಿಂದಲೇ ಅವನು ತಡೆದು ನಿಂತ. " ಈಗೇನು ಮಾಡಬೇಕು ? ನನಗೆ ಹೇಳು ? " ಎಂದ.

" ನೀನು ಏನು ಹೇಳಿದರೆ ಅದನ್ನೇ ಮಾಡುವೆ "

ಮಧುಸೂದನ ಹತಾಶನಾಗಿ ಕುರ್ಚಿಯ ಮೇಲೆ ಕುಳಿತುಬಿಟ್ಟ, ಆ ದುಪಟಿ ಹೊದೆದ ಹೆಣ್ಣನ್ನು ನೋಡಲು, " ಇದೊಂದು ವಿಧವೆಯ ಪ್ರತಿಮೆಯೇ ಸರಿ. ಇವಳ ಗಂಡ ಮತ್ತು ಇವಳ ನಡುವೆ, ನಿಸ್ತಬ್ಧವಾದೊಂದು ಮೃತ್ಯುವಿನ ಸಮುದ್ರವಿದೆ. ಆ ಸಮುದ್ರವನ್ನು ದಾಟಲು ಸಾಧ್ಯವಿಲ್ಲ.

ಪಟಕ್ಕೆ ಯಾವ ಕಡೆಯಿಂದ ಗಾಳಿ ಬೀಸಿದರೆ ಆ ಕಡೆ ಆ ದೋಣಿ ತೇಲಿಕೊಂಡು ಹೋದೀತು ?" ಎಂದು ಅವನ ಮನಸ್ಸಿಗನ್ನಿಸಿತು.

ತೆಪ್ಪನೆ ಕುಳಿತಿದ್ದ. ಗಡಿಯಾರದ ಟಿಕ್ ಟಿಕ್ ಶಬ್ದ ಬಿಟ್ಟು ಕೋಣೆ ಯಲ್ಲಿ ಬೇರೆ ಯಾವ ಶಬ್ದವೂ ಇರಲಿಲ್ಲ. ಕುಮುದಿನಿ ಕೋಣೆಯಿಂದ ಹೊರಗೆ ಹೋಗಲಿಲ್ಲ. ಪುನಃ ಹಿಂದಿರುಗಿಕೊಂಡು ಹೊರಗೆ ಬಿಸಿಲು ಮಹಡಿಯ ಕತ್ತಲೆಯನ್ನು ದಿಟ್ಟಿಸಿ ನೋಡುತ್ತ ಚಿತ್ರದ ಬೊಂಬೆಯಂತೆ ನಿಂತಿದ್ದಳು. ರಸ್ತೆಯ ಮೂಲೆಯಿಂದ ಹೆಂಡಕುಡುಕನೊಬ್ಬನ ಮತ್ತೇರಿದ ಹಾಡು ಕೇಳುತ್ತಿತ್ತು. ಹಾಗೆಯೇ ನೆರೆಮನೆಯ ಕುದುರೆಯ ಲಾಯದಲ್ಲಿ ನಾಯಿಮರಿಯೊಂದನ್ನು ಕಟ್ಟಿಹಾಕಿದ್ದರು. ಅದರ ಎಡೆಬಿಡದ ಆರ್ತ ನಾದ ರಾತ್ರಿಯ ಶಾಂತಿಯನ್ನು ಭೇದಿಸುತ್ತಿತ್ತು.

ಹೊತ್ತು, ಬುಡವಿಲ್ಲದ ಒಂದು ಬಿಲದಂತೆ ಶೂನ್ಯವಾಗಿ ಬಿಕೋ ಎನ್ನುವಂತೆ ಇತ್ತು. ಮಧುಸೂದನನ ಪ್ರಪಂಚದ ಯಂತ್ರದ ಎಲ್ಲ ಚಕ್ರ ಗಳೂ ನಿಂತುಹೋಗಿದ್ದಂತೆ ಇತ್ತು. ಮರುದಿನ ಅವನಿಗೆ ಆಫೀಸಿನಲ್ಲಿ ಬಹಳ ಕೆಲಸ. ಡೈರೆಕ್ಟರುಗಳ ಮೀಟಿಂಗ್. ಹಲವು ಕಠಿಣ ಸೂಚನೆ ಗಳನ್ನು ಹಲವರು ಮುಂದಿಟ್ಟಿದ್ದರು. ಬುದ್ಧಿವಂತಿಕೆಯಿಂದ ಪರಿಹರಿಸ ಬೇಕಾಗಿದೆ. ಆ ಎಲ್ಲ ಅತ್ಯಾತುರದ ಕೆಲಸಗಳೂ ಇವೊತ್ತು ಅವನ ದೃಷ್ಟಿ ಯಲ್ಲಿ ಬರಿ ಛಾಯೆಯಂತೆ ಕಾಣುತ್ತಿದ್ದುವು. ಹಿಂದಿನಂತಾಗಿದ್ದರೆ ನಾಳಿನ ಕಾರ್ಯಪ್ರಣಾಲಿಯನ್ನು ಆ ರಾತ್ರಿಯೇ ನೋಟ್ ಬುಕ್ಕಿನಲ್ಲಿ ಗುರುತು ಮಾಡಿ ಇಡುತ್ತಿದ್ದ. ಎಲ್ಲ ಯೋಚನೆಯೂ ದೂರವಾಯಿತು. ಜಗತ್ತಿ ನಲ್ಲಿ ತೀರ ಸತ್ಯವಾದುದು, ಖಂಡಿತವಾಗಿರುವುದು. ದುಪಟಿ ಹೊದ್ದಿದ್ದ ಆ ಹೆಣ್ಣು, ಕೋಣೆಯಿಂದ ಹೊರಗೆ ಹೋಗುವ ಹಾದಿಯಲ್ಲಿ ಅಲುಗದೆ ನಿಂತಿರುವಳು. ಸ್ವಲ್ಪ ಹೊತ್ತಾದ ಮೇಲೆ ಮಧುಸೂದನ ದೀರ್ಘವಾದ ನಿಟ್ಟುಸಿರೊಂದನ್ನು ಬಿಟ್ಟ. ಇಡಿ ಕೊಟಡಿಯೇ ತನ್ನ ಧ್ಯಾನವನ್ನು ಭಂಗಮಾಡಿ ಎಚ್ಚೆತ್ತುಕೊಂಡಂತೆ ತೋರಿತು. ವೇಗವಾಗಿ ಕುರ್ಚಿ ಯಿಂದ ಎದ್ದವನು ಕುಮುವಿನ ಬಳಿ ಹೋಗಿ, "ಯಜಮಾನಿ, ನಿನ್ನ ಮನಸ್ಸು ಕಲ್ಲಿನಿಂದ ಮಾಡಿದ್ದೇನು ?" ಎಂದು ಕೇಳಿದ.

ಆ 'ಯಜಮಾನಿ' ಎಂಬ ಮಾತು ಕುಮುವಿನ ಮನದಲ್ಲಿ ಮಂತ್ರದಂತೆ ಕೆಲಸಮಾಡಿತು. ತನ್ನಲ್ಲಿ ಅವಳ ತಾಯಿಯ ಬಾಳುವೆಯ ಅನುವರ್ತನೆ ಇದ್ದಕ್ಕಿದ್ದಂತೆ ಉಜ್ವಲವಾಗುತ್ತಿತ್ತು. ಈ ಕರೆಗೆ ತನ್ನ ತಾಯಿ ಎಷ್ಟು ದಿನ ಎಷ್ಟು ಸಹಜವಾಗಿ ಉತ್ತರ ಕೊಟ್ಟಿದ್ದಳು. ಅವಳ ಅಭ್ಯಾಸವೇ ಕುಮುವಿನ ರಕ್ತದಲ್ಲಿ ಇದ್ದಂತೆ ಇತ್ತು. ಆದರಿಂದಲೇ ಅವಳು ಚಕಿತಳಾಗಿ ಮುಖ ತಿರುವಿ ನಿಂತುಕೊಂಡಳು. ಮಧುಸೂದನ ಗಂಭೀರವಾಗಿ ಕಾತರ ಭಾವದಲ್ಲಿ "ನಾನು ನಿನಗೆ ತಕ್ಕವನಲ್ಲ, ಆದರೆ ನನ್ನಲ್ಲಿ ದಯೆ ತೋರೆಯೇನು ?" ಎಂದು ಕೇಳಿದ.

ಕುಮುದಿನಿ ಬೆಚ್ಚಿದವಳಾಗಿ "ಛಿ, ಛೀ, ಅಂತಹ ಮಾತು ಹೇಳಬೇಡ" ಎಂದಳು. ನೆಲದ ಮೇಲೆ ಬಿದ್ದು ಮಧುಸೂದನನ ಪಾದ ಧೂಳಿಯನ್ನು ತೆಗೆದುಕೊಂಡು "ನಾನು ನಿನ್ನ ದಾಸಿ, ನನಗೆ ನೀನು ಅಪ್ಪಣೆ ಮಾಡು" ಎಂದಳು.

ಮಧುಸೂದನ ಅವಳ ಕೈ ಹಿಡಿದೆತ್ತಿ ಎದೆಗೆ ಅಪ್ಪಿಕೊಂಡು "ಇಲ್ಲ ನಿನಗೆ ಅಪ್ಪಣೆ ಮಾಡಲಾರೆ. ನೀನು ನೀನಾಗಿಯೇ ಇಚ್ಛೆಪಟ್ಟು ನನ್ನ ಹತ್ತಿರಕ್ಕೆ ಬಾ" ಎಂದ.

ಕುಮುದಿನಿ ಮಧುಸೂದನನ ಬಾಹು ಬಂಧನದಲ್ಲಿ ಮೇಲುಸಿರು ಬಿಡತೊಡಗಿದಳು. ಆದರೆ ತನ್ನನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಲಿಲ್ಲ, ಮಧುಸೂದನ ಬಿಗಿದ ಕೊರಲಿನಲ್ಲಿ "ಇಲ್ಲ, ನಿನಗೆ ಅಪ್ಪಣೆ ಮಾಡಲಾರೆ. ಆದರೂ ನೀನು ನನ್ನ ಬಳಿಗೆ ಬಾ" ಎಂದು ಹೇಳಿ ಕುಮುದಿನಿಯನ್ನು ಬಿಟ್ಟುಬಿಟ್ಟ.

ಕುಮುದಿನಿಯ ಗೌರವರ್ಣದ ಮುಖ ಕೆಂಪಡರಿತು. ಅವಳು ನೆಲದ ಕಡೆ ನೋಡುತ್ತ ಮುಖ ತಗ್ಗಿಸಿಕೊಂಡು, "ನೀನು ಆಜ್ಞೆ ಮಾಡಿದರೆ ನನ್ನ ಕೆಲಸ ಸಹಜವಾಗುವುದು. ನಾನು ಸ್ವತಃ ಯೋಚಿಸಿ ಏನನ್ನೂ ಮಾಡಲಾರೆನು" ಎಂದಳು.

"ಸರಿ, ನೀನು ನಿನ್ನ ಮೈಮೇಲಿನ ಆ ದುಪಟಿಯನ್ನು ತೆಗೆದೊಗೆ, ಅದನ್ನು ನಾನು ನೋಡಲಾರೆ" ಎಂದ.

ಸಂಕೋಚದೊಡನೆ ಕುಮುದಿನಿ ದುಪಟಿಯನ್ನು ಕಿತ್ತೊಗೆದಳು. ಮೈಮೇಲೆ ಒಂದು ಸಣ್ಣಂಚಿನ ಡೋರಿಯಾ ಸೀರೆ ಇತ್ತು. ಕರಿಯ ಗೀರಿನ ಸಾಲುಗಳು ಕುಮುದಿನಿಯ ಮೈಯನ್ನು ಸುತ್ತುವರಿದಿತ್ತು. ಮಧುಸೂದನ ಮುಗ್ಧನಾಗಿ ಹೋದ. ಆದರೂ ಆ ಕ್ಷಣದಲ್ಲೇ ಆ ಸೀರೆ ಇಲ್ಲಿ ಕೊಟ್ಟಿದ್ದಲ್ಲವೆಂದು ಅವನ ಗಮನಕ್ಕೆ ಬಂದಿತು. ಕುಮುದಿನಿಗೆ ಅದು ಎಷ್ಟೇ ಒಪ್ಪಿದ್ದರೂ ಅದರ ಬೆಲೆ ಅತ್ಯಲ್ಪ. ಅದು ಅವಳ ಅಪ್ಪನ ಮನೆಯದು. ಆದೇ ಸ್ನಾನದ ಮನೆಗೆ ಸೇರಿದಂತೆ ಬಟ್ಟೆ ಬದಲು ಮಾಡುವ ಕೋಣೆಯಲ್ಲಿ ಹಲವು ಡ್ರಾಯರುಗಳುಳ್ಳ ಬೀಟೆ ಮರದ ಅಲ್ಮಾರಿಗಳಿದ್ದುವು. ಅವುಗಳಿಗೆ ಕನ್ನಡಿಯ ಬಾಗಿಲುಗಳಿದ್ದುವು. ಮದುವೆಗೆ ಮುಂಚೆಯೇ ಅವುಗಳಲ್ಲಿ ನಾನಾ ಬಗೆಯ ಬೆಲೆ ಬಾಳುವ ಬಟ್ಟೆಗಳಿದ್ದುವು. ಅವುಗಳ ಮೇಲೆ ಆಸೆಯಿಲ್ಲ! ಹೆಣ್ಣಿಗೆ ಎಷ್ಟೊಂದು ಗರ್ವ; ಆ ಮೂರು ಉಂಗುರಗಳ ಸಂಗತಿ ನೆನಪಾಯಿತು. ಸಹಿಸಲಸಾಧ್ಯವಾದ ಔದಾಸೀನ್ಯದಿಂದ ಕುಮುದಿನಿ ಅವನ್ನು ತೆಗೆದುಕೊಳ್ಳಲಿಲ್ಲ. ಆದರೂ ದುರಾದೃಷ್ಟದ ಆ ನೀಲಿ ಕಲ್ಲಿನ ಉಂಗುರಕ್ಕಾಗಿ ಅದೆಷ್ಟು ಕೋಪ! ವಿಪ್ರದಾಸ ಮತ್ತು ಮಧುಸೂದನ ಇವರಿಬ್ಬರ ನಡುವೆ ಕುಮುವಿನ ಮಮತೆಯಲ್ಲಿ ಎಷ್ಟು ವ್ಯತ್ಯಾಸ! ದುಪಟಿ ತೆಗೆದು ಹಾಕಿದೊಡನೆ ಈ ಎಲ್ಲ ಭಾವನೆಗಳೂ ವೇಗವಾದ ಬಿರುಗಾಳಿಯಂತೆ ಮಧುಸೂದನನ ಮನಸ್ಸಿನಲ್ಲಿ ಸುಳಿದವು. ಆದರೆ? ಆಹಾ ಏನು ಸೌಂದರ್ಯ! ಅದೆಂತಹ ಆಶ್ಚರ್ಯವುಂಟು ಮಾಡುವ ಸೌಂದರ್ಯ? ಅಷ್ಟೇ ಅಲ್ಲದೆ ಈ ದರ್ಪದಿಂದ ಕೂಡಿಹ ಅಹಂಕಾರ! ಇದೂ ಅವಳಿಗೊಂದು ಅಲಂಕಾರದಂತಿದೆ. ಈ ಹೆಣ್ಣೇ ಐಶ್ವರ್ಯವನ್ನು ಅಲಕ್ಷ್ಯವಾಗಿ ಕಾಣಬಲ್ಲವಳು. ಸಹಜವಾದ ಸಂಪತ್ತಿನೊಡನೆ ಚಕ್ರವರ್ತಿನಿಯಾಗಿ ಜನ್ಮತಾಳಿರುವಳು. ಅವಳಿಗೆ ಹಣದ ಬೆಲೆ ಕಟ್ಟಬೇಕಾಗಿಲ್ಲ, ಲೆಕ್ಕ ಇಡಬೇಕಾಗಿಲ್ಲ. ಮಧುಸೂದನ ಅವಳಿಗೆ ಯಾವುದರ ಆಸೆಯನ್ನು ತಾನೆ ತೋರಬಲ್ಲ

ಮಧುಸೂದನ "ಹೋಗು, ನೀನು ಮಲಗು ಹೋಗು" ಎಂದ.

ಕುಮು ಅವನ ಮುಖದ ಕಡೆ ದಿಟ್ಟಿಸಿ ನೋಡುತ್ತಿದ್ದಳು. ಅವಳ ನೀರವ ಪ್ರಶ್ನೆ ಇಷ್ಟೆ. "ನೀನು ಮೊದಲು ಹಾಸಿಗೆಗೆ ಹೋಗುವುದಿಲ್ಲವೇನು?" ಎಂದು.

ಮಧುಸೂದನ ಮತ್ತೆ ದೃಢವಾದ ಸ್ವರದಲ್ಲಿ "ಹೋಗು, ಇನ್ನು ಸಾವಕಾಶ ಮಾಡಬೇಡ" ಎಂದ. ಕುಮು ಮಂಚ ಹತ್ತಿದ ಮೇಲೆ ಮಧುಸೂದನ ಹತ್ತಿರದ ಸೋಫಾದ ಮೇಲೆ ಕುಳಿತು "ಇಲ್ಲಿಯೇ ಕುಳಿತಿರುವೆ ನನ್ನನ್ನು ಕರೆದೆಯಾದರೆ ಆಗಲೇ ಬರುವೆ. ವರ್ಷಗಳು ಮೇಲೆ ವರ್ಷಗಳನ್ನು ಪರೀಕ್ಷಿಸುತ್ತಿರಲು ಸಿದ್ಧನಾಗಿರುವೆ" ಎಂದ.

ಕುಮುವಿನ ಮೈಯೆಲ್ಲ ರೋಮಾಂಚವಾಯಿತು. ಇದೆಂತಹ ಪರೀಕ್ಷೆ ಅವಳಿಗೆ! ಯಾರ ಬಾಗಿಲಲ್ಲಿ ಇಂದು ಹಣೆ ತಗುಲಿಸಿ ನಮಿಸುವುದು? ದೇವರಂತೂ ಉತ್ತರ ಕೊಡಲಿಲ್ಲ. ಯಾವ ಹಾದಿಯಲ್ಲಿ ಅವಳು ಇಲ್ಲಿಗೆ ಬಂದಳೋ ಅದಂತೂ ಸಂಪೂರ್ಣವಾಗಿ ತಪ್ಪುದಾರಿ. ಹಾಸಿಗೆಯಲ್ಲಿ ಕುಳಿತಂತೆಯೇ ಅವಳು ಮನಸ್ಸಿನಲ್ಲೇ ಹೇಳತೊಡಗಿದಳು. "ದೇವರೇ! ನೀನು, ನನ್ನನ್ನು ಎಂದೂ ಮರೆವಿನಲ್ಲಿ ತಳ್ಳಲಾರೆ. ಈಗಲೂ ನಿನ್ನನ್ನು ನಂಬಿರುವೆ. ಕಾಡಿನಲ್ಲಿ ದರ್ಶನ ಕೊಡುವೆನೆಂದು ಧ್ರುವನನ್ನು ನೀನೇ ಕಾಡಿಗೆ ಕರೆತಂದಿದ್ದೆ" ಎಂದುಕೊಂಡಳು.

ಆ ನಿಶ್ಶಬ್ದವಾದ ಕೋಣೆಯಲ್ಲಿ ಬೇರೆ ಸದ್ದಿರಲಿಲ್ಲ. ರಸ್ತೆಯ ಮೂಲೆಯಲ್ಲಿ ಆ ಹೆಂಡಗುಡುಕನ ಸಂಗೀತವೂ ಕೇಳಬರುತ್ತಿರಲಿಲ್ಲ. ಕೇವಲ ಸೆರೆ ಸಿಕ್ಕಿ ಬಿದ್ದಿದ್ದ ನಾಯಿ ಮಾತ್ರ ದಣಿದಿದ್ದರೂ ಆಗಾಗ್ಗೆ ಆರ್ತನಾದ ಮಾಡುತ್ತಿತ್ತು.

ಸ್ವಲ್ಪ ಕಾಲವಾದರೂ ಬಹಳ ಹೊತ್ತೆಂದು ಮನಸ್ಸಿಗೆ ತೋರುವುದು. ಸ್ತಬ್ಧತೆಯ ಹೊರೆ ಹೊತ್ತ ಝಾವ ಮುಂದುವರಿಯಬಯಸದಂತೆ ಹಾಗೆಯೇ ಇದ್ದಂತಿತ್ತು. ಇದೇ ಏನು ತನ್ನ ದಾಂಪತ್ಯದ ಶಾಶ್ವತ ಚಿತ್ರ? ಎರಡು ದಡಗಳಲ್ಲಿ ಇಬ್ಬರೂ ನೀರವವಾಗಿ ಕುಳಿತಿದ್ದರು ರಾತ್ರಿಗೆ ಕೊನೆಯಿಲ್ಲ. ನಡುವೆ ದಾಟಲಸಾಧ್ಯವಾದ ನಿಸ್ತಬ್ಧತೆ. ಕೊನೆಗೆ ಒಮ್ಮೆ ಕುಮು ತನ್ನ ಎಲ್ಲ ಶಕ್ತಿಯನ್ನೂ ಒಟ್ಟುಗೂಡಿಸಿ ಮಂಚದಿಂದ ಇಳಿದು ಬಂದವಳು "ನನ್ನನ್ನು ತಪ್ಪಿತಸ್ಥೆಯಾಗಿ ಮಾಡಬೇಡ" ಎಂದಳು.

ಮಧುಸೂದನ ಗಂಭೀರವಾದ ಕೊರಲಿನಲ್ಲಿ "ಏನು ಬೇಕು ಹೇಳು, ಏನು ಮಾಡಬೇಕು?" ಎಂದ. ಕೊನೆಯ ಮಾತನ್ನೂ ಸಂಪೂರ್ಣವಾಗಿ ಹೊರಗೆಡವಬೇಕೆಂದು ಇಚ್ಛೆ.

ಕುಮು "ಮಲಗು ಬಾ" ಎಂದಳು.

ಆದರೆ ಇದೇ ಏನು ಜಯ ?

## ३೮

ಮರುದಿನ ಬೆಳಗ್ಗೆ ಮೋತಿಯತಾಯಿ ಕುಮುವಿಗಾಗಿ ಒಂದು ಬಟ್ಟಲು ಹಾಲು ತಂದಳು. ನೋಡಿದಾಗ ಕುಮುವಿನ ಕಣ್ಣುಗಳೆರಡೂ ಕೆಂಪಗೆ ಊದಿಕೊಂಡಿದ್ದುವು. ಮುಖದ ಬಣ್ಣ ಬೂದಿಯಂತಾಗಿತ್ತು. ಬೆಳಗ್ಗೆ ಬಿಸಿಲುಮಹಡಿಯ ಮೇಲೆ ಮೂಲೆಯಲ್ಲಿ ಆಸನ ಹಾಕಿ ಕುಳಿತು ಕೊಂಡು ಪೂರ್ವದಿಕ್ಕಿಗೆ ಮುಖ ತಿರುಗಿಸಿಕೊಂಡು ಮಾನಸಪೂಜೆ ಮಾಡುತ್ತಿರುವಾಗ, ಕುಮುವನ್ನು ಕಾಣಬಹುದೆಂದು ಅವಳು ಭಾವಿಸಿದ್ದಳು. ಆದರೆ ಅವಳು ಅಲ್ಲಿರಲಿಲ್ಲ. ಮೆಟ್ಟಲು ಹತ್ತಿದೊಡನೆ ಪಕ್ಕದಲ್ಲಿ ವಸಾರೆ ಹಾಕಿದ ಭಾಗದಲ್ಲಿ ಅಲ್ಲಿಯೇ ಗೋಡೆ ಒರಗಿಕೊಂಡು ತೀರ ದಣಿದವಳಂತೆ ನೆಲದ ಮೇಲೆ ಕುಳಿತಿದ್ದಳು. ಇಂದು ದೇವರ ಮೇಲೆ ಕೋಪಗೊಂಡಿರುವಳೆಂದು ತೋರುತ್ತೆ. ನಿರಪರಾಧಿಯಾದ ಹುಡುಗನನ್ನು ನಿಷ್ಠುರನಾದ ತಂದೆ ನಿಷ್ಕಾರಣವಾಗಿ ಹೊಡೆದರೆ ಆಗ ಅವನು ಹೇಗೆ ಏನೂ ಅರಿಯಲಾರದೆ ಇರುವನೋ, ದುಗುಡದಿಂದ ಪೆಟ್ಟುತಿಂದು ಪ್ರತಿವಾದವನ್ನು ಮಾಡಲೂ ನಾಲಗೆ ಬರುವುದಿಲ್ಲವೋ, ಹಾಗೆಯೇ ದೇವರ ವಿಷಯ ಎಂಬುದಾಗಿ ಕುಮು ಭಾವಿಸಿಕೊಂಡು ತೆಪ್ಪಗಿದ್ದಳು. ಯಾವ ಕರೆಯನ್ನು ಅವಳು ದೈವವೆಂದು ನಂಬಿದ್ದಳೋ ಅದು ಈ ಅಶುಚಿತೆಯಲ್ಲೇ, ಈ ಆಂತರಿಕ ಅಸತೀತ್ವದಲ್ಲೇ ? ದೇವರು ತಾನಾಗಿಯೇ ಬಯಸಿ ಬೇಟೆಯನ್ನು ಹಾದಿ ತಪ್ಪಿಸಿ ಹೀಗೆ ಕರೆತಂದನೇನು ? ಯಾವ ಶರೀರದಲ್ಲಿ ಮನಸ್ಸೆನ್ನುವುದು ಇಲ್ಲವೊ ಆ ಮಾಂಸಪಿಂಡವನ್ನು ಅವನಿಗೆ ಹೇಗೆ ನೈವೇದ್ಯ ಒಪ್ಪಿಸುವುದು ? ಇಂದು ಯಾವ ಬಗೆಯಲ್ಲೂ ಭಕ್ತಿ ಮೂಡಲಿಲ್ಲ. ಇಷ್ಟು ದಿನ ಕುಮು "ನನ್ನನ್ನು ನೀನು ಸಹಿಸಿಕೊ" ಎಂದು ಬಾರಿಬಾರಿಗೆ ಹೇಳಿರುವಳು. ಇಂದು ಅವಳ ದಂಗೆಕೋರ ಮನಸ್ಸು ನಿನ್ನನ್ನು ನಾನು ಸಹಿಸುವುದಾದರೂ ಹೇಗೆ ? ಯಾವ ನಾಚಿಕೆಯಿಂದ ನಿನ್ನ ಪೂಜೆ ತರಲಿ ? ನಿನ್ನ ಭಕ್ತಿಯನ್ನು ಸ್ವತಃ ಸ್ವೀಕರಿಸಿದೆ. ಅದನ್ನು

ಮಾನಿನ ಮಾಂಸದ ಬೆಲೆಗಾಗಿ ಹೆಣ್ಣುಮಾರಿ ಹೋಗುವ ಗುಲಾಮರ ಸಂತೆಯಲ್ಲಿ, ನಿರ್ಮಾಲ್ಯ ಸ್ವೀಕರಿಸುವುದಕ್ಕಾಗಿ ಯಾರೂ ಶ್ರದ್ಧೆಯಿಂದ ಪೂಜೆಮಾಡದ ಎಡೆಯಲ್ಲಿ, ಅಡಿಸಿಂದ ಹೂದೋಟವನ್ನು ಮೋಯಿಸುವ ಎಡೆಯಲ್ಲಿ ಮಾರಿಬಿಟ್ಟಿರುವೆ" ಎಂದಿತು.

ಮೋತಿಯ ತಾಯಿ ಹಾಲು ಕುಡಿ ಎಂದು ಬಲವಂತ ಮಾಡಲು "ಕುಮು, ಇರಲಿ, ಬಿಡು," ಎಂದಳು.

ಮೋತಿಯ ತಾಯಿ, "ಯಾಕೆ? ಯಾಕೆ ಬಿಡಬೇಕು? ನನ್ನ ಹಾಲಿನ ಬಟ್ಟಲಿನ ದೋಷವೇನು?" ಎಂದಳು.

ಕುಮು 'ಇನ್ನೂ ಸ್ನಾನ ಮಾಡಿಲ್ಲ. ಪೂಜೆ ಮಾಡಿಲ್ಲ' ಎಂದಳು.

ಮೋತಿಯ ತಾಯಿ, "ನಡೆ, ನೀನು ಸ್ನಾನಕ್ಕೆ ಹೋಗು. ನಾನು ಕಾದಿರುವೆ" ಎಂದಳು.

ಕುಮು ಸ್ನಾನ ಮುಗಿಸಿಕೊಂಡು ಬಂದಳು. ಇನ್ನು ಅವಳು ಬಿಸಿಲ್ಮಹಡಿಯ ಮೂಲೆಯಲ್ಲಿ ಹೋಗಿ ಕೂತುಕೊಳ್ಳುವಳೆಂದು ಮೋತಿಯ ತಾಯಿ ಎಣಿಸಿದಳು. ಕುಮು ಮುಹೂರ್ತ ಮಾತ್ರದಲ್ಲಿ ಅಭ್ಯಾಸದ ಬಲದಿಂದ ಮೇಲ್ಮಹಡಿಯ ಕಡೆ ಹೋಗಲು ಕಾಲಿಟ್ಟಿದ್ದಳು. ಆದರೆ ಹೋಗಲಿಲ್ಲ. ಹಿಂತಿರುಗಿ ಮತ್ತೆ ಹಿಂದಿನಂತೆ ಅಲ್ಲೇ ನೆಲದ ಮೇಲೆ ಕುಳಿತಳು. ಅವಳ ಮನಸ್ಸು ಇನ್ನೂ ಸಿದ್ಧವಾಗಿರಲಿಲ್ಲ.

"ಅಣ್ಣನಿಂದ ಕಾಗದ ಬಂದಿಲ್ಲವೇನು?" ಎಂದು ಮೋತಿಯ ತಾಯಿಯನ್ನು ಕುಮುದಿನಿ ಕೇಳಿದಳು.

ಬಹುಶಃ ಕಾಗದ ಬಂದಿರಬಹುದೆಂದು ಮೋತಿಯ ತಾಯಿ ಬೆಳಗ್ಗೆ ಹೊತ್ತಿಗೆ ಮುಂಚೆ ಗುಟ್ಟಾಗಿ ಆಫೀಸು ರೂಮಿಗೆ ಹೋಗಿ, ಕಾಗದದ ಡ್ರಾಯರ್ ಎಳೆಯಲು ಅದಕ್ಕೆ ಬೀಗ ಹಾಕಿದ್ದನ್ನು ಕಂಡಳು. ಅಂತೂ ಇನ್ನು ಕಳ್ಳತನದ ಮೇಲೆ ದೃಷ್ಟಿಯಿಡುವ ಹಾದಿಗೆ ಅಡ್ಡಿಯಾಯಿತು.

ಮೋತಿಯ ತಾಯಿ, "ಖಂಡಿತ ಹೇಳಲು ಸಾಧ್ಯವಿಲ್ಲ. ವಿಚಾರಿಸಿ ತಿಳಿಯುತ್ತೇನೆ" ಎಂದಳು.

ಈ ಸಮಯದಲ್ಲಿ ಇದ್ದಕ್ಕಿದ್ದಂತೆ ಶ್ಯಾಮಾ ಬಂದು, "ಯಜಮಾನಿ! ನೀನು ಯಾಕೆ ಹೀಗೆ ಸಪ್ಪಗಿರುವೆ? ಖಾಯಿಲೆಯೇನೂ ಇಲ್ಲವಷ್ಟೆ?" ಎಂದಳು.

ಕುಮು "ಇಲ್ಲ" ಎಂದಳು.

"ತವರುಮನೆಗಾಗಿ ಮನಸ್ಸು ಹೇಗೋ ಅನ್ನಿಸುತ್ತೆ ಅಲ್ಲವೆ? ಆಹಾ! ಹಾಗೆ ಆಗುವುದು ಸಹಜವೇ. ಅಂತೂ ನಿಮ್ಮ ಅಣ್ಣ ಬರುವರಲ್ಲ, ಇಲ್ಲೇ ನೋಡಬಹುದಲ್ಲ—"

ಕುಮು ಬೆಚ್ಚಿಬಿದ್ದು, ಶ್ಯಾಮಾಳ ಮುಖದ ಕಡೆ ಉತ್ಸುಕ ದೃಷ್ಟಿಯಿಂದ ನೋಡಿದಳು.

ಮೋತಿಯ ತಾಯಿ "ಈ ಸುದ್ದಿ ನಿನಗೆ ಹೇಗೆ ಗೊತ್ತಾಯಿತು?" ಎಂದು ಕೇಳಿದಳು.

"ಇದನ್ನು ಹೇಳುವೆನು ಕೇಳು. ನಮ್ಮ ಅಡಿಗೆ ಮನೆಯ ಪಾರ್ವತಿ ಹೇಳಿದ್ದು ಎಲ್ಲರಿಗೂ ಗೊತ್ತಿದೆಯಷ್ಟೆ. ಇವಳ ತಂದೆಯ ಮನೆಯ ಗುಮಾಸ್ತರು ರಾಜಾ ಬಹದ್ದೂರರ ಹತ್ತಿರ ಯಜಮಾನಿಯ ಸುದ್ದಿ ವಿಚಾರಿಸಲು ಬಂದಿದ್ದರಂತೆ. ಚಿಕಿತ್ಸೆಗಾಗಿ ಯಜಮಾನಿಯ ಅಣ್ಣ ಒಂದೆರಡು ದಿನಗಳಲ್ಲೇ ಕಲ್ಕತ್ತೆಗೆ ಬರುವರಂತೆ ಎಂದು ಅವರು ಭಾಯಿಂದ ಕೇಳಿದಳಂತೆ"

ಕುಮು ಉದ್ವಿಗ್ನಳಾಗಿ, "ಅವರ ಖಾಯಿಲೆ ಹಾಗಾದರೆ ಹೆಚ್ಚಿತೇನು?" ಎಂದು ಕೇಳಿದಳು.

"ಅದನ್ನು ಹೇಳಲು ಸಾಧ್ಯವಿಲ್ಲ. ಹಾಗೇನೂ ಯೋಚನೆ ಮಾಡಬೇಕಾದ ಸಂದರ್ಭವಿಲ್ಲ. ಹಾಗಿದ್ದಿದ್ದರೆ ತಿಳಿಯುತ್ತಿತ್ತು."

"ಯಜಮಾನಿಯ ಮನಸ್ಸು ಇನ್ನೂ ಒಲಿದಿಲ್ಲ. ಅವಳು ಮತ್ತೆ ತವರಿನ ಕಡೆ ಮುಖ ತಿರುಗಿಸಿ ಇನ್ನೂ ಅನ್ಯ ಮನಸ್ಕಳಾದಾಳು" ಎಂದು ಮಧುಸೂದನ ಕುಮುವಿಗೆ ಅವಳ ಅಣ್ಣನ ಸುದ್ದಿ ತಿಳಿಸುತ್ತಿಲ್ಲವೆಂದು ಶ್ಯಾಮಾ ಅರಿತಳು. "ನಿಮ್ಮ ಅಣ್ಣನಂತಹ ಮನುಷ್ಯ ಇನ್ನಿಲ್ಲ—ಎನ್ನುವ

ಮಾತನ್ನೇ ಎಲ್ಲರ ಬಾಯಲ್ಲೂ ಕೇಳುತ್ತೇವೆ" ಎಂದಳು. ಹೀಗೆ ಹೇಳಿ ಮೋತಿಯ ತಾಯಿಗೆ, "ನಡೆ, ಹೊತ್ತಾಯಿತು. ಅಡಿಗೆಯ ಸಾಮಾನು ಕೊಡಬೇಕು. ಆಫೀಸಿಗೆ ಹೋಗುವವರಿಗೆ ಅಡಿಗೆಗೆ ಹೊತ್ತಾಗಿ ಹೋಗುತ್ತೆ" ಎಂದಳು.

ಮೋತಿಯ ತಾಯಿ ಹಾಲಿನ ಬಟ್ಟಲನ್ನು ಮತ್ತೊಮ್ಮೆ ಕುಮುವಿನ ಕಡೆ ನೀಡಿ "ಅಕ್ಕಾ, ಹಾಲು ತಣ್ಣಗಾಗುತ್ತಿದೆ. ಕುಡಿದು ಬಿಡು ಲಕ್ಷ್ಮೀ" ಎಂದಳು.

ಈ ಬಾರಿ ಕುಮು ಹಾಲು ಕುಡಿಯಲು ನೆವ ಹೇಳಲಿಲ್ಲ.

ಮೋತಿಯ ತಾಯಿ ಪಿಸುಮಾತಿನಲ್ಲೇ "ಇವೊತ್ತು ಉಗ್ರಾಣಕ್ಕೆ ಬರುವೆಯೇನು?" ಎಂದು ಕೇಳಿದಳು.

ಕುಮು "ಇವೊತ್ತು ಬೇಡ. ಗೋಪಾಲನನ್ನು ನನ್ನ ಹತ್ತಿರಕ್ಕೆ ಸ್ವಲ್ಪ ಕಳುಹಿಸು" ಎಂದಳು.

ಕಷ್ಪಾಗಿಯೂ ಕಠೋರವಾಗಿಯೂ ಇದ್ದ ಕ್ಷುಧಿತ ಜರೆಯೊಂದು ಹೊರಗಿನಿಂದ ರಾಹುವಿನಂತೆ ಕುಮುವನ್ನು ನುಂಗುತ್ತಿತ್ತು. ಯಾವ ಪರಿಣತ ವಯಸ್ಸು ಶಾಂತವಾಗಿಯೂ ಸ್ನಿಗ್ಧವಾಗಿಯೂ ಗಂಭೀರವಾಗಿಯೂ ಇರುವುದೋ ಇದು ಅದಲ್ಲ. ಯಾರು ಅತಿಶಯವಾದ ಆಶೆಯಿಂದ ಸಂಯಮವಿಲ್ಲದೆಯೂ, ಯಾರ ಪ್ರೇಮದಿಂದಲೂ ಇರುವರೋ ಆತನ ಸ್ಪರ್ಶದಲ್ಲಿ ಕುಮುವಿಗೆ ಇಷ್ಟೊಂದು ಬೇಸರ. ಅವಳ ಗಂಡ ವಯಸ್ಸು ಹೆಚ್ಚೆಂದು ಕುಮುವಿಗೆ ಯಾವ ಬಗೆಯ ಆಕ್ಷೇಪಣೆಯೂ ಇರಲಿಲ್ಲ. ಆದರೆ ಆ ವಯಸ್ಸು ತನ್ನ ಆತ್ಮಮರ್ಯಾದೆಯನ್ನು ಮರೆತಿದೆಯೆಂದು ಅವಳಿಗೆ ಇಷ್ಟು ನೋವು. ಸಂಪೂರ್ಣ ಆತ್ಮನಿವೇದನ ಒಂದು ಹಣ್ಣಿನಂತೆ. ತಡೆಯಿಲ್ಲದ ಗಾಳಿ ಬೆಳಕಿನಲ್ಲಿ ಅದು ಪಕ್ವವಾಗುವುದು. ಕಸರುಕಾಯನ್ನು ಒರಳಲ್ಲಿ ಇಡಿದರೆ ಅದು ಹಣ್ಣಾಗುವುದಿಲ್ಲವಷ್ಟೆ. ಅವಕಾಶವಿಲ್ಲದೆ ಇಂದು ಅವರುಗಳ ಸಹವಾಸ ಕುಮುವಿಗೆ ಇಷ್ಟು ನೋವುಂಟು ಮಾಡುತ್ತಿತ್ತು. ಇಷ್ಟು ಅವಮಾನ ಮಾಡುತ್ತಿತ್ತು. ಓಡುವುದೆಲ್ಲಿಗೆ? ಮೋತಿಯ ತಾಯಿಗೆ "ಗೋಪಾಲನನ್ನು ಕಳುಹಿಸಿಕೊಡು" ಎಂದದ್ದೇಕೆ?

ಅದು ಓಡಿಹೋಗುವ ಹಾದಿಯನ್ನು ಹುಡುಕುವುದಕ್ಕಾಗಿಯಲ್ಲವೆ? ಮುದಿಯಾದ ಅಶುಚಿತ್ವದ ಬಳಿಯಿಂದ ಎಳೆತನದ ನಿರ್ಮಲತೆಯ ಮಧ್ಯೆ, ಕೆಟ್ಟುಹೋದ ಉಸಿರುಬಿಟ್ಟ ಗಾಳಿಯಿಂದ ಹೂದೋಟದ ವಾತಾವರಣಕ್ಕೆ ಹೋಗುವಂತೆ!

ತೆಳುವಾದ ಹತ್ತಿತುಂಬಿದ ಚೀಟಿ ಅಂಗಿಯನ್ನು ತೊಟ್ಟು ಹಾಬಲು ಮೆಟ್ಟಿಲ ಬಾಗಿಲ ಬಳಿ ಬಂದು ಹೆದರುತ್ತ ಹೆದರುತ್ತ ನಿಂತಿದ್ದ. ಅವನ ತಾಯಿಯ ಹಾಗೆಯೇ ಅಗಲವಾದ ಕಪ್ಪು ಕಣ್ಣುಗಳು, ಅವಳಂತೆಯೇ ನೀರು ತುಂಬಿದ ಮೇಘದಂತೆ ಶ್ಯಾಮಲ ವರ್ಣ. ಕೆನ್ನೆಗಳೆರಡು ಉಬ್ಬಿದ್ದುವು. ತಲೆಗೂದಲು ಒತ್ತಾಗಿ ಕತ್ತರಿಸಿತ್ತು.

ಕುಮು ಎದ್ದು ಹೋಗಿ ಸಂಕೋಚಗೊಂಡಿದ್ದ ಹಾಬಲುವನ್ನು ಎಳೆದುಕೊಂಡು ಎದೆಗೆ ಅಪ್ಪಿಕೊಂಡಳು. "ತುಂಟ ಹುಡುಗ. ಈ ಎರಡು ದಿನ ಯಾಕೆ ಬರಲಿಲ್ಲ?" ಎಂದಳು.

ಹಾಬಲು ಕುಮುವಿನ ಗಲ್ಲವನ್ನು ಹಿಡಿದುಕೊಂಡು ಕಿವಿಯಲ್ಲೇ, "ದೊಡ್ಡಮ್ಮಾ, ನಿನಗಾಗಿ ಏನು ತಂದಿರುವೆ ಹೇಳು ನೋಡೋಣ?" ಎಂದಳು.

ಕುಮು ಅವನ ಗಲ್ಲವನ್ನು ಮುದ್ದಿಟ್ಟು, "ಮಾಣಿಕ್ಯ ತಂದಿರುವೆ ಗೋಪಾಲ" ಎಂದಳು.

"ನನ್ನ ಜೇಬಿನಲ್ಲಿದೆ"

"ಒಳ್ಳೆಯದು. ಹಾಗಾದರೆ ಹೊರಗೆ ತೆಗೆ—"

"ನೀನು ಹೇಳಲಾರದೆ ಹೋದೆಯಲ್ಲ—"

"ನನಗೆ ಬುದ್ಧಿ ಇಲ್ಲ. ಕಣ್ಣಿನಿಂದ ಯಾವುದನ್ನು ಕಾಣುವೆನೊ ಅದನ್ನೇ ಅರಿಯಲಾರೆ, ಯಾವುದನ್ನು ನೋಡೆನೊ ಅದನ್ನು ಮತ್ತೂ ತಪ್ಪಾಗಿ ಅರಿಯುವೆ."

ಆಗ ಹಾಬಲು ಬಹಳ ನಿಧಾನವಾಗಿ ಜೇಬಿನಿಂದ ಕತ್ತೆ ಕಾಗದದ ಪೊಟ್ಟಣವೊಂದನ್ನು ಹೊರಗೆ ತೆಗೆದು ಕುಮುವಿನ ಮಡಿಲಲ್ಲಿಟ್ಟು ಓಡಿಹೋಗುವುದರಲ್ಲಿದ್ದನು.

"ಊಹೂಂ. ನಿನ್ನನ್ನು ಓಡಿ ಹೋಗುವುದಕ್ಕೆ ಬಿಡುವುದಿಲ್ಲ"

ಪೊಟ್ಟಣವನ್ನು ಕೈಯಿಂದ ಮುಚ್ಚಿ ವ್ಯಸ್ತನಾಗಿ "ಹಾಗಾದರೆ ಈಗ ನೋಡಕೂಡದು" ಎಂದ.

"ಇಲ್ಲ. ಹೆದರಬೇಡ. ನೀನು ಹೊರಟು ಹೋದರೆ ಬಿಚ್ಚುತ್ತೇನೆ."

"ಒಳ್ಳೆಯದು ದೊಡ್ಡಮ್ಮಾ ಮತ್ತೆ ನೀನು ಜಡೆ ಮುನಿಯನ್ನು ನೋಡಿದ್ದೀಯೇನು ?"

"ಏನೋ, ನೋಡಿದ್ದರೂ ನೋಡಿರಬಹುದು. ಆದರೆ ಗುರುತು ಹಿಡಿಯುವುದಕ್ಕೆ ಸಾವಕಾಶವಾಗಬಹುದು"

ಕೆಳಗೆ ಅಂಗಳದ ಅರುಗಿನಲ್ಲಿ ಇಜ್ಜಲು ಹಾಕುವ ಕೋಣೆಯಲ್ಲಿ ಸಂಜೆಯ ಹೊತ್ತಿನಲ್ಲಿ ಕಪಟದ ಹಕ್ಕಿಯ ಮೇಲೆ ಅವಳು ಬರುತ್ತಾಳೆ"

"ಕಪಟದ ಹಕ್ಕಿಯ ಬೆನ್ನಮೇಲೆ ಏರಿ ಬರುತ್ತಾಳೆಯೆ ?"

"ಮನಸ್ಸಾಯಿತೆಂದರೆ ಅವಳು ಬಹಳ ಸಣ್ಣವಳಾಗಬಹುದು. ಕಣ್ಣಿಗೆ ಕಾಣಿಸಲಾರದಷ್ಟು ಸಣ್ಣಗೆ"

"ಆ ಮಂತ್ರವನ್ನ ಅವಳ ಹತ್ತಿರ ಕಲಿಯಬೇಕಲ್ಲವೆ ?"

"ಯಾಕೆ, ದೊಡ್ಡಮ್ಮಾ?"

"ನಾನೇನಾದರೂ ಓಡಿ ಹೋಗುವುದಕ್ಕಾಗಿ ಇದ್ದಲ್ಲಿ ಕೋಣೆಯಲ್ಲಿ ಅವಿತುಕೊಂಡೆನಾದರೆ ಆಗ ಯಾರೂ ನನ್ನನ್ನು ನೋಡದೆ ಇರುವಂತೆ"

ಹಾಬಲು ಈ ಮಾತಿನ ಅರ್ಥವನ್ನೇ ತಿಳಿಯಲಾರದೆ ಹೋದ." ಇಜ್ಜಲ ನಡುವೆ ಸಿಂಧೂರದ ಭರಣಿಯನ್ನು ಮುಚ್ಚಿ ಇಟ್ಟಿದಾಳೆ. ಆ ಸಿಂಧೂರ ಎಲ್ಲಿಂದ ತಂದಿದ್ದಾಳೆ ಬಲ್ಲೆಯೇನು ?"

"ಗೊತ್ತು ಅಂತ ಕಾಣುತ್ತಪ್ಪ"

"ಸರಿ. ಹೇಳು ನೋಡೋಣ."

"ಮುಂಜಾನೆಯ ಮೋಡದ ಒಳಗಿನಿಂದ."

ಹಾಬಲೂ ಸ್ತಂಭಿತನಾದ. ಅವನಿಗೆ ಯೋಚನೆಗಿಟ್ಟುಕೊಂಡಿತು. ಆ ಸುದ್ದಿ ಹೇಳಿದ ವ್ಯಕ್ತಿ ಸಾಗರದ ಆಚೆ ಇದ್ದ ರಾಕ್ಷಸರ ಪಟ್ಟಣದ ಕಥೆ

ಹೇಳಿತ್ತು. ಆದರೆ ದೊಡ್ಡಮ್ಮನ ಮಾತು ನಂಬಲರ್ಹವಾದುದು ಎಂದು ಮನಸ್ಸಿಗೆ ಅನ್ನಿಸಿತು. ಆದರಿಂದಲೇ ವಿರುದ್ಧವಾದ ಚರ್ಚೆ ಏನೂ ಎತ್ತದೆ, "ಆ ಭರಣಿಯನ್ನ ಯಾವ ಹುಡುಗಿ ಹುಡುಕಿ ತಂದು ಹಣೆಗೆ ಆ ಸಿಂಧೂರ ಹಚ್ಚಿಕೊಳ್ಳುವಳೋ ಅವಳು ಮಹರಾಣಿಯಾಗುವಳು" ಎಂದ.

"ಚೆನ್ನಾಯಿತು! ಯಾವಳೋ ನಿರ್ಭಾಗ್ಯಳಿಗೆ ಈ ಸುದ್ದಿ ತಿಳಿದಿದೆ ಅಲ್ಲವೆ?"

"ನಡುಕಲ ಚಿಕ್ಕಮ್ಮನ ಮಗಳು ಖುದಿ ಬಲ್ಲಳು. ಬುಟ್ಟಿ ಎತ್ತಿಕೊಂಡು ಬೆಳಗಿನ ಹೊತ್ತು ಧನ್ನು ನಿತ್ಯ ಇದ್ದಲು ತರಲು ಹೋಗುವಾಗ ಖುದಿ ಅವನ ಜೊತೆಯಲ್ಲೇ ಹೋಗುತ್ತಾಳೆ. ಅವಳು ಸ್ವಲ್ಪವೂ ಭಯ ಪಡುವುದಿಲ್ಲ."

"ಅವಳು ಎಳೆಯ ಹುಡುಗಿ, ಆದರಿಂದಲೇ ಮಹಾರಾಣಿ ಆಗುವುದಕ್ಕೂ ಹೆದರುವುದಿಲ್ಲ"

ಹೊರಗೆ ಉತ್ತರ ದಿಕ್ಕಿನ ಶೀತದ ಗಾಳಿ ಬೀಸುತ್ತಿತ್ತು. ಅದರಿಂದಲೇ ಕುಮು ಹಾಬಲುವನ್ನು ಕೋಣೆಯ ಒಳಕ್ಕೆ ಕರೆದುಕೊಂಡು ಹೋದಳು. ಅಲ್ಲಿ ಸೋಫಾದಲ್ಲಿ ಕುಳಿತು ಅವನನ್ನು ತೊಡೆಯ ಮೇಲೆ ಕೂಡಿಸಿಕೊಂಡಳು. ಪಕ್ಕದ ಟೀಪಾಯಿಯ ಮೇಲೆ ಬೆಳ್ಳಿಯ ಸಣ್ಣ ತಟ್ಟೆಯಲ್ಲಿ ಶೀತಕಾಲದ ಹೂವುಗಳಿದ್ದುವು. ಚೆಂಡೆ, ಜಾಜಿ, ಸುತ್ತುಮಲ್ಲಿಗೆ, ಯವಾ, ಮೊದಲಾದ ಹೂವುಗಳನ್ನು ಪ್ರತಿನಿತ್ಯದ ಕಟ್ಟಳೆಯಂತೆ ತೋಟಗಾರ ತಂದಿಟ್ಟಿದ್ದ. ಕುಮು ಮೇಲ್ಮಹಡಿಯ ಮೂಲೆಯಲ್ಲಿ ಕುಳಿತು ಸೂರ್ಯೋದಯದ ಕಡೆ ಮುಖಮಾಡಿ ಇವನ್ನು ದೇವರಿಗೆ ಅರ್ಪಿಸುವಳೆಂದು ಅವು ಕಾಯ್ದುಕೊಂಡಿದ್ದುವು. ಇಂದು ಅರ್ಪಣೆಯಾಗದ ಆ ಹೂಗಳನ್ನು ತಟ್ಟೆಯ ಸಮೇತ ಎತ್ತಿಕೊಂಡು ಹಾಬಲುವಿನ ಹತ್ತಿರ ಹಿಡಿದಳು.

"ಹೂ ಬೇಕೆ?" ಎಂದು ಕೇಳಿದಳು.

"ಹೂಂ, ಬೇಕು."

"ಏನು ಮಾಡುತ್ತೀಯೆ ಹೇಳು?"

"ಪೂಜಯಾಮಿ, ಪೂಜಯಾಮಿ ಆಡುತ್ತೇನೆ"

ಕುಮುವಿನ ಸೊಂಟದಲ್ಲಿ ರೇಷ್ಮೆಯ ಕೈವಸ್ತ್ರವೊಂದಿತ್ತು. ಆದರಲ್ಲಿ ಹೂಗಳನ್ನು ಕಟ್ಟಿ ಅವನನ್ನು ಮುದ್ದಿಟ್ಟು "ಇದೋ ಹಿಡಿ'' ಎಂದಳು. "ನನ್ನದೂ ಪೂಜಯಾಮಿ, ಪೂಜಯಾಮಿ' ಆಟ ಆಯಿತು'' ಎಂದು ಮನಸ್ಸಿನಲ್ಲೇ ಅಂದುಕೊಂಡಳು. "ಗೋಪಾಲ್, ಈ ಹೂವುಗಳಲ್ಲಿ ಯಾವುದನ್ನು ನೀನು ಬಹಳ ಪ್ರೀತಿಸುವೆ ಹೇಳು ನೋಡೋಣ?'' ಎಂದಳು.

ಹಾಬಲು 'ಯವಾಪುಷ್ಪ' ಎಂದ.

"ಅದನ್ನು ಯಾಕೆ ಪ್ರೀತಿಸುವೆ ಹೇಳಲೇನು?"

"ಹೇಳು ನೋಡೋಣ?''

"ಅದೇ ಮತ್ತೆ ಬೆಳಕು ಹರಿಯುವುದರೊಳಗೆ ಜಡೆಮುನಿಯ ಸಿಂಧೂರದ ಭರಣಿಯಿಂದ ಬಣ್ಣ ಕದಿಯುತ್ತೆ ಅಲ್ಲವೆ?''

ಹಾಬಲು ಸ್ವಲ್ಪಹೊತ್ತು ಗಂಭೀರವಾಗಿ ಕುಳಿತಿದ್ದನು. ಹಠಾತ್ತಾಗಿ "ದೊಡ್ಡಮ್ಮಾ, ಯವಾಪುಷ್ಪದ ಬಣ್ಣ ಸರಿಯಾಗಿ ನಿನ್ನ ಸೀರೆಯ ಕೆಂಪಂಚಿನ ಹಾಗೆಯೇ ಇದೆ.'' ಇಷ್ಟರಲ್ಲೇ ಅವನ ಮನಸ್ಸಿನ ಅಭಿಪ್ರಾಯ ಹೇಳಿದ್ದಾಯಿತು.

ಈ ಸಮಯದಲ್ಲಿ ಹಠಾತ್ತಾಗಿ ಹಿಂತಿರುಗಿ ನೋಡಲು ಮಧುಸೂದನ ನಿಂತಿದ್ದ. ಅವನ ಹೆಜ್ಜೆಯ ಸದ್ದೂ ಕೇಳಿರಲಿಲ್ಲ. ಇದು ಅಂತಃಪುರಕ್ಕೆ ಬರುವ ಸಮಯವಲ್ಲ. ಈ ಹೊತ್ತಿನಲ್ಲಿ ಹೊರಗೆ ಆಫೀಸು ರೂಮಿನಲ್ಲಿ ವ್ಯಾಪಾರಕ್ಕೆ ಸಂಬಂಧಪಟ್ಟಂತೆ ಮಾತುಕತೆ ನಡೆಯುತ್ತಿತ್ತು. ಈ ವೇಳೆಯಲ್ಲಿ ದಳ್ಳಾಳಿಗಳೂ ಬರುತ್ತಿದ್ದರು. ಉಮೇದುವಾರರೂ ಬರುತ್ತಿದ್ದರು. ಬಗೆಬಗೆಯ ಚಿಲ್ಲರೆ ಸುದ್ದಿಗಳನ್ನೂ ಮತ್ತು ಕಾಗದ ಪತ್ರಗಳನ್ನೂ ಎತ್ತಿಕೊಂಡು ಸೆಕ್ರಟರಿಯೂ ಬರುತ್ತಿದ್ದ. ಮುಖ್ಯವಾದ ಕೆಲಸಕ್ಕಿಂತ ಈ ಹೆಚ್ಚಾದ ಕೆಲಸವು ಗದ್ದಲದಲ್ಲೇನೂ ಕಡಮೆ ಇರುತ್ತಿರಲಿಲ್ಲ.

೩೯

ಜೋಳಿಗೆಯಲ್ಲಿ ಅಕ್ಕಿಯೇ ಇಲ್ಲದೆ ಕೇವಲ ಹೊಟ್ಟು ಮಾತ್ರ ಶೇಖರವಾದ ಭಿಕ್ಷುಕನಂತೆ ಮಧುಸೂದನ ಇಂದು ಬೆಳಗ್ಗೆ ಬಹಳ ಕೋಪದ ಭಾವದಿಂದಲೇ ಹೊರಕ್ಕೆ ಹೋಗಿದ್ದ. ಆದರೆ ಅತೃಪ್ತಿಯು ಬೇಗೆ ಬಹು ಪ್ರಚಂಡವಾದದ್ದು. ಬಾಧೆಯಿಂದಲೇ ಬಾಧೆಯ ಕಡೆಗೆ ಎಳೆತವುಂಟಾಗಿರುತ್ತೆ.

ಅವನನ್ನು ಕಂಡೊಡನೆ ಹಾಬಲುವಿನ ಮುಖ ಒಣಗಿಹೋಯಿತು. ಎದೆ ನಡುಗಿತು. ಓಡಿಹೋಗಲು ಯತ್ನಿಸಿದನು. ಕುಮು ಬಲವಾಗಿ ಅಪ್ಪಿ ಹಿಡಿದುಕೊಂಡಿದ್ದಳು. ಏಳಲು ಅವಕಾಶ ಕೊಡಲಿಲ್ಲ.

ಅವನ್ನು ಮಧುಸೂದನ ಅರಿತ. ಹಾಬಲುವನ್ನು ಬಲವಾಗಿ ಗದರಿಸುತ್ತ, "ಇಲ್ಲೇನು ಮಾಡುತ್ತೀಯೆ? ಓದಲು ಹೋಗುವುದಿಲ್ಲವೆ?" ಎಂದ.

ಮೇಸ್ಟರು ಬರುವ ಸಮಯ ಇನ್ನೂ ಆಗಿರಲಿಲ್ಲ. ಈ ಮಾತು ಹೇಳುವ ಸಾಹಸ ಹಾಬಲುವಿಗೆ ಇರಲಿಲ್ಲ. ಸದ್ದಿಲ್ಲದೆ ತಲೆತಗ್ಗಿಸಿಕೊಂಡು ಮೆಲ್ಲಮೆಲ್ಲನೆ ಎದ್ದು ಹೊರಟ.

ಅವನನ್ನು ತಡೆಯಲು ಕುಮು ಮುಂದುವರಿದಳು. "ನಿನ್ನ ಹೂವು ಬಿಟ್ಟು ಬಿಟ್ಟೆಯಲ್ಲ. ತೆಗೆದುಕೊಂಡು ಹೋಗುವುದಿಲ್ಲವೇನು?" ಎಂದಳು. ಅನಂತರ ಆ ಕೈವಸ್ತ್ರದ ಗಂಟನ್ನು ಅವನಿದಿರಿನಲ್ಲಿ ಎತ್ತಿ ಹಿಡಿದಳು. ಹಾಬಲು ತೆಗೆದುಕೊಳ್ಳದೆ ಅಂಜುತ್ತ ಅಂಜುತ್ತ ದೊಡ್ಡಪ್ಪನ ಮುಖದ ಕಡೆ ನೋಡುತ್ತ ನಿಂತಿದ್ದ.

ಮಧುಸೂದನ ಥಟ್ಟನೆ ಕುಮುವಿನ ಕೈಯಿಂದ ಗಂಟನ್ನು ಕಿತ್ತುಕೊಂಡು "ಈ ಕೈವಸ್ತ್ರ ಯಾರದು?" ಎಂದು ಕೇಳಿದ.

ಮುಹೂರ್ತ ಮಾತ್ರದಲ್ಲಿ ಕುಮುವಿನ ಮುಖ ಕೆಂಪಡರಿತು. "ನನ್ನದು" ಎಂದಳು.

ಈ ವಸ್ತ್ರ ಸಂಪೂರ್ಣವಾಗಿ ಕುಮುವಿನದೆ ; ಸಂದೇಹವಿಲ್ಲ. ಆದರೆ ಅದು ಮದುವೆಗೆ ಮುಂಚಿನ ಸ್ವತ್ತು. ಅದರಲ್ಲಿ ಹೆಣೆದಿದ್ದ ರೇಷ್ಮೆಯ ಅಂಚೂ ಸಹ ಕುಮುವಿನ ಕೈ ಕೆಲಸವೇ.

ಹೂವುಗಳನ್ನು ತೆಗೆದು ನೆಲದ ಮೇಲೆ ಬಿಸುಟು ಮಧುಸೂದನ ಕೈವಸ್ತ್ರವನ್ನು ಜೇಬಿನಲ್ಲಿ ತುರುಕಿಕೊಂಡ.

" ಇದನ್ನು ನಾನೇ ಇಟ್ಟುಕೊಳ್ಳುವೆ. ಹುಡುಗ ಇದನ್ನು ತೆಗೆದುಕೊಂಡು ಏನು ಮಾಡಿಯಾನು ? ನೀನು ನಡೆ ಇನ್ನು– " ಎಂದ.

ಮಧುಸೂದನನ ಈ ಒರಟುತನದಿಂದ ಕುಮು ಸ್ತಂಭಿತಳಾದಳು. ನೊಂದ ಮುಖದೊಡನೆ ಹಾಬಲು ಹೊರಟು ಹೋದ. ಕುಮು ಏನೂ ಹೇಳಲಿಲ್ಲ.

ಅವಳ ಮುಖದ ಭಾವವನ್ನು ನೋಡಿ, ಮಧುಸೂದನನು, "ನೀನಂತೂ ದಾನ ಛತ್ರವನ್ನು ತೆರೆದಿಟ್ಟಿರುವೆ. ನನ್ನ ವಿಷಯದಲ್ಲಿ ಮಾತ್ರ ಸೊನ್ನೆಯೋ ? ಈ ವಸ್ತ್ರ ನನ್ನದಾಗಿರಲಿ. ನಿನ್ನಿಂದ ಏನಾದರೂ ಪಡೆದೆನೆಂದು ನೆನಪಿರುವುದು." ಎಂದ.

ಮಧುಸೂದನ ಯಾವುದನ್ನು ಬಯಸುವನೋ ಅದನ್ನು ಪಡೆಯುವುದಕ್ಕೆ ಅವನ ಮನಸ್ಸು ಹಿಂದೆಗೆಯುತ್ತಿತ್ತು.

ಕುಮು ತಲೆ ತಗ್ಗಿಸಿಕೊಂಡು ಸೋಫಾದ ಮೂಲೆಯಲ್ಲಿ ಸದ್ದಿಲ್ಲದೆ ಕುಳಿತಿದ್ದಳು. ಸೀರೆಯ ಕೆಂಪಂಚು ಅವಳ ತಲೆಯ ಸುತ್ತ ಮುಖವನ್ನು ಮುಚ್ಚಿತ್ತು. ಅದರ ಸಂಗಡವೇ ಅವಳ ಒದ್ದೆಯಾದ ಗಂಟು ಬಿಚ್ಚಿದ ಕೂದಲೂ ಜೋಲಾಡುತ್ತಿತ್ತು. ಆಕೆಯ ಕೊರಳನ್ನು ಕೋಮಲವಾದ ಚಿನ್ನದ ಹಾರವೊಂದು ಸುತ್ತಿಕೊಂಡಿತ್ತು. ಈ ಹಾರ ಅವಳ ತಾಯಿಯದು. ಅದರಿಂದಲೇ ಸರ್ವದಾ ಹಾಕಿಕೊಂಡಿರುತ್ತಿದ್ದಳು. ಇನ್ನೂ ಜಾಕೆಟ್ ತೊಟ್ಟಿರಲಿಲ್ಲ. ಒಳಗೆ ತೆಳ್ಳನೆಯ ಒಂದು ರವಿಕೆಯನ್ನು ತೊಟ್ಟಿದ್ದಳು. ತೋಳುಗಳೆರಡೂ ಕಾಣುವಂತಿದ್ದುವು. ಅತಿ ಸುಕುಮಾರವಾದ ಶುಭ್ರವಾದ ಕೈಗಳು. ಇಡೀ ದೇಹದಿಂದ ಯಾವುದೋ ಸಂದೇಶ ಕೇಳಿ ಬರುವಂತಿತ್ತು. ಮಧುಸೂದನ ಕಣ್ಣು ತಗ್ಗಿಸಿಕೊಂಡು ಅಭಿಮಾನಿ

ಯನ್ನು ದಿಟ್ಟಿಸಿ ನೋಡುತ್ತಿದ್ದ. ದಪ್ಪವಾದ ಚಿನ್ನದ ಕಡಗವನ್ನು ತೊಟ್ಟಿದ್ದ ಆ ಕೈಗಳಿಂದ ಅವನ ದೃಷ್ಟಿ ಕದಲಲಿಲ್ಲ. ಸೋಫಾದ ಮೇಲೆ ಅವಳ ಪಕ್ಕದಲ್ಲಿ ಕುಳಿತು ಅವಳ ಕೈ ಎಳೆದುಕೊಳ್ಳಲು ಯತ್ನಿಸಿದ. ಒಂದು ಬಗೆಯ ಅಡ್ಡಿ ಅನುಭವವಾಯಿತು. ಕುಮು ಕೈ ಸರಿಸಲು ಬಯಸಲಿಲ್ಲ. ಅವಳ ಕೈಯಲ್ಲಿ ಒಂದು ಕಾಗದದ ಪೊಟ್ಟಣವಿತ್ತು.

"ಆ ಕಾಗದದಲ್ಲಿ ಏನು ಸುತ್ತಿದೆ ?" ಎಂದು ಮಧುಸೂದನ ಕೇಳಿದ.

"ಗೊತ್ತಿಲ್ಲ."

"ಗೊತ್ತಿಲ್ಲ. ! ಹಾಗೆಂದರೆ ?"

"ಹಾಗೆಂದರೆ, ಅದು ನನಗೆ ಗೊತ್ತಿಲ್ಲ."

ಮಧುಸೂದನ ಅವಳ ಮಾತನ್ನು ನಂಬಲಿಲ್ಲ. "ಅದನ್ನು ನನಗೆ ಕೊಡು. ನಾನು ನೋಡುತ್ತೇನೆ" ಎಂದ.

"ಅದು ನನ್ನ ಗುಟ್ಟಿನ ಪದಾರ್ಥ. ತೋರಿಸಲು ಸಾಧ್ಯವಿಲ್ಲ" ಎಂದಳು ಕುಮು.

ಮುಹೂರ್ತ ಮಾತ್ರದಲ್ಲಿ ಅಂಬಿನಂತೆ ತೀಕ್ಷ್ಣವಾದ ಕೋಪ ಮಧುಸೂದನನ ತಲೆಗೇರಿತು. "ಏನಂದೆ ? ಅಹಂಭಾವ ಇನ್ನೂ ಕಡಿಮೆಯಾಗಿಲ್ಲವೆ ?" ಎಂದನು. ಬಳಿಕ ಬಲವಂತದಿಂದ ಆ ಕಾಗದದ ಪೊಟ್ಟಣವನ್ನು ಕಿತ್ತುಕೊಂಡು ಬಿಚ್ಚಿ ನೋಡಿದರೆ ಅದರಲ್ಲಿ, ಅಂತಹುದು ಏನೂ ಇರಲಿಲ್ಲ. ಸ್ವಲ್ಪ ಕಲ್ಯಾಣಸೇವೆ ಮಾತ್ರ ಇತ್ತು. ತಾಯಿಯು ಕೊಡುತ್ತಿದ್ದ ತಿಂಡಿಯ ಪೈಕಿ ಹಾಬಲೂವಿಗೆ ಇದರಲ್ಲಿ ಬಹಳ ಆಸೆಯಿತ್ತೆಂದು ತೋರುತ್ತೆ. ಅದರಿಂದಲೇ ಅವನು ಅದನ್ನು ಜಾಗರೂಕತೆಯಿಂದ ಪೊಟ್ಟಣ ಕಟ್ಟಿ ತಂದಿದ್ದ.

ಮಧುಸೂದನ ಮುಂದೆ ಮಾತಾಡಲಿಲ್ಲ. "ಇದೇನು ಸಂಗತಿ ! ಅಪ್ಪನ ಮನೆಯಲ್ಲಿ ಈ ಬಗೆಯ ತಿಂಡಿಯೇ ಕುಮುವಿಗೆ ಅಭ್ಯಾಸವೇನೋ ? ಅದರಿಂದಲೇ ಗುಟ್ಟಾಗಿ ತರಿಸಿ ಇಟ್ಟುಕೊಂಡಿದ್ದಾಳೆ. ನಾಚಿಕೆಯಿಂದ ಬಹಿರಂಗಪಡಿಸುವುದಕ್ಕೆ ಇಷ್ಟವಿದ್ದಿರಲಾರದು" ಎಂದು ಯೋಚಿಸಿದ. ಮನಸ್ಸಿನಲ್ಲೇ ನಗುಬಂತು. ಲಕ್ಷ್ಮಿಯ ದಾನವನ್ನು ಸ್ವೀಕರಿಸಲು

ಇನ್ನೂ ಕಾಲವಿಳಂಬವಾಗುವುದು. ಥಟ್ಟನೆ ತಲೆಯಲ್ಲೊಂದು ಯೋಚನೆ ಹೊಳೆಯಿತು. ಎದ್ದು ಬೇಗ ಬೇಗ ಹೊರಗೆ ಹೋದನು.

ಕುಮು ಆಗ ಡ್ರಾಯರಿನಿಂದ ತನ್ನ ಗಂಧದ ಸಣ್ಣ ಮರದ ಪೆಟ್ಟಿಗೆಯೊಂದನ್ನು ಹೊರಕ್ಕೆ ತೆಗೆದು ಅದರಲ್ಲಿ ಕಲ್ಯಾಣಸೇವೆಯನ್ನು ತುಂಬಿಟ್ಟು, ಅಣ್ಣನಿಗೆ ಕಾಗದ ಬರೆಯಲು ಕುಳಿತಳು. ಮೂರು ನಾಲ್ಕು ಸಾಲು ಬರೆಯುವುದರಲ್ಲಿ ಮಧುಸೂದನ ಪುನಃ ಕೋಣೆಯೊಳಕ್ಕೆ ಬಂದ. ಅವಸರ ಅವಸರವಾಗಿ ಕಾಗದವನ್ನು ಮುಚ್ಚಿಟ್ಟು ಕುಮು ನೆಟ್ಟಗೆ ಕುಳಿತಳು. ಮಧುಸೂದನನ ಕೈಯಲ್ಲಿ ಚಿನ್ನ ಬೆಳ್ಳಿಯ ನಕಾಶೆ ಕೆಲಸ ಮಾಡಿದ ಹಿಡಿ ಹಾಕಿದ್ದ ಫಲದಾನಿಯೊಂದಿತ್ತು. ಅದರ ಮೇಲೆ ಹೂ ಹೆಣೆದ ಸುವಾಸನೆ ಬೀರುತ್ತಿದ್ದ ರೇಷ್ಮೆಯ ಕೈ ವಸ್ತ್ರವಿತ್ತು. ನಗುಮುಖದೊಡನೆ ಅದನ್ನು ಮೇಜಿನ ಮೇಲೆ ಕುಮುವಿನ ಇದಿರಿನಲ್ಲಿಟ್ಟು "ಅದನ್ನು ಬಿಚ್ಚಿನೋಡು" ಎಂದ.

ಕುಮು ವಸ್ತ್ರವನ್ನು ತೆಗೆದು ನೋಡಿದಳು. ಆ ಬೆಲೆ ಬಾಳುವ ಫಲದಾನಿಯಲ್ಲಿ ತುಂಬ ಕಲ್ಯಾಣ ಸೇವೆ ಇತ್ತು. ಕುಮು ಒಂಟಿಯಾಗಿ ಇದ್ದಿದ್ದರೆ ನಗುತ್ತಿದ್ದಳು. ಈಗಲಾದರೋ ಒಂದು ಮಾತೂ ಆಡದೆ ಗಂಭೀರವಾಗಿ ಸುಮ್ಮನೆ ಕುಳಿತಿದ್ದಳು. ಅದಕ್ಕೆ ಬದಲಾಗಿ ಅವಳು ಒಂದು ಸಲ ನಕ್ಕಿದ್ದರೆ ಚೆನ್ನಾಗಿರುತ್ತಿತ್ತು.

ಮಧುಸೂದನ "ಕಲ್ಯಾಣಸೇವೆಯನ್ನು ಮುಚ್ಚಿಟ್ಟುಕೊಂಡು ತಿನ್ನಬೇಕಾದ ಆವಶ್ಯಕತೆಯೇನು? ಇದರಲ್ಲಿ ನಾಚಿಕೆಯೇನಿದೆ? ನಿತ್ಯ ತಂದು ಕೊಡುವೆ. ಎಷ್ಟು ಬೇಕು? ನನಗೆ ಮುಂಚೆಯೇ ಯಾಕೆ ಹೇಳಲಿಲ್ಲ" ಎಂದನು.

ಕುಮು "ತಂದು ಕೊಡಲು ನಿನ್ನಿಂದ ಸಾಧ್ಯವಿಲ್ಲ" ಎಂದಳು.

"ಸಾಧ್ಯವಿಲ್ಲ! ಚೆನ್ನಾಗಿ ಹೇಳಿದೆ."

"ಇಲ್ಲ, ಸಾಧ್ಯವಿಲ್ಲ."

"ಅದಕ್ಕೆ ಬಹಳ ಬೆಲೆ ಅಲ್ಲವೆ?"

"ಹೌದು, ದುಡ್ಡು ಕೊಟ್ಟರೆ ಸಿಕ್ಕುವುದಿಲ್ಲ."

ಕೇಳಿದೊಡನೆ ಮಧುವಿನ ತಲೆಯಲ್ಲಿ ಥಟ್ಟನೆ ಒಂದು ಸಂದೇಹ ಮೂಡಿತು "ನಿಮ್ಮ ಅಣ್ಣ ಪಾರ್ಸಲ್ ಮಾಡಿ ಕಳುಹಿಸಿದ್ದಾರೆಂದು ಕಾಣುತ್ತೆ" ಎಂದ.

ಈ ಪ್ರಶ್ನೆಗೆ ಉತ್ತರ ಕೊಡಲು ಕುಮುವಿಗೆ ಮನಸ್ಸಾಗಲಿಲ್ಲ. ಫಲ ದಾನಿಯನ್ನು ತಳ್ಳಿಬಿಟ್ಟು ಹೊರಟು ಹೋಗಲು ಎದ್ದು ನಿಂತಳು. ಮಧು ಸೂದನ ಕೈಹಿಡಿದು ಮತ್ತೆ ಬಲವಂತವಾಗಿ ಅವಳನ್ನು ಕೂರಿಸಿಕೊಂಡನು.

ಮಧುಸೂದನ ಯಾವ ಮಾತು ಹೇಳಲೂ ಎಡೆ ಕೊಡದೆ ಕುಮು ಅವನನ್ನು ಪ್ರಶ್ನೆಮಾಡತೊಡಗಿದಳು. "ಅಣ್ಣನ ಬಳಿಯಿಂದ ಯಾರಾ ದರೂ ಬಂದು ನಿನಗೆ ಏನಾದರೂ ಸಮಾಚಾರ ಹೇಳಿದರೆ?"

ಈ ಸುದ್ದಿಯನ್ನು ಕುಮು ಆಗಲೇ ಕೇಳಿರುವಳೆಂದು ತಿಳಿದು ಮಧು ವಿನ ಮನಸ್ಸು ಬಹಳ ಬೇಸರಗೊಂಡಿತು. "ಆ ಸುದ್ದಿ ತಿಳಿಸುವುದಕ್ಕಾ ಗಿಯೇ ಇವೊತ್ತು ಬೆಳಗ್ಗೆ ನಿನ್ನ ಹತ್ತಿರಕ್ಕೆ ಬಂದದ್ದು" ಎಂದ. ಇದು ಶುದ್ಧ ಸುಳ್ಳು ಎಂದು ಬೇರೆ ಹೇಳಬೇಕಾಗಿಲ್ಲ.

"ಅಣ್ಣ ಯಾವಾಗ ಬರುವರು?"

"ಒಂದು ವಾರದೊಳಗೆ"

ವಿಪ್ರದಾಸ ಮರುದಿನವೇ ಬರುವನೆಂಬುದನ್ನು ಮಧು ನಿಶ್ಚಯ ವಾಗಿ ತಿಳಿದಿದ್ದ. 'ಒಂದು ವಾರ' ಎಂದು ಹೇಳಿ ಸುದ್ದಿಯನ್ನು ಅನಿ ರ್ದಿಷ್ಟವಾಗಿರುವಂತೆ ಮಾಡಿದ.

"ಅಣ್ಣನ ಮೈ ಇನ್ನೂ ಕೆಟ್ಟದೆಯೇನು?"

"ಇಲ್ಲ; ಹಾಗೇನೂ ಸಮಾಚಾರ ಕೇಳಿಲ್ಲ."

ಈ ಮಾತಿನಲ್ಲೂ ಸ್ವಲ್ಪ ಹಾದಿ ಬಿಟ್ಟು ಹೋಗಿದ್ದ. "ವಿಪ್ರದಾಸ ಚಿಕಿತ್ಸೆಗಾಗಿಯೇ ಕಲ್ಕತ್ತೆಗೆ ಬರುತ್ತಿದ್ದಾನೆ. ಆದರಿಂದ ಅವನ ದೇಹ ಸ್ಥಿತಿ ಅಷ್ಟಾಗಿ ಉತ್ತಮಗೊಂಡಿಲ್ಲವೆಂದು ಕಾಣುತ್ತೆ."

"ಅಣ್ಣನಿಂದ ಕಾಗದ ಬಂದಿದೆಯೇನು?"

"ಕಾಗದದ ಪೆಟ್ಟಿಗೆ ಇನ್ನೂ ತೆರೆದಿಲ್ಲ. ಇದ್ದರೆ ನಿನಗೆ ಕಳುಹಿಸಿ ಕೊಡುತ್ತೇನೆ."

ಕುಮುವಿಗೆ ಮಧುಸೂದನನ ಮಾತಲ್ಲಿ ಇನ್ನೂ ಅಪನಂಬಿಕೆಯುಂಟಾಗಿರಲಿಲ್ಲ. ಆದ್ದರಿಂದ, ಈ ಮಾತನ್ನು ಪೂರ್ತಿಯಾಗಿ ಒಪ್ಪಿಕೊಂಡಳು.

"ಅಣ್ಣನ ಕಾಗದ ಬಂದಿದೆಯೋ ಇಲ್ಲವೋ ಒಮ್ಮೆ ನೋಡುವೆಯೇನು ?"

"ಬಂದಿದ್ದುದಾದರೆ ಊಟವಾದ ಮೇಲೆ ಮಧ್ಯಾಹ್ನ ನಾನೇ ತೆಗೆದು ಕೊಂಡು ಬರುವೆ"

ಕುಮು ತಲ್ಲಣವನ್ನು ಅಡಗಿಸಿಕೊಂಡು ಸದ್ದಿಲ್ಲದೆ ಒಪ್ಪಿದಳು. ಆಗ ಮತ್ತೊಮ್ಮೆ ಮಧುಸೂದನ ಕುಮುವಿನ ಕೈಯನ್ನು ಸೆಳೆದುಕೊಳ್ಳಲು ಪ್ರಯತ್ನ ಮಾಡಿದ. ಆ ಸಮಯಕ್ಕೆ ಸರಿಯಾಗಿ ಶ್ಯಾಮಾ ಹಠಾತ್ತಾಗಿ ಅಲ್ಲಿಗೆ ಬಂದವಳೇ, ಮಧುಸೂದನನನ್ನು ಕಂಡು ಹಿಂಜರಿದು ಹೋಗಲೆತ್ನಿಸಿದಳು.

ಮಧುಸೂದನ "ಯಾಕೆ, ನಿನಗೇನು ಬೇಕು ?" ಎಂದು ಅವಳನ್ನು ಕೇಳಿದ.

"ಯಜಮಾನಿಯನ್ನು ಉಗ್ರಾಣಕ್ಕೆ ಕರೆಯಲು ಬಂದೆ. ಆಕೆ ಮಹಾರಾಣಿಯಾದರೂ ಮನೆಯ ಲಕ್ಷ್ಮಿ ಹೌದಷ್ಟೆ. ಹೋಗಲಿ, ಇವೊತ್ತು ಅಲ್ಲದಿದ್ದರೆ ಇನ್ನೊಂದು ದಿನ ಆಯಿತು" ಎಂದಳು.

ಮಧುಸೂದನ ಸೋಫಾದಿಂದ ಎದ್ದು ಒಂದು ಮಾತೂ ಆಡದೆ ವೇಗವಾಗಿ ಹೊರಗೆ ಹೋದ.

ಊಟವಾದ ಮೇಲೆ ಪದ್ಧತಿಯಂತೆ ಮಲಗುವ ಮನೆಯ ಮಂಚದ ಮೇಲೆ ದಿಂಬನ್ನು ಒರಗಿಕೊಂಡು ತಾಂಬೂಲ ಅಗಿಯುತ್ತ ಮಧುಸೂದನ ಕುಮುವಿಗೆ ಹೇಳಿ ಕಳುಹಿಸಿದ. ಕುಮು ಜಾಗ್ರತೆಯಾಗಿ ಹೊರಟು ಬಂದಳು. ಇಂದು ಅಣ್ಣನ ಕಾಗದ ಸಿಕ್ಕುವುದೆಂದು ಅವಳು ಬಲ್ಲಳು. ಮಲಗುವ ಮನೆಗೆ ಬಂದು ಮಂಚದ ಅರುಗಿನಲ್ಲಿ ನಿಂತುಕೊಂಡಳು.

ಮಧುಸೂದನ ಗುಡುಗುಡಿಯ ನಲ್ಲಿಯನ್ನು ಕೆಳಗಿಟ್ಟು "ಕೂತುಕೊ" ಎಂದ.

ಕುಮು ಕುಳಿತಳು. ಮಧುಸೂದನ ಅವಳಿಗೆ ಕೊಟ್ಟ ಕಾಗದದಲ್ಲಿ ಕೆಲವು ಮಾತುಗಳು ಮಾತ್ರವೇ ಇದ್ದುವು.

" ಪ್ರಾಣಪ್ರತಿಮಾಸು

ಶುಭಾಶೀರ್ವಾದಾಶಯಃ ಸಂತು—

ಚಿಕಿತ್ಸೆಗಾಗಿ ಶೀಘ್ರದಲ್ಲೇ ಕಲ್ಕತ್ತೆಗೆ ಹೊರಟಿರುವೆ. ಸ್ವಸ್ಥವಾದರೆ ನಿನ್ನನ್ನು ನೋಡಲು ಬರುವೆ. ಮನೆ ಕೆಲಸದಲ್ಲಿ ವಿರಾಮ ಸಿಕ್ಕಿದಾಗ ಆಗಾಗ್ಗೆ ಕುಶಲ ಸಂವಾದ ಕೊಟ್ಟರೆ ಮನಸ್ಸಿಗೆ ನೆಮ್ಮದಿ ದೊರೆತೀತು. "

ಈ ಸಣ್ಣ ಕಾಗದವನ್ನು ಕಂಡು ಕುಮುವಿನ ಮನಸ್ಸಿಗೆ ಮೊದಲು ನೋವಾಯಿತು. " ದೂರದವಳಾಗಿ ಬಿಟ್ಟೆ " ಎಂದು ಮನಸ್ಸಿಗೆ ತೋರಿತು. ದುಗುಡ ಹೆಚ್ಚುವುದರೊಳಗೆ, " ಅಣ್ಣನಿಗೆ ಮೈ ಚೆನ್ನಾಗಿಲ್ಲ. ನನ್ನದು ಎಷ್ಟು ಸಣ್ಣ ಮನಸ್ಸು. ಸ್ವಂತ ವಿಷಯವೇ ಎಲ್ಲಕ್ಕೂ ಮೊದಲು ಮನಸ್ಸಿನಲ್ಲಿ ತಲೆದೋರುತ್ತೆ " ಎಂದು ಅಂದುಕೊಂಡಳು.

ಕುಮು ಹೊರಡುವುದರಲ್ಲಿರುವುದನ್ನು ಮಧುಸೂದನ ಅರಿತ. " ಎಲ್ಲಿಗೆ ಹೊರಟೆ ? ಸ್ವಲ್ಪ ಕುಳಿತುಕೊ " ಎಂದ.

ಕುಮುವನ್ನೇನೋ ಕೂತುಕೊಳ್ಳಲು ಹೇಳಿದ. ಆದರೆ ಏನು ಮಾತಾಡಬೇಕು ಎನ್ನುವುದು ಮೆದುಳಿಗೆ ಹೊಳೆಯಲಿಲ್ಲ. ಸಾವಕಾಶ ಮಾಡದೆ ಏನಾದರೂ ಹೇಳಲೇಬೇಕು. ಆದರಿಂದಲೆ ಬೆಳಗಿನಿಂದ ಯಾವ ವಿಷಯ ಅವನ ಮನಸ್ಸಿನಲ್ಲಿ ಕೊರೆಯುತ್ತಿತ್ತೋ ಅದು ಅವನ ಬಾಯಿಂದ ಹೊರಗೆ ಬಂದಿತು. " ಅದೇ, ಆ ಕಲ್ಯಾಣ ಸೇವೆಯ ವಿಷಯವಾಗಿ ಇಷ್ಟೊಂದು ಗೊಂದಲವೇಕೆ ಮಾಡಿದೆ ? ಅದರಲ್ಲಿ ನಾಚುವ ಸಂಗತಿಯೇನಿತ್ತು ? " ಎಂದ.

" ಅದು ನನ್ನ ಗುಟ್ಟಿನ ವಿಷಯ "

" ಗುಟ್ಟಿನ ವಿಷಯ ! ನನ್ನೊಡನೆಯೂ ಹೇಳಲು ಆಗುವುದಿಲ್ಲವೇನು ?

" ಇಲ್ಲ "

ಮಧುಸೂದನನ ದನಿ ಒರಟಾಯಿತು. " ಇದು ನಿಮ್ಮ ನೂರ್ ನಗರದ ಚಾಳಿ. ನಿಮ್ಮ ಅಣ್ಣನ ಶಾಲೆಯಲ್ಲಿ ಕಲಿತದ್ದು " ಎಂದ.

ಕುಮು ಏನೂ ಉತ್ತರ ಕೊಡಲಿಲ್ಲ. ಮಧುಸೂದನ ದಿಂಬನ್ನು ಬಿಟ್ಟು ನೆಟ್ಟಗೆ ಕುಳಿತುಕೊಂಡು " ಈ ನಿನ್ನ ಚಾಳಿಯನ್ನು ಬಿಡಿಸದೆ ಹೋದರೆ ನನ್ನ ಹೆಸರು ಮಧುಸೂದನನಲ್ಲ" ಎಂದ.

" ನಿನ್ನ ಅಪ್ಪಣೆಯೇನು ಹೇಳು ? "

" ಆ ಪೊಟ್ಟಣ ನಿನಗೆ ಯಾರು ಕೊಟ್ಟರು ಹೇಳು ? "

" ಹಾಬಲು "

" ಹಾಬಲು ! ಅದಕ್ಕೆ ಇಷ್ಟೊಂದು ಮುಚ್ಚುಮರೆಯೇಕೆ ? "

" ಸರಿಯಾಗಿ ಹೇಳಲು ಸಾಧ್ಯವಿಲ್ಲ. "

" ಬೇರೆ ಯಾರಾದರೂ ಅವನ ಕೈಯಲ್ಲಿ ಕೊಟ್ಟು ಕಳುಹಿಸಿದರೇನು ? "

" ಇಲ್ಲ "

" ಹಾಗಾದರೆ ? "

" ಅಷ್ಟೆ-ಇನ್ನು ಹೆಚ್ಚು ಸಂಗತಿ ಏನೂ ಇಲ್ಲ "

" ಹಾಗಾದರೆ ಇಷ್ಟೊಂದು ಮುಚ್ಚುಮರೆ ಏಕೆ ? "

" ನೀನು ಅದನ್ನು ತಿಳಿದುಕೊಳ್ಳಲಾರೆ. "

ಕುಮುವಿನ ಕೈಯನ್ನು ಅದುಮಿ ಹಿಡಿದುಕೊಂಡು ಮಧುಸೂದನ ಹೀಗೆ ಹೇಳಿದ. " ನಿನ್ನ ಈ ಅಧಿಕ ಪ್ರಸಂಗವನ್ನು ಸಹಿಸಲಸಾಧ್ಯ "

ಕುಮುವಿನ ಮುಖ ಕೆಂಪಗಾಯಿತು. ಶಾಂತ ಸ್ವರದಲ್ಲಿ " ನಿನ್ನ ಇಷ್ಟವೇನು, ವಿವರಿಸಿ ಹೇಳು. ನಿಮ್ಮ ಮನೆಯ ಪದ್ಧತಿ ನನಗೆ ಅಭ್ಯಾಸವಿಲ್ಲ, ಈ ಮಾತನ್ನು ಒಪ್ಪಿಕೊಳ್ಳುತ್ತೇನೆ " ಎಂದಳು.

ಮಧುಸೂದನನ ಹಣೆಯ ನರಗಳು ಉಬ್ಬಿದುವು. ಯಾವ ಬಗೆಯ ಪ್ರತ್ಯುತ್ತರವೂ ತೋರದೆ ಅವಳನ್ನು ಹೊಡೆಯಬೇಕೆಂದು ಮನಸ್ಸಾಯಿತು. ಈ ಸಮಯದಲ್ಲಿ ಹೊರಗೆ ಗಂಟಲು ಸರಿಮಾಡಿಕೊಳ್ಳುವ ಸದ್ದು ಕೇಳಿಸಿತು. ಕೂಡಲೆ, "ಆಫೀಸಿನ ಸಾಹೇಬರು ಬಂದು ಕುಳಿತಿರುವರು" ಎಂಬ ಕೂಗು ಕೇಳಿ ಬಂದಿತು. ಅಂದಿನ ಡೈರೆಕ್ಟರರ ಮೀಟಿಂಗು ನೆನಪಾಯಿತು. ಅದಕ್ಕಾಗಿ ಸಿದ್ಧವಾಗಲಿಲ್ಲವಲ್ಲ ಎಂದು ನಾಚಿಕೆಯಾಯಿತು. ಬೆಳಗಿನ ಹೊತ್ತೆಲ್ಲ ಬಹುಮಟ್ಟಿಗೆ ವ್ಯರ್ಥವಾಯಿತು. ಇಂಥ ಔದಾಸೀನ್ಯವನ್ನು ಅವನು ಎಂದೂ ಮಾಡಿದವನಲ್ಲ. ಹೀಗೆ ನಡೆದಿರುವುದನ್ನು ಕಂಡು ಅವನಿಗೇ ದಿಗ್ಭ್ರಮೆಯಾಯಿತು.

೪೦

ಮಧುಸೂದನ ಹೊರಟು ಹೋದೊಡನೆ ಕುಮು ಮಂಚದಿಂದ ಇಳಿದು ನೆಲದ ಮೇಲೆ ಕುಳಿತುಕೊಂಡಳು. "ಜೀವಾವಧಿ, ತೀರವೇ ಇಲ್ಲದ ಇಂತಹ ಸಮುದ್ರದಲ್ಲಿ ತಾನು ಈಜಾಡುತ್ತ ಇರಬೇಕೇ ? ತನ್ನ ನಡೆನುಡಿ ಅವರುಗಳಿಂದ ಬೇರೆಯಾದುದು ಎಂದು ಮಧುಸೂದನನು ಸರಿಯಾಗಿಯೇ ಹೇಳಿರುವನು. ಉಳಿದ ಎಲ್ಲ ಬಗೆಯ ಪ್ರತ್ಯೇಕತೆಗಿಂತ ಇದೇ ಸಹಿಸಲಸಾಧ್ಯವಾದುದು. ಇದಕ್ಕೆ ಉಪಾಯ ಯಾವುದಿದೆ ?" ಎಂದು ಚಿಂತಿಸುತ್ತಿದ್ದಳು.

ಸ್ವಲ್ಪ ಹೊತ್ತಾದ ಮೇಲೆ ಮನಸ್ಸಿಗೆ ಏನು ತೋರಿತೋ ಏನೋ, ಕುಮು ಕೆಳಗೆ ಮೋತಿಯ ತಾಯಿಯ ಕೊಟಡಿಯ ಕಡೆಗೆ ಹೊರಟಳು. ಮೆಟ್ಟಿಲು ಇಳಿಯುವ ಸಮಯದಲ್ಲಿ ಶ್ಯಾಮಾಸುಂದರಿ ಮೇಲೆ ಹತ್ತಿ ಬರುತ್ತಿದ್ದುದನ್ನು ಕಂಡಳು.

"ಏನು ಅತ್ತಿಗೆ, ಎತ್ತ ಹೊರಟೆ ? ನಾನು ನಿನ್ನ ಕೋಣೆಗೇ ಹೋಗುತ್ತಿದ್ದೆ."

"ಏನಾದರೂ ವಿಶೇಷವಿದೆಯೇನು ?"

"ಅಂಥಾದ್ದೇನೂ ಇಲ್ಲ. ಮೈದಂದಿರ ಮುಖಭಾವ ಕೆಟ್ಟಿದುದನ್ನು ನೋಡಿದೆ. ಹೊಸ ಪ್ರಣಯದಲ್ಲಿ ಯಾವೆಡೆಯಲ್ಲಿ ಧಕ್ಕೆ ತಗುಲಿ

ತೆಂದು ನಿನ್ನನ್ನು ಕೇಳೋಣವೆಂದು ಯೋಚಿಸಿದೆ. ನೆನಪಿರಲಿ ಅತ್ತಿಗೆ, ಅವರ ಸಂಗಡ ಹೇಗೆ ಹೊಂದಿಕೊಂಡು ನಡೆದುಕೊಳ್ಳಬೇಕೆಂಬುದರ ಸಲಹೆ ಕೊಡಬಲ್ಲಳು ನಾನೇ. ಬಕುಲಪುಷ್ಪದ ಕೋಣೆಗೆ ಹೊರಟಿರುವೆಯೆಂದು ಕಾಣುತ್ತೆ. ಹಾಗಾದರೆ ಹೋಗು, ಮನಸ್ಸು ಬೇಸರವಿಲ್ಲದಂತೆ ಮಾಡಿ ಕೊಂಡು ಬಾ."

ಶ್ಯಾಮಾಸುಂದರಿ ಮತ್ತು ಮಧುಸೂದನ ಇವರಿಬ್ಬರೂ ಒಂದೇ ಮಣ್ಣಿ ನಿಂದ ಒಬ್ಬ ಕುಂಬಾರನ ಚಕ್ರದಿಂದಲೇ ಹೊರಬಿದ್ದವರು ಎಂದು ಇಂದು ಕುಮುದಿನಿಯ ಮನಸ್ಸಿಗೆ ಹಠಾತ್ತಾಗಿ ಹೊಳೆಯಿತು. ಈ ಸಂಗತಿ ಯಾಕೆ ತಲೆಯಲ್ಲಿ ಹೊಳೆಯಿತೆನ್ನುವದನ್ನು ಹೇಳುವುದೂ ಕಷ್ಟ. ಅವರ ವರ್ತನೆಯನ್ನು ವಿಮರ್ಶೆಮಾಡಿ ಇದನ್ನು ತಿಳಿದಳೆಂದು ಅನ್ನುವುದೂ ಕಷ್ಟ. ಆಕಾರದಲ್ಲಿಯೂ ಹೊಂದಿಕೆಯಿರಲಿಲ್ಲ. ಆದರೂ ಇಬ್ಬರ ನಡವಳಿಕೆ ಯಲ್ಲೂ ಒಂದು ಹೊಂದಿಕೆಯಿತ್ತು. ಶ್ಯಾಮಾಸುಂದರಿಯ ಜಗತ್ತಿನಲ್ಲಿ ಮತ್ತು ಮಧುಸೂದನನ ಜಗತ್ತಿನಲ್ಲಿ ಒಂದೇ ಬಗೆಯ ಮನೋಭಾವ ವಿರುವುದೋ ಎನ್ನುವಂತೆ, ಶ್ಯಾಮಾಸುಂದರಿ ಸ್ನೇಹ ಬೆಳೆಸಿಕೊಂಡು ಬರು ತ್ತಿದ್ದಳಷ್ಟೆ. ಅದೂ ಕುಮುವನ್ನು ವಿಪರೀತ ದಿಕ್ಕಿಗೆ ತಳ್ಳುತ್ತಿತ್ತು. ವೈ ಹೇಗೋ ಆಗುತ್ತಿತ್ತು.

ಮೋತಿಯ ತಾಯಿಯು ಮಲಗುವ ಮನೆಯನ್ನು ಹೊಕ್ಕೊಡನೆ ನವೀನ ಅವಳೊಡನೆ ಯಾವುದೋ ಒಂದರ ವಿಷಯವಾಗಿ ಕಿತ್ತಾಡುತ್ತಿದ್ದು ದನ್ನು ಕುಮು ಕಂಡಳು. ಹಿಂದಿರುಗೋಣವೆಂದು ಯೋಚಿಸುತ್ತಿದ್ದಳು. ಆ ವೇಳೆಯಲ್ಲಿ ನವೀನ "ಅತ್ತಿಗೇ, ಹೋಗಬೇಡ, ಹೋಗಬೇಡ, ನಿನ್ನ ಹತ್ತಿರಕ್ಕೆ ಹೋಗುತ್ತಿದ್ದೆ. ಒಂದು ದೂರು ಇದೆ" ಎಂದ.

"ಯಾವುದಕ್ಕಾಗಿ ದೂರು?"

"ಸ್ವಲ್ಪ ಕುಳಿತುಕೊ. ಸಂಕಟದ ಸುದ್ದಿಯೊಂದನ್ನು ತಿಳಿಸುವೆ."

ತಬ್ಬಿಪೋಷಿನಮೇಲೆ ಕುಮು ಕುಳಿತಳು.

ನವೀನ ಹೇಳಿದ. "ಭಾರೀ ಅತ್ಯಾಚಾರ! ಈ ಗೃಹಸ್ಥಳು ನನ್ನ ಪುಸ್ತಕವನ್ನು ಮುಚ್ಚಿಟ್ಟಿದ್ದಾಳೆ?"

" ಅಂತಹ ಶಿಕ್ಷೆ ಯಾತಕ್ಕೆ ? "

"ಹೊಟ್ಟೆಕಿಚ್ಚು. ' ತಾನು ಇಂಗ್ಲೀಷು ಓದಲಾರನಲ್ಲ ' ಎಂದು. ನಾನು ಸ್ತ್ರೀ ವಿದ್ಯಾಭ್ಯಾಸದ ಪಕ್ಷಪಾತಿ. ಆದರೆ ಆಕೆ ಪತಿ ಪರಂಪರೆಯ ವಿದ್ಯಾಭ್ಯಾಸದ ವಿರೋಧಿ. ನನ್ನ ಬುದ್ಧಿ ಉನ್ನತಿ ಹೊಂದಿದಂತೆಲ್ಲಾ ಅದು ತನ್ನ ಬುದ್ಧಿಯ ಸಮಕ್ಕೆ ಬರುತ್ತಿದೆಯೆಂದು ಅವಳಿಗೆ ಬಲು ರೋಷ. ಬಹಳವಾಗಿ ತಿಳಿಯ ಹೇಳಿದೆ. ಅಷ್ಟು ದೊಡ್ಡವಳಾದ ಸೀತೆಯೇ ರಾಮನ ಹಿಂದೆ ಹಿಂದೆ ನಡೆಯುತ್ತಿದ್ದಳು. ವಿದ್ಯಾ ಬುದ್ಧಿಯಲ್ಲಿ ನಾನು ನಿನಗಿಂತ ಬಹುದೂರ ಮುಂದುವರಿದು ಹೋಗುವೆ. ಇದಕ್ಕೆ ಅಡ್ಡಿ ಬರಬೇಡ ಎಂದೆ "

" ನಿನ್ನ ವಿದ್ಯೆಯ ಸಂಗತಿ ಆ ತಾಯಿ ಸರಸ್ವತಿ ಬಲ್ಲಳು. ಬುದ್ಧಿಯ ಬಡಾಯಿ ತೋರಬೇಡ ಹೇಳಿದ್ದೇನೆ— "

ಮಹಾ ವಿಪತ್ತಿಗೆ ಗುರಿಯಾಗಿರುವಂತಹ ನವೀನನ ಮುಖಭಾವವನ್ನು ನೋಡಿ ಕುಮು ಕಿಲಕಿಲನೆ ನಕ್ಕಳು. ಈ ಮನೆಗೆ ಆಕೆ ಬಂದಾರಭ್ಯ ಈ ರೀತಿಯಲ್ಲಿ ಅವಳು ಮನಃಪೂರ್ವಕವಾಗಿ ನಕ್ಕದ್ದು ಇದೇಮೊದಲು. ಈ ನಗು ನವೀನನಿಗೆ ಬಹು ಹಿತವಾಗಿತ್ತು. ಅವನು ಮನಸ್ಸಿನಲ್ಲೇ " ಈಗ ನನ್ನ ಕೆಲಸ ಆಯಿತು. ನಾನು ಅತ್ತಿಗೆಯನ್ನು ನಗಿಸಬಲ್ಲೆ " ಎಂದು ಅಂದುಕೊಂಡ.

ಕುಮು ನಗುನಗುತ್ತ " ಯಾಕಮ್ಮ, ಮೈದುನನ ಪುಸ್ತಕವನ್ನು ಯಾಕೆ ಮುಚ್ಚಿಟ್ಟಿರುವೆ? " ಎಂದು ಕೇಳಿದಳು.

" ನೋಡು, ಅಕ್ಕ ಮತ್ತೆ. ಮಲಗುವ ಮನೆಯಲ್ಲಿ ಅವರ ಶಾಲೆಯ ಗುರುಗಳು ಕುಳಿತಿರುವರೇನು ? ದುಡಿದು ದುಡಿದು, ರಾತ್ರಿ ಕೊಟಡಿಗೆ ಬಂದರೆ, ಒಂದು ದೀಪದ ಕಂಬ ಉರಿಯುತ್ತಿರುತ್ತೆ. ಅದರ ಸಂಗಡಲೇ ಇನ್ನೊಂದು ಲಾಂದ್ರ. ಮಹಾ ಪಂಡಿತರು ಓದುತ್ತ ಕುಳಿತಿರುತ್ತಾರೆ, ಊಟ ಆರಿ ಅಕ್ಷತೆಯಾಗುತ್ತಿರುತ್ತೆ. ಮೇಲಿಂದ ಮೇಲೆ ಕರೆದರೂ ಮೈಮೇಲೆ ಜ್ಞಾನವೇ ಇರುವುದಿಲ್ಲ. "

" ನಿಜವೇನು ? "

"ಅತ್ತಿಗೇ, ತಿಂಡಿಯಲ್ಲಿ ಆಶೆಯಿಲ್ಲದಂತಹ ಮಹಾತಪಸ್ವಿ ನಾನಲ್ಲ. ಆದರೆ ಅದಕ್ಕಿಂತ ಅವಳ ಬಾಯಿಮಾತಿನಲ್ಲಿ ಹೆಚ್ಚು ಪ್ರೀತಿ. ಅದರಿಂದಲೇ ಬೇಕೆಂದೇ ಊಟಕ್ಕೆ ಹೊತ್ತಾಗುತ್ತೆ. ಪುಸ್ತಕ ಓದುವುದು ಒಂದು ನೆಪ ಮಾತ್ರ."

"ಇವರ ಸಂಗಡ ಮಾತಿನಲ್ಲಿ ಸೋಲೊಪ್ಪುವೆ."

"ಮತ್ತೆ ಈಕೆ ಮಾತು ನಿಲ್ಲಿಸಿದಳೆಂದರೆ ನಾನು ಸೋಲು ಒಪ್ಪಿಕೊಳ್ಳುತ್ತೇನೆ."

"ಅದೂ ಯಾವಾಗಲಾದರೂ ಘಟಿಸದೇನು ?"

"ಬೇಕಾದರೆ ಒಂದೆರಡು ಹೊಚ್ಚ ಹೊಸ ದೃಷ್ಟಾಂತವನ್ನು ಕೊಡುತ್ತೇನೆ. ಕಣ್ಣೀರಿನಿಂದ ಉಜ್ವಲವಾಗಿ ಮನಸ್ಸಿನಲ್ಲಿ ಬರೆದಿಟ್ಟಿದೆ."

"ಸರಿ, ಸರಿ, ನಿಮ್ಮ ದೃಷ್ಟಾಂತ ಇನ್ನು ಬೇಕಾಗಿಲ್ಲ. ಈಗ ನನ್ನ ಬೀಗದ ಕೈ ಎಲ್ಲಿ ಹೇಳಿ. ಅಕ್ಕ! ನೀನೇ ನೋಡು ನನ್ನ ಬೀಗದ ಕೈ ಮುಚ್ಚಿಟ್ಟಿದ್ದಾರೆ."

"ಮನೆಯ ಜನರ ಮೇಲೆ ಪೋಲಿಸ್ ಫಿರ್ಯಾದು ಸಾಧ್ಯವಿಲ್ಲವಲ್ಲ, ಅದಕ್ಕೆ ಕಳ್ಳರನ್ನು ಕಳ್ಳತನದಿಂದಲೇ ಶಿಕ್ಷಿಸಬೇಕು. ಮೊದಲು ನನ್ನ ಪುಸ್ತಕ ಕೊಡು."

"ನಿಮಗೆ ಬೀಗದ ಕೈ ಕೊಡುವುದಿಲ್ಲ. ಅಕ್ಕನಿಗೆ ಕೊಡುತ್ತೇನೆ." ಕೋಣೆಯ ಮೂಲೆಯಲ್ಲಿದ್ದ ಗೂಡೊಂದರಲ್ಲಿ ರೇಷ್ಮೆ ಉಲನ್ ಬಟ್ಟೆಯ ಚೂರುಗಳೂ, ಹರಕಲು ಕಾಲುಚೀಲಗಳೂ ಶೇಖರವಾಗಿದ್ದವು. ಅವುಗಳ ತಳದಿಂದ ಇಂಗ್ಲೀಷಿನ ಸಂಕ್ಷಿಪ್ತ ವಿಶ್ವಕೋಶದ ಎರಡನೆಯ ಸಂಪುಟವನ್ನು ಹೊರಗೆ ತೆಗೆದು ಮೋತಿಯ ತಾಯಿ ಕುಮುವಿನ ಮಡಿಲಲ್ಲಿ ಇಟ್ಟು "ನಿನ್ನ ಕೊಟಡಿಗೆ ಎತ್ತಿಕೊಂಡು ಹೋಗು. ಅಕ್ಕ ಅವರಿಗೆ ಕೊಡಬೇಡ. ನೋಡೋಣ. ನಿನ್ನ ಸಂಗಡ ಯಾವ ವಿಧದಲ್ಲಿ ಜಗಳವಾಡ್ತಾರು—"

ನವೀನ ಸೊಳ್ಳೆಪರದೆಯ ಚಪ್ಪರದ ಮೇಲಿಂದ ಬೀಗದ ಕೈ ತೆಗೆದು ಕುಮುವಿನ ಕೈಯಲ್ಲಿಟ್ಟು "ಬೇರೆ ಯಾರ ಕೈಗೂ ಕೊಡಬೇಡ ಅತ್ತಿಗೆ.

ಉಳಿದವರು ನಿನ್ನ ಸಂಗಡ ಹೇಗೆ ನಡೆದುಕೊಳ್ಳುವರೆಂದು ನೋಡುತ್ತೇನೆ” ಎಂದ.

ಕುಮು ಪುಸ್ತಕದ ಹಾಳೆಗಳನ್ನು ತಿರುವಿಹಾಕುತ್ತ, ಈ ಪುಸ್ತಕದಲ್ಲೇ ಮೈದುನನಿಗೆ ಆಸಕ್ತಿ ಇದೆಯೆಂದು ತೋರುತ್ತೆ ಅಲ್ಲವೆ ?” ಎಂದು ಕೇಳಿದಳು.

“ ಅವರಿಗೆ ಆಸಕ್ತಿ ಇಲ್ಲದಂತಹ ಪುಸ್ತಕವೇ ಇಲ್ಲ. ಅವತ್ತು ನೋಡಿದರೆ ಒಂದು ಪಶುಪಾಲನೆಯ ವಿಷಯದ ಪುಸ್ತಕವನ್ನು ಓದುತ್ತ ಕುಳಿತಿದ್ದರು. ”

“ ನನ್ನ ಶರೀರ ರಕ್ಷಣೆಗೋಸ್ಕರ ಅದನ್ನು ಓದುವುದಿಲ್ಲ. ಅದರಿಂದ ನಾಚಿಕೊಳ್ಳಬೇಕಾದ ಕಾರಣವೇನೂ ಇಲ್ಲ. ”

“ ಅಕ್ಕ, ನೀನು ಹೇಳಬೇಕಾದದ್ದು, ಏನಾದರೂ ಇದೆಯೇನು ? ಬೇಕಾದರೆ ಹೇಳು, ಈ ಮಾತಿನ ಮಲ್ಲರನ್ನು ಈಗಲೇ ಕಳುಹಿಸಿ ಕೊಡುವೆ.”

“ ಇಲ್ಲ, ಆವಶ್ಯಕವಿಲ್ಲ. ನಮ್ಮ ಅಣ್ಣ ಒಂದೆರಡು ದಿನಗಳಲ್ಲಿ ಬರುವರೆಂದು ಸುದ್ದಿ ಕೇಳಿದೆ. ”

ನವೀನ “ ಹೌದು, ಅವರು ನಾಳೆಯೇ ಬರುತ್ತಾರೆ ” ಎಂದ.

“ ಏನು ! ನಾಳೆಯೇ ? ” ವಿಸ್ಮಿತಳಾಗಿ ಕುಮು ಸ್ವಲ್ಪಹೊತ್ತು ಸುಮ್ಮನಿದ್ದಳು. ಆಮೇಲೆ ನಿಟ್ಟುಸಿರುಬಿಟ್ಟು “ ಯಾವ ಬಗೆಯಲ್ಲಿ ಅವರ ಸಂಗಡ ಭೇಟಿಯಾದೀತು ? ” ಎಂದು ಚಿಂತಾಮಗ್ನಳಾದಳು.

“ ನೀನು ದೊಡ್ಡ ಯಜಮಾನರಿಗೆ ಏನೂ ಹೇಳಿಲ್ಲವೆಂದು ಕಾಣುತ್ತೆ ” ಎಂದು ಮೋತಿಯ ತಾಯಿ ಕೇಳಿದಳು.

ಕುಮು ತಲೆ ಅಲುಗಿಸಿ, ಇಲ್ಲವೆಂದು ತಿಳಿಸಿದಳು.

ನವೀನ “ ಒಮ್ಮೆ ಹೇಳಿ ನೋಡುವುದಿಲ್ಲವೇನು ? ” ಎಂದ.

ಕುಮು ತೆಪ್ಪನಿದ್ದಳು. ಮಧುಸೂದನನ ಹತ್ತಿರ ಅಣ್ಣನ ಸಂಗತಿ ಹೇಳುವುದು ಬಹು ಕಷ್ಟ. ಅಣ್ಣನ ವಿಷಯದಲ್ಲಿ ಒಂದು ಬಗೆಯಾದ

ಅಸಡ್ಡೆ ಅವನಲ್ಲಿ ಮನೆಮಾಡಿಕೊಂಡಿದೆ. ಅದನ್ನು ಸ್ವಲ್ಪವಾದರೂ ಕೆದಕಿದರೆ ಸಾಕು, ಅವಳಿಗೆ ಸಹಿಸಲಾರದಷ್ಟು ಸಂಕೋಚ.

ಅಣ್ಣನ ಹತ್ತಿರ ಎಳೆವಯಸ್ಸಿನಿಂದಲೂ ನವೀನನಿಗೆ ಒಂದು ಬಗೆಯ ಅಂಜಿಕೆಯಿತ್ತು. ಅತ್ತಿಗೆ ಬಂದು ಅವನ ಮನಸ್ಸಿನಿಂದ ಆ ಭಯವನ್ನು ಓಡಿಸಿದಳೆಂದು ತೋರುತ್ತದೆ.

ಕುಮು ಹೊರಟುಹೋದ ಮೇಲೆ ಮೋತಿಯ ತಾಯಿ ನವೀನನಿಗೆ ಹೇಳಿದಳು, " ಏನು ಉಪಾಯ ಮಾಡಬಹುದು, ಹೇಳು ನೋಡೋಣ ? ಅವತ್ತು ರಾತ್ರಿ ನಿಮ್ಮ ಅಣ್ಣ ನಮ್ಮನ್ನು ಕರೆದು ಅತ್ತಿಗೆಯ ಇದಿರಲ್ಲಿ ತನ್ನನ್ನು ಕೀಳುಮಾಡಿಕೊಂಡರಷ್ಟೆ. ವಿಷಯ ಸರಿಹೋಗಲಿಲ್ಲವೆಂದು ಆಗಲೇ ತಿಳಿದೆ. ಅವತ್ತಿನಿಂದ ನಿನ್ನನ್ನು ಕಂಡರೆ ಮುಖ ತಿರುಗಿಸಿಕೊಂಡು ಹೊರಟು ಹೋಗುತ್ತಿರುವರು. "

" ಮೋಸವಾಯಿತು ಎಂದು ಅಣ್ಣ ತಿಳಿದಿದ್ದಾರೆ. ಆವೇಶದ ಭರದಲ್ಲಿ ಚೀಲವನ್ನು ಬರಿದುಮಾಡಿ ಮುಂಗಡವಾಗಿ ಬೆಲೆಯನ್ನು ಕೊಟ್ಟು ಬಿಟ್ಟಾಗಿದೆ. ಇತ್ತ ಸರಿಯಾದ ತೂಕದಲ್ಲಿ ಸಾಮಾನು ಸಿಕ್ಕಲಿಲ್ಲ. ನಾವು ಅವರ ಬೆಪ್ಪತನಕ್ಕೆ ಸಾಕ್ಷಿಯಾಗಿದ್ದೇವೆ. ಅದರಿಂದಲೇ ನಮ್ಮನ್ನು ಕಂಡರೆ ಅವರಿಗೆ ಸಹಿಸದು."

" ಅದಿರಲಿ, ವಿಪ್ರದಾಸಬಾಬುಗಳ ಮೇಲೆ ಅವರಿಗೆ ಕೋಪ ಹುಚ್ಚಿನಂತೆ ಹೆಗಲೇರಿಕೊಂಡಿದೆ. ದಿನ ದಿನಕ್ಕೆ ಹೆಚ್ಚುತ್ತಲೇ ಇದೆ ಇದೆಂತಹ ವಿಚಿತ್ರ ಹೇಳು ಮತ್ತೆ ?" ಎಂದು ಮೋತಿಯ ತಾಯಿಯೆಂದಳು.

" ಈ ಮನುಷ್ಯರ ಭಕ್ತಿಯ ವಿಧಾನವೇ ಹೀಗೆ ಈ ಜಾತಿಯ ಜನರೇ ಮತ್ತೆ ತಾವು ಯಾರನ್ನು ಒಳಗೊಳಗೆ ಶ್ರೇಷ್ಠರೆಂದು ಅರಿಯುವರೋ ಹೊರಗೆ ಅವರನ್ನೇ ಹೊಡೆಯುವರು. ಕೆಲವರು ಹೇಳುತ್ತಾರೆ, ರಾಮನಲ್ಲಿ ರಾವಣನಿಗೆ ಅಸಾಧಾರಣ ಭಕ್ತಿ ಇತ್ತೆಂದು. ಅದಕ್ಕಾಗಿಯೇ ಇಪ್ಪತ್ತು ಕೈಗಳಿಂದಲೂ ನೈವೇದ್ಯವನ್ನು ನಡೆಸಿದನಂತೆ. ನಾನು ನಿನಗೆ ಹೇಳುವುದಾದರೂ ಇದೇ ಅಣ್ಣನ ಸಂಗಡ ಅತ್ತಿಗೆಯ ಭೇಟಿ ಸಹಜವಾಗಿ ಆಗದು." ಎಂದು ನವೀನನು ಹೇಳಿದನು.

" ಹಾಗೆ ಹೇಳಿದರೆ ನಡೆಯದು, ಏನಾದರೂ ಉಪಾಯ ಮಾಡಲೇ ಬೇಕು. "

" ಉಪಾಯವೇನೋ ತಲೆಯಲ್ಲಿ ಹೊಳೆದಿದೆ. "

" ಏನು ಹೇಳು ನೋಡೋಣ ? "

" ಹೇಳಲು ಸಾಧ್ಯವಿಲ್ಲ. "

" ಯಾಕೆ ? ಹೇಳಬಾರದೆ ? "

" ನಾಚಿಕೆಯಾಗುತ್ತೆ. "

" ನನ್ನ ಹತ್ತಿರವೂ ನಾಚಿಕೆಯೇ ? "

" ಯಾಕೋ ಕಾಣೆ ? "

" ಅಣ್ಣನನ್ನು ಮೋಸಪಡಿಸಬೇಕು. ಅದನ್ನು ನೀನು ಕೇಳಿ ಪ್ರಯೋಜನವಿಲ್ಲ. "

" ಯಾರನ್ನು ಪ್ರೀತಿಸುತ್ತೀಯೋ ಅವಳಿಗಾಗಿ ಮೋಸಪಡಿಸಲು ಸ್ವಲ್ಪವೂ ಭಯಪಡಬೇಕಾಗಿಲ್ಲ. "

" ಮೋಸಮಾಡುವ ವಿದ್ಯೆಯನ್ನು ನನ್ನ ಮೇಲೆ ಉಪಯೋಗಿಸಿ ಉಪಯೋಗಿಸಿ ಕೈ ಚೆನ್ನಾಗಿ ಪಳಗಿದೆಯೆಂದು ಕಾಣುತ್ತೆ "

" ಆ ವಿದ್ಯೆಯನ್ನು ಸಹಜವಾಗಿ ಉಪಯೋಗಿಸಲು ತಕ್ಕ ಇಂತಹ ಮನುಷ್ಯನನ್ನು ಬೇರೆಲ್ಲಿ ಕಾಣಲಿ ? "

" ಯಜಮಾನೀ, ಇದೋ ಈಗಲೇ ಕಬೂಲಿ ಪತ್ರ ಬರೆದುಕೊಟ್ಟು ಬಿಡುವೆ. ಯಾವಾಗ ಇಷ್ಟವೋ ಆಗ ಮೋಸಮಾಡು. "

" ಇಷ್ಟು ಅವಸರವೇಕೆ ತಿಳಿಯಬಹುದೋ ? "

" ಹೇಳಲೇ ? ಬ್ರಹ್ಮ ನಿಮ್ಮ ಕೈಯಲ್ಲಿ ಮೋಸಮಾಡುವ ಯಾವ ವಿದ್ಯೆ ಕೊಟ್ಟಿದ್ದಾನೆಯೋ ಅದರಲ್ಲಿ ಜೇನನ್ನು ಬೆರಸಿಬಿಟ್ಟಿದ್ದಾನೆ. ಆ ಜೇನು ತುಂಬಿದ ಮೋಸಕ್ಕೇ ಮತ್ತೆ ಮಾಯೆ ಎನ್ನುವುದು. "

" ಅದನ್ನು ಭೇದಿಸುವುದೇ ಉತ್ತಮ. "

" ಮಾಯೆ ಹೋಗಿಬಿಟ್ಟರೆ ಸರ್ವನಾಶವಾದೀತು. ಸಂಸಾರ ಉಳಿಯುವುದೇನು ? ಪ್ರತಿಮೆಯ ಬಣ್ಣ ಹೋದಮೇಲೆ ಉಳಿಯುವುದು ಹುಲ್ಲು, ಮತ್ತು ಜೇಡಿಮಣ್ಣು. ದೇವೀ, ಅರಿಯದವನನ್ನು ಮೋಸಪಡಿಸು, ಕಣ್ಣಿನಲ್ಲಿ ಕತ್ತಲೆ ಕವಿಯಿಸು, ಮನಸ್ಸಿನಲ್ಲಿ ಮತ್ತನ್ನು ಮೂಡಿಸು. ಏನು ಆಸೆಯೋ ಅದನ್ನು ಮಾಡು. "

ಇಲ್ಲಿಂದ ಮುಂದೆ ನಡೆದ ಮಾತುಕತೆಗಳು ಸಂಪೂರ್ಣವಾಗಿ ಕೆಲಸಕ್ಕೆ ಬರುವಂಥಾದ್ದಲ್ಲ. ಈ ಕತೆಯೊಡನೆ ಅದಕ್ಕೆ ಯಾವ ಸಂಬಂಧವೂ ಇಲ್ಲ.

೪೧

ಈ ಸಲದ ಮಿಾಟಿಂಗಿನಲ್ಲಿ ಮಧುಸೂದನನಿಗೆ ಮೊದಲ ಬಾರಿ ಸೋಲುಂಟಾಯಿತು. ಇಲ್ಲಿಯುವರೆಗೆ ಅವನ ಯಾವ ಸೂಚನೆಯನ್ನಾಗಲೀ ಯಾವ ಏರ್ಪಾಡನ್ನಾಗಲೀ ಯಾರೂ ಎಂದೂ ತಳ್ಳಿಹಾಕಿರಲಿಲ್ಲ. ತನ್ನಲ್ಲಿ ಅವನಿಗೆಷ್ಟು ನಂಬಿಕೆಯಿತ್ತೋ ಅವನ ಜೊತೆಯ ಕೆಲಸಗಾರರಿಗೂ ಅವನಲ್ಲಿ ಅಷ್ಟೇ ನಂಬಿಕೆಯಿತ್ತು. ಈ ಭರವಸೆಯಿಂದಲೇ ಮಿಾಟಿಂಗಿನಲ್ಲಿ ಯಾವುದಾದರೂ ಆವಶ್ಯಕವಾದ ಸೂಚನೆಯನ್ನು ದೃಢಪಡಿಸಿಕೊಳ್ಳುವುದಕ್ಕೆ ಮುಂಚೆಯೇ ಕೆಲಸವನ್ನು ಬಹುದೂರ ಮುಂದುವರಿಸುತ್ತಿದ್ದ. ಈ ಸಲ ಹಳೆಯ ನೀಲಿಕೋಠಿ ಇದ್ದ ಒಂದು ಜೋಡಿಗ್ರಾಮವನ್ನು ಆ ನೀಲಿಯ ವ್ಯವಸಾಯದ ಸಮೇತ ಕೊಂಡುಕೊಳ್ಳುವ ಏರ್ಪಾಡು ಮಾಡಿದ್ದ ಈ ವಿಷಯದಲ್ಲಿ ಖರ್ಚೂ ಆಗಿತ್ತು. ಬಹುಮಟ್ಟಿಗೆ ಎಲ್ಲ ತೀರ್ಮಾನವಾಗಿತ್ತು. ಕ್ರಯಪತ್ರವನ್ನು ಬರೆದು, ರಿಜಿಸ್ಟರ್‌ಮಾಡಿಸಿ ಕೊಡುವುದು ಮಾತ್ರ ಉಳಿದಿತ್ತು. ಯಾವ ಯಾವ ಜನರನ್ನು ಕೆಲಸಕ್ಕೆ ಸೇರಿಸಿಕೊಳ್ಳಬೇಕೋ ಅವರಿಗೆ ಆಸೆ ಹುಟ್ಟಿಸಿಯೂ ಆಗಿತ್ತು. ಇಂತಹ ಸಮಯದಲ್ಲಿ ಈ ಬಾರಿ ಅಡ್ಡಿಯುಂಟಾಯಿತು. ಈಚೆಗೆ ಅವರಲ್ಲಿ ಯಾವುದೋ ಒಂದು ಖಜಾಂಚಿಯ ಕೆಲಸ ಖಾಲಿಬೀಳಲು ಅಧಿಕಾರಿಗಳಲ್ಲೊಬ್ಬರ ಅಳಿಯನೊಬ್ಬನಿಗೋಸ್ಕರ ಉಮೇದುವಾರಿ ನಡೆಯುತ್ತಿತ್ತು. ಅಯೋಗ್ಯರನ್ನು ಉದ್ಧಾರಮಾಡುವುದರಲ್ಲಿ ಉತ್ಸಾಹವಿಲ್ಲದಿದ್ದ ಕಾರಣ ಮಧುಸೂದನ ಆ ಸಲಹೆಗೆ ಕಿವಿಗೊಡಲಿಲ್ಲ. ಈ ಸಂಗತಿ ಬೀಜ

ದಂತೆ ಮಣ್ಣು ಮುಚ್ಚಿಕೊಂಡಿದ್ದು ಹಠಾತ್ತಾದ ವಿರುದ್ಧತೆಯ ರೂಪವನ್ನು ತಾಳಿ ಮೊಳೆಯಿತು. ಅದರಲ್ಲಿ ಒಂದು ಛಿದ್ರವೂ ಇತ್ತು. ತಾನು ನೋಡಿಕೊಂಡು ಬಂದ ಗ್ರಾಮದ ಒಡೆಯ, ಮಧುಸೂದನನಿಗೆ ದೂರ ಸಂಬಂಧದ ಚಿಕ್ಕಮ್ಮನ ಸೋದರಳಿಯನಾಗಬೇಕಾಗಿತ್ತು. ಚಿಕ್ಕಮ್ಮ ಬಂದು ಕೈಕಾಲು ಕಟ್ಟಿಕೊಳ್ಳಲು ಆ ಗ್ರಾಮವು ಅಗ್ಗವಾಗಿ ಸಿಕ್ಕುವು ದೆಂದೂ, ಅದರಿಂದ ಮಧುಸೂದನನಿಗೆ ಲಾಭ ದೊರೆಯುವುದೆಂದೂ ಅಷ್ಟೇ ಅಲ್ಲದೆ ನೆಂಟರಲ್ಲಿ ದಾಕ್ಷಿಣ್ಯ ತೋರಿದ ಗೌರವ ಉಳಿಯುವುದೆಂದೂ ಇತರರು ನಿರ್ಧರಿಸಿದರು. ಯಾರು ತನ್ನ ಅಳಿಯನಿಗೆ ಖಜಾಂಚಿಯ ಕೆಲಸ ಸಿಕ್ಕಲಿಲ್ಲವೋ ಆತನು ಮಧುಸೂದನನ ಈ ಸ್ವಜನ ವಾತ್ಸಲ್ಯದ ಉದಾಹರಣೆಯನ್ನು ಹುಡುಕಿ ಪತ್ತೆಮಾಡಿ ಯಥಾ ಸ್ಥಾನದಲ್ಲಿ ಹರಡಿದ್ದ. ಅದಲ್ಲದೆ ಕಂಪೆನಿಯ ಎಲ್ಲ ಬಗೆಯ ವ್ಯವಾಟನಲ್ಲಿಯೂ ಮಧುಸೂದನ ಗುಟ್ಟಾಗಿ ದಳ್ಳಾಳಿ ತೆಗೆದುಕೊಳ್ಳುತ್ತಿರುವನು ಎಂಬ ಆಧಾರವಿಲ್ಲದ ಸಂದೇಹ ವನ್ನು ಕಿವಿಯಿಂದ ಕಿವಿಗೆ ಹರಡುವ ಹೊಣೆಯನ್ನೂ ಆ ಗೃಹಸ್ಥನೇ ಹೊತ್ತಿದ್ದ. ಈ ನಿಂದೆಗಳೆಲ್ಲಕ್ಕೂ ಹೆಚ್ಚು ಜನ ಸಾಕ್ಷಿ ಕೇಳುವುದಿಲ್ಲ. ಯಾಕೆಂದರೆ ಅವರ ಅಂತರ್ಯದಲ್ಲಿ ಅಡಗಿರುವ ದುರಾಶೆಯೇ ಇದಕ್ಕೆಲ್ಲ ಪ್ರಬಲವಾದ ಸಾಕ್ಷಿ. ಜನರ ಮನಸ್ಸನ್ನು ಕೆಡಿಸಿ ಬಿಡುವುದು ಒಂದು ಕಾರಣದಿಂದ ಸುಲಭವಾಗಿತ್ತು. ಅದಕ್ಕೆ ಮಧುಸೂದನನ ಅಪಾರವಾದ ಶ್ರೀ ವೃದ್ಧಿ ಮತ್ತು ಅಕಳಂಕವಾದ ಖ್ಯಾತಿಗಳೇ ಸಾಕಾಗಿದ್ದುವು. ಆಳ ವಾದ ನೀರಿನಲ್ಲಿ ಮುಳುಗಲು ಯಾರ ಮನಸ್ಸು ಬಕಧ್ಯಾನ ಮಾಡು ತ್ತಿದ್ದು ಹತ್ತಿರ ನೀರಿನ ಎಡೆಯೇ ಸಿಕ್ಕದಿದ್ದರೆ ಹೇಗೋ ಹಾಗೆ, ಈ ಅಪ ವಾದದಿಂದ ಮಧುಸೂದನ ಗುಟುಕುನೀರು ಕುಡಿದದ್ದು ಆ ದುರಾಶೆ ಯುಳ್ಳವರಿಗೆ ಬಹಳ ಸಂತೋಷವಾಯಿತು.

ಸ್ವತ್ತಿನ ಒಡೆಯನಿಗೆ ಮಧುಸೂದನ ತೀರ್ಮಾನಮಾಡಿ ಮಾತು ಕೊಟ್ಟಿದ್ದ. ನಷ್ಟದ ಹೆದರಿಕೆಯಿಂದ ಮಾತಿಗೆ ತಪ್ಪುವ ಮನುಷ್ಯ ಅವ ನಲ್ಲ. ಅದರಿಂದಲೇ ಆ ಗ್ರಾಮವನ್ನು ತಾನೇ ಕೊಂಡುಕೊಳ್ಳುವುದೆಂದು ತೀರ್ಮಾನಮಾಡಿ, ಆ ಮೂಲಕ ತಾವು ಮೋಸಹೋದವೆಂದು ಕಂಪೆನಿ ಯವರಿಗೆ ಅರಿಯುವಂತೆ ಮಾಡುವೆನೆಂದು ಪಣ ತೊಟ್ಟಿದ್ದ.

ಮಧುಸೂದನ ಹೊತ್ತುಮೀರಿ ಮನೆಗೆ ಬಂದ. ತನ್ನ ಅದೃಷ್ಟದ ವಿಷಯದಲ್ಲಿ ಮಧುಸೂದನನಿಗೆ ಕುರುಡುನಂಬಿಕೆ ಉಂಟಾಗಿತ್ತು. ಇಂದು ತನ್ನ ಜೀವನಯಾತ್ರೆಯ ಗಾಡಿಯನ್ನು ಅದೃಷ್ಟವು ಒಂದು ಹಾದಿಯಿಂದ ಇನ್ನೊಂದು ಹಾದಿಗೆ ಕರೆದೊಯ್ಯುವುದೇನೊ ಎಂದು ಸಂದೇಹವಾಯಿತು. ಮೊದಲಿನ ಧಕ್ಕೆಗೇ ಎದೆ ಜಗ್ಗಿಂದಿತು. ಮೀಟಿಂಗಿನಿಂದ ಹಿಂತಿರುಗಿ ಬಂದವನೇ ಆಫೀಸಿನಲ್ಲಿ ಆರಾಮ ಕುರ್ಚಿಯಲ್ಲಿ ಒರಗಿಕೊಂಡು ಗುಡು ಗುಡಿಯ ಹೊಗೆಯನ್ನು ಬಿಡುತ್ತ ಚಿಂತಾಮಗ್ನನಾಗಿದ್ದನು.

ನವೀನ ಬಂದು, ವಿಪ್ರದಾಸನ ಮನೆಯಿಂದ ಅವನನ್ನು ಕಾಣಲು ಜನ ಬಂದಿರುವರೆಂದು ಸುದ್ದಿ ಕೊಟ್ಟ. ಮಧುಸೂದನ ಕೋಪಗೊಂಡು, "ಹೋಗಹೇಳು, ಈಗ ನನಗೆ ವಿರಾಮವಿಲ್ಲ" ಎಂದ.

ನವೀನ ಮಧುಸೂದನನ ವರ್ತನೆಯನ್ನು ನೋಡಿ ಮೀಟಿಂಗಿನಲ್ಲಿ ಏನೋ ಅಪಘಾತವಾಗಿದೆಯೆಂದು ಅರಿತ. ದೌರ್ಬಲ್ಯ ಸ್ವಭಾವತಃ ಉದಾರತೆ ಇಲ್ಲದ್ದು. ದುರ್ಬಲರ ಆತ್ಮಗೌರವ ಕ್ಷಮೆಯಿಲ್ಲದೆ ನಿಷ್ಠುರ ರೂಪವನ್ನು ತಾಳುವುದು. ಅಣ್ಣನ ಪೆಟ್ಟಿನಿಂದ ಮನಸ್ಸು ಅತ್ತಿಗೆಗೆ ಕಠಿಣವಾದ ರೀತಿಯಲ್ಲಿ ಪೆಟ್ಟುಕೊಡಲು ಬಯಸುವುದು. ಈ ವಿಷಯ ವಾಗಿ ನವೀನನಿಗೆ ಸಂದೇಹವೇ ಇರಲಿಲ್ಲ. ಯಾವ ವಿಧದಲ್ಲಾದರೂ ಈ ಪೆಟ್ಟು ತಪ್ಪಿಸಲೇಬೇಕು. ಇಲ್ಲಿಯವರೆಗೆ ಅವನ ಮನಸ್ಸಿನಲ್ಲಿ ಸಂದೇಹ ವಿತ್ತು. ಈ ಸಂದೇಹ ಸಂಪೂರ್ಣವಾಗಿ ಅಳಿಸಿಹೋಯಿತು. ಸ್ವಲ್ಪ ಹೊತ್ತು ಅತ್ತಿತ್ತ ತಿರುಗಾಡಿ ಮತ್ತೆ ಕೊಟಡಿಗೆ ಬಂದು ನೋಡಲು ಅವರಣ್ಣ ಟೆಲಿಫೋನ್ ಡೈರೆಕ್ಟರಿಯ ಹಾಳೆಯನ್ನು ತಿರುವಿಹಾಕುತ್ತ ಕುಳಿತಿದ್ದುದನ್ನು ಕಂಡ. ನವೀನ ಬಂದು ನಿಂತೊಡನೆ, ಮಧುಸೂದನ ತಲೆಯೆತ್ತಿನೋಡಿ ಒರಟುದನಿಯಲ್ಲಿ "ಮತ್ತೆ ಏನು ಬೇಕಾಗಿದೆ ? ನಿಮ್ಮ ವಿಪ್ರದಾಸಬಾಬುಗಳ ಪರವಾಗಿ ಮೋಖ್ತ್ಯಾರೀ ಮಾಡಬಂದಿರುವೆ ಎಂದು ಕಾಣುತ್ತೆ" ಎಂದ.

ನವೀನ "ಇಲ್ಲ ಅಣ್ಣಾ, ಆ ಭಯವಿಲ್ಲ. ಅವರ ಕಡೆಯ ಮನುಷ್ಯ ಅದೆಷ್ಟರಮಟ್ಟಿಗೆ ಹೇಳಿಹೋಗಿದ್ದಾನೆಂದರೆ ನೀನೇ ಸ್ವತಃ ಆತನನ್ನು

ಬರಹೇಳಿ ಕಳುಹಿಸಿದರೂ ಆತನು ಈ ಮನೆಯ ಕಡೆ ತಿರುಗಿಯೂ ನೋಡ ಲಾರ" ಎಂದ.

ಈ ಮಾತನ್ನು ಮಧುಸೂದನ ಸಹಿಸಲಾರದೆ ಹೋದ. "ಕಿರುಬೆರ ಳನ್ನು ಆಡಿಸಿದರೆ ಸಾಕು, ನನ್ನ ಕಾಲ ಬಳಿ ಬಂದು ಬೀಳಬೇಕಾಗುತ್ತೆ. ಆ ಮನುಷ್ಯ ಯಾತಕ್ಕಾಗಿ ಬಂದಿದ್ದ ?" ಎಂದ.

"ವಿಪ್ರದಾಸಬಾಬುಗಳು ಕಲ್ಕತ್ತೆಯ ಪಯಣ ಎರಡು ದಿನ ಹಿಂದೆ ಬಿತ್ತೆಂದೂ, ದೇಹಸ್ಥಿತಿ ಸ್ವಲ್ಪ ಉತ್ತಮವಾದರೆ ಆಗ ಹೊರಟುಬರುವ ರೆಂದೂ, ನಿನಗೆ ತಿಳಿಸಲು ಬಂದಿದ್ದ."

"ಸರಿ, ಸರಿ, ಅದಕ್ಕಾಗಿ ನನಗೆ ಅವಸರವೇನೂ ಇಲ್ಲ."

ನವೀನ "ಅಣ್ಣಾ, ನಾಳೆ ಬೆಳಗ್ಗೆ ನನಗೆ ಒಂದೆರಡು ಘಂಟೆಯ ಹೊತ್ತು ರಜಾಬೇಕು" ಎಂದ.

"ಯಾಕೆ ?"

"ಕೇಳಿದರೆ ನೀನು ಕೋಪಿಸಿಕೊಳ್ಳುವೆ."

"ಕೇಳದೆ ಹೋದರೆ ಹೆಚ್ಚು ಕೋಪ ಬರುವುದು."

"ಕುಂಭಕೋಣದಿಂದ ಒಬ್ಬ ಜೋಯಿಸ ಬಂದಿದ್ದಾನೆ. ಅವನ ಮೂಲಕ ಒಮ್ಮೆ ಅದೃಷ್ಟಪರೀಕ್ಷೆ ಮಾಡಿಸುತ್ತೇನೆ."

ಮಧುಸೂದನನ ಎದೆ ಝುಗ್ ಎಂದಿತು. ಈಗಲೇ ಅವನ ಹತ್ತಿರ ಹೊರಟು ಹೋಗೋಣವೆಂದು ಮನಸ್ಸಾಯಿತು. ಬಾಯಲ್ಲಿ ಗದರಿಸುತ್ತ "ನೀನು ಜ್ಯೋತಿಷ್ಯವನ್ನು ನಂಬುತ್ತೀಯೇನು ?" ಎಂದು ಕೇಳಿದ.

"ಸ್ವಾಭಾವಿಕವಾಗಿ ನಂಬುವುದಿಲ್ಲ. ಆದರೆ ಭಯವಾದರೆ ನಂಬು ತ್ತೇನೆ."

"ಭಯ ಯಾವುದರದು ?"

ನವೀನ ಏನೂ ಉತ್ತರ ಕೊಡದೆ ತಲೆ ಕೆರೆಯುತೊಡಗಿದ.

"ಭಯ ಯಾವುವರದು ? ಹೇಳು ಮತ್ತೆ."

"ಈ ಕುಟುಂಬದಲ್ಲಿ ನಿನ್ನನ್ನು ಬಿಟ್ಟು ಬೇರೆ ಯಾರಿಗೂ ಹೆದರುವುದಿಲ್ಲ. ಆದರೆ ಕೆಲವು ದಿನಗಳಿಂದ ನಿನ್ನ ಸ್ಥಿತಿಗತಿಗಳನ್ನು ನೋಡಿದರೆ ನನ್ನ ಮನಸ್ಸಿಗೇಕೊ ನೆಮ್ಮದಿಯಿಲ್ಲ."

ಕುಟುಂಬದ ಜನ ಮಧುಸೂದನನಿಗೆ ಹುಲಿಯಂತೆ ಹೆದರುತ್ತಿದ್ದರು. ಇಷ್ಟರಿಂದಲೇ ಅವನಿಗೆ ತೃಪ್ತಿ. ನವೀನನ ಮುಖದ ಕಡೆ ನೋಡುತ್ತ ನಿಶ್ಶಬ್ದವಾಗಿ ಗಂಭೀರ ಭಾವದಲ್ಲಿ ಗುಡುಗುಡಿ ಸೇದುತ್ತ ಅವನು ತನ್ನ ದೊಡ್ಡಸ್ತಿಕೆಯನ್ನು ಪ್ರದರ್ಶಿಸಿದನು.

ನವೀನ ಮಾತು ಮುಂದುವರಿಸಿದ "ಆದರಿಂದಲೇ ಒಮ್ಮೆ. ಗ್ರಹಗಳು ನನ್ನ ವಿಷಯದಲ್ಲಿ ಏನು ಮಾಡಬಯಸುತ್ತವೆ ಎಲ್ಲಿಯವರೆಗೆ ಅವು ನನ್ನನ್ನು ಎಳೆದು ಬಿಡುವವು ಎನ್ನುವುದನ್ನು ಸ್ಪಷ್ಟವಾಗಿ ತಿಳಿಯಬೇಕೆಂದು ಮನಸ್ಸಾಗಿದೆ."

"ನಿನ್ನಂತಹ ನಾಸ್ತಿಕ, ನೀನು ಯಾವುದನ್ನೂ ನಂಬುವವನಲ್ಲ, ಕೊನೆಗೆ ನೀನೂ— "

"ದೇವರಮೇಲೆ ನಂಬಿಕೆ ಇದ್ದಿದ್ದರೆ ಗ್ರಹಗಳನ್ನು ನಂಬುತ್ತಿರಲಿಲ್ಲ. ಅಣ್ಣಾ, ಡಾಕ್ಟರನ್ನು ಯಾರು ನಂಬುವುದಿಲ್ಲವೋ ಅವರಿಗೆ ಅಳಲೇಕಾಯಿ ಪಂಡಿತನನ್ನು ನಂಬಲು ತೊಡಕಾಗದು."

ತನ್ನ ಗ್ರಹಗತಿಗಳನ್ನು ವಿಚಾರಿಸಿ ತಿಳಿಯಲು ಮಧುಸೂದನನಿಗೆ ಎಷ್ಟು ಉತ್ಸಾಹವುಂಟಾಯಿತೋ ಅಷ್ಟೇ ಆವೇಶದಲ್ಲಿ ನವೀನನ್ನು ಕುರಿತು "ಓದು ಬರಹ ಕಲಿತು ಯಾರು ಏನು ಹೇಳಿದರೆ ಅದನ್ನು ನೀನೂ ನಂಬುವುದೇ?" ಎಂದ.

"ಆ ಮನುಷ್ಯನ ಹತ್ತಿರ ಭೃಗುಸಂಹಿತೆ ಇದೆಯಂತೆ. ಅದರಲ್ಲಿ ಯಾರೇ ಆಗಲಿ ಯಾವ ಕಾಲದಲ್ಲಿ ಹುಟ್ಟಿದ್ದಾರೆ, ಮುಂದೆ ಹುಟ್ಟುವರು ಯಾರು ಎಂಬುದನ್ನು ವಿವರವಾಗಿ ಸಂಸ್ಕೃತ ಭಾಷೆಯಲ್ಲಿ ಬರೆದಿದೆಯಂತೆ. ಇದರ ಮೇಲೆ ಇನ್ನು ಮಾತಿಗೆ ಇಲ್ಲವಲ್ಲ. ಪ್ರತ್ಯಕ್ಷವಾಗಿ ನೋಡಿದರಾಯಿತು."

" ಜಿಪ್ಪರನ್ನು ಮೋಸಮಾಡಿ ಹೊಟ್ಟೆ ತುಂಬಿಸಿಕೊಳ್ಳುವವರಿಗೆ ತಕ್ಕ ಹಾಗೆ ಬ್ರಹ್ಮ ಬೇಕಾದ ಹಾಗೆ ನಿನ್ನಂತಹ ಜಿಪ್ಪರನ್ನು ಸೃಷ್ಟಿಸಿ ಇಟ್ಟಿರುತ್ತಾನೆ. "

" ಮತ್ತೆ ಆ ಜಿಪ್ಪರನ್ನು ರಕ್ಷಿಸುವುದಕ್ಕಾಗಿ ನಿನ್ನಂತಹ ಬುದ್ಧಿವಂತರನ್ನೂ ಸೃಷ್ಟಿಸಿರುತ್ತಾನಲ್ಲವೆ ? ಹೊಡೆಯುವವರಲ್ಲಿ ಅವನಿಗೆ ಎಷ್ಟು ದಯೆಯಿದೆಯೋ ಹೊಡೆತ ತಿನ್ನುವವರಲ್ಲಿಯೂ ಅವನಿಗೆ ಅಷ್ಟೇ ದಯೆ ಇರುತ್ತೆ. ಬೇಕಾದರೆ ಭೃಗು ಸಂಹಿತೆಯ ಮೇಲೆ ನಿನ್ನ ತೀಕ್ಷ್ಣ ಬುದ್ಧಿಯನ್ನು ಉಪಯೋಗಿಸಿಯೇ ನೋಡಬಹುದಲ್ಲವೆ ಮತ್ತೆ. "

" ಒಳ್ಳೆಯದು, ಬೆಳಗ್ಗೆ ಹೊತ್ತಿಗೆ ಮುಂಚೆಯೇ ನನ್ನನ್ನು ಕರೆದುಕೊಂಡು ಹೋಗು. ನಿನ್ನ ಕುಂಭಕೋಣದವನ ಬುದ್ಧಿವಂತಿಕೆಯನ್ನು ನೋಡೋಣ. "

" ಆದರೆ ನಿನಗೆ ಅಪನಂಬಿಕೆ ಹೆಚ್ಚಿದಷ್ಟೂ ಗ್ರಹಗತಿಗಳ ಲೆಕ್ಕ ಸರಿಹೋಗದೆ ಇರಬಹುದು. ಮನುಷ್ಯನಲ್ಲಿ ನಂಬಿಕೆ ಇಟ್ಟರೇನೇ ಮನುಷ್ಯ ನಂಬಿಕಸ್ಥನಾಗುವನೆಂಬುದನ್ನು ಪ್ರಪಂಚದಲ್ಲಿ ಕಾಣುತ್ತಿಲ್ಲವೆ ? ಗ್ರಹಗಳದೂ ಹಾಗೆಯೇ. ಉದಾಹರಣೆಗೆ, ಸಾಹೇಬ ಜನಗಳು ಗ್ರಹಗಳನ್ನು ನಂಬುವುದಿಲ್ಲವೆಂದು ಅದಕ್ಕಾಗಿಯೇ ಗ್ರಹಗಳ ಫಲ ಅವರ ಮೇಲೆ ಉಪಯೋಗವಾಗುವುದಿಲ್ಲ. ಅವತ್ತು ತ್ರಯೋದಶ ಸ್ಪರ್ಶವನ್ನು ಗೆದ್ದು ನಿಮ್ಮ ಚಿಕ್ಕ ಸಾಹೇಬರು ಕುದುರೇ ಜೂಜಿನಲ್ಲಿ ಬಾಜಿಗೆದ್ದಿರಲಿಲ್ಲವೆ ? ನಾನೇನಾದರೂ ಆಗಿದ್ದರೆ ಬಾಜಿ ಗೆಲ್ಲುವುದು ಹಾಗಿರಲಿ, ಕುದುರೆ ನೆಗೆದು ಬಂದು ನನ್ನ ಹೊಟ್ಟೆಯ ಮೇಲೆ ಬಿದ್ದು ಹೋಗುತ್ತಿತ್ತು. ಅಣ್ಣಾ, ಈ ಗ್ರಹ ನಕ್ಷತ್ರಗಳ ಲೆಕ್ಕದ ಮೇಲೆ ನಿನ್ನ ಬುದ್ಧಿ ಉಪಯೋಗಿಸಲು ಹೋಗಬೇಡ. ಸ್ವಲ್ಪವಾದರೂ ಅವುಗಳಲ್ಲಿ ನಂಬಿಕೆಯನ್ನಿಡು. "

ಮಧುಸೂದನ ಸಂತೋಷಗೊಂಡು ಹುಸಿನಗೆಯೊಡನೆ ಗುಡುಗುಡಿ ಎಳೆಯುತ್ತಿದ್ದ.

ಮರುದಿನ ಬೆಳಗ್ಗೆ ಏಳು ಘಂಟೆಯ ಹೊತ್ತಿಗೆ ಮಧುಸೂದನ ನವೀನನ ಸಂಗಡ ಕಸ ಕಡ್ಡಿ ತುಂಬಿದ ಒಂದು ಕಿರಿದಾದ ಗಲ್ಲಿಯನ್ನು ದಾಟಿ,

ವೆಂಕಟಶಾಸ್ತ್ರಿಗಳ ಮನೆಗೆ ಹೋದ. ಕತ್ತಲೆ ಕವಿದ, ತೇವದ ಮನೆ. ಉಪ್ಪು ಹೊರಟಿದ್ದ ಗೋಡೆಯಲ್ಲಿ ಚರ್ಮರೋಗ ಹತ್ತಿದ್ದಂತೆ ಗುಳಿಗಳು ಬಿದ್ದಿದ್ದುವು. ತಖ್ತ ಪೋಷಿನ ಮೇಲೆ ಕೊಳಕು ಕೊಳಕಾದ ಒಂದು ಹರಕಲು ಜಮಖಾನೆಯನ್ನು ಹಾಸಿತ್ತು. ಒಂದು ಮೂಲೆಯಲ್ಲಿ ಅಸ್ತವ್ಯಸ್ತವಾಗಿ ಪೇರಿಸಿಟ್ಟಿದ್ದ ಕೆಲವು ಪುಸ್ತಕಗಳಿದ್ದುವು. ಎದುರಿನ ಗೋಡೆಯಲ್ಲಿ ಶಿವ ಪಾರ್ವತಿಯರ ಒಂದು ಪಠವಿತ್ತು. ನವೀನ "ಶಾಸ್ತ್ರಿಗಳೇ" ಎಂದು ಕೂಗು ಹಾಕಿದ. ಕೊಳೆಯಾಗಿದ್ದ ಚೀಟಿ ಬಟ್ಟೆಯ ರಜಾಯಿ ಅಂಗಿ ತೊಟ್ಟು, ಮುಂದಲೆಯನ್ನು ಕ್ಷೌರಮಾಡಿಸಿಕೊಂಡು ಜುಟ್ಟು ಗಂಟು ಹಾಕಿಕೊಂಡು ಕಪ್ಪಗೆ ಕುಳ್ಳಗಿದ್ದ ಖಾಯಿಲೆಯ ವ್ಯಕ್ತಿಯೊಂದು ಕೋಣೆಗೆ ಬಂದಿತು. ನವೀನ ಆತನಿಗೆ ಆಡಂಬರದಿಂದ ನಮಸ್ಕಾರ ಮಾಡಿದ. ಆತನ ಚಹರೆಯನ್ನು ನೋಡಿ ಮಧುಸೂದನನಿಗೆ ಏನೇನೂ ಭಕ್ತಿ ಉಂಟಾಗಲಿಲ್ಲ. ಆದರೆ ದೈವದೊಡನೆ ದೈವಜ್ಞನಿಗೆ ಒಂದು ಬಗೆಯ ಸಂಬಂಧ ಇದೆಯೆಂದು ತಿಳಿದು ಭಯದೊಡನೆ ಅವಸರ ಅವಸರವಾಗಿ ಬಂದು ಅರ್ಧಮರ್ಧ ಬಗೆಯ ನಮಸ್ಕಾರ ಮಾಡಿದ. ನವೀನ ಮಧುಸೂದನನ ಜಾತಕವೊಂದನ್ನು ಜೋಯಿಸನ ಇದಿರಿನಲ್ಲಿ ನೀಡುತ್ತಲೇ ಆತನು ಅದನ್ನು ತೆಗೆದುಕೊಳ್ಳದೆ ಮಧುಸೂದನನ ಕೈಯನ್ನು ನೋಡಬಯಸಿದ. ಮರದ ಪೆಟ್ಟಿಗೆಯಿಂದ ಕಾಗದ, ಕಡ್ಡಿಗಳನ್ನು ಹೊರಗೆ ತೆಗೆದು ಒಂದು ಚಕ್ರವನ್ನು ಬರೆದ. ಮಧುಸೂದನನ ಮುಖದ ಕಡೆ ನೋಡಿ "ಪಂಚಮವರ್ಗ" ಎಂದ. ಮಧುಸೂದನನಿಗೆ ಏನೂ ಅರ್ಥವಾಗಲಿಲ್ಲ. ಜೋಯಿಸನು ಬೆರಳಿನ ಗಿಣ್ಣುಗಳನ್ನು ಎಣಿಸುತ್ತ ಎಣಿಸುತ್ತ "ಕವರ್ಗ, ಚವರ್ಗ ಟವರ್ಗ, ತವರ್ಗ, ಪವರ್ಗ" ಎಂದು ಹೇಳುತ್ತ ಹೋದ. ಇದರಿಂದಲೂ ಮಧುಸೂದನನಿಗೆ ಏನೂ ಅರ್ಥವಾಗಲಿಲ್ಲ. ಜೋಯಿಸನು ಪುನಃ 'ಪಂಚಮವರ್ಣ' ಎಂದ. ಮಧುಸೂದನ ಬೇಸರಪಡದೆ ಕುಳಿತಿದ್ದ. ಜೋಯಿಸ "ಪ-ಫ-ಬ-ಭ-ಮ." ಎಂದ. ಮಧುಸೂದನ ಇದರಿಂದ ಭೃಗು ಮುನಿ ವ್ಯಾಕರಣದ ಮೊದಲ ಅಧ್ಯಾಯದಿಂದ 'ಭೃಗುಸಂಹಿತೆ' ಯನು ಆರಂಭಿಸಿರುವನೆಂದು ತಿಳಿದುಕೊಂಡ. ಈ ಸಮಯದಲ್ಲಿ ವೆಂಕಟಶಾಸ್ತ್ರಿ "ಪಂಚಾಕ್ಷರಕಂ" ಎಂದ.

ನವೀನ ಚಕಿತನಾಗಿ ಮಧುಸೂದನನ ಕಿವಿಯ ಹತ್ತಿರ ಪಿಸುಮಾತಿನಲ್ಲಿ "ತಿಳಿಯಿತು ಅಣ್ಣಾ" ಎಂದ.

"ಏನು ತಿಳಿಯಿತು ?"

"ಪವರ್ಗದ ಐದನೆಯ ವರ್ಣ 'ಮ'? ಅನಂತರ ಐದಕ್ಷರ, ಮ-ಧು-ಸೂ-ದ-ನ. ಬ್ರಹ್ಮಗ್ರಹದ ಅದ್ಭುತ ಕೃಪೆಯಿಂದ ಮೂರು ಐದುಗಳು ಒಂದೆಡೆ ಕೂಡಿವೆ."

ಮಧುಸೂದನ ಸ್ತಂಭಿತನಾದ. ತಂದೆ ತಾಯಿ ಹೆಸರಿಡುವುದಕ್ಕೆ ಎಷ್ಟೋ ಸಾವಿರ ವರ್ಷಗಳ ಮುಂಚೆಯೇ ಭೃಗುಮುನಿಯ ಪುಸ್ತಕದಲ್ಲಿ ತನ್ನ ನಾಮಕರಣವಾಗಿದೆ! ನಕ್ಷತ್ರಗಳ ಈ ವಿಚಿತ್ರ ವರ್ತನೆಯೇನು ? ಅನಂತರ ದಿಕ್ಕುತೋರದವನಂತೆ ಸಂಸ್ಕೃತ ಭಾಷೆಯಲ್ಲಿ ಸಂಕ್ಷೇಪವಾಗಿ ಬರೆದಿದ್ದ ತನ್ನ ಬಾಳುವೆಯ ಹಿಂದಿನ ಚರಿತ್ರೆಯನ್ನು ಕೇಳಿದ. ಭಾಷೆ ಕಡಮೆ ಅರ್ಥವಾದಷ್ಟೂ ಭಕ್ತಿ ಅಷ್ಟಷ್ಟೂ ಹೆಚ್ಚಿತು. ತನ್ನ ಬಾಳುವೆ ಮೊದಲಿಂದ ಕಡೆಯವರೆಗೆ ಋಷಿವಾಕ್ಯದಲ್ಲಿ ಪ್ರತ್ಯಕ್ಷವಾಗಿತ್ತು. ತನ್ನ ಎದೆಯ ಮೇಲೆ ಕೈಯಾಡಿಸಿ ನೋಡಿಕೊಂಡ. ಯಾವುದೋ ತಪೋವನದಲ್ಲಿ ಬರೆದ ಒಂದು ಪುಸ್ತಕದಲ್ಲಿ ಹೇಳಿದ್ದಂತೆ ಅವನ ದೇಹ ಅನುಸ್ವಾರ ವಿಸರ್ಗ, ತದ್ಧಿತ ಪ್ರತ್ಯಯಗಳನ್ನು ಒಟ್ಟುಗೂಡಿಸಿ ಮಾಡಿತ್ತು. ಅನಂತರ ಜೋಯಿಸರ ಕೊನೆಯಮಾತಾದರೂ ಇಷ್ಟೆ. "ಮಧುಸೂದನನ ಮನೆಯಲ್ಲಿ ಶೀಘ್ರದಲ್ಲಿ ಲಕ್ಷ್ಮಿ ನೆಲಸುವಳು. ಮುಂಚಿತವಾಗಿಯೇ ಮನೆಯಲ್ಲಿ ಈ ಸೂಚನೆ ಉಂಟಾಯಿತು. ಕೆಲವು ದಿನಗಳ ಹಿಂದೆ ಆಕೆ ನವವಧುವನ್ನು ಆಶ್ರಯಿಸಿ ಬಂದಿರುವಳು. ಇನ್ನು ಎಚ್ಚರಿಕೆಯಿಂದಿರಬೇಕು. ಯಾಕೆಂದರೆ ಈಕೆಯ ಮನಸ್ಸಿಗೆ ನೋವಾದರೆ ಭಾಗ್ಯಲಕ್ಷ್ಮಿ ಕೋಪಗೊಳ್ಳುವಳು" ಎಂದು.

ವೆಂಕಟಶಾಸ್ತ್ರಿ ಮಾತು ಮುಂದುವರಿಸಿದ. "ಕೋಪದ ಲಕ್ಷಣವನ್ನು ಪ್ರಕಟಿಸಿರುವ ಈ ಜಾತಕದವನು ಎಚ್ಚರಿಕೆಯಿಂದ ಇರದಿದ್ದರೆ ವಿಪತ್ತು ಬೆಳೆಯುತ್ತಲೇ ಹೋಗುವುದು."

ಮಧುಸೂದನ ಸ್ತಂಭಿತನಾಗಿ ಕುಳಿತಿದ್ದ. ಮದುವೆಯ ದಿನವೇ ಆ ದೊಡ್ಡ ಮೊತ್ತದ ಲಾಭದ ಸಂಗತಿ ನೆನಪಾಯಿತು. ಮತ್ತೆ ಅಲ್ಲೇ

ಕೆಲದಿನಗಳಲ್ಲೇ ಈ ಸೋಲು. ಲಕ್ಷ್ಮಿ ತಾನಾಗಿಯೇ ಬರುವಳು ಎನ್ನುವುದು ಒಂದು ಸೌಭಾಗ್ಯವೇ. ಆದರೆ ಆ ಬರುವಿಕೆಯ ಹೊಣೆಗಾರಿಕೆ ಬಹಳ ಭಯಂಕರವಾದ್ದುದು.

ಹಿಂದಿರುಗುವಾಗ ಮಧುಸೂದನ ಗಾಡಿಯಲ್ಲಿ ಸದ್ದಿಲ್ಲದೆ ಕುಳಿತಿದ್ದ. ಸ್ವಲ್ಪ ಹೊತ್ತಾದ ಮೇಲೆ ನವೀನ ಮಾತನ್ನಾರಂಭಿಸಿದ. “ಆ ವೆಂಕಟ ಶಾಸ್ತ್ರಿಯ ಮಾತಿನಲ್ಲಿ ಒಂದನ್ನೂ ನಂಬಲಾರೆ. ಖಂಡಿತ ಅವನು ಯಾರ ಮೂಲಕವೋ ನಿನ್ನ ಸಂಗತಿಯೆಲ್ಲಾ ಕೇಳಿದ್ದಾನೆ.”

“ಅತಿ ಬುದ್ಧಿ ನಿನ್ನದು! ಯಾವ ಊರಲ್ಲಿ ಎಷ್ಟು ಜನ ಇದ್ದಾರೆಯೋ ಮೊದಲಿಂದ ಕಡೆಯವರೆಗೆ ಅವರ ಸುದ್ದಿಯನ್ನು ಸಂಗ್ರಹಿಸಿ ಇಟ್ಟುಕೊಳ್ಳುತ್ತಾನೆಯೋ! ಅದೇನು ಬಹು ಸುಲಭವಾದ ವಿಷಯವೆ?”

“ಮನುಷ್ಯರು ಹುಟ್ಟುವ ಮುಂಚೆಯೇ ಅವರ ಕೋಟ್ಯಾನು ಕೋಟಿ ಜಾತಕ ಬರೆಯುವುದಕ್ಕಿಂತ ಇದು ಬಹಳ ಸುಲಭ. ಭೃಗುಮುನಿ ಅಷ್ಟೊಂದು ಕಾಗದ ಎಲ್ಲಿ ಸಂಪಾದಿಸಿದರು, ಮತ್ತೆ ವೆಂಕಟಶಾಸ್ತ್ರಿಯ ಆ ಮನೆಯಲ್ಲಿ ಅಷ್ಟು ಜಾಗವಾದರೂ ಎಲ್ಲಿದೆ?”

“ಒಂದು ಸಾಲಿನಲ್ಲಿ ಸಾವಿರ ಮಾತು ಬರೆಯಬಲ್ಲರು ಅವರು.”

“ಸಾಧ್ಯವಿಲ್ಲ.”

“ನಿನ್ನ ಬುದ್ಧಿಗೆ ಯಾವುದು ನಿಲುಕದೊ ಅದು ಅಸಂಭವವೇ. ನಿನ್ನ ತರ್ಕ ವಿಚಿತ್ರವಾಗಿದೆ. ಈಗ ತರ್ಕವನ್ನು ಕಟ್ಟಿಡು. ಅವತ್ತು ಅವಳ ಮನೆಯಿಂದ ಬಂದಿದ್ದ ಗುಮಾಸ್ತನನ್ನು ನೀನೇ ಸ್ವತಃ ಕರೆದುಕೊಂಡು ಬಾ. ಇವತ್ತೇ, ಹೋಗು ನಿಧಾನ ಮಾಡಬೇಡ.”

ಅಣ್ಣನನ್ನು ಮೋಸಪಡಿಸಿ, ನವೀನನ ಮನಸ್ಸು ಒಳಗೊಳಗೇ ತಲ್ಲಣಿಸುತ್ತಿತ್ತು. ತಂತ್ರ ಎಷ್ಟು ಸುಲಭವಾದುದು. ಆದರೂ ಅದರ ಸಫಲತೆಯಿಂದ ಅಣ್ಣನಲ್ಲಿ ಬದಲಾವಣೆಯುಂಟಾಯಿತು. ಅವನು ಅದನ್ನು ಕಂಡು ತಾನು ನಾಚಿದ್ದಲ್ಲದೆ ಅವನ ಅವಮರ್ಯಾದೆಗಾಗಿ ಅವನನ್ನು ನಾಚಿಸಿ, ಕಷ್ಟಪಡಿಸಿದನು. ಅಣ್ಣನಿಗೆ ಸಂದರ್ಭ ಅನುಸರಿಸಿ ಹಲವು

ಸಲ ಮೋಸ ಮಾಡಿದ್ದಾಗಿದೆ. ಯಾವಾಗಲೂ ಮನಸ್ಸಿಗೆ ಏನೂ ಅನ್ನಿಸ ಲಿಲ್ಲ. ಆದರೆ ಇಷ್ಟೊಂದು ಪೂರ್ವ ಪ್ರಯತ್ನ ನಡೆಸಿ ಇಷ್ಟು ದೊಡ್ಡ ಮೋಸಮಾಡಿದ ಗ್ಲಾನಿ ಅವನ ಮನಸ್ಸನ್ನು ಕಲಕಿತು.

೪೨

ಮಧುಸೂದನನ ಮನಸ್ಸಿನಿಂದ ದೊಡ್ಡದೊಂದು ಆತ್ಮಗೌರವದ ಹೊರೆ ಇಳಿದಂತಾಯಿತು. ಆ ಕಠೋರ ಗೌರವದ ಅರಿವು ಅವನಲ್ಲಿ ವಿಕ ಸಿತವಾಗುತ್ತಿದ್ದ ಅನುರಕ್ತಿಯ ಮೇಲೆ ಬಂಡೆಯಂತೆ ಕವಿದುಕೊಂಡಿತ್ತು. ಕುಮುವಿನ ವಿಷಯದಲ್ಲಿ ಅವನ ಮನಸ್ಸು ಮುಗ್ಧವಾಗಿತ್ತಷ್ಟೆ. ಆಗಲೂ ಆ ವಿವಶತೆಯ ವಿರುದ್ಧವಾಗಿ ಮನಸ್ಸಿನಲ್ಲೇ ಕದನ ಆರಂಭವಾಗಿತ್ತು. ಬೇರೆ ದಾರಿಕಾಣದೆ ಅದೆಷ್ಟು ಮಟ್ಟಿಗೆ ಕುಮುವಿನ ಬಳಿ ತನ್ನನ್ನು ಒಪ್ಪಿಸಿ ಕೊಳ್ಳುತ್ತ ಬಂದನೋ ಅಷ್ಟುಷ್ಟು ತನ್ನ ಅರಿವಿಲ್ಲದೆಯೇ ಕುಮುವಿನ ವಿಷಯದಲ್ಲಿ ಅವನ ಕೋಪ ಬೆಳೆಯುತ್ತಿತ್ತು. ಇಂತಹ ಸಮಯದಲ್ಲಿ "ಸ್ವತಃ ನಕ್ಷತ್ರಗಳ ಬಳಿಯಿಂದ ಮನೆಗೆ ಲಕ್ಷ್ಮಿ ಬಂದಿರುವಳು. ಅವಳನ್ನು ಸಂತೋಷಪಡಿಸಬೇಕು" ಎಂದು ಎಲ್ಲ ಬಗೆಯ ದ್ವಂದ್ವವೂ ಅಳಿಸಿ ಹೋಗಿ, ಅವನ ತನುಮನಗಳು ರೋಮಾಂಚಗೊಂಡವು. ಬಾರಿಬಾರಿಗೆ ತನ್ನ ಮನಸ್ಸಿನಲ್ಲೇ "ಲಕ್ಷ್ಮಿ ನಮ್ಮ ಮನೆಯಲ್ಲಿ ಲಕ್ಷ್ಮಿ, ನನ್ನ ಅದೃ ಷ್ಟದ ಶ್ರೇಷ್ಠ ಕೊಡುಗೆ" ಎಂದು ಹೇಳಿಕೊಳ್ಳತೊಡಗಿದನು. ಈ ನಿಮಿಷ ದಲ್ಲಿ ಎಲ್ಲ ಸಂಕೋಚವನ್ನೂ ನಿರ್ಮೂಲಮಾಡಿ "ಕುಮುವಿನ ಹತ್ತಿರ ಹೋಗಿ ಸ್ತೋತ್ರಮಾಡಿ ಬರಬೇಕು. ಏನಾದರೂ ಮರೆತು ನಡೆದಿದ್ದರೆ ತಪ್ಪೆಂದು ಎಣಿಸಬೇಡ, ಎಂದು ಹೇಳಿ ಬರೋಣವೇ" ಎಂದು ಮನಸ್ಸಿಗೆ ಅನ್ನಿಸತೊಡಗಿತು. ಆದರೆ ಇವತ್ತು ಅದಕ್ಕೆ ಅವಕಾಶವಿರಲಿಲ್ಲ. ವ್ಯಾಪಾ ರದ ನಷ್ಟ ಸರಿಪಡಿಸುವುದಕ್ಕಾಗಿ ಆಗಲೇ ಆಫೀಸಿಗೆ ಹೋಗಬೇಕಾ ಗಿತ್ತು. ಮನೆಗೆ ಹೋಗಿ ಊಟ ಮಾಡಲೂ ಅವಕಾಶ ಸಿಕ್ಕಲಿಲ್ಲ.

ಇತ್ತ, ದಿನವೆಲ್ಲಾ ಕುಮುವಿನ ಮನಸ್ಸಿನಲ್ಲಿ ಆಂದೋಲನ ನಡೆಯು ತ್ತಿತ್ತು. ಮರುದಿನ ಅಣ್ಣ ಬರುತ್ತಾನೆ. ಆತನ ದೇಹಸ್ಥಿತಿ ಸರಿಯಾಗಿಲ್ಲ ಎಂಬುದನ್ನು ಅವಳು ಬಲ್ಲಳು. ಅವನನ್ನು ನೋಡಲು ಸುಲಭವಾಗಿ

ಅವಕಾಶವಾದೀತೋ ಇಲ್ಲವೋ ಎಂದು ಖಂಡಿತವಾಗಿ ತಿಳಿಯುವುದಕ್ಕಾಗಿ ಮನಸ್ಸು ತಲ್ಲಣಿಸುತ್ತಿತ್ತು. ನವೀನ ಎಲ್ಲಿಗೋ ಕೆಲಸದ ಮೇಲೆ ಹೋಗಿದ್ದ. ಇನ್ನೂ ಬಂದಿರಲಿಲ್ಲ. ಇಂದು ಸ್ವತಃ ಮಧುಸೂದನನೇ ಬಂದು ದೊಡ್ಡ ಯಜಮಾನಿಯನ್ನು ಎಲ್ಲ ರೀತಿಯಲ್ಲೂ ತೃಪ್ತಿಪಡಿಸುವ ನೆಂದು ಅವನು ಖಂಡಿತವಾಗಿ ತಿಳಿದಿದ್ದ. ಮುಂಚೆಯೇ ಯಾವುದಾದ ರೊಂದು ಸುಳಿವು ಕೊಟ್ಟು ರಸಭಂಗಮಾಡಲು ಬಯಸಲಿಲ್ಲ.

ಇವತ್ತು ಬಿಸಿಲು ಮಹಡಿಯಲ್ಲಿ ಕೂತುಕೊಳ್ಳಲು ಸೌಕರ್ಯವಿರಲಿಲ್ಲ. ಹಿಂದಿನ ದಿನದ ಸಂಜೆಯಿಂದ ಮೋಡ ಮುಚ್ಚಿಕೊಂಡಿತ್ತು. ಇವತ್ತು ಮಧ್ಯಾಹ್ನದಿಂದ ಟಪ್ ಟಪ್ ಎಂದು ಮಳೆ ಸುರಿಯುತ್ತಿದೆ. ಶೀತಕಾಲದ ಮೋಡ, ಮನಸ್ಸಿಗೆ ಬೇಡದ ಅತಿಥಿಯಂತೆ. ಬಣ್ಣಗುಂದಿದೆ. ಮಳೆ ಯಲ್ಲಿ ಧ್ವನಿಯಿಲ್ಲ. ತೇವದ ಗಾಳಿ ಉತ್ಸಾಹವಿಲ್ಲದಂತೆ ಇತ್ತು. ಸೂರ್ಯನ ಬೆಳಕಿಲ್ಲದ ಆಕಾಶ ದೀನತೆಯಿಂದ ಸಂಕುಚಿತವಾಗಿತ್ತು. ಮೆಟ್ಟಲು ಹತ್ತಿದೊಡನೆ ಮಲಗುವ ಮನೆಗೆ ಹೋಗುವ ದಾರಿಯಲ್ಲಿ ಪಸಾರೆ ಹಾಕಿದ ಸ್ಥಳದಲ್ಲಿ ನೆಲದ ಮೇಲೆ ಕುಮು ಕುಳಿತಿದ್ದಳು. ಆಗಿಂದಾಗ್ಗೆ ಮಳೆಯ ಇರಿಚಲು ಹೊಡೆಯುತ್ತಿತ್ತು. ಮೋಡ ಕವಿದು, ಬಹು ತೇವದಿಂದ ಕೂಡಿದ ಇಂತಹ ಬೇಸರಿಕೆಯ ದಿನದಲ್ಲಿ ಕುಮುವಿನ ಮನಸ್ಸಿನಲ್ಲಿ ತನ್ನ ಬಾಳುವೆಯೇ ತನ್ನನ್ನು ಒಂದು ಹೆಬ್ಬಾವಿನಂತೆ ನುಂಗು ತ್ತಿದೆ. ಅದರ ಕೊಳೆ ತುಂಬಿದ ಹೊಟ್ಟೆಯಲ್ಲಿ ಸ್ವಲ್ಪವಾದರೂ ಬರಿಯ ಜಾಗವಿಲ್ಲ ಎಂದು ಅನ್ನಿಸುತ್ತಿತ್ತು. ಯಾವ ದೇವರು ಅವಳನ್ನು ಮರೆತು ಇಂದು ಈ ಉಪಾಯಹೀನವಾದ ನಿರಾಶೆಯ ನಡುವೆ ತಂದು ಬಿಟ್ಟರು ವನೋ ಆತನ ವಿಷಯದಲ್ಲಿ ಅವಳಲ್ಲಿ ಹೊಗೆಯಾಡುತ್ತಿದ್ದ ದುಗುಡ ಇಂದು ಕೋಪದ ಬೆಂಕಿಯಾಗಿ ಉರಿದೆದ್ದಿತು. ಇದ್ದಕ್ಕಿದ್ದಂತೆ ಥಟ್ಟನೆ ಎದ್ದು ಹೊರಟಳು. ಮೇಜು ತೆರೆದು ಆ ಯುಗಲ ರೂಪದ ಪಠವನ್ನು ಹೊರಗೆ ತೆಗೆದಳು. ಬಣ್ಣದ ರೇಷ್ಮೆಯ ಬಟ್ಟೆಯಲ್ಲಿ ಅದನ್ನು ಸುತ್ತಿತ್ತು. ಆ ಪಠ ವನ್ನು ಇಂದು ಅವಳು ನಾಶಮಾಡಬಯಸುತ್ತಿದ್ದಳು. "ನಿನ್ನನ್ನು ನಾನು ಎಳ್ಳಷ್ಟೂ ನಂಬೆನು" ಎಂದು ಕೂಗಿ ಹೇಳಬೇಕೆಂದು ಅನ್ನಿಸುತ್ತಿತ್ತು. ಕೈನಡಗುತ್ತಿತ್ತು. ಆದ್ದರಿಂದಲೇ ಗಂಟು ಬಿಚ್ಚಲಾಗುತ್ತಿರಲಿಲ್ಲ. ಎಳೆ

ದಾಟದಲ್ಲಿ ಅದು ಮತ್ತಷ್ಟು ಬಿಗಿಯಾಯಿತು. ಧೈರ್ಯಗೆಟ್ಟು ಹಲ್ಲಿನಿಂದ ಕಚ್ಚಿ ಹರಿದು ಬಿಟ್ಟಳು. ಅಷ್ಟೊಂದು ಚಿರಪರಿಚಿತವಾದ ಮೂರ್ತಿ ಕಣ್ಣಿಗೆ ಕಾಣುತ್ತಲೇ ಅವಳಿಂದ ಸುಮ್ಮನಿರಲಾಗಲಿಲ್ಲ. ಅದನ್ನು ಎದೆಗೆ ಅಪ್ಪಿ ಕೊಂಡು ಅಳತೊಡಗಿದಳು. ಮರದ ಚೌಕಟ್ಟು ಎದೆಯನ್ನು ಒತ್ತಿದಷ್ಟೂ ಮತ್ತಷ್ಟು ಅದನ್ನು ಅಪ್ಪಿಕೊಂಡಳು.

ಈ ಸಮಯದಲ್ಲಿ ಮಲಗುವ ಮನೆಯಲ್ಲಿ ಹಾಸಿಗೆ ಸರಿಪಡಿಸಲು ಆಳು, ಮುರಲೀ ಬಂದ. ಚಳಿಗೆ ಅವನ ಕೈ ನಡಗುತ್ತಿತ್ತು. ಮೈಮೇಲೆ ಹರಕಲು ಹರಕಲಾದ ಕೊಳೆಯಾದ ಒಂದು ದುಪಟಿ. ಬಕ್ಕದಲೆ, ಬತ್ತಿದ ಕಪಾಳಗಳು, ಗುಳಿಬಿದ್ದ ಕೆನ್ನೆಗಳು. ಕೆಲವು ದಿನಗಳಿಂದ ಕ್ಷೌರಮಾಡಿ ಕೊಳ್ಳದೆ ಕಪ್ಪು ಬಿಳುಪು ಕೂಡಿದ ಗಡ್ಡದ ಕೂದಲು ಮುಳ್ಳಿನಂತೆ ನಿಂತಿದ್ದುವು. ಸ್ವಲ್ಪ ದಿನಗಳಿಗೆ ಹಿಂದೆಯೇ ಅವನು ಮಲೇರಿಯಾದಲ್ಲಿ ನರಳಿದ್ದ. ಮೈಯಲ್ಲಿ ರಕ್ತವೇ ಇಲ್ಲವೆನ್ನಬಹುದು. ಕೆಲಸ ಬಿಟ್ಟು ಊರಿಗೆ ಹೋಗಿ ಬಿಡು ಎಂದು ಡಾಕ್ಟರು ಹೇಳಿದ್ದರು. ಆದರೆ ನಿಷ್ಠುರವಾದ ಅದೃಷ್ಟ.

"ಚಳಿಯಾಗುವುದೇ ಮುರಲೀ?" ಎಂದು ಕುಮು ಕೇಳಿದಳು.

"ಹೌದು, ತಾಯಿ ಮೋಡಮುಚ್ಚಿಕೊಂಡು ಶೀತ ಹೆಚ್ಚಿದೆ."

"ಉಣ್ಣೆಯ ಬಟ್ಟೆ ಇಲ್ಲವೇನು ನಿನಗೆ?"

"ಬಿರುದು ಬಂದ ದಿನ ಮಹಾರಾಜರು ಕೊಟ್ಟಿದ್ದರು. ಮೊಮ್ಮಗನಿಗೆ ಕೆಮ್ಮಲು ಆರಂಭವಾದಾಗ ಡಾಕ್ಟರು ಹೇಳಿದ್ದಕ್ಕೆ ಅವನಿಗೆ ಕೊಟ್ಟೆ, ತಾಯಿ."

ಕುಮು ಬೂದಿ ಬಣ್ಣದ ಹಳೆಯ ಅಲ್ವಾನೊಂದನ್ನು ಪಕ್ಕದ ಕೋಣೆಯ ಅಲ್ಮಾರಿಯಿಂದ ತಂದು "ಇದೋ! ನನ್ನ ಬಟ್ಟೆ ನಿನಗೆ ಕೊಡುತ್ತೇನೆ. ತೆಗೆದುಕೋ–" ಎಂದಳು.

ಮುರಲಿ ಕುಗ್ಗಿದವನಾಗಿ "ಮನ್ನಿಸಬೇಕು ತಾಯಿ, ಮಹಾರಾಜರು ಕೋಪಿಸಿಕೊಳ್ಳುವರು" ಎಂದ.

ಈ ಮನೆಯಲ್ಲಿ ದಯೆಗೆ ಅವಕಾಶವಿಲ್ಲವೆಂದು ಕುಮುವಿಗೆ ನೆನಪಾಯಿತು. ಆದರೆ ದೇವರ ಬಳಿಯಲಿ ಸ್ವಂತಕ್ಕಾಗಿಯಾದರೂ ಯಾರು

ದಯೆಯನ್ನು ಯಾಚಿಸುವರೋ ಪುಣ್ಯ ಕರ್ಮ ಅವರ ಮಾರ್ಗದಲ್ಲೇ ಇರುವುದು. ಕುಮು ವ್ಯಾಕುಲಗೊಂಡು ಅಲ್ಬಾನನ್ನು ನೆಲದ ಮೇಲೆ ಬಿಸುಟಳು.

ಮುರಲೀ ಕೈಮುಗಿದು "ರಾಣಿಯಮ್ಮಾ, ನೀವು ತಾಯಿ ಲಕ್ಷ್ಮಿ ಯಂತೆ. ಕೋಪಗೊಳ್ಳಬೇಡಿ. ನನಗೆ ಉಣ್ಣೆ ಬಟ್ಟೆಯ ಆವಶ್ಯಕತೆಯಿಲ್ಲ. ನಾನು ಹುಕ್ಕಾಬರ್‌ದಾರನ (ಹುಕ್ಕಸಿದ್ಧಮಾಡಿ ಕೊಡುವವನು) ಕೋಣೆ ಯಲ್ಲಿ ಇರುತ್ತೇನೆ. ಅಲ್ಲಿ ಬಕರೆಯಲ್ಲಿ ಸದಾ ಬೆಂಕಿಯಿರುವುದು. ನಾನು ಒಟ್ಟಿಗೆ ನೆಮ್ಮದಿಯಿಂದಲೇ ಇರುತ್ತೇನೆ" ಎಂದ.

ಕುಮು "ಮುರಲೀ, ನವೀನ್ ವೈದಂದಿರು ಬಂದರೆ ಅವರನ್ನು ಬರ ಹೇಳು" ಎಂದಳು.

ನವೀನ ಕೋಣೆಯೊಳಕ್ಕೆ ಕಾಲಿಟ್ಟೊಡನೆ "ನೀನು ಒಂದು ಕೆಲಸ ಮಾಡಿಕೊಡಬೇಕು. ಮಾಡುವೆಯೋ? ಹೇಳು" ಎಂದಳು.

"ನನಗೆ ಅನಿಷ್ಟವಾಗುವಂತಹುದಾದರೆ ಈ ಕ್ಷಣ ಮಾಡುವೆ, ಆದರೆ ನಿನಗೆ ಅನಿಷ್ಟವಾಗುವುದಾದರೆ ಖಂಡಿತ ಮಾಡುವುದಿಲ್ಲ."

"ನನಗೆ ಇನ್ನೇನು ಅನಿಷ್ಟವಾದೀತು? ನಾನು ಹೆದರೆನು" ಎಂದು, ಅವಳು ತನ್ನ ಕೈಯಲ್ಲಿದ್ದ ದಪ್ಪವಾದ ಚಿನ್ನದ ಬಳೆಯ ಜೊತೆಗಳನ್ನು ಕಳೆದು "ನನ್ನ ಬಳೆ ಮಾರಿ ಅಣ್ಣನಿಗಾಗಿ ಸ್ವಸ್ತ್ಯಯನ ಮಾಡಿಸ ಬೇಕು" ಎಂದಳು.

"ಏನೂ ಆವಶ್ಯಕವಿಲ್ಲ ಅತ್ತಿಗೆ. ನೀನು ಅವರಲ್ಲಿ ಇಟ್ಟಿರುವ ಭಕ್ತಿ ಇದೆಯಲ್ಲ ಅದರ ಪುಣ್ಯದಿಂದಲೇ ಪ್ರತಿ ಮುಹೂರ್ತ ಅವರಿಗಾಗಿ ಸ್ವಸ್ತ್ಯಯನವಾಗುತ್ತೆ."

"ನೋಡು, ಅಣ್ಣನಿಗಾಗಿ ಏನೂ ಮಾಡಲಾರದಿರುವೆ. ಸಾಧ್ಯ ವಾಗುವುದಾದರೆ ಕೇವಲ ದೇವರ ಬಾಗಿಲಲ್ಲಿ ಅವನಿಗಾಗಿ ಸೇವೆ ಮುಟ್ಟಿ ಸುವೆ."

"ನೀನು ಏನೂ ಮಾಡಬೇಕಾಗಿಲ್ಲ ತಾಯಿ. ಏನು ಮಾಡಬೇಕಾ ದರೂ ಸೇವಕರಾದ ನಾವು ಇರುವೆವಲ್ಲ, ?"

" ನೀವು ಏನುಮಾಡಬಲ್ಲಿರಿ, ಹೇಳು ? "

"ನಾವು ಪಾಪಿಷ್ಟರು, ಪಾಪಮಾಡಬಲ್ಲೆವು. ಅದನ್ನು ಮಾಡಿಯೂ ನಿನಗೆ ಪ್ರಯೋಜನವಾಗುವುದಾದರೆ ಧನ್ಯರಾದೆವು. "

" ನೋಡು. ಈ ವಿಷಯವಾಗಿ ಹಾಸ್ಯಮಾಡಬೇಡ. "

" ಸ್ವಲ್ಪವೂ ಹಾಸ್ಯವಲ್ಲ. ಪುಣ್ಯಕಾರ್ಯ ಮಾಡುವುದಕ್ಕಿಂತ ಪಾಪಮಾಡುವುದು ಕಠಿಣವಾದ ಕೆಲಸ. ದೇವರು ಅರಿಯುವುದಾದರೆ ಪುರಸ್ಕರಿಸುವನು. "

ನವೀನನ ಮಾತಿನ ಭಾವದಿಂದ ದೇವರ ವಿಷಯದಲ್ಲಿ ಉಪೇಕ್ಷೆ ಮಾಡಿ ಕುಮುವಿನ ಮನಸಲ್ಲಿ ಸ್ವಭಾವತಃ ನೋವು ಉಂಟಾಗಲು ಎಡೆಯಿತ್ತು. ಆದರೆ ಆವಳ ಅಣ್ಣನೂ ಮನಸ್ಸಿನಲ್ಲಿ ದೇವರನ್ನು ನಂಬುತ್ತಿರಲಿಲ್ಲ ಅದರಿಂದಲೇ ಈ ಭಕ್ತಿ ಹೀನತೆಯನ್ನು ಕುರಿತು ಅವಳು ಕೋಪಗೊಳ್ಳಲು ಸಾಧ್ಯವಿರಲಿಲ್ಲ. ಸಣ್ಣಮಗು ದುಷ್ಟತನ ಮಾಡಿದರೂ ತಾಯಿಗೆ ಯಾವ ವಿಧದಲ್ಲಿ ಪ್ರೀತಿ ಇರುವುದೋ ಹಾಗೆಯೇ ಈ ಬಗೆಯ ಅಪರಾಧಿಗಳ ಮೇಲೂ ಅವಳಿಗೆ ಅದೇ ಭಾವನೆ ಇತ್ತು.

ಕುಮು ಸ್ವಲ್ಪ ಮೆಲುನಗೆ ನಕ್ಕು " ನೋಡು. ನೀವುಗಳು ನಿಮ್ಮ ಸ್ವಂತ ಶಕ್ತಿಯಿಂದ ಕೆಲಸ ನಿರ್ವಹಿಸಬಲ್ಲಿರಿ ; ನಮ್ಮಗಳಿಗೆ ಆ ಸ್ವಂತ ಶಕ್ತಿ ಉಪಯೋಗಿಸಲು ಎಡೆಯಿಲ್ಲ. ಯಾರನ್ನು ಪ್ರೀತಿಸುವೆನೋ ಅವರ ಅಂತರ್ಯ ಸಿಕ್ಕದೆ ಹೋದರೆ ಅವರ ಕೆಲಸ ಹೇಗೆ ತಾನೆ ಮಾಡುವುದು ? ದಿನ ಕಳೆಯದು. ಯಾವುದೂ ಮಾರ್ಗ ತೋರದು. ನಮಗೆ ದಯೆ ತೋರಲೂ ಎಲ್ಲೂ ಹಾದಿಯಿಲ್ಲವೇನು ? " ಎಂದಳು.

ನವೀನನ ಕಣ್ಣು ನೀರುತುಂಬಿ ತುಳುಕುತ್ತಿತ್ತು

" ಅಣ್ಣನನ್ನು ಉದ್ದೇಶಿಸಿ ನಾನು ಏನಾದರೂ ಮಾಡಲೇಬೇಕು, ಏನಾದರೂ ದಾನ ಕೊಡಲೇಬೇಕು. ಈ ಬಳೆ ನಮ್ಮ ತಾಯಿಯದು. ಆ ನಮ್ಮ ತಾಯಿಯ ಪರವಾಗಿಯೇ ಈ ಬಳೆಯನ್ನು ನನ್ನ ದೇವರಿಗೆ ಅರ್ಪಿಸುವೆ. "

"ದೇವರಿಗೆ ಕೈನೀಡಿ ಕೊಡಬೇಕಾಗದು ಅತ್ತಿಗೆ, ಆವನು ತಾನಾಗಿ ತೆಗೆದುಕೊಳ್ಳುವನು. ಎರಡು ದಿನ ನಿಧಾನಿಸು. ಆತ ಪ್ರಸನ್ನನಾಗ ದಿದ್ದರೆ ಆಗ ಏನು ಹೇಳುವೆಯೋ ಅದನ್ನೇ ಮಾಡಿದರಾಯಿತು. ಯಾವ ದೇವತೆ ನಿನ್ನಲ್ಲಿ ದಯೆ ತೋರುವುದಿಲ್ಲವೋ ಅದಕ್ಕೂ ನೈವೇದ್ಯವನ್ನು ಅರ್ಪಿಸಿ ಬರುತ್ತೇನೆ."

ರಾತ್ರಿ ಕತ್ತಲೆಯಾಗುತ್ತ ಬಂದಿತು. ಹೊರಗೆ ಮೆಟ್ಟಿಲ ಮೇಲೆ ಪರಿಚಿತವಾದ ಎಕ್ಕಡದ ಶಬ್ದ ಕೇಳಿಸಿತು. ನವೀನ ಬೆಚ್ಚಿ ಎದ್ದ. ಅಣ್ಣ ಬಂದಿರುವನೆಂದು ತಿಳಿದ. ಓಡಿ ಹೋಗಲಿಲ್ಲ. ಧೈರ್ಯದಿಂದ ಅಣ್ಣ ನನ್ನು ಎದುರುನೋಡುತ್ತ ನಿಂತಿದ್ದ. ಇತ್ತ ಕುಮುವಿನ ಮನಸ್ಸು ನಿಮಿಷಮಾತ್ರದಲ್ಲಿ ತತ್ತರಿಸಿತು. ಈ ಕಣ್ಣಿಗೆ ಕಾಣದ ವಿರೋಧದ ಧಕ್ಕೆ ಇಷ್ಟು ಪ್ರಬಲವೇಗದಿಂದ ಅವಳ ಒಂದೊಂದು ನರವನ್ನೂ ಬೆಚ್ಚಿ ಬೀಳಿಸುವುದನ್ನು ಕಂಡು ಅವಳಿಗೆ ಬಹಳ ಭಯವಾಯಿತು. ಈ ಪಾಪ ಏತಕ್ಕಾಗಿ ಇಷ್ಟು ದುರ್ಜಯವಾಗಿ ಅವಳ ಹೆಗಲು ಹತ್ತಿ ಕುಳಿತಿದೆ ?

ಕುಮು ಹಠಾತ್ತಾಗಿ ನವೀನನನ್ನು ಕೇಳಿದಳು "ನನಗೆ ಗುರು ವಿನ ಸ್ಥಾನದಲ್ಲಿದ್ದು ಉಪದೇಶ ಕೊಡುವಂತಹವರು ಯಾರನ್ನಾದರೂ ಬಲ್ಲೆಯೇನು ?"

"ಯಾಕೆ ಅತ್ತಿಗೆ ?"

"ಸ್ವಂತ ಮನಸ್ಸಿನ ವಿಷಯದಲ್ಲಿ ಸ್ಥಿರವಾಗಿ ನಡೆಯಲು ಸಾಧ್ಯವಿಲ್ಲ."

"ಅದು ನಿನ್ನ ಮನಸ್ಸಿನ ದೋಷವಲ್ಲ."

"ವಿಪತ್ತು ಹೊರಗಿನದು. ದೋಷ ಮನಸ್ಸಿನದು. ಈ ಮಾತನ್ನು ಅಣ್ಣನ ಬಾಯಲ್ಲಿ ಹಲವು ಬಾರಿ ಕೇಳಿರುವೆ."

"ನಿಮ್ಮ ಅಣ್ಣನೇ ನಿನಗೆ ಉಪದೇಶ ಕೊಡುವರು. ಭಯಪಡ ಬೇಡ."

"ಆ ಕಾಲ ನನಗೆ ಇನ್ನು ಬರದು"

ಮಧುಸೂದನನ ವ್ಯವಹಾರ ಕುಶಲತೆಯೊಡನೆ ಅವನ ಪ್ರೀತಿಯೂ ಬೆರೆತು ಅದು ಮಧುಸೂದನನ ಎಲ್ಲ ಕೆಲಸ ಕಾರ್ಯಗಳಲ್ಲಿಯೂ ವ್ಯಕ್ತ ವಾಗಲು ಮೊದಲಾಯಿತು ಕುಮುವಿನ ಸುಂದರ ಮುಖವೇ ಅವನ ಅದೃಷ್ಟಕ್ಕೆ ಅಭಯದಾನದಂತಿತ್ತು. ಪರಾಭವ ಕಣ್ಮರೆಯಾಗುವುದೆಂದು ಇಂದೇ ಸುಳಿವು ತಿಳಿಯಿತು. ಹಿಂದಿನ ದಿನ ಯಾರ್ಯಾರು ವಿರೋಧವಾಗಿ ಅಭಿಪ್ರಾಯ ಸೂಚಿಸಿದ್ದರೋ ಅವರುಗಳಲ್ಲಿ ಒಬ್ಬೊಬ್ಬರೂ ಸ್ವರ ಬದಲಾಯಿಸಿ ಅವನಿಗೆ ಕಾಗದ ಬರೆದಿದ್ದರು. ಮಧುಸೂದನ ಆ ತಾಲ್ಲೂಕನ್ನು ತನ್ನ ಹೆಸರಿನಲ್ಲೇ ಕೊಂಡುಕೊಳ್ಳುವುದಾಗಿ ಹೇಳಿದ್ದನಷ್ಟೆ. ಆ ಸಂದರ್ಭ ದಲ್ಲಿ ಮೋಸಹೋದೆವೆಂದು ಒಬ್ಬೊಬ್ಬರಿಗೂ ಅನಿಸಿತು. ಒಬ್ಬೊಬ್ಬರೂ ಈ ವಿಷಯವನ್ನು ಪುನಃ ಚರ್ಚಿಸಬೇಕು ಎಂದೂ ಅಭಿಪ್ರಾಯ ತೋರಿದ್ದರು.

ಕೆಲಸದಲ್ಲಿ ಗೈರ್ ಹಾಜರಾಗಿದ್ದಾನೆಂದು ಆಫೀಸಿನ ದರ್ವಾನನಿಗೆ ಅರ್ಧ ತಿಂಗಳ ಸಂಬಳ ಜುಲ್ಮಾನೆ ಹಾಕಿದ್ದ. ಇಂದು ಫಲಾಹಾರದ ಹೊತ್ತಿನಲ್ಲಿ ಅವನು ಬಂದು ಕಾಲು ಹಿಡಿದೊಡನೆ ಮಧುಸೂದನ ಅವ ನನ್ನು ಕ್ಷಮಿಸಿದ. ಕ್ಷಮಿಸುವುದೆಂದರೆ ತನ್ನ ಜೇಬಿನಿಂದ ದರ್ವಾನನ ನಷ್ಟವನ್ನು ಕಟ್ಟಿಕೊಡುವುದು ಎಂದು ಅರ್ಥ. ಲೆಕ್ಕದ ಪುಸ್ತಕದಲ್ಲಿ ಜುಲ್ಮಾನೆ ಹಾಗೆಯೇ ಇತ್ತು. ನಿಯಮದ ಬದಲಾವಣೆ ಆಗಲು ಎಡೆಯೇ ಇಲ್ಲ.

ಇಷ್ಟೊತ್ತಿನ ದಿನ ಮಧುಸೂದನನಿಗೆ ಅತ್ಯಾಶ್ಚರ್ಯವಾದ ದಿನ. ಹೊರಗೆ ಆಕಾಶದಲ್ಲಿ ಮೇಘ ಮುಚ್ಚಿತ್ತು. ತೊಟ್ ತೊಟ್ ಎಂದು ಮಳೆ ಸುರಿಯುತ್ತಿತ್ತು. ಆದರೆ ಇಷ್ಟರ ಮೇಲೂ ಅವನ ಒಳಗಿನ ಆನಂದ ಮತ್ತೂ ಹೆಚ್ಚಿತ್ತು. ಆಫೀಸಿನಿಂದ ಹಿಂದಿರುಗಿ ಬಂದು ರಾತ್ರಿ ಊಟದ ವೇಳೆಯವರೆಗೆ ಮಧುಸೂದನ ಹೊರಮನೆಯ ಕೋಣೆಯಲ್ಲಿ ಕಾಲ ಕಳೆ ಯುತ್ತಿದ್ದ. ಮದುವೆಯ ಅನಂತರ ಎಷ್ಟೋ ದಿನಗಳು ಅವೇಳೆಯಲ್ಲಿ ನೇಮಕ್ಕೆ ವಿರುದ್ಧವಾಗಿ ಅಂತಃಪುರಕ್ಕೆ ಹೋಗುವ ವೇಳೆಯಲ್ಲಿ ಜನರ ದೃಷ್ಟಿಗೆ ಬೀಳದಿರಲು ಪ್ರಯತ್ನಿಸುತ್ತಿದ್ದ. ಇಂದು ಶಬ್ದ ಮಾಡುತ್ತ ಹೆಜ್ಜೆಯಿಡುತ್ತ ಮನೆಯಲ್ಲಿ ಇದ್ದ ಎಲ್ಲರಿಗೂ ತಾನು ಕುಮುವನ್ನು

ನೋಡಲು ಹೋಗುತ್ತಿರುವುದನ್ನು ತಿಳಿಸಬೇಕೆಂದು ಅವನ ಅಪೇಕ್ಷೆ. ಅವನ ಅದೃಷ್ಟ ಎಷ್ಟು ಹಿರಿಯದು ಎಂಬುದಾಗಿ ಪ್ರಪಂಚದ ಜನ ಅವನ ಮೇಲೆ ಎಷ್ಟು ಹೊಟ್ಟೆಕಿಚ್ಚು ಪಡುತ್ತಿರುವರು ಎಂಬುದು ಇಂದು ಅವನಿಗೆ ತಿಳಿದು ಬಂದಿತು.

ಸ್ವಲ್ಪ ಹೊತ್ತಿನಿಂದ ಮಳೆ ಆರಂಭಿಸಿತ್ತು. ಇನ್ನೂ ಎಲ್ಲ ಕೋಣೆಗಳಲ್ಲೂ ದೀಪ ಹತ್ತಿಸಿರಲಿಲ್ಲ. ಆನಂದೀ ಪುದುಕಿ ಧೂಪದ ಕುಡಿ ಹಿಡಿದು ಧೂಪ ಹಾಕುತ್ತ ತಿರುಗುತ್ತಿದ್ದಳು. ಬಾವಲಿಯೊಂದು ಅಂಗಳದ ಮೇಲಿನ ಆಕಾಶದಿಂದ ಲಾಂದ್ರ ಹಚ್ಚಿದ್ದ ಅಂತಃಪುರದ ಹಾದಿಯವರೆಗೆ ಸುಮ್ಮನೆ ಸುತ್ತುಹಾಕುತ್ತಿತ್ತು. ವರಾಂಡದಲ್ಲಿ ಕಾಲು ಜೋಡಿಸಿಕೊಂಡು ದಾಸಿಗಳು ತೊಡೆಯ ಮೇಲೆ ಬತ್ತಿ ಹೊಸೆಯುತ್ತಿದ್ದರು. ಅಪಸರದಿಂದ ಎದ್ದು ಮುಸುಕನ್ನೆಳೆದು ಓಡಿಹೋದರು. ಹೆಜ್ಜೆಯ ಸಪ್ಪಳ ಕೇಳಿ ಶ್ಯಾಮಾಸುಂದರಿ ಹೊರಗೆ ಬಂದಳು. ಕೈಯಲ್ಲಿ ತಾಂಬೂಲದ ಭರಣಿಯಿತ್ತು. ಮಧುಸೂದನ ಆಫೀಸಿನಿಂದ ಬಂದರೆ ಅವಳು ನಿಯಮದಂತೆ ವೀಳ್ಯವನ್ನು ಕಳುಹಿಸುತ್ತಿದ್ದಳು. ಮಧುಸೂದನನ ರುಚಿಗೆ ಅನುಸಾರವಾಗಿ ವೀಳ್ಯ ಸಿದ್ಧಪಡಿಸಲು ಶ್ಯಾಮಾಸುಂದರಿ ಮಾತ್ರ ಬಲ್ಲಳೆಂದು ಎಲ್ಲರೂ ತಿಳಿದಿದ್ದರು. ಅದೇ ಮೇರೆಗೆ ಹಾದಿಯ ನಡುವೆ ಶ್ಯಾಮಾ ಮಧುವಿನ ಇದಿರಿನಲ್ಲಿ ವೀಳ್ಯದ ಭರಣಿ ತೆರೆದು ಹಿಡಿದುಕೊಂಡು ನಿಂತಿದ್ದಳು. " ಇದೋ ನಿನ್ನ ತಾಂಬೂಲ ಸಿದ್ಧವಾಗಿದೆ. ತೆಗೆದುಕೊಂಡು ಹೋಗು " ಎಂದಳು. ಹಿಂದೆ ಆಗಿದ್ದರೆ ಈ ಸಂದರ್ಭದಲ್ಲಿ ಒಂದೆರಡು ಮಾತುಕತೆ ನಡೆಯುತ್ತಿತ್ತು. ಆ ಮಾತುಗಳು ಅಲ್ಪ ಸ್ವಲ್ಪ ಮಧುರವಾಗಿಯೂ ಇರುತ್ತಿತ್ತು. ಇಂದು ಏನಾಯಿತೋ, ಯಾರು ಬಲ್ಲರು? ದೂರದಿಂದಲಾದರೂ ಶ್ಯಾಮಳ ಸೋಂಕು ತಗುಲೀತೆಂದು ಅವಳನ್ನು ಪಕ್ಕಕ್ಕೆ ಬಿಟ್ಟು ವೀಳ್ಯ ತೆಗೆದುಕೊಳ್ಳದೆ ಮಧುಸೂದನ ಬೇಗ ಬೇಗ ಹೊರಟುಹೋದ. ಶ್ಯಾಮಳ ಅಗಲವಾದ ಕಣ್ಣುಗಳೆರಡೂ ಅಭಿಮಾನದಿಂದ ಕಿಡಿಕಿಡಿಯಾದುವು. ಅನಂತರ ಕಣ್ಣೀರ ಹನಿಗಳು ಹರಿದವು. ಶ್ಯಾಮಾಸುಂದರಿ ಮಧುಸೂದನನನ್ನು ಪ್ರೀತಿಸಿದ್ದಳೆಂಬುದನ್ನು ಅಂತರ್ಯಾಮಿ ಅರಿತಿದ್ದ.

ಮಧುಸೂದನ ಕೋಣೆಯೊಳಕ್ಕೆ ಕಾಲಿಡುತ್ತಲೇ, ನವೀನ ಕುಮುವಿನ ಕಾಲಿಗೆರಗಿ ಮೇಲೆದ್ದು "ಗುರುಗಳ ವಿಷಯ ನೆನಪಿದೆ. ವಿಚಾರಿಸಿ ನೋಡುತ್ತೇನೆ" ಎಂದ. ಅಣ್ಣನ ಸಂಗಡ "ಅತ್ತಿಗೆ ಗುರುಗಳ ಹತ್ತಿರ ಶಾಸ್ತ್ರದ ಉಪದೇಶ ಕೇಳಲು ಆಶಿಸುತ್ತಾರೆ. ನಮ್ಮ ಗುರುಗಳೇ ಇದ್ದಾರೆ. ಆದರೆ" ಎಂದು ಹೇಳಿ ಮಾತು ನಿಲ್ಲಿಸಿದನು.

ಮಧುಸೂದನ ಉತ್ತೇಜಿತವಾದ ದನಿಯಲ್ಲಿ "ಶಾಸ್ತ್ರದ ಉಪದೇಶವೆ? ಒಳ್ಳೆಯದು. ಅದನ್ನು ಯೋಚಿಸಿ ನೋಡುವೆ. ಈಗ ನೀನು ಏನೂ ಮಾಡಬೇಕಾಗಿಲ್ಲ" ಎಂದ.

ನವೀನ ಹೊರಟುಹೋದ.

ಮಧುಸೂದನ ಇಂದು ಹಾರಿಯುದ್ದಕ್ಕೂ "ಯಜಮಾನೀ, ನೀನು ಬಂದ ಮೇಲೆ ನಮ್ಮ ಮನೆ ಬೆಳಕಿನಿಂದ ತುಂಬಿದೆ" ಎಂದು ಹೇಳಬೇಕೆಂದು ಮನಸ್ಸಿನಲ್ಲೇ ಪಠಿಸಿಕೊಂಡು ಬಂದಿದ್ದ. ಈ ಬಗೆಯ ಮಾತನಾಡುವುದು ಅವನಿಗೆ ಸ್ವಲ್ಪವೂ ಅಭ್ಯಾಸವಿಲ್ಲ. ಆದರಿಂದಲೇ ಕೋಣೆಯೊಳಗೆ ಕಾಲಿಡುತ್ತಲೇ ಹಿಂದುಮುಂದು ಯೋಚಿಸದೆ ಮೊಟ್ಟಮೊದಲಲ್ಲೇ ಅದನ್ನು ಹೇಳಿಬಿಡಬೇಕೆಂದು ನಿರ್ಧರಿಸಿದ್ದ. ಆದರೆ ನವೀನನ್ನು ಕಂಡೊಡನೆ ಮಾತು ಅಡಗಿಹೋಯಿತು. ಅದರ ಹಿಂದೆ ಶಾಸ್ತ್ರೋಪದೇಶದ ಮಾತು ತಲೆ ಹಾಕಿತು. ಅವನ ಬಾಯಿ ಸಂಪೂರ್ಣವಾಗಿ ಮುಚ್ಚಿಯೇ ಹೋಯಿತು. ಅಂತರ್ಯದಲ್ಲಿ ನಡೆದಿದ್ದ ಪ್ರಯತ್ನವೆಲ್ಲ ಈ ಅಲ್ಪ ಅಡ್ಡಿಯಿಂದಲೇ ತಣ್ಣಗಾಯಿತು ಅನಂತರ ಕುಮುವಿನ ಮುಖದಲ್ಲಿ ಒಂದು ಬಗೆಯಾದ ಭಯದ ಭಾವವನ್ನೂ ತನುಮನದಲ್ಲಿ ಒಂದು ವಿಧವಾದ ಸಂಕೋಚವನ್ನೂ ಕಂಡನು. ಬೇರೆ ದಿನವಾಗಿದ್ದರೆ ಇದು ದೃಷ್ಟಿಗೆ ಬೀಳುತ್ತಿರಲಿಲ್ಲ. ಇಂದು ಅವನ ಮನಸ್ಸಿನಲ್ಲಿ ಒಂದು ಬೆಳಕು ಉರಿಯತೊಡಗಿತ್ತಷ್ಟೆ. ಅದರಿಂದ ನೋಡಬಲ್ಲ ಶಕ್ತಿ ಹೆಚ್ಚಿತ್ತು. ಕುಮುವಿನ ವಿಷಯದಲ್ಲಿ ಚಿತ್ತದ ಸ್ಪರ್ಶವಾಗಿತ್ತು. ಇಂದೂ ಕುಮುವಿನ ಮನದಲ್ಲಿ ಈ ವಿಮುಖತೆಯೇ ಅವರ ಬಳಿ ಇದು ಮಹಾ ಅನ್ಯಾಯವೆಂದು ಅನ್ನಿಸಿತು. ಆದರೂ ವಿಚಲಿತನಾಗುವುದಿಲ್ಲವೆಂದು ಮನಸ್ಸಿನಲ್ಲೇ ಪ್ರತಿಜ್ಞೆ ಮಾಡಿದ. ಆದರೆ ಯಾವುದು

ಸಹಜವಾಗಿ ಆಗಬಹುದಾಗಿತ್ತೋ ಅದು ಇನ್ನು ಸಹಜವಾಗಿ ಉಳಿಯಲಿಲ್ಲ.

ಸ್ವಲ್ಪಹೊತ್ತು ಸುಮ್ಮನಿದ್ದು ಮಧುಸೂದನ "ಯಜಮಾನೀ! ಹೊರಟುಹೋಗಲು ಮನಸ್ಸಾಗುವುದೇನು? ಸ್ವಲ್ಪಹೊತ್ತು ಇರಲಾರೆಯೇನು?" ಎಂದ.

ಮಧುಸೂದನನ ಮಾತು ಮತ್ತು ಅವನ ಕೊರಳ ದನಿಯನ್ನು ಕೇಳಿ, ಕುಮು ವಿಸ್ಮಯಗೊಂಡಳು. "ಇಲ್ಲ, ಹೋಗುವುದೇಕೆ?" ಎಂದಳು.

"ನಿನಗಾಗಿ ಒಂದು ಪದಾರ್ಥವನ್ನು ತಂದಿರುವೆನು. ಇದನ್ನು ತೆರೆದು ನೋಡು." ಎಂದು ಅವಳ ಕೈಯಲ್ಲಿ ಒಂದು ಭಂಗಾರದ ಭರಣಿಯನ್ನು ಕೊಟ್ಟ.

ಕುಮು ಭರಣಿಯನ್ನು ತೆರದು ನೋಡಲು ಅಣ್ಣ ಕೊಟ್ಟಿದ್ದ ಆ ನೀಲಮಣಿಯ ಉಂಗುರವಿತ್ತು. ಎದೆ ಝುಗ್ಗೆಂದಿತು. ಏನು ಮಾಡಬೇಕೆಂದು ಹೊಳೆಯಲಿಲ್ಲ.

"ಈ ಉಂಗುರ ನಿನಗೆ ತೊಡಿಸುವುದಕ್ಕೆ ಸಮ್ಮತಿಯೋ?"

ಕುಮು ಕೈ ನೀಡಿದಳು. ಮಧುಸೂದನ ಕುಮುವಿನ ಕೈಯನ್ನು ಹಿಡಿದುಕೊಂಡು ನಿಧಾನವಾಗಿ ಉಂಗುರ ತೊಡಿಸಲು ತೊಡಗಿದ. ಬೇಕೆಂದೇ ಸ್ವಲ್ಪ ಹೆಚ್ಚು ಹೊತ್ತು ತೆಗೆದುಕೊಂಡ. ಅನಂತರ ಕೈ ಎತ್ತಿ ಹಿಡಿದುಕೊಂಡು ಮುದ್ದಿಟ್ಟು "ನಿನ್ನ ಕೈಯ ಉಂಗುರ ಕಳಚಿಕೊಂಡು ತಪ್ಪುಮಾಡಿದ್ದೆ. ನಿನ್ನ ಕೈಯಲ್ಲಿ ಯಾವ ಒಡವೆಗೂ ಯಾವ ದೋಷವೂ ಇಲ್ಲ" ಎಂದ.

ಕುಮುವನ್ನು ಹೊಡೆದಿದ್ದರೆ, ಆಕೆಗೆ ಇದಕ್ಕಿಂತ ಹೆಚ್ಚು ವಿಸ್ಮಯವಾಗುತ್ತಿರಲಿಲ್ಲ. ಎಳೆಯ ಮಗುವಿನಂತೆ ಕುಮುವಿನ ಈ ವಿಸ್ಮಯದ ಭಾವವನ್ನು ನೋಡಿ ಮಧುಸೂದನನಿಗೆ ಆನಂದವಾಯಿತು. ತಾನು ಮಾಡಿದ ದಾನ ಸಾಮಾನ್ಯವಾದುದಲ್ಲ ಎನ್ನುವುದು ಕುಮುವಿನ ಮುಖಭಾವದಿಂದ ಸ್ಪಷ್ಟವಾಗಿತ್ತು. ಆದರೆ ಮಧುಸೂದನ ಇನ್ನೂ ಸ್ವಲ್ಪ ಕೈಯಲ್ಲಿ ಉಳಿಸಿಟ್ಟುಕೊಂಡಿದ್ದ. ಅದನ್ನೂ ಪ್ರಕಟಪಡಿಸಿದ.

"ನಿಮ್ಮ ಮನೆಯ ಕಾಳೂ ಮುಖರ್ಜಿಯವರು ಬಂದಿದ್ದಾರೆ. ಅವರನ್ನು ನೋಡಬಯಸುವುದಿಲ್ಲವೇನು ?" ಎಂದು ಕೇಳಿದ.

ಕುಮುವಿನ ಮುಖ ಉಜ್ವಲವಾಯಿತು. "ಕಾಳೂ ಅಣ್ಣನೆ!" ಎಂದಳು.

"ಅವನನ್ನು ಕರೆಯುವೆ. ನೀವುಗಳು ಮಾತನಾಡುತ್ತಿರಿ. ನಾನು ಅಷ್ಟರಲ್ಲಿ ಊಟ ಮುಗಿಸಿಕೊಂಡು ಬರುತ್ತೇನೆ."

ಕೃತಜ್ಞತೆಯಿಂದ ಕುಮುವಿನ ಕಣ್ಣಿನಲ್ಲಿ ನೀರುತುಂಬಿ ಬಂದಿತು.

ಚಟರ್ಜಿ ಜಮೀಂದಾರರೊಡನೆ ಕಾಳೂವಿಗೆ ತಲೆತಲಾಂತರದ ಸಂಬಂಧ. ನಂಬಿಕೆಯ ಕೆಲಸಗಳೆಲ್ಲ ಈತನ ಮೂಲಕವೇ ನಡೆಯುತ್ತಿತ್ತು. ಇವರಲ್ಲಿ ಪೂರ್ವಜರಲ್ಲೊಬ್ಬ ಚಟರ್ಜಿಗಳಿಗಾಗಿ ಜೈಲಿಗೂ ಹೋಗಿದ್ದ. ಕಾಳೂ ಇಂದು ವಿಪ್ರದಾಸನಿಗೆ ಒಂದು ಕಂತು ಬಡ್ಡಿ ಕೊಟ್ಟು ರಶೀತಿ ತೆಗೆದುಕೊಂಡುಬಂದಿದ್ದ. ಕುಳ್ಳಾಗಿ ಗೌರವರ್ಣದಿಂದ ಕೂಡಿ ಪರಿಪುಷ್ಟವಾದ ಚಹರೆ, ಉಬ್ಬಿದ ಕಣ್ಣುಗಳು, ಅವುಗಳ ಮೇಲೆ ಕಪ್ಪು ಬಿಳುಪು ಕೂದಲು ತುಂಬಿದ ದಪ್ಪವಾದ ಹುಬ್ಬು. ಹಣ್ಣಾದ ಗಡ್ಡ. ಆದರೂ ಕಪ್ಪಾಗಿಯೇ ಇದ್ದ ತಲೆಗೂದಲು. ಎಚ್ಚರಿಕೆಯಿಂದ ನೆರಿಹಿಡಿದು ಕಟ್ಟಿದ್ದ ಶಾಂತಿಪುರದ ಪಂಚೆ. ಒಡೆಯರ ಮನೆತನದ ಗೌರವ ಉಳಿಸುವುದಕ್ಕಾಗಿ ಮೈಮೇಲೆ ಹಳೆಯ ಕಾಲದ ಬೆಲೆಬಾಳುವ ಹಳೆಯ ತರದ ನಿಲುವಂಗಿ. ಬೆರಳಲ್ಲಿ ಒಂದು ಉಂಗುರ. ಆದರೆ ಬೆಲೆಯೇನೂ ಕಡಮೆಯಾಗಿರಲಿಲ್ಲ.

ಕಾಳೂ ಕೋಣೆಯೊಳಕ್ಕೆ ಕಾಲಿಡುತ್ತಲೇ ಕುಮು ಅವನಿಗೆ ನಮಸ್ಕರಿಸಿದಳು. ಇಬ್ಬರೂ ಜಮಖಾನೆಯ ಮೇಲೆ ಕುಳಿತರು. ಕಾಳೂ "ಮಗೂ, ಮೊನ್ನೆತಾನೆ ಹೊರಟುಬಂದೆಯಲ್ಲ. ಆದರೂ ಎಷ್ಟೋ ವರ್ಷಗಳಿಂದ ಕಾಣದಂತೆ ಆಗಿದೆಯಲ್ಲ." ಎಂದ.

"ಅಣ್ಣ ಹೇಗಿದ್ದಾರೆ ಮೊದಲು ಹೇಳು ?"

"ದೊಡ್ಡ ಬಾಬುಗಳ ಸ್ಥಿತಿ ಬಹಳ ಯೋಚನೆಗೆ ಇಟ್ಟುಕೊಂಡಿತ್ತು. ನೀನು ಹೊರಟುಬಂದ ಮಾರನೆಯದಿನ ಬಹಳ ಬಲವಾಗಿ ಕೆರಳಿತ್ತು.

ಆದರೆ ಅತ್ಯಂತ ಬಲಿಷ್ಠವಾದ ಶರೀರವಾದದ್ದರಿಂದ ಕ್ರಮೇಣ ಹುಷಾರಾದರು. ಡಾಕ್ಟರುಗಳು ಆಶ್ಚರ್ಯದಲ್ಲಿ ಮುಳುಗಿ ಹೋದರು."

"ಅಣ್ಣ ನಿನ್ನೆ ಬಂದರೇನು?"

"ಹಾಗೆಯೇ ನಿಷ್ಕರ್ಷೆಯಾಗಿತ್ತು. ಆದರೆ ಇನ್ನೂ ಎರಡು ದಿನ ವಿಳಂಬವಾಗುತ್ತೆ. ಹುಣ್ಣಿಮೆ ದಿನ ಪುನಃ ಜ್ವರ ಬರಬಹುದೇನೊ ಎಂದು ಎಲ್ಲರೂ ಅವರನ್ನು ಅಡ್ಡಿಮಾಡಿದರು. ನೀನು ಹೇಗೆ ಇರುವೆ ತಂಗಿ?"

"ನಾನು ಚೆನ್ನಾಗಿಯೇ ಇದ್ದೇನೆ."

ಕಾಳು ಏನನ್ನೂ ಹೇಳಬಯಸಲಿಲ್ಲ. "ಆದರೆ, ಕುಮುವಿನ ಮುಖದ ಆ ಲಾವಣ್ಯ ಎತ್ತ ಹೋಯಿತು? ಕಣ್ಣಕೆಳಗೆ ಆ ಕರಿಯ ಗೆರೆ ಏಕೆ? ಅಂತಹ ಲಕ್ಷಣವಾದ ಅವಳ ಮೈ ಬಣ್ಣ ಬಿಳಚಿಕೊಂಡು ಹೋಯಿತೇಕೆ?" ಎಂದು ತನ್ನ ಮನಸ್ಸಿನಲ್ಲೇ ಯೋಚಿಸುತ್ತಿದ್ದನು. ಕುಮುವಿನ ಮುಖದಲ್ಲಿ "ಅಣ್ಣ ನನ್ನನ್ನು ನೆನೆದು ಏನೂ ಹೇಳಿಕಳುಹಿಸಲಿಲ್ಲವೆ?" ಎಂದು ಒಂದು ಪ್ರಶ್ನೆ ತಲೆಯೆತ್ತುತ್ತಿತ್ತು. ಆದರೆ ಅದನ್ನು ಬಾಯಿಬಿಟ್ಟು ಹೇಳಲಾರದೆ ಇದ್ದಳು. ಬಾಯಾರ ಹೇಳಲಾರದಿದ್ದ ಆ ಪ್ರಶ್ನೆಗೆ ಉತ್ತರವೋ ಎನ್ನುವಂತೆ ಕಾಳೂ ಹೇಳಿದ. "ದೊಡ್ಡಬಾಬುಗಳು ನನ್ನ ಕೈಯಲ್ಲಿ ನಿನಗಾಗಿ ಒಂದು ಪದಾರ್ಥವನ್ನು ಕಳುಹಿಸಿಕೊಟ್ಟಿರುವರು?"

ಕುಮು ವ್ಯಗ್ರಳಾಗಿ "ಏನು ಕಳುಹಿಸಿದ್ದಾರೆ. ಅದೆಲ್ಲಿ?"

"ಅದನ್ನು ಹೊರಗೆ ಇಟ್ಟು ಬಂದಿರುವೆ?"

"ತೆಗೆದುಕೊಂಡು ಬರಲಿಲ್ಲವೇಕೆ?"

"ಅವಸರಪಡಬೇಡ ತಂಗಿ. ಮಹಾರಾಜರು ತಾವೇ ತಂದು ಕೊಡುವೆವೆಂದು ಹೇಳಿದರು."

"ಅದು ಏನು ಹೇಳು ಮತ್ತೆ?"

"ಹೇಳಬೇಡವೆಂದು ಅವರು ಹೇಳಿದ್ದಾರೆ." ಕೋಣೆಯ ನಾಲ್ಕು ಕಡೆಯೂ ದಿಟ್ಟಿಸಿ ನೋಡಿ ಕಾಳೂ ಹೇಳಿದ. "ಒಳ್ಳೆಆದರದಿಂದ ಇಟ್ಟು

ಕೊಂಡಿದ್ದಾರೆ. ತಂಗೀ ನಿನ್ನ ವಿಷಯವನ್ನು ದೊಡ್ಡ ಬಾಬುಗಳಿಗೆ ತಿಳಿಸುವೆ. ಬಹಳ ಸಂತೋಷಪಡುವರು. ಮೊದಲು ಎರಡು ದಿನ ನಿನ್ನ ಸುದ್ದಿ ತಿಳಿಯದೆ ಅವರು ಬಹಳ ತಲ್ಲಣಗೊಂಡರು. ಆಮೇಲೆ ಮೂರು ಕಾಗದಗಳು ಒಂದೇ ದಿನದಲ್ಲಿ ಬಂದವು."

ಅಂಚೆಯ ಗೊಂದಲಕ್ಕೆ ಕಾರಣವೇನು ಎನ್ನುವುದನ್ನು ಕುಮು ಊಹಿಸಲು ಬಲ್ಲವಳಾಗಿದ್ದಳು.

ಕಾಳೂ ಅಣ್ಣನನ್ನು ಊಟಕ್ಕೆ ಎಬ್ಬಿಸಬೇಕೆಂದು ಕುಮುವಿಗೆ ಆಸೆ. ಆದರೆ ಧೈರ್ಯವಾಗಿ ಹೇಳಲು ಆಗದು. ಸ್ವಲ್ಪ ಸಂಕೋಚದೊಡನೆ "ಕಾಳೂ ಅಣ್ಣಾ, ಇನ್ನೂ ನಿನ್ನ ಊಟ ಆಗಿಲ್ಲವಲ್ಲ" ಎಂದಳು.

"ಕಲ್ಕತ್ತೆಯಲ್ಲಿ ಸಂಜೆಯಾದ ಮೇಲೆ ಊಟಮಾಡಿದರೆ ನನಗೆ ಒಗ್ಗದು. ಆದರಿಂದಲೇ ನಮ್ಮ ರಾಮದಾಸ್ ಕವಿರಾಜರಿಂದ ಮಕರಧ್ವಜ ತಂದು ತಿನ್ನುತ್ತಿರುವೆ. ಅಂತಹ ಪ್ರಯೋಜನ ಏನೂ ಕಾಣಿಸಲಿಲ್ಲ."

ಮನೆಯ ಹೊಸ ಸೊಸೆಗೆ ಇನ್ನೂ ಯಜಮಾನಿಕೆ ಕೈಗೆ ಬಂದಿಲ್ಲವೆಂದು ಕಾಳೂ ಅರ್ಥಮಾಡಿಕೊಂಡಿದ್ದ. ಬಾಯಿಬಿಟ್ಟು "ಊಟಮಾಡು ಎಂದು ಹೇಳಲಾರಳು. ಸುಮ್ಮನೆ ನೊಂದುಕೊಳ್ಳುತ್ತಿರುವಳು." ಎಂದುಕೊಂಡನು.

ಈ ಸಮಯದಲ್ಲಿ ಮೋತಿಯ ತಾಯಿ ಕದದ ಮರೆಯಲ್ಲಿ ಕೈಸನ್ನೆಯಿಂದ ಕುಮುವನ್ನು ಕರೆದು "ನಿಮ್ಮ ಮನೆಯಿಂದ ಮುಖರ್ಜಿ ಮಹಾಶಯರು ಬಂದಿರುವರಲ್ಲ, ಅವರಿಗಾಗಿ ಎಲೆಹಾಕಿದೆ. ಕೆಳಗಿನ ಕೊಟಡಿಗೆ ಅವರನ್ನು ಕರೆದುಕೊಂಡು ಬಾ. ಊಟ ಮಾಡಿಸುವೆಯಂತೆ" ಎಂದಳು.

ಕುಮು ಹಿಂದಕ್ಕೆ ಬಂದವಳೇ "ಕಾಳೂ ಅಣ್ಣಾ, ನಿನ್ನ ಕವಿರಾಜನ ಸುದ್ದಿ ಹಾಗಿರಲಿ, ಈಗ ನೀನು ಊಟಕ್ಕೆ ಏಳಲೇ ಬೇಕು." ಎಂದಳು.

"ಇದೇನು ತಮಾಷೆ. ಇಷ್ಟು ಬಲಾತ್ಕಾರವೇಕೆ ? ಇವತ್ತಿರಲಿ. ಇನ್ನೊಂದು ದಿನ ಯಾವತ್ತಾದರೂ ಆದರೆ ಆಯಿತು."

"ಆಗದು, ಅದು ಆಗದು."

ಕೊನೆಗೆ ಮಕರಧ್ವಜದಿಂದ ಬಹಳ ಗುಣವಿದೆಯೆಂದೂ ಹಸಿವು ಎಷ್ಟು ಮಾತ್ರವೂ ಕಡಮೆಯಾಗಿಲ್ಲವೆಂದೂ ತಿಳಿಯಿತು.

ಕಾಳೂ ಅಣ್ಣನ ಊಟ ಆಗುತ್ತಲೇ ಕುಮು ಮಲಗುವ ಮನೆಗೆ ಹೊರಟುಬಂದಳು. ಇವತ್ತು ಆಕೆಯ ಮನಸ್ಸು ತವರುಮನೆಯ ನೆನಪಿನಿಂದ ತುಂಬಿತ್ತು. ಈ ವೇಳೆಗೆ ನೂರ್‌ನಗರದಲ್ಲಿ ಅಂತಃಪುರದ ತೋಟದಲ್ಲಿ ಮಾವಿನ ಮಿಡಿ ತಲೆದೋರಿರುತ್ತೆ. ಹೂತುಂಬಿದ ನೇರಿಳೆ ಗಿಡದ ಅಡಿಯಲ್ಲಿ ಪುಷ್ಕರಣಿಗೆ ಹೋಗುವ ದಾರಿಯಲ್ಲಿ ಮಧ್ಯಾಹ್ನದ ವೇಳೆಯಲ್ಲಿ ಕುಮು ಕೈಯ ಮೇಲೆ ತಲೆ ಇಟ್ಟುಕೊಂಡು ತಲೆಗೂದಲು ಹರಡಿಕೊಂಡು ಮಲಗಿಕೊಂಡು ಅದೆಷ್ಟು ಹೊತ್ತು ಕಳೆಯುತ್ತಿದ್ದಳು! ಆ ಮಧ್ಯಾಹ್ನಕಾಲವು ಜೇನ್ನೊಣಗಳ ಝೇಂಕಾರದಿಂದ ಧ್ವನಿತವಾಗಿ ನೆಳಲು-ಬೆಳಕಿನಿಂದ ಬೆಳಗುತ್ತಿತ್ತು. ಹೃದಯದಲ್ಲಿ ನಿಷ್ಕಾರಣವಾದೊಂದು ವ್ಯಥೆ ಮೂಡುತ್ತಿತ್ತು. ಅದರ ಅರ್ಥವೇನೆಂದು ಅರಿತಿರಲಿಲ್ಲ. ಅದೇ ವ್ಯಥೆಯಲ್ಲಿ ಸಂಜೆಯ ಹೊತ್ತಿನ ವ್ರಜಮಂಡಲ*ದ ಹಾದಿಯ ಗೋಧೂಲಿಯಿಂದ ಅವಳ ಕನಸ್ಸು-ಬಣ್ಣ ಪಡೆದು ಪ್ರಕಾಶಿಸುತ್ತಿತ್ತು. ಆ ಯೌವನ ತುಂಬಿದ ಜೊತೆಗಾರ ನೆಲದಲ್ಲಿಯೂ ನೀರಿನಲ್ಲಿಯೂ ಮಾಯೆಯನ್ನು ನೆಲೆಗೊಳಿಸಿರುವನೆಂಬುದನ್ನೂ, ಅವಳ ಆ ಯುಗಲ ಮೂರ್ತಿಯ ಉಪಾಸನೆಯಲ್ಲಿ ಆತನೇ ಕಣ್ಮರೆಯಾಗಿ ಅವಿತಿರುವನೆಂಬುದನ್ನೂ ಆತನನ್ನೇ ಸಿತಾರಿನ ಮೆಟ್ಟಿಲುಗಳಲ್ಲಿ, ಮುಲ್ತಾನ್ ರಾಗದ ಆರೋಹಣ ಅವರೋಹಣಗಳಲ್ಲಿ ತನ್ನ ಚಿತ್ತದ ರಹಸ್ಯನಿವಾಸದಲ್ಲಿ ಎಳೆತರುತ್ತಿರುವೆನೆಂದೂ ಅರಿಯಲಿಲ್ಲ. ಅವಳ ಆ ಪ್ರಥಮ ಯೌವನದಲ್ಲಿ ದೊರಕಿದ್ದ ಮನಸ್ಸಿಗೊಪ್ಪಿದ ಮನುಷ್ಯನ ಅಲ್ಪ ಪರಿಚಯ ಆ ಮನೆಯ ಅದೆಷ್ಟು ಎಡೆಗಳಲ್ಲಿ ಇತ್ತು. ಸೊಟ್ಟ ಸೊಟ್ಟಾದ ಹಳ್ಳಿಯ ಹಾದಿಯ ಅರುಗಿನಲ್ಲಿ ಹೂತುಂಬಿದ ಸಾಸಿವೆಯ ಹೊಲಗಳು ಕಾಣುತ್ತಿದ್ದ ಆ ಮನೆಯ ಮೇಲ್ಮಹಡಿಯಲ್ಲಿ ಇದಿರಿನಲ್ಲಿದ್ದ ಪಾಚಿ ಕಟ್ಟಿದ್ದ ಗೋಡೆಯ ಹಸುರು ಬಣ್ಣದ ಹಿನ್ನೆಲೆಯಲ್ಲಿ ಪುರಾತನ ಕಾಲದ ಚರಿತ್ರೆಯನ್ನು ಅಸ್ಪಷ್ಟ ರೀತಿಯಲ್ಲಿ ಬರೆದಿರುವುದನ್ನು ನೋಡಲು ಅನುಕೂಲವಾಗಿದ್ದ ಅಂತಃಪುರದ ಪೌಳಿಗೋಡೆಯ ಅರುಗಿನ ಮಣ್ಣಿನ

---

* ವ್ರಜಮಂಡಲ= ಮಥುರಾ, ಗೋಕುಲ, ವೃಂದಾವನ.

ಗುಡ್ಡೆಯಲ್ಲಿ ಮಹಡಿಯ ಮೇಲೆ ತನ್ನ ಮಲಗುವ ಮನೆಯ ಕಿಟಕಿಯಿಂದ ಬೆಳಗ್ಗೆ ನಿದ್ರೆ ತಿಳಿದೊಡನೆ ದೂರದ ಬಣ್ಣ ಬಣ್ಣದ ಆಕಾಶದಲ್ಲಿ ದಿಗಂತದ ಎಡೆ ಎಡೆಯಲ್ಲಿ ಗುರಿಯಿಲ್ಲದ ಮನದಲ್ಲಿ ಆಶೆ ಓಡುವಂತೆ ಮುಂದೆ ನಡೆಯುತ್ತಿದ್ದ ದೋಣಿಯ ಪಟಗಳನ್ನು ಕಾಣುತ್ತಿದ್ದಳು. ಮೊದಲ ಹರಿಯದ ಆ ಬಿಸಿಲು ದೂರದ ಕಲ್ಕತ್ತೆಯಲ್ಲಿ ಅವಳ ಪೂಜೆಯಲ್ಲಿ, ಅವಳ ತೋಟದಲ್ಲಿ ಬಂದು ನೆಲಸಿತ್ತು. ಅದೇ ದೈವವಾಣಿಯ ವೇಷವನ್ನು ತೊಟ್ಟು ಅವಳನ್ನು ಕುರುಡುತನದಲ್ಲಿ ಈ ಮದುವೆಯ ಕುಣಿಕೆಯೊಳಗೆ ಎಳೆತಂದು ಸಿಕ್ಕಿಸಿತ್ತು. ಆದರೆ ಬಲವಾದ ಬಿಸಿಲಿನಲ್ಲಿ ತಾನು ಕಣ್ಮರೆಯಾಯಿತು.

ಈ ಮಧ್ಯೆ ಮಧುಸೂದನ ಯಾವ ವೇಳೆಯಲ್ಲೋ ಹಿಂದೆ ಬಂದು ಗೋಡೆಗೆ ತಗಲುಹಾಕಿದ್ದ ಕನ್ನಡಿಯಲ್ಲಿ ಕುಮುವಿನ ಮುಖದ ಪ್ರತಿಬಿಂಬವನ್ನು ನೋಡುತ್ತ ನಿಂತಿದ್ದನು. ಕುಮುವಿನ ಮನಸ್ಸು ಯಾವೆಡೆಗೆ ಹೋಗಿದೆಯೋ ಏನೋ, ಕಣ್ಣಿಗೆ ಕಾಣದ ಆ ವ್ಯಕ್ತಿಯೊಡನೆ ಸ್ಪರ್ಧಿಸುವುದು ವ್ಯರ್ಥವೆಂದು ಅರಿತಿದ್ದ. ಇತರ ದಿನಗಳಲ್ಲಾಗಿದ್ದರೆ ಕುಮುವಿನ ಈ ಅನ್ಯಮನಸ್ಸಿನ ಭಾವವನ್ನು ನೋಡಿ ಕೋಪಗೊಳ್ಳುತ್ತಿದ್ದ. ಇಂದು ಶಾಂತವಾಗಿ ವಿಷಾದದಿಂದ ಕುಮುವಿನ ಪಕ್ಕದಲ್ಲಿ ಬಂದು ಕುಳಿತು "ಯಜಮಾನೀ, ಏನು ಯೋಚಿಸುತ್ತಿರುವೆ ?" ಎಂದು ಕೇಳಿದ.

ಕುಮು ಬೆಚ್ಚಿ ಬಿದ್ದಳು. ಮುಖ ಕಳೆಗುಂದಿತು. ಮಧುಸೂದನ ಅವಳ ಕೈ ಅದುಮಿ ಹಿಡಿದುಕೊಂಡು "ನೀನು ಯಾವ ವಿಧದಲ್ಲೂ ನನಗೆ ವಶವಾಗುವುದಿಲ್ಲವೇನು ?" ಎಂದು ಕೇಳಿದ.

ಕುಮುವಿಗೆ ಈ ಮಾತಿಗೆ ಉತ್ತರ ಹೊಳೆಯಲಿಲ್ಲ. ಯಾಕೆ ವಶವಾಗುತ್ತಿಲ್ಲ ಎಂಬ ಪ್ರಶ್ನೆಯನ್ನು ಅವಳು ತನ್ನನ್ನು ತಾನೇ ಕೇಳಿಕೊಳ್ಳುತ್ತಿದ್ದಳು ಮಧುಸೂದನ ಒರಟಾಗಿ ನಡೆದುಕೊಳ್ಳುತ್ತಿದ್ದಾಗ ಉತ್ತರ ಸಹಜವಾಗಿರುತ್ತಿತ್ತು. ಆಗ ತನ್ನನ್ನು ನಿಂದಿಸುವುದು ಬಿಟ್ಟು ಬೇರೆ ಯಾವ ಉತ್ತರವೂ ಇರಲಿಲ್ಲ. ಗಂಡನಿಗೆ ತನುಮನಗಳನ್ನು ಒಪ್ಪಿಸಲಾಗದಿರುವುದು ಮಹಾ ಪಾಪ. ಈ ವಿಷಯದಲ್ಲಿ ಕುಮುವಿಗೆ ಸಂದೇಹವಿರಲಿಲ್ಲ. ಆದರೂ ಅವಳ ಮನಸ್ಸಿನ ಈ ಸ್ಥಿತಿ ಏಕೆ ಉಂಟಾಯಿತು ! ಸಾಧ್ವೀ

ಸಾವಿತ್ರಿಯಂತಾಗಬೇಕೆಂಬುದೇ ಹೆಂಗಸರ ಏಕ ಮಾತ್ರ ಲಕ್ಷ್ಯ. ಆ ಗುರಿಯಿಂದ ದಾರಿತಪ್ಪುವ ದುರ್ಗತಿಯಿಂದ ತನ್ನನ್ನು ಎಲ್ಲ ಬಗೆಯಲ್ಲೂ ರಕ್ಷಿಸಿಕೊಳ್ಳಬೇಕು. ಆದರಿಂದಲೇ ಇಂದು ಕುಮು ವ್ಯಾಕುಲಗೊಂಡವಳಾಗಿ ಮಧುಸೂದನನೊಡನೆ "ನೀನು ನನ್ನಲ್ಲಿ ದಯೆತೋರು" ಎಂದಳು.

"ಯಾವುದಕ್ಕಾಗಿ ದಯೆ ತೋರಬೇಕು ?"

"ನನ್ನನ್ನು ನಿನ್ನವಳನ್ನಾಗಿ ಮಾಡಿಕೊ. ಆಜ್ಞಾಪಿಸು, ಶಿಕ್ಷಿಸು. ನಾನು ನಿನಗೆ ತಕ್ಕವಳೆಂದು ನನ್ನ ಮನಸ್ಸಿಗೆ ಅನ್ನಿಸುತ್ತಿದೆ."

ಇದನ್ನು ಕೇಳಿ ಬಹು ದುಃಖದಿಂದ ಮಧುಸೂದನನಿಗೆ ನಗು ಬಂದಿತು. ಕುಮು ಸತಿಯ ಕರ್ತವ್ಯವನ್ನು ಮಾಡಬಯಸುವಳು. ಕುಮು ಒಂದು ಸಮಯ ಸಾಮಾನ್ಯ ಗೃಹಿಣಿ ಮಾತ್ರವಾಗಿದ್ದರೆ ಇಷ್ಟೇ ಯಥೇಷ್ಟವಾಗಿತ್ತು. ಆದರೆ ಕುಮು ಅವನ ಪಾಲಿಗೆ ಮಂತ್ರ ಉಚ್ಚರಿಸಿದ ಹೆಂಡತಿಗಿಂತ ಬಹಳ ಹೆಚ್ಚು. ಆ ಹೆಚ್ಚಿನ ಅಂಶವನ್ನು ಪಡೆಯುವುದಕ್ಕಾಗಿಯೇ ಅದೆಷ್ಟು ಹೆಚ್ಚು ಪಣತೊಟ್ಟರೂ ಎಲ್ಲ ವ್ಯರ್ಥವಾಗುತ್ತಿತ್ತು. ತನ್ನ ಸಣ್ಣತನ ಗೊತ್ತಾಗಿ ಬಿಟ್ಟಿದೆ. ಕುಮುವಿನ ಸಂಕಟವನ್ನು ನಿವಾರಿಸಲು ಅಸಾಧ್ಯವಾದ ತನ್ನ ಸಹಾಯಕತೆಯು ಅವನ ವ್ಯಾಕುಲತೆಯನ್ನು ಹೆಚ್ಚಿಸುತ್ತಲೇ ಇತ್ತು.

ನಿಟ್ಟುಸಿರುಬಿಟ್ಟು ಮಧುಸೂದನ "ಒಂದು ಪದಾರ್ಥವನ್ನು ಕೊಟ್ಟಿ ನೀನು ಏನು ಕೊಡುವೆ ಹೇಳು ?" ಎಂದ.

ಅದು ಅಣ್ಣ ಕಳುಹಿಸಿಕೊಟ್ಟಿರುವ ಪದಾರ್ಥವೆಂದು ಕುಮು ತಿಳಿದಳು. ವ್ಯಗ್ರತೆಯೊಡನೆ ಮಧುಸೂದನನ ಮುಖದ ಕಡೆಗೆ ನೋಡುತ್ತಿದ್ದಳು.

"ಪದಾರ್ಥ ಎಂಥಾದ್ದೋ ಅದಕ್ಕೆ ತಕ್ಕ ಬೆಲೆ ದೊರಕೀತಲ್ಲವೆ ?" ಎಂದು ಅವನು ಮಂಚದ ಕೆಳಗೆ ರೇಷ್ಮೆಯ ಗೌಸಿನಿಂದ ಮುಚ್ಚಿದ್ದ ಏಸರಾಜ್ ಒಂದನ್ನು ಹೊರಗೆ ತೆಗೆದು ಅದರ ಗೌಸನ್ನು ಬಿಚ್ಚಿದ. ದಂತದ ಚಿತ್ರಗೆಲಸವನ್ನು ಮಾಡಿದ್ದ ಆ ಚಿರಪರಿಚಿತ ಏಸರಾಜ್ ವಾದ್ಯ

ವನ್ನು ಮನೆಯಿಂದ ಹೊರಟುಬರುವಾಗ ಕುಮು ಬಿಟ್ಟು ಬಿಟ್ಟು ಬಂದಿದ್ದಳು.

ಮಧುಸೂದನ "ಸಂತೋಷವಾಯಿತಲ್ಲವೆ, ಈಗ ಅದಕ್ಕೆ ತಕ್ಕ ಬೆಲೆ ಕೊಡು" ಎಂದ.

ಮಧುಸೂದನ ಏನು ಬೆಲೆಯನ್ನು ಬಯಸುವನು ಎನ್ನುವುದನ್ನು ಊಹಿಸಲಾರದೆ ನೆಟ್ಟದೃಷ್ಟಿಯಿಂದ ನೋಡುತ್ತಿದ್ದಳು. ಮಧುಸೂದನ "ಬಾರಿಸು ಕೇಳೋಣ" ಎಂದ.

ಇದು ಅಂತಹ ಹೆಚ್ಚಿನದೇನೂ ಅಲ್ಲ. ಆದರೆ ಬಹಳ ಕಠಿಣವಾದ ಕೆಲಸ. ಮಧುಸೂದನನಿಗೆ ಸಂಗೀತದ ಗಂಧವೇ ಇಲ್ಲವೆಂದು ಕುಮು ಚೆನ್ನಾಗಿ ತಿಳಿದುಕೊಂಡಿದ್ದಳು. ಅವನ ಎದುರಿನಲ್ಲಿ ಸಂಕೋಚವಿಲ್ಲದೆ ಬಾರಿಸುವುದು ಬಹಳ ಕಷ್ಟವಾಗಿತ್ತು. ಕುಮು ಮುಖ ತಗ್ಗಿಸಿಕೊಂಡು ಏಸರಾಜ್‌ನ ಕಮಾನನ್ನು ಆಡಿಸತೊಡಗಿದಳು. ಮಧುಸೂದನ? "ಬಾರಿಸು. ಯಜಮಾನಿ, ನನ್ನಿದಿರಿನಲ್ಲಿ ನಾಚಿಕೆಪಡಬೇಡ." ಎಂದ.

ಕುಮು "ಶ್ರುತಿ ಸರಿಯಾಗಲಿಲ್ಲ" ಎಂದಳು.

"ನಿನ್ನ ಮನಸ್ಸಿನ ಶ್ರುತಿಯೇ ಸರಿಯಾಗಿಲ್ಲ ಎಂದು ಹೇಳಬಾರದೆ. ?"

ಮಾತಿನ ವಾಸ್ತವತೆಯಿಂದ ಮನಸ್ಸು ಆ ಕ್ಷಣ ಅಳುಕಿತು. "ವಾದ್ಯವನ್ನು ಸರಿಮಾಡಿದೆ. ಇನ್ನೊಂದು ದಿನ ಬಾರಿಸುತ್ತೇನೆ. ಕೇಳಬಹುದು." ಎಂದಳು.

"ಯಾವಾಗ ಬಾರಿಸುತ್ತೀಯೆ ? ಖಂಡಿತ ಹೇಳು. ನಾಳೆ ಆಗುವುದೊ ?"

"ನಾಳೆ ಆಗಬಹುದು."

"ಸಂಜೆಗೆ, ಆಫೀಸಿನಿಂದ ಹಿಂದಿರುಗಿ ಬಂದ ಮೇಲೆ ಆಗುವುದೊ ?"

"ಹೂಂ. ಹಾಗೆಯೇ ಆಗಲಿ."

"ಏಸರಾಜನ್ನು ಪಡೆದು ಅತ್ಯಾನಂದವಾಯಿತಲ್ಲವೆ ?"

" ಬಹಳ ಸಂತೋಷವಾಯಿತು. "

ಶಾಲಿನ ಒಳಗಿನಿಂದ ಚರ್ಮದ ಪೆಟ್ಟಿಗೆಯೊಂದನ್ನು ಹೊರಕ್ಕೆ ತೆಗೆದು " ನಿನಗಾಗಿ ಈ ಮುತ್ತಿನ ಸರ ಕೊಂಡುಕೊಂಡು ಬಂದಿದ್ದೇನೆ. ಆದರೆ, ಇದರಿಂದ ಹೆಚ್ಚು ಸಂತೋಷವಾಗುವುದಿಲ್ಲ ಅಲ್ಲವೆ ? "

" ಇಂತಹ ಕಠಿಣವಾದ ಪ್ರಶ್ನೆಗಳನ್ನು ಕೇಳುವುದಾದರೂ ಏಕೆ ? " ಎಂದುಕೊಂಡು ಕುಮು ಸದ್ದಿಲ್ಲದೆ ಏಸರಾಜಿನ ಕಮಾನನ್ನು ಆಡಿಸತೊಡಗಿದಳು.

" ಜೇಡಿಕೆಯನ್ನು ಸ್ವೀಕರಿಸಿದೆಯೆಂದು ಅರ್ಥವಾಯಿತು. "

ಕುಮು ಮಾತನ್ನು ಅರ್ಥಮಾಡಿಕೊಳ್ಳಲಿಲ್ಲ.

" ನಿನ್ನ ಹೃದಯದ ಬಳಿ ನನ್ನ ಅಂತರ್ಯದ ಈ ಜೇಡಿಕೆಯನ್ನು ಇಡಬೇಕೆಂದು ನನಗೆ ಬಯಕೆಯಿತ್ತು. ಆದರೆ ಅದಕ್ಕೆ ಮುಂಚೆಯೇ ಅರ್ಜಿ ವಜಾ ಆದಂತಿದೆ "

ಕುಮುವಿನ ಇದಿರಿನಲ್ಲಿ ನೆಲದ ಮೇಲೆ ಒಡವೆ ಪೆಟ್ಟಿಗೆಯು ತೆರೆದು ಬಿದ್ದಿತ್ತು. ಇಬ್ಬರಲ್ಲಿ ಒಬ್ಬರಾದರೂ ಒಂದು ಮಾತನ್ನೂ ಆಡಲಿಲ್ಲ. ಇದಕ್ಕಿದ್ದಂತೆ ಕುಮು ಕನಸಿನಲ್ಲಿ ಮುಳುಗಿದಂತೆ ಆದಳು. ಸ್ವಲ್ಪ ಹೊತ್ತಾದ ಮೇಲೆ ಎಚ್ಚರಗೊಂಡವಳಾಗಿ ಹಾರ ಎತ್ತಿಕೊಂಡು ಕೊರಳಿಗೆ ಹಾಕಿಕೊಂಡಳು. ಅನಂತರ ಮಧುಸೂದನನಿಗೆ ನಮಸ್ಕಾರ ಮಾಡಿದಳು. " ನೀನು ನಾನು ನುಡಿಸುವುದನ್ನು ಕೇಳುವೆಯೋ " ಎಂದಳು.

ಮಧುಸೂದನ " ಕೇಳುವೆ " ಎಂದ.

" ಈಗಲೇ ಬಾರಿಸುತ್ತೇನೆ " ಎಂದು. ಅವಳು ಏಸರಾಜಿನ ಶ್ರುತಿಯನ್ನು ಸರಿಪಡಿಸಿದಳು. ಕೇದಾರ ರಾಗದಲ್ಲಿ ಆಲಾಪನೆಗೆ ಆರಂಭಿಸಿದಳು. ಕೋಣೆಯಲ್ಲಿ ಯಾರಾದರೂ ಇರುವರೆನ್ನುವುದನ್ನೇ ಮರೆತಳು. ಕೇದಾರದಲ್ಲಿ ' ಛಾಯಾನಟ ' ಎಂಬುದನ್ನು ಆರಂಭಿಸಿದಳು. ತನ್ನ ಅಚ್ಚು ಮೆಚ್ಚಿನ ಕೀರ್ತನೆಯಾದ "ಠಾಡೀ ರಹೋ ಮೋರೇ ಅಂಖನಕೇ ಆಗೇ" (ನಿಂತಿರು ನನ್ನ ಕಣ್ಣ ಇದಿರಿನಲ್ಲಿ) ಎನ್ನುವುದನ್ನು ಬಾರಿಸಿದಳು. ಆ ನಾದ

ಮಾಧುರ್ಯದಲ್ಲಿ ವಿವಿಧ ವರ್ಣದ ಬೆಳಕು ಹರಡಿ ಕುಮು ಸಂಗೀತದಲ್ಲಿ ಪಡೆದಿದ್ದ ಆ ಸಾಧನೆ ಪ್ರತ್ಯಕ್ಷವಾಯಿತು.

ಮಧುಸೂದನನಿಗೆ ಸಂಗೀತದ ಸ್ವಾರಸ್ಯ ತಿಳಿಯದು. ಆದರೆ ಕುಮು ವಿನ ವಿಶ್ವಮೋಹಕ ಮುಖದ ಮೇಲೆ ಆಡುತ್ತಿದ್ದ ಆ ಸ್ವರ, ಏಸರಾಜಿನ ಮೆಟ್ಟಲು ಮೆಟ್ಟಲುಗಳಲ್ಲಿ ಕುಮುವಿನ ಬೆರಳುಗಳ ಓಟದಿಂದ ಕುಣಿಯು ತೊಡಗಿದ್ದ ಆ ಛಂದ, ಇವುಗಳು ಅವನ ಹೃದಯವನ್ನು ಕಲಕಿದುವು. ತನಗೆ ಯಾರೋ ವರ ಕೊಟ್ಟರೆಂದು ಅವನ ಮನಸ್ಸಿಗೆ ಅನ್ನಿಸಿತು. ಅನನ್ಯ ಚಿತ್ತದಿಂದ ಬಾರಿಸುತ್ತ ಬಾರಿಸುತ್ತ ಕುಮು ಹಠಾತ್ತಾಗಿ ಒಮ್ಮೆ ಮಧು ಸೂದನ ನಟ್ಟ ದೃಷ್ಟಿಯಿಂದ ತನ್ನ ಮುಖ ನೋಡುತ್ತಿರುವುದನ್ನು ಕಂಡಳು. ಆ ಕ್ಷಣ ಕೈ ನಿಂತಿತು. ನಾಚಿಕೆ ಮೂಡಿತು. ಬಾರಿಸುವುದನ್ನು ನಿಲ್ಲಿಸಿ ಬಿಟ್ಟಳು.

ಮಧುಸೂದನನ ಮನಸ್ಸಿನಲ್ಲಿ ದಾಕ್ಷಿಣ್ಯ ಉಕ್ಕಿ ಹರಿಯಿತು. "ಯಜ ಮಾನೀ ನಿನಗೆ ಏನು ಬೇಕು ಹೇಳು." ಎಂದ.

ಕುಮು ಒಂದು ವೇಳೆ ಕೆಲವು ದಿನ ಅಣ್ಣನ ಸೇವೆ ಮಾಡಲು ಹೋಗಬಯಸುತ್ತೇನೆ ಎಂದು ಕೇಳಿದ್ದುದಾದರೆ ಮಧುಸೂದನ ಅದಕ್ಕೂ ಒಪ್ಪುತ್ತಿದ್ದ. ಏಕೆಂದರೆ ಇಂದು ಕುಮುವಿನ ಗೀತದಿಂದ ಮುಗ್ಧನಾಗಿ ಮುಖದ ಕಡೆ ಸುಮ್ಮನೆ ನೋಡುತ್ತ ನೋಡುತ್ತ ಅವನು ತನ್ನಲ್ಲೇ "ಇದೋ, ಇವಳು ನನ್ನ ಮನೆಗೆ ಬಂದಿರುವಳಲ್ಲ. ಇದೆಂತಹ ಆಶ್ಚರ್ಯ" ಎಂದು ಅಂದುಕೊಂಡಿದ್ದ.

ಮಧುಸೂದನ ಮತ್ತೊಮ್ಮೆ ಅನುನಯದ ದನಿಯಲ್ಲಿ "ಯಜ ಮಾನೀ, ನೀನು ನನ್ನ ಬಳಿ ಏನಾದರೂ ಕೇಳಿಕೊ, ಏನು ಬಯಸು ವೆಯೋ . ಅದನ್ನು ಕೊಡುವೆ" ಎಂದ.

ಕುಮುವೆಂದಳು. "ಆಳು ಮುರಲೀಗೆ ಒಂದು ಕಂಬಳಿ ಬಟ್ಟೆಯನ್ನು ಕೊಟ್ಟರೆ ಸಾಕು."

ಕುಮು ಏನೂ ಬೇಡವೆಂದಿದ್ದರೆ ಅದೂ ಉತ್ತಮವೇ ಆಗಿತ್ತು. ಆದರೆ ಮುರಲೀ ಭೋಯಿಗಾಗಿ ಹೊದೆಯುವ ಕಂಬಳಿ! ತಲೆಯ ಕಿರೀಟ ಕೊಡಲು ಸಿದ್ಧನಾಗಿರುವನಲ್ಲಿ ಜೋಡಿನ ದಾರ ಬೇಡುವುದೇ. ?

ಮಧುಸೂದನ ಮೂಕನಾದ. ಆಳಿನ ಮೇಲೆ ಕೋಪ ಬಂದಿತು. " ನಿರ್ಭಾಗ್ಯ ಮುರಲಿ ನಿನ್ನನ್ನು ಬೇಸರಪಡಿಸಿರುವನೆಂದು ತೋರುತ್ತೆ. "

" ಇಲ್ಲ. ನಾನೇ ಅವನಿಗೆ ಒಂದು ಹಳೆಯ ಅಲ್ವಾನು ಕೊಡಲು ಹೋದೆ. ಅವನು ತೆಗೆದುಕೊಳ್ಳಲಿಲ್ಲ. ನೀನು ಅಪ್ಪಣೆಕೊಟ್ಟರೆ ಆಗ ಧೈರ್ಯವಾಗಿ ತೆಗೆದುಕೊಳ್ಳುತ್ತಾನೆ. "

ಮಧುಸೂದನ ಸ್ತಬ್ಧನಾದ. ಸ್ವಲ್ಪಹೊತ್ತಿನ ಅನಂತರ " ಭಿಕ್ಷೆ ಕೊಡುವೆಯೇನು ? ಒಳ್ಳೆಯದು. ಎಲ್ಲಿ ನಿನ್ನ ಅಲ್ವಾನ್ ನೋಡೋಣ " ಎಂದ.

ಕುಮು ಬಹುದಿನಗಳು ಉಪಯೋಗಿಸಿದ್ದ ಆ ಬಾದಾಮಿ ಬಣ್ಣದ ಅಲ್ವಾನ್ ತೆಗೆದುಕೊಂಡು ಬಂದಳು. ಮಧುಸೂದನ ಅದನ್ನು ತನ್ನ ಮೈಮೇಲೆ ಹೊದೆದುಕೊಂಡ. ಟೀಪಾಯಿ ಮೇಲಿದ್ದ ಕಿರುಗಂಟೆಯನ್ನು ಬಾರಿಸಲು ಮುದಿ ದಾಸಿಯೊಬ್ಬಳು ಬಂದಳು. " ಮುರಲಿ ಬೋಯಿಯನ್ನು ಬರಹೇಳು " ಎಂದ.

ಮುರಲೀ ಬಂದವನು ಕೈಜೋಡಿಸಿ ನಿಂತುಕೊಂಡ. ಚಳಿ ಮತ್ತು ಭಯದಿಂದ ಅವನ ಮೈ ನಡಗುತ್ತಿತ್ತು.

" ನಿಮ್ಮ ಅಮ್ಮನವರು ನಿನಗೆ ಇನಾಮು ಕೊಡ ಬಯಸುತ್ತಾರೆ. " ಎಂದ. ಮಧುಸೂದನ ಪಾಕೆಟ್ ಕೇಸಿನಿಂದ ನೂರು ರೂಪಾಯಿಯ ಒಂದು ನೋಟನ್ನು ಹೊರಗೆ ತೆಗೆದು ಮಡಿಕೆ ಬಿಚ್ಚಿ ಅದನ್ನು ಕುಮುವಿನ ಕೈಗೆ ಕೊಟ್ಟ. ಈ ಅಸಂಭವ ನಡವಳಿಕೆಯಿಂದ ಮುರಲೀ ಬೋಯಿಯ ಭಯ ಮತ್ತೂ ಹೆಚ್ಚಿತು. ನಡಗುವ ದನಿಯಲ್ಲಿ " ಹುಜೂರ್ — " ಎಂದ.

" ಹುಜೂರ್ ಏನೋ .... ಮಗನೇ, ಬೆಪ್ಪ, ನಿಮ್ಮ ಅಮ್ಮನ ಕೈಯಿಂದ ತೆಗೆದುಕೊ. ಈ ಹಣ ಕೊಟ್ಟು ಮನ ಬಂದಷ್ಟು ಕಂಬಳಿಯ ಬಟ್ಟೆ ಕೊಂಡುಕೊ. "

ವಿಷಯ ಇಷ್ಟರಲ್ಲಿಯೇ ಮುಗಿಯಿತು. ಅದರೊಡನೆ ಅಂದಿನದೆಲ್ಲ ಮುಗಿದಂತಾಯಿತು. ಕುಮುವಿನ ಮನಸ್ಸು ಯಾವ ಪ್ರವಾಹದಲ್ಲಿ ಹರಿ

ಯಲಾರಂಭಿಸಿತ್ತೋ ಅದು ಹಠಾತ್ತಾಗಿ ನಿಂತಿತು. ಮಧುಸೂದನನ ಮನಸ್ಸಿನಲ್ಲಿ ಚಿತ್ತ ಸಂಕೀರ್ಣತೆಯು ದಡ ಮೀರಿ ನೆರೆ ಬಂದಿತ್ತಷ್ಟೆ. ಅದೂ ಕೇವಲ ಬೋಯಿಗಾಗಿ ತುಚ್ಛವಾದೊಂದು ಬೇಡಿಕೆಯನ್ನು ಮುಟ್ಟಿ ಪಾತಾಳದಲ್ಲಿ ಅಡಗಿಬಿಟ್ಟಿತು. ಅನಂತರ ಸಹಜವಾದ ರೀತಿಯಲ್ಲಿ ಮಾತುಕತೆ ನಡೆಸುವುದು ಇಬ್ಬರಿಗೂ ಕಷ್ಟವಾಯಿತು. ಆ ದಿನ ಸಂಜೆಯ ವೇಳೆಯಲ್ಲಿ ಆ ಗ್ರಾಮವನ್ನು ಕೊಂಡುಕೊಳ್ಳುವ ವಿಷಯವಾಗಿ ಮಾತನಾಡಲು ಜನ ಬಂದು ಹೊರಮನೆಯಲ್ಲಿ ಕಾದಿದ್ದರು. ಈ ಸಂಗತಿ ಮಧುಸೂದನನಿಗೆ ನೆನಪೇ ಇರಲಿಲ್ಲ. ಇಷ್ಟು ಹೊತ್ತಿನ ಮೇಲೆ ಬೆಚ್ಚಿ ಎಚ್ಚರವಾಗಲು ತನ್ನನ್ನು ತಾನೇ ಬೈದುಕೊಂಡು ಎದ್ದು ನಿಂತು "ಕೆಲಸವಿದೆ ಬರುತ್ತೇನೆ" ಎಂದು ವೇಗವಾಗಿ ಹೊರಟುಹೋದ.

ದಾರಿಯಲ್ಲಿ ಶ್ಯಾಮಾಸುಂದರಿಯು ಕೊಟಡಿಯ ಇದಿರಿನಲ್ಲಿ "ಯಾರೂ ಇಲ್ಲವೇನು ?" ಎಂದ.

ಶ್ಯಾಮಾಸುಂದರಿ ಅಂದು ಊಟಮಾಡಿರಲಿಲ್ಲ. ಬುರ್ನೀಸೊಂದನ್ನು ಹೊದ್ದುಕೊಂಡು ನೆಲದಲ್ಲಿ ಹಾಸಿಗೆಯ ಮೇಲೆ ಸೊರಗಿದಂತೆ ಮಲಗಿದ್ದಳು. ಮಧುಸೂದನನ ಕೂಗು ಕೇಳಿ ಅವಸರದಿಂದ ಎದ್ದು ಬಾಗಿಲ ಹತ್ತಿರ ಬಂದು "ಏನು ?" ಎಂದಳು.

"ವೀಳ್ಯ ಕೊಡಲಿಲ್ಲವಲ್ಲ ನನಗೆ ?"

## ೪೪

ಹೊರಗಡೆ ಕತ್ತಲೆಯಲ್ಲಿ ಇಷ್ಟುಹೊತ್ತೂ ಒಂದು ವ್ಯಕ್ತಿ ನಿಂತಿತ್ತು. ಹಾಬಲೂ, ಸಾಮಾನ್ಯ ಸಾಹಸದ ಕೆಲಸದವನಲ್ಲ. ಮಧುಸೂದನನನ್ನು ಕಂಡರೆ ಅವನು ಯಮನನ್ನು ಕಂಡಂತೆ ಹೆದರುತ್ತಿದ್ದ. ಆದರೂ ಕಟ್ಟಿಗೆಯಂತೆ ನಿಂತಿದ್ದ. ಅವತ್ತು ಮಧುಸೂದನ ಗದರಿಸಿಕೊಂಡಂದಿನಿಂದ ದೊಡ್ಡಮ್ಮನ ಬಳಿಗೆ ಬರಲು ಅವಕಾಶವಾಗಿರಲಿಲ್ಲ. ಇಂದು ಈ ಸಂಜೆ ಹೊತ್ತಿನಲ್ಲಿ ಬರುವುದೂ ನಿರಾತಂಕವಾಗಿತ್ತೆಂದಲ್ಲ. ಆದರೆ ಅವನನ್ನು ಹಾಸಿಗೆಯಲ್ಲಿ ಮಲಗಿಸಿ ಅವನ ತಾಯಿ ಮನೆಗೆಲಸಕ್ಕೆ ಹೋಗಲು ಏಸರಾಜಿನ ಸ್ವರ ಕಿವಿಗೆ ಬಿತ್ತು. ಬಾರಿಸುತ್ತಿರುವುದು ಏನನ್ನು ಎಂದು ಅರಿಯ.

ಬಾರಿಸುತ್ತಿರುವುದು ಯಾರು ಎಂಬುದೂ ತಿಳಿಯಲಿಲ್ಲ. ದೊಡ್ಡಮ್ಮನ ಕೋಣೆಯಿಂದ ಸಂಗೀತ ಕೇಳುತ್ತಿದೆ. ಎನ್ನುವುದಷ್ಟು ಮಾತ್ರ ಖಂಡಿತವಾಗಿತ್ತು. ದೊಡ್ಡಪ್ಪ ಅಲ್ಲಿ ಇಲ್ಲವೆಂದು ಅವನ ಎಣಿಕೆ. ಯಾಕೆಂದರೆ ಅವನಿದಿರಿನಲ್ಲಿ ಯಾರೇ ಆಗಲಿ ವಾದ್ಯ ಬಾರಿಸುವಷ್ಟು ಸಾಹಸಿಗಳಿಲ್ಲವೇ ಇಲ್ಲವೆಂದು ಅವನಿಗೆ ದೃಢವಾಗಿತ್ತು. ಮೇಲ್ಮಹಡಿಯನ್ನು ಹತ್ತಿ ಕೊಟಡಿಯ ಬಾಗಿಲಿಗೆ ಬಂದವನು ದೊಡ್ಡಪ್ಪನ ಎಕ್ಕಡವನ್ನು ಕಂಡೊಡನೆ ಓಡಿಹೋಗಲು ಯತ್ನಮಾಡಿದನು. ಆದರೆ ಅವನ ದೊಡ್ಡಮ್ಮ ಬಾರಿಸುತ್ತಿದ್ದುದು ಹೊರಗಿನಿಂದ ಕಾಣಲು ಆಗ ಓಡಿಹೋಗಲು ಕಾಲೇ ಬರಲಿಲ್ಲ. ಬಾಗಿಲಮರೆಯಲ್ಲಿ ನಿಂತು ಕೇಳತೊಡಗಿದ. ಆರಂಭದಲ್ಲೇ ದೊಡ್ಡಮ್ಮನನ್ನು ಕಂಡು ಅವನಿಗೆ ಆಶ್ಚರ್ಯವಾಗಿತ್ತು. ಇವತ್ತು ಅವನ ವಿಸ್ಮಯಕ್ಕೆ ಕೊನೆಯೇ ಇರಲಿಲ್ಲ. ಮಧುಸೂಧನ ಹೊರಟು ಹೋದೊಡನೆ ಮನಸ್ಸಿನ ಆನಂದವನ್ನು ತಡೆದುಕೊಳ್ಳಲಾರದೆ ಕೊಟಡಿಯೊಳಕ್ಕೆ ಹೊಕ್ಕವನೇ ನೆಟ್ಟಗೆ ಕುಮುವಿನ ಮಡಿಲಲ್ಲಿ ಹೋಗಿ ಕುಳಿತು, ಕೊರಳಿಗೆ ಜೋತುಬಿದ್ದು ಕಿವಿಯ ಹತ್ತಿರ "ದೊಡ್ಡಮ್ಮಾ" ಎಂದ.

ಕುಮು ಅವನನ್ನು ಎದೆಗೆ ಅಪ್ಪಿಕೊಂಡು "ಇದೇನು? ನಿನ್ನ ಕೈ ತಣ್ಣಗಿದೆಯಲ್ಲ! ಶೀತದ ಗಾಳಿಯಲ್ಲಿ ನಿಂತಿದ್ದಂತೆ ಕಾಣುತ್ತೆ." ಎಂದಳು.

ಹಾಬಲೂ ಏನೂ ಉತ್ತರ ಕೊಡಲಿಲ್ಲ. ಹೆದರಿದ. ದೊಡ್ಡಮ್ಮ ಆ ಕ್ಷಣದಲ್ಲೇ ಹಾಸಿಗೆಯಲ್ಲಿ ಮಲಗಲು ಕಳುಹಿಸಿಬಿಡುವಳೆಂದು ಎಣಿಸಿದ. ಕುಮು ಅವನನ್ನು ವಾತ್ಸಲ್ಯದಿಂದ ತನ್ನ ಪಕ್ಕಕ್ಕೆ ಕರೆದು ಕೂಡಿಸಿಕೊಂಡು "ಇನ್ನೂ ಮಲಗಲು ಹೋಗಲಿಲ್ಲವೇ ಗೋಪಾಲಾ" ಎಂದಳು.

"ನಿನ್ನ ಸಂಗೀತ ಕೇಳಲು ಕುಳಿತಿದ್ದೆ. ಅದು ಹೇಗೆ ಬಾರಿಸಿದೆ ದೊಡ್ಡಮ್ಮಾ?"

"ಕಲಿತರೆ ನೀನೂ ಬಾರಿಸಬಲ್ಲೆ."

"ನನಗೂ ಕಲಿಸಿ ಕೊಡುತ್ತೀಯಾ?"

ಈ ಸಮಯದಲ್ಲಿ ಮೋತಿಯತಾಯಿ ಬಿರುಗಾಳಿಯಂತೆ ಕೋಣೆಯ ಒಳಹೊಕ್ಕು "ಇಲ್ಲಿ ನೋಡು ಈ ರಾಕ್ಷಸನನ್ನ, ಇಲ್ಲಿ ಅವಿತುಕೊಂಡಿ

ದ್ದಾನೆ. ನಾನು ಇವನನ್ನು ಏಳುಲೋಕದಲ್ಲೂ ಹುಡುಕುತ್ತಿದ್ದೇನೆ. ಸಂಜೆಯಲ್ಲಿ ಎರಡು ಹೆಜ್ಜೆ ಹೊರಗಿಡಲು ವ್ಹೆ ಜುಂ ಎನ್ನುತ್ತೆ. ದೊಡ್ಡಮ್ಮನ ಹತ್ತಿರ ಬರಲು ಮಾತ್ರ ಹೆದರಿಕೆ, ಅಂಜಿಕೆ ಏನೂ ಇರದು ಅಲ್ಲವೆ ? ನಡೆ ಮಲಗುವುದಕ್ಕೆ" ಎಂದಳು.

ಕುಮು "ಓ ! ಇರಲಿ. ಇರಲಿ ಬಿಡು ಇನ್ನು ಸ್ವಲ್ಪ ಹೊತ್ತು" ಎಂದಳು.

"ಇದೇ ರೀತಿ ಧೈರ್ಯ ಹೆಚ್ಚಿ ಬಿಟ್ಟರೆ ಕೊನೆಗೆ ವಿಪತ್ತು ಒದಗುತ್ತೆ. ಅವನನ್ನು ಮಲಗಿಸಿ ನಾನು ಈಗಲೇ ಬರುತ್ತೇನೆ"

ಹಾಬಲೂವಿಗೆ ತಿನ್ನಲು ಅಥವಾ, ಆಟ ಆಡಲು ಏನಾದರೂ ಕೊಡಬೇಕೆಂದು ಕುಮುವಿಗೆ ಬಹಳ ಆಸೆಯಾಯಿತು. ಆದರೆ ಕೊಡಲು ತಕ್ಕ ಪದಾರ್ಥ ಹತ್ತಿರದಲ್ಲಿ ಏನೂ ಇರಲಿಲ್ಲ "ಅವನಿಗೆ ಮುದ್ದಿಟ್ಟು. ಇವತ್ತು ಹೋಗಿ ಮಲಗು ಕಂದ, ನಾಳೆ ಮಧ್ಯಾಹ್ನ ನೀನು ಸಂಗೀತ ಕೇಳುವೆಯಂತೆ" ಎಂದಳು.

ಹಾಬಲು ಮುಖ ಚಿಕ್ಕದು ಮಾಡಿಕೊಂಡು ತಾಯಿಯೊಡನೆ ಹೋದ.

ಸ್ವಲ್ಪ ಹೊತ್ತಾದ ಮೇಲೆ ಮೋತಿಯತಾಯಿ ಬಂದಳು. ನವೀನನ ಉಪಾಯದ ಫಲ ಏನಾಯಿತೆಂದು ವಿಚಾರಿಸಲು ಅವಳ ಮನಸ್ಸು ಹಾತೊರೆಯುತ್ತಿತ್ತು. ಕುಮುವಿನ ಪಕ್ಕದಲ್ಲಿ ಕುಳಿತೊಡನೆ ಅವಳ ಕೈಯಲ್ಲಿದ್ದ ಆ ನೀಲಿಕಲ್ಲಿನ ಉಂಗುರ ಕಣ್ಣಿಗೆ ಬಿತ್ತು. ಪ್ರಯತ್ನ ಸಫಲವಾಯಿತೆಂದು ತಿಳಿದುಕೊಂಡಳು. ವಿಷಯವನ್ನು ಪ್ರಸ್ತಾಪಿಸುವ ನೆಪದಲ್ಲಿ "ಅಕ್ಕ, ನಿನ್ನ ಈ ವಾದ್ಯ ಯಾವ ವಿಧದಲ್ಲಿ ನಿನ್ನ ಕೈಗೆ ಬಂದು ಸೇರಿತು" ಎಂದಳು.

ಕುಮು "ಅಣ್ಣಾ ಕಳುಹಿಸಿಕೊಟ್ಟರು" ಎಂದಳು.

"ದೊಡ್ಡ ಯಜಮಾನರು ನಿನಗೆ ತಂದುಕೊಟ್ಟರೆಂದು ಕಾಣುತ್ತೆ"

ಕುಮು ಸಂಕ್ಷೇಪವಾಗಿ "ಹೊಂ" ಎಂದಳು.

"ನಿಮ್ಮ ಅಣ್ಣನವರ ಸಂಗತಿ ಏನಾದರೂ ಹೇಳಿದರೇನು ?"

"ಇಲ್ಲ."

"ಆದರೆ, ಅವರೇನೋ ಬರುವರಲ್ಲ. ಅವರ ಬಳಿಗೆ ನೀನು ಹೋಗುವ ಪ್ರಸ್ತಾಪ ಬರಲಿಲ್ಲವೇನು ?"

"ಇಲ್ಲ, ಅಣ್ಣನ ವಿಷಯವಾಗಿ ಯಾವ ಮಾತೂ ಆಡಲೇ ಇಲ್ಲ."

"ನೀನೇ ಸ್ವತಃ ಕೇಳಲಿಲ್ಲವೇಕೆ ?"

"ನಾನು ಅವರ ಹತ್ತಿರ ಏನನ್ನಾದರೂ ಕೇಳಬಲ್ಲೆ. ಇದನ್ನು ಮಾತ್ರ ಕೇಳುವುದು ಸಾಧ್ಯವಿಲ್ಲ."

"ನೀನು ಕೇಳುವ ಆವಶ್ಯಕತೆ ಇರದು. ನೀನು ಸುಮ್ಮನೆ ಅಣ್ಣನ ಮನೆಗೆ ಹೊರಟುಹೋಗು. ದೊಡ್ಡ ಯಜಮಾನರು ಏನೂ ಹೇಳಲಾರರು."

ಮೋತಿಯ ತಾಯಿ ಒಂದು ಸಂಗತಿಯನ್ನು ಇನ್ನೂ ಸಂಪೂರ್ಣವಾಗಿ ಅರಿತಿರಲಿಲ್ಲ. ಕುಮುವಿಗೆ ತನ್ನ ವಿಷಯದಲ್ಲಿ ಮಧುಸೂದನನಿಗೆ ಮೊಳೆದೋರುತ್ತಿರುವ ಅಭಿಮಾನವನ್ನು ಸ್ವೀಕರಿಸುವುದಕ್ಕೆ ಬಹಳ ದುಃಖವಾಗುತ್ತಿದೆ. ಇದಕ್ಕೆ ಬದಲಾಗಿ ಮಧುಸೂದನನು ಏನನ್ನು ಬಯಸುವನೋ ಅದನ್ನು ಬೇಡಿದರೂ ಕುಮು ತಾನು ಕೊಡಲಾರಳು. ಅವಳ ಹೃದಯ ದಿವಾಳಿಯಾಗಿಬಿಟ್ಟಿದೆ. ಇದರಿಂದಲೇ ಮಧುಸೂದನನ ಹತ್ತಿರ ದಾನವನ್ನು ಸ್ವೀಕರಿಸಿ ಸಾಲ ಹೆಚ್ಚಿಸಲು ಇಷ್ಟೊಂದು ಸಂಕೋಚ. ಕುಮುವಿನ ಮನದಲ್ಲಿ ಅಣ್ಣ ಇನ್ನೂ ಕೆಲವು ದಿನಗಳು ನಿಧಾನಿಸಿ ಬಂದರೆ ಉತ್ತಮವೆಂದು ಅನ್ನಿಸತೊಡಗಿತ್ತು.

ಸ್ವಲ್ಪ ಹೊತ್ತು ಉತ್ತರವನ್ನು ನಿರೀಕ್ಷಿಸುತ್ತಿದ್ದು ಮೋತಿಯ ತಾಯಿ "ಇವತ್ತು ದೊಡ್ಡ ಯಜಮಾನರ ಮನಸ್ಸು ಪ್ರಸನ್ನತೆಯಿಂದ ಇದ್ದಂತೆ ಕಾಣುತ್ತಿತ್ತು" ಎಂದಳು.

ಸಂಶಯ ಮತ್ತು ವ್ಯಾಕುಲದ ದೃಷ್ಟಿಯೊಡನೆ ಕುಮು ಮೋತಿಯ ತಾಯಿಯ ಮುಖವನ್ನು ನೋಡಿ "ಈ ಪ್ರಸನ್ನತೆ ಯಾತಕ್ಕೆನ್ನುವುದನ್ನು ಸರಿಯಾಗಿ ಅರಿಯಲಾರದೆ ಹೋಗಿರುವೆ. ಆದ್ದರಿಂದಲೇ ನನಗೆ ಭಯ. ಏನು ಮಾಡಬೇಕು ಎನ್ನುವುದು ಹೊಳೆಯದು" ಎಂದಳು.

ಕುಮುವಿನ ಗಲ್ಲವನ್ನು ಹಿಡಿದುಕೊಂಡು ಮೋತಿಯ ತಾಯಿ "ಏನೂ ಮಾಡಬೇಕಾಗಿರದು. ಇಷ್ಟು ಮಾತ್ರ ತಿಳಿದುಕೊಳ್ಳಲಾರೆಯೇನು. ಇಲ್ಲಿಯ ವರೆಗೆ ಅವರು ಕೇವಲ ವ್ಯಾಪಾರ ಮಾಡುತ್ತ ಬಂದಿರುವರು. ನಿನ್ನಂತಹ ಹೆಣ್ಣನ್ನು ಎಂದೂ ನೋಡಿರಲಿಲ್ಲ. ಸ್ವಲ್ಪ ಸ್ವಲ್ಪವಾಗಿ ಎಷ್ಟೆಷ್ಟು ಅರಿಯು ವರೋ ಅಷ್ಟಷ್ಟು ನಿನ್ನ ಮೇಲೆ ಗೌರವ ಹೆಚ್ಚುವುದು" ಎಂದಳು.

"ಹೆಚ್ಚು ನೋಡಿದರೆ ಹೆಚ್ಚು ಅರಿಯಲು ಅಂಥಾದ್ದೇನೂ ನನ್ನಲ್ಲಿ ಇಲ್ಲವಲ್ಲಮ್ಮ. ನನ್ನ ಒಳಭಾಗ ಕೇವಲ ಬರಿದೆಂದು ನಾನು ಸ್ವತಃ ಕಾಣುತ್ತಿರುವೆ. ಆ ಶೂನ್ಯ ದಿನದಿನಕ್ಕೆ ಕ್ರಮಕ್ರಮವಾಗಿ ಗೊತ್ತಾಗು ವುದು. ಅದರಿಂದಲೇ ಅವರು ಸಂತೋಷಗೊಂಡಿರುವರೆಂದು ಹಠಾತ್ತಾಗಿ ನೋಡಿದಾಗ ಅವರು ಮೋಸಹೋದಂತೆ ನನ್ನ ಮನಸ್ಸಿಗೆ ತೋರುತ್ತೆ. ಆ ಸಂಗತಿ ಯಾವ ನಿಮಿಷ ತಿಳಿಯುವುದೋ ಆಗ ಅವರು ಮತ್ತೂ ಸಿಟ್ಟಾಗುವರು. ಆ ಸಿಟ್ಟೇ ನಿಜವಾದುದು. ಅದರಿಂದಲೇ ಅದಕ್ಕೆ ನಾನು ಅಷ್ಟು ಅಂಜದಿರುವುದು."

"ನಿನ್ನ ಬೆಲೆಯೇನು ಎನ್ನುವುದನ್ನು ನೀನು ಬಲ್ಲೆಯೇನು! ಯಾವತ್ತು ಇವರ ಮನೆಗೆ ಬಂದೆಯೋ ಅವತ್ತೇ ನಿನ್ನ ಕಡೆಯಿಂದ ಏನು ಕೊಡಲ್ಪಟ್ಟಿದೆಯೋ, ಅದನ್ನು ಇವರೆಲ್ಲ ಒಟ್ಟಾಗಿ ತೀರಿಸಲಾರರು. ನಮ್ಮ ಯಜಮಾನರಂತೂ ಸಂಪೂರ್ಣವಾಗಿ ಸೋಲನ್ನೊಪ್ಪಿಕೊಂಡಿರುವರು. ನಿನಗಾಗಿ ಸಮುದ್ರವನ್ನು ಹಾರಲಾರದೆ ಹೋದರೆ ನೆಮ್ಮದಿಯಿಂದ ಇರ ಲಾರರು. ನಾನು ನಿನ್ನನ್ನು ಪ್ರೀತಿಸದೆ ಇದ್ದೆನಾದರೆ ಆಗ ಈ ವಿಷಯ ವಾಗಿಯೇ ಅವರ ಸಂಗಡ ನನ್ನ ಜಗಳ ಆಗಿ ಬಿಡುತ್ತಿತ್ತು."

ಕುಮು ನಕ್ಕಳು. "ಅದೆಷ್ಟು ಅದೃಷ್ಟವಿದ್ದು ಇಂತಹ ಮೈದುನ ನನ್ನು ಪಡೆದೆ" ಎಂದಳು.

"ಮತ್ತೆ ನಿನ್ನ ಓರಗಿತ್ತಿಯ ಭಾಗ್ಯದ ಸ್ಥಾನದಲ್ಲಿ ರಾಮುವೋ ಕೇಶುವೋ ಇರುವಂತೆ ಕಾಣುತ್ತೆ ಅಲ್ಲವೆ."

"ನಿಮ್ಮಲ್ಲಿ ಒಬ್ಬರ ಹೆಸರು ಹೇಳಿದರೆ ಇನ್ನೊಬ್ಬರ ಹೆಸರು ಹೇಳ ಬೇಕಾದ ಆವಶ್ಯಕತೆ ಇರದು."

ಮೋತಿಯ ತಾಯಿ ಬಲಗೈಯಿಂದ ಅವಳ ಗಲ್ಲವನ್ನು ಹಿಡಿದು ಕೊಂಡು “ ನಿನ್ನ ಹತ್ತಿರ ನನ್ನದೊಂದು ಬೇಡಿಕೆಯಿದೆ” ಎಂದಳು.

“ ಏನು ಹೇಳು ? ”

“ ನನ್ನ ಸಂಗಡ ನೀನು—ಬಲುಗುಟ್ಟಾದ ಮಾತು—ಮನಸ್ಸನ್ನು ಬದಲಾಯಿಸು. ”

“ ಅದೂ ಸರಿಯೆ. ಆರಂಭದಿಂದಲೆ ಮನಸ್ಸಿಗೆ ಮನಸ್ಸು ಒಂದು ಗೂಡಿಯೇ ಇದೆ.

“ ಹಾಗಾದರೆ ನನ್ನ ಹತ್ತಿರ ಏನೂ ಮರೆಮಾಚಬೇಡ. ಇವತ್ತು ನೀನು ಹೀಗೆ ಮುಖಮಾಡಿಕೊಂಡು ಇರುವುದೇಕೆ ? ಏನೂ ಅರ್ಥ ವಾಗುತ್ತಿಲ್ಲ. ”

ಅರೆ ಕ್ಷಣ ಮೋತಿಯ ತಾಯಿಯು ಮುಖದ ಕಡೆ ನೋಡುತ್ತಿದ್ದು “ ನಿಜ ಸ್ಥಿತಿ ಹೇಳಲೇನು? ನನ್ನಲ್ಲಿ ನನಗೆ ಏನೋ ಭಯವಾಗುತ್ತಿದೆ. ”

“ ಅದೆಂತಹ ಮಾತು, ನಿನ್ನಲ್ಲಿ ನಿನಗೆ ಯಾವ ಭಯ ? ”

“ ಇಷ್ಟು ದಿನ ನಾನು ಎಂತಹವಳೆಂದು ಮನಸ್ಸಿನಲ್ಲಿ ತಿಳಿದಿದ್ದೆನೋ ಅಂತಹವಳಲ್ಲವೆಂದು ಇವತ್ತು ಹಠಾತ್ತಾಗಿ ಅರಿವಾಗುತ್ತಿದೆ. ಮನಸ್ಸಿನಲ್ಲಿ ಎಲ್ಲವನ್ನೂ ಅಣಿಮಾಡಿಕೊಂಡು ನೆಮ್ಮದಿಯಾಗಿಯೇ ಬಂದಿದ್ದೆ. ಅಣ್ಣಂದಿರು ಓಂದುಮುಂದು ನೋಡುತ್ತಿದ್ದಾಗ ನೇರವಾಗಿಯೇ ಹೊಸ ಹಾದಿಯಲ್ಲಿ ಹೆಜ್ಜೆ ಇಟ್ಟಿದ್ದೆ. ಆದರೆ ಧೈರ್ಯವಾಗಿ ಹೊರಟ ವ್ಯಕ್ತಿಯನ್ನು ಇವತ್ತು ಎಲ್ಲೂ ಕಾಣುತ್ತಿಲ್ಲ ”

“ ನೀನು ದೊಡ್ಡ ಯಜಮಾನರನ್ನು ಪ್ರೀತಿಸಲಾಗುವುದಿಲ್ಲವೆಂದು ತಿಳಿಸುತ್ತೀಯೇನು ? ”

“ ಪ್ರೀತಿಸಬಲ್ಲೆ. ಮನಸ್ಸಿನಲ್ಲಿ ಎಲ್ಲವನ್ನೂ ನನ್ನ ರುಚಿಗೆ ಅನುಸಾರವಾಗುವಂತೆ ಮಾಡಿಕೊಳ್ಳುವುದು ಸಹಜವಾಗುವಂತೆ ಒಂದನ್ನು ತಂದಿದ್ದೆ. ಆರಂಭದಲ್ಲೇ ಅದನ್ನು ನಿಮ್ಮ ದೊಡ್ಡ ವೈದಂದಿರು ಚೂರು ಚೂರುಮಾಡಿ ಬಿಟ್ಟರು. ಇವತ್ತು ಎಲ್ಲ ವಸ್ತುವೂ ಕಠಿಣವಾಗಿ ನನಗೆ ನೋವನ್ನುಂಟ

ಮಾಡುತ್ತಿದೆ. ನನ್ನ ಮೈಮೇಲಿನ ಹೊದಿಕೆಯನ್ನು ಯಾರೋ ತೆಗೆದಂತೆ ಆಗಿದೆ. ಆದರಿಂದಲೇ ನಾಲ್ಕು ದಿಕ್ಕಿನಲ್ಲೂ ನನಗೆ ನೋವುಂಟಾಗುತ್ತಿದೆ. ಯಾವುದನ್ನು ಮುಟ್ಟಿಸಿದರೂ ಆಗಲೇ ಬೆಚ್ಚಿ ಬೀಳುತ್ತಿದ್ದೇನೆ. ಇನ್ನು ಮುಂದೆ ಜಡ್ಡು ಕಟ್ಟಿದ್ದಾದರೆ ಎಂದಾದರೊಂದು ದಿನ ಸಹಿಸಬಲ್ಲೆನೇನೋ. ಆದರೆ ಬಾಳುವೆಯಲ್ಲಿ ಎಂದೂ ಆನಂದ ಪಡೆಯಲಾರೆನೋ ಏನೋ."

"ಹಾಗೆ ಹೇಳಲಾಗುವುದಿಲ್ಲ ಅಕ್ಕಾ."

"ಚೆನ್ನಾಗಿ ಹೇಳಬಹುದು. ಇಂದು ನನ್ನ ಮನಸ್ಸಿನಲ್ಲಿ ಸ್ವಲ್ಪವಾದರೂ ಪ್ರೀತಿಯಿಲ್ಲ. ನನ್ನ ಬದುಕು ಸಂಪೂರ್ಣವಾಗಿ ಲಜ್ಜೆ ಇಲ್ಲದಿರುವಂತೆ ಸ್ಪಷ್ಟವಾಗಿಬಿಟ್ಟಿದೆ. ನನ್ನನ್ನು ಮರೆತುಬಿಡುವಂತಹ ಆಶ್ರಯ ಎಲ್ಲೂ ಉಳಿದಿಲ್ಲ. ಸಾವಲ್ಲಿದೆ ಹೆಂಗಸರಿಗೆ ಮತ್ತೆಲ್ಲೂ ನೆಮ್ಮದಿಯಿಂದ ಆಶ್ರಯಿಸುವ ಎಡೆಯೇ ಇಲ್ಲವೇನು? ಅವರ ಪ್ರಪಂಚವನ್ನು ನಿಷ್ಠುರವಾದ ಬ್ರಹ್ಮ ಇಷ್ಟು ಕಿಷ್ಕಿಂಥವಾಗಿ ಸೃಷ್ಟಿಸಿರುವನು."

ಇಷ್ಟುಕಾಲದಿಂದ ಕುಮುವಿನ ಬಾಯಿಂದ ಇಂತಹ ಉತ್ತೇಜಕರವಾದ ಮಾತುಗಳನ್ನು ಮೋತಿಯ ತಾಯಿ ಎಂದೂ ಕೇಳಿರಲಿಲ್ಲ. ವಿಶೇಷವಾಗಿ ತಾವುಗಳು ಇಂದು ಕುಮುವಿನ ಕಡೆಗೆ ದೊಡ್ಡ ಯಜಮಾನರ ಮನಸ್ಸನ್ನು ಇಷ್ಟು ತಿರುಗಿಸಿದ್ದಾಗಿದೆ. ಇಂದೇ ಕುಮುವಿನ ಈ ತೀವ್ರವಾದ ಅಧೈರ್ಯವನ್ನು ಕಂಡು ಮೋತಿಯ ತಾಯಿ ಹೆದರಿದಳು. ಬಳ್ಳಿಗೆ ಬೇರಿನಲ್ಲೇ ಪೆಟ್ಟು ತಗುಲಿದೆ ತೋಟಪವನು ಮೇಲಿಂದ ಅನುಗ್ರಹದ ನೀರನ್ನು ಹೊಯ್ದು ಇದನ್ನು ಮತ್ತೆ ಚಿಗುರಿಸುವುದು ಸಾಧ್ಯವಿಲ್ಲ ಎಂಬುದಾಗಿ ತಿಳಿದಳು.

ಸ್ವಲ್ಪ ಹೊತ್ತಾದ ಮೇಲೆ ಕುಮು "ಬಳ್ಳಿ, ಗಂಡನಲ್ಲಿ ಭಕ್ತಿಪೂರ್ವಕವಾಗಿ ಆತ್ಮಸಮರ್ಪಣೆ ಮಾಡಿಕೊಳ್ಳಲಿಲ್ಲ. ಇದು ನನ್ನ ಮಹಾಪಾಪ. ಆದರೆ ಆ ಪಾಪಕ್ಕಿಂತ ಹೆಚ್ಚಾಗಿ ಭಕ್ತಿಯಿಲ್ಲದ ಆತ್ಮಸಮರ್ಪಣೆಯ ಅಧೋಗತಿ ಸಂಗತಿಯನ್ನು ನೆನೆದರೆ ಆಗುವ ಭಯ ಅಷ್ಟಿಷ್ಟಲ್ಲ" ಎಂದಳು.

ಮೋತಿಯ ತಾಯಿ ಯಾವ ಉತ್ತರವನ್ನೂ ಹೇಳಲು ತೋರದೆ ದಿಕ್ಕುಗಾಣದವಳಂತೆ ಕುಳಿತಿದ್ದಳು. ಸ್ವಲ್ಪ ಹೊತ್ತು ಸುಮ್ಮನಿದ್ದು ಕುಮು

ಹೇಳಿದಳು. "ನಿನ್ನದು ಎಷ್ಟು ಒಳ್ಳೆಯ ಅದೃಷ್ಟ. ನೀನೆಷ್ಟು ಪುಣ್ಯ ಮಾಡಿದ್ದೀಯೋ, ಮೈದುನನನ್ನು ಮನಃಪೂರ್ವಕವಾಗಿ ಪ್ರೀತಿಸಲು ಸಾಧ್ಯವುಳ್ಳವಳಾಗಿರುವೆ. ಪ್ರೇಮ ಸಹಜವಾದುದು. ಪ್ರತಿಯೊಬ್ಬ ಹೆಂಗಸೂ ತನ್ನ ಗಂಡನನ್ನು ತಾನಾಗಿ ಪ್ರೀತಿಸುವಳು ಎಂದು ನಾನು ಎಣಿಸಿದ್ದೆ. ಇಂದು ಪ್ರೀತಿಸಲು ಸಾಧ್ಯವಾಗುವುದೇ ಎಲ್ಲಕ್ಕಿಂತಲೂ ಅಸಾಧ್ಯ. ಜನ್ಮಜನ್ಮಾಂತರದ ಸಾಧನೆಯಿಂದ ಅದು ಸಾಧ್ಯವಾಗುವುದು ಎಂದು ನನಗೆ ಅರಿವಾಗುತ್ತಿದೆ. ಇರಲಮ್ಮ ನಿಜ ಹೇಳು. ಎಲ್ಲ ಹೆಂಗಸರೂ ತಮ್ಮ ಗಂಡಂದಿರನ್ನು ಹೃತ್ಪೂರ್ವಕವಾಗಿ ಪ್ರೀತಿಸುವರೇನು ?

ಮೋತಿಯ ತಾಯಿ ನಸುನಕ್ಕು "ಹೃತ್ಪೂರ್ವಕವಾಗಿ ಪ್ರೀತಿಸದೆ ಇದ್ದರೂ ಒಳ್ಳೆಯ ಹೆಂಡತಿಯಾಗಿರಬಹುದು. ಇಲ್ಲದಿದ್ದರೆ ಸಂಸಾರ ಸಾಗುವುದಾದರೂ ಹೇಗೆ ?" ಎಂದಳು.

"ಆ ನಂಬಿಕೆಯನ್ನೇ ನನಗೂ ಕೊಡು. ಬೇರೆ ಏನು ಆಗದೆ ಹೋದರೂ ಒಳ್ಳೆಯ ಹೆಂಡತಿಯಾದರೆ ಸಾಕು. ಅದರಲ್ಲೇ ಪುಣ್ಯ ಹೆಚ್ಚು. ಅದೇ ಕಠಿಣವಾದ ಸಾಧನೆ."

"ಹೊರಗಿನಿಂದ ಅದಕ್ಕೂ ಅಡ್ಡಿಗಳು ಒದಗುತ್ತವೆ."

"ಒಳಗಿನಿಂದ ಆ ಅಡ್ಡಿಯನ್ನು ನಿಗ್ರಹಿಸಲು ಸಾಧ್ಯವಿದೆ. ನಾನು ನಿಗ್ರಹಿಸುವೆ. ನಾನು ಸೋಲನ್ನು ಒಪ್ಪಿಕೊಳ್ಳುವುದಿಲ್ಲ."

"ನಿನಗೇ ಅಸಾಧ್ಯವಾದರೆ ಬೇರೆ ಯಾರಿಂದ ಸಾಧ್ಯ ?"

ಮಳೆ ಬಲವಾಗಿ ಹುಯ್ಯತೊಡಗಿತು. ಗಾಳಿಗೆ ದೀಪದ ಸೊಡರು ಅಲುಗಾಡುತ್ತಿತ್ತು. ಬಿರುಸಾದ ಗಾಳಿ, ತೊಯ್ದ ನಿಶಾಚರ ಪಕ್ಷಿ ಸಿಕ್ಕಿ ಒದರಿಕೊಂಡು ಒಳಗೆ ನುಗ್ಗುವಂತೆ ಬೀಸುತ್ತಿತ್ತು. ಕುಮುವಿನ ತನು ಮನಗಳು ಥರಥರಗುಟ್ಟುತ್ತಿದ್ದುವು. ಅವಳು "ದೇವರ ನಾಮದಿಂದ ನನಗೆ ಶಕ್ತಿ ಉಂಟಾಗುತ್ತಿಲ್ಲ. ಮಂತ್ರ ಪಠಿಸಬಹುದು. ಮನಸ್ಸು ಮಾತ್ರ ಮುಖ ತಿರುವಿಕೊಂಡಿದೆ. ಯಾವ ವಿಧದಲ್ಲೂ ಓ ಕೊಡದು. ಆದರಿಂದಲೇ ಎಲ್ಲಕ್ಕಿಂತ ಹೆಚ್ಚು ಭಯ." ಎಂದುಕೊಂಡಳು.

ಕಲ್ಪಿತ ಮಾತುಗಳಿಂದ ಸುಳ್ಳು ಭರವಸೆ ಕೊಡಲು ಮೋತಿಯ ತಾಯಿಗೆ ಮನಸ್ಸಾಗಲಿಲ್ಲ. ಏನೂ ಪ್ರತಿ ಹೇಳದೆ ಅವಳು ಕುಮುವನ್ನು ಎದೆಗೆ ಅಪ್ಪಿಕೊಂಡಳು. ಈ ಸಮಯದಲ್ಲಿ ಹೊರಗಿನಿಂದ "ಕಿರಿಯ ಯಜಮಾನೀ!" ಎಂದು ಕೂಗು ಕೇಳಿಸಿತು.

ಕುಮು "ಬಾ! ಬಾರಪ್ಪ ಬಾ!" ಎಂದಳು.

ನವೀನನು ಒಳಗೆ ಬಂದನು.

"ಸಂಜೆಯ ವೇಳೆಯ ಕೋಣೆಯ ದೀವಿಗೆಯನ್ನು ಕೋಣೆಯಲ್ಲಿ ಕಾಣಲಿಲ್ಲ. ಅದರಿಂದಲೇ ಹುಡುಕುತ್ತ ಹೊರಟಿರುವೆ."

"ಅಬ್ಬಬ್ಬಾ, ಮಣಿ ಕಳೆದುಕೊಂಡ ಫಣಿ ಎಂದ ಹಾಗೆ"

"ಮಣಿ ಯಾವುದು, ಫಣಿ ಯಾರು ಎನ್ನುವುದನ್ನು ಚಕ್ರನಾಡಿ ನೋಡಿದರೇ ಗೊತ್ತಾಗುತ್ತೆ. ಏನು ಹೇಳುವೆ ಅತ್ತಿಗೆ?"

"ನನ್ನನ್ನು ಸಾಕ್ಷಿಯಾಗಿ ಕರೆಯಬೇಡಪ್ಪ."

"ಸರಿ, ಹಾಗಾದರೆ ನಾನು ಮೋಸಹೋಗುವೆ."

"ಹಾಗಾದರೆ ಕಣ್ಮರೆಯಾಗಿದ್ದ ಸಿರಿಯನ್ನು ಉದ್ಧಾರಮಾಡಿ ಎತ್ತಿಕೊಂಡು ಹೋಗು. ನಾನೇನೂ ಹಿಡಿದಿಟ್ಟುಕೊಳ್ಳಲಾರೆ."

"ಕಣ್ಮರೆಯಾದ ಮಣಿಗಾಗಿ ಅವರಿಗೆ ಅಂತಹ ಉತ್ಸಾಹವೇನೂ ಇಲ್ಲ. ಆ ನೆಪದಿಂದ ಅತ್ತಿಗೆಯ ಚರಣದರ್ಶನಮಾಡಿ ಹೋಗಬೇಕೆಂದು ಬಂದಿದಾರೆ."

"ನೆಪ ಹೂಡಬೇಕಾದ ಆವಶ್ಯಕತೆಯೇನಾದರೂ ಇದೆಯೇನು? ಚರಣ ತಾನಾಗಿಯೇ ಸಿಕ್ಕಿಕೊಂಡಿದೆಯಲ್ಲ. ಎಲ್ಲಕ್ಕಿಂತಲೂ ಅಸಾಧ್ಯವಾದುದು ಯಾವುದೋ ಅದಕ್ಕಾಗಿ ಸಾಧನೆ ಮಾಡುವವರು ತಾನೆ ಯಾರು? ಅದು ಒಲಿಯುವಾಗ ತಾನಾಗಿಯೇ ಒಲಿಯುವುದು. ಪ್ರಪಂಚದಲ್ಲಿ ಸಾವಿರಗಟ್ಲೆ ಜನರು ನನಗಿಂತ ಯೋಗ್ಯರಾದವರು ಇರುವರು. ಆದರೂ ಇಂತಹ ಸುಂದರ ಚರಣ ಕಮಲಗಳನ್ನು ನಾನೊಬ್ಬನೇ ಮುಟ್ಟಲು ಸಾಧ್ಯವಾಯಿತು. ನವೀನನ ಜನ್ಮ ಯಾವ ಖರ್ಚೂ ಇಲ್ಲದೆ ಸಾರ್ಥಕವಾಯಿತು."

"ಓ! ಏನು ಮಾತು ಇದು, ತುದಿ ಮೊದಲಿಲ್ಲ. ನಿನ್ನ ವಿಶ್ವಕೋಶ ದಿಂದ ಆರಿಸಿ ತೆಗೆದ ಹಾಗಿದೆ."

"ಅಂತಹ ಮಾತನ್ನು ಕಲಿಯಲು ಸಾಧ್ಯವಿಲ್ಲ ಅತ್ತಿಗೆ. ಚರಣ ಎನ್ನುವುದರ ಅರ್ಥವೇನು ಎನ್ನುವುದನ್ನೇ ಅವರುಗಳು ಹೇಗೆ ತಾನೆ ತಿಳಿಯಬಲ್ಲರು. ಆಡಿನ ಗೊರಸಿನಂತಹ ತೆಳ್ಳನೆಯ ಹಿಮ್ಮಡಿಯುಳ್ಳ ಪಾದರಕ್ಷೆಗಳಲ್ಲಿ ಗೃಹಲಕ್ಷ್ಮಿಯರ ಪಾದಗಳನ್ನು ಕಠಿಣವಾದ ಪಹರೆಯ ಘೋಷಾದಲ್ಲಿ ಅವರುಗಳು ಸೆರೆಯಿಟ್ಟಿರುವರು. ಪಾದಗಳ ಮಹಿಮೆ ಯನ್ನು ಅರಿಯಲು ವಿಶ್ವಕೋಶವನ್ನು ಬರೆಯುವವರಿಗೆ ಸಾಧ್ಯವೇನು ? ಲಕ್ಷ್ಮಣ ಹದಿನಾಲ್ಕು ವರ್ಷ ಕೇವಲ ಸೀತೆಯ ಪಾದಗಳನ್ನೇ ನೋಡುತ್ತ ವನವಾಸ ಕಳೆದುಬಿಟ್ಟನಂತೆ. ಅದರ ಅರ್ಥವನ್ನು ನಮ್ಮ ದೇಶದ ಮೈದುನದಿರು ಮಾತ್ರವೇ ಅರಿಯಬಲ್ಲರು. ಆ ಪಾದಗಳ ಮೇಲೆ ಸೀರೆ ಮುಚ್ಚಿಬಿಟ್ಟದ್ದರೆ ಇರಲಿ. ಹೆದರಬೇಕಾಗಿಯೇನೂ ಇಲ್ಲ. ಪದ್ಮಪುಷ್ಪವು ಸಂಜೆಯ ವೇಳೆಯಲ್ಲಿ ಮುಚ್ಚಿಕೊಂಡಿದ್ದ ಮಾತ್ರಕ್ಕೆ ಸದಾ ಮುಚ್ಚಿಕೊಂಡೇ ಇರುವುದಿಲ್ಲವಲ್ಲ. ಪುನಃ ಅದರ ದಳ ಅರಳವೆ ಇದ್ದೀತೆ ?"

"ತಂಗೀ. ಈ ರೀತಿಯಲ್ಲಿ ಸ್ತೋತ್ರಮಾಡಿಯೇ ಮೈದುನ ನಿನ್ನ ಮನಸ್ಸನ್ನು ಒಲಿಸಿಕೊಂಡಿರುವನೇನು ?"

"ಏನೂ ಇಲ್ಲ ಅಕ್ಕ. ಸಿಹಿಮಾತುಗಳನ್ನು ಹೆಚ್ಚಾಗಿ ಖರ್ಚುಮಾ ಡುವಂತಹ ಮನುಷ್ಯರೇ ಅವರಲ್ಲ."

"ಸ್ತೋತ್ರದ ಆವಶ್ಯಕತೆ ಇಲ್ಲವೆಂದು ಕಾಣುತ್ತೆ."

"ಅತ್ತಿಗೇ, ಸ್ತೋತ್ರದ ಹಸಿವು ದೇವಿಯರಿಗೆ ಎಂದಿಗೂ ಅಡಗದು. ಬೇಕಾದಷ್ಟು ಆವಶ್ಯಕತೆಯಿದೆ. ಆದರೆ ಶಿವನ ಹಾಗೆ ನಾನಂತೂ ಪಂಚಾ ನನನಲ್ಲ. ಈ ಒಂದು ಮುಖದ ಸ್ತೋತ್ರ ತಂಗಳಾಗಿ ಬಿಟ್ಟಿದೆ. ಇದರಲ್ಲಿ ಆಕೆಗೆ ರಸ ಏನೇನೂ ಸಿಕ್ಕುತ್ತಿಲ್ಲ."

ಈ ಸಮಯದಲ್ಲಿ ಮುರಲೀ ಬೋಯಿ ಬಂದವನು "ಮಹಾ ರಾಜರವರು ಹೊರಗಿನ ಆಫೀಸಿಗೆ ತಮ್ಮನ್ನು ಬರಹೇಳಿದರು" ಎಂದು ನವೀನನಿಗೆ ಸುದ್ದಿಕೊಟ್ಟನು.

ಇದನ್ನು ಕೇಳಿ ನವೀನನ ಮನಸ್ಸಿಗೆ ಹೇಗೋ ಆಯಿತು. ಮಧುಸೂದನ ಇಂದು ಆಫೀಸಿನಿಂದ ಹಿಂದಿರುಗಿ ನೆಟ್ಟಗೆ ಮಲಗುವ ಮನೆಗೆ ಹೋಗುವನೆಂದು ಅವನು ಎಣಿಸಿದ್ದ. ದೋಣಿ ಪುನಃ ದಡದಲ್ಲಿ ನಿಂತು ಬಿಟ್ಟಂತೆ ತೋರಿತು.

ನವೀನ ಹೊರಟು ಹೋಗಲು ಮೋತಿಯ ತಾಯಿ ಮೆಲ್ಲಮೆಲ್ಲನೆ "ದೊಡ್ಡ ಮೈದಂದಿರು ನಿನ್ನನ್ನು ಪ್ರೀತಿಸುತ್ತಾರೆ. ಈ ಮಾತನ್ನು ನೆನಪಿನಲ್ಲಿಡು" ಎಂದಳು.

ಕುಮು "ಅದೇ ಮತ್ತೆ ನನಗೆ ಆಶ್ಚರ್ಯವುಂಟುಮಾಡುತ್ತದೆ" ಎಂದಳು.

"ಏನಂದೆ! ನಿನ್ನನ್ನು ಪ್ರೀತಿಸುವುದರಲ್ಲಿ ಆಶ್ಚರ್ಯವೇನಿದೆ? ಅವರೇನು ಕಲ್ಲಿನ ವಿಗ್ರಹವೇನು?"

"ನಾನು ಅವರಿಗೆ ತಕ್ಕವಳಲ್ಲ."

"ನೀನು ಯಾರಿಗೆ ತಕ್ಕವಳಲ್ಲವೋ ಅಂತಹ ಗಂಡ ಎಲ್ಲಿರುವನು?"

"ಅವರಿಗೆ ಅದೆಂತಹ ಶಕ್ತಿ! ಅದೆಷ್ಟು ಸನ್ಮಾನ? ಎಷ್ಟು ತೀಕ್ಷ್ಣವಾದ ಬುದ್ಧಿ? ಅವರು ಅದೆಷ್ಟು ದೊಡ್ಡ ಮನುಷ್ಯರು? ನನ್ನಲ್ಲಿ ಅವರು ಏನು ತಾನೆ ಪಡೆಯಲು ಸಾಧ್ಯ? ನಾನು ಅದೆಷ್ಟು ಅನುಭವಹೀನಳು ಎನ್ನುವುದನ್ನು ಇಲ್ಲಿಗೆ ಬಂದ ಎರಡು ದಿನದಲ್ಲೇ ತಿಳಿದಿರುವೆ. ಅದರಿಂದಲೇ ಅವರು ಪ್ರೀತಿ ತೋರಿದಾಗ ನನಗೆ ಎಲ್ಲಕ್ಕಿಂತಲೂ ಹೆಚ್ಚಿನ ಭಯವಾಗುವುದು. ನಾನು ನನ್ನೊಳಗೆ ಏನನ್ನೂ ಕಾಣಲಾರದಿರುವೆ. ಇಷ್ಟು ವಿಶಾಲವಾದ ಶೂನ್ಯತೆಯೊಡನೆ ನಾನು ಹೇಗೆ ತಾನೆ ಅವರ ಸೇವೆ ಮಾಡಬಲ್ಲೆ. ನಿನ್ನೆ ರಾತ್ರಿ ಕುಳಿತಿದ್ದ ಹಾಗೆಯೇ, ನಾನು 'ನಾಟ್ ಪೆಯಿಡ್' ಕವರಿನಂತೆ ಇರುವೆ, ಬೆಲೆ ಕೊಟ್ಟು ನನ್ನನ್ನು ತೆಗೆದುಕೊಂಡಾಯಿತು. ಲಕ್ಕೋಟೆ ತೆರೆದೊಡನೆ ಒಳಗೆ ಕಾಗದವೇ ಇಲ್ಲವೆಂಬುದು ಪತ್ತೆಯಾಗಿ ಬಿಡುವುದು ಎಂದು ಮನಸ್ಸಿಗನ್ನಿಸಿತು."

"ಅಕ್ಕಾ, ಚೆನ್ನಾಗಿ ಹೇಳಿದೆ. ಹಿರಿಯ ಮೈದಂದಿರ ವ್ಯಾಪಾರ ಕ್ಷೇತ್ರ ಬಹಳ ವಿಶಾಲವಾದುದು. ವ್ಯವಹಾರ ಕುಶಲತೆಯಲ್ಲಿ ಅವರನು

ವಿಾರಿಸುವವರಿಲ್ಲ. ಈ ಮಾತನ್ನು ಎಲ್ಲರೂ ಬಲ್ಲರು. ಆದರೆ ನೀನೇನು ಅವರ ಕೋಠಿಯ ಮ್ಯಾನೇಜರ ಕೆಲಸವನ್ನು ಮಾಡಬಂದಿರುವೆಯೇನು? ಯೋಗ್ಯತೆಯಿಲ್ಲವೆಂದು ಹೆದರಬೇಕಾಗಿಲ್ಲ. ದೊಡ್ಡ ಯಜಮಾನರೇ ನಾದರೂ ಮನಬಿಚ್ಚಿ ಮಾತನಾಡಿದ್ದೇ ಆದರೆ ತಾವೂ ನಿನಗೆ ತಕ್ಕವರಲ್ಲ ವೆಂದೇ ಹೇಳುವರು."

"ಆ ಮಾತನ್ನು ಅವರು ನನ್ನ ಸಂಗಡ ಹೇಳಿಯೇ ಇದ್ದಾರೆ."

"ಆದರೆ ಅದರಲ್ಲಿ ನಂಬಿಕೆಯಾಗಲಿಲ್ಲ, ಅಲ್ಲವೆ?"

"ಇಲ್ಲ. ಪ್ರತಿಯಾಗಿ ನನಗೆ ಹೆದರಿಕೆಯಾಯಿತು. ನನ್ನ ವಿಷಯ ದಲ್ಲಿ ತಪ್ಪು ಮಾಡಿದರು. ಆ ತಪ್ಪು ತಿಳಿದು ಬಿಡುವುದು ಎಂದು ತೋರಿತು."

"ನಿನಗೆ ಹೀಗೆ ಯಾಕೆ ತೋರಿತು ಹೇಳು ನೋಡೋಣ?"

"ಹೇಳಲೆ? ಇದೇ. ನನಗೆ ಇದ್ದಕ್ಕಿದ್ದ ಹಾಗೆ ಮದುವೆಯಾಯಿತು. ಇದರಲ್ಲಂತೂ ಪೂರ್ತ ನಾನೇ ಮುಂದುವರಿದೆ. ಆದರೆ ಮೋಹ ಎಷ್ಟು ಅದ್ಭುತವಾದದ್ದು. ಅದು ಹುಡುಗಾಟಕ್ಕೆ ಅರ್ಹವಾದುದೇ. ಅದೆಷ್ಟರಿಂದ ಅಂದು ನನ್ನ ಮೈ ಮರೆಸಿತ್ತೊ ಅದರಲ್ಲಿ ಬಹು ಭಾಗ ಶೂನ್ಯವಾಗಿಯೇ ಇತ್ತು. ಆದರೂ ಅಷ್ಟೊಂದು ದೃಢವಾದ ನಂಬಿಕೆ, ಅಂತ ವಿಷಮ ಹಟ. ಅಂದು ನನ್ನ ಮನ ಬದಲಾಯಿಸುವಂತೆ ಮಾಡಲು ಯಾರಿಂದಲೂ ಸಾಧ್ಯವಾಗಲಿಲ್ಲ. ಅಣ್ಣನಂತೂ ನನ್ನ ದೃಢ ಮನಸ್ಸನ್ನು ತಿಳಿದಿದ್ದವ ರಾದ್ದರಿಂದ ವೃಥಾ ಅಡ್ಡಿ ಮಾಡಲಿಲ್ಲ. ಆದರೆ ಅದೆಷ್ಟು ಭಯಗೊಂಡಿ ದ್ದರು, ಅದೆಷ್ಟು ಉದ್ವಿಗ್ನರಾಗಿದ್ದರು ಎನ್ನುವುದನ್ನು ನಾನೇನು ಅರಿಯ ಲಾರದೆ ಇದ್ದೆನೇನು? ತಿಳಿದಿದ್ದೂ ನನ್ನ ಆವೇಶವನ್ನು ಸ್ವಲ್ಪವಾದರೂ ಅಡಗಿಸಲಿಲ್ಲ. ಇಷ್ಟು ದೊಡ್ಡ ತಿಳಿಗೇಡಿ ನಾನು. ಇಂದಿನಿಂದ ಕಡೆಯ ವರೆಗೆ ನಾನು ಕೇವಲ ಕಷ್ಟ ಪಡುವೆ ಮತ್ತು ಇನ್ನೊಬ್ಬರಿಗೆ ವೃಥಾ ಕಷ್ಟ ಕೊಡುವೆ. ಪ್ರತಿನಿತ್ಯವೂ ಇದೆಲ್ಲ ನನ್ನಿಂದಲೇ ಆದುದೆಂದು ಮನಸ್ಸಿನಲ್ಲಿ ತಿಳಿಯುತ್ತಿದ್ದೇನೆ."

ಮೋತಿಯ ತಾಯಿ, ಇವಳಿಗೆ ಏನು ಹೇಳಬೇಕೆಂಬುದು ತೋರದೆ ಕುಳಿತಿದ್ದಳು. ಸ್ವಲ್ಪ ಹೊತ್ತು ತೆಪ್ಪಗಿದ್ದು "ಒಳ್ಳೆಯದು ಅಕ್ಕಾ,

ನೀನು ಮದುವೆಯಾಗಲು ಮನಸ್ಸನ್ನು ಸ್ಥಿರಪಡಿಸಿದ್ದಾಗ ಏನು ಯೋಚಿಸಿದ್ದೆ ? ” ಎಂದಳು.

“ ಆಗ, ಗಂಡ ಒಳ್ಳೆಯವನೋ ಕೆಟ್ಟವನೋ ಏನೇ ಆಗಿರಲಿ, ಹೆಂಡತಿಯ ಸತೀತ್ವ, ಗೌರವವನ್ನು ತೂಗಿ ನೋಡುವುದರಲ್ಲಿ ಅವನು ಒಂದು ಸಾಧನ ಮಾತ್ರ ಎಂದು ದೃಢವಾಗಿ ತಿಳಿದಿದ್ದೆ. ಬ್ರಹ್ಮ ಯಾರನ್ನು ಗಂಡನೆಂದು ಗಂಟು ಹಾಕಿರುವನೋ ಅವರನ್ನೇ ಪ್ರೀತಿಸುವೆ ಎನ್ನುವ ವಿಷಯದಲ್ಲಿ ಎಳ್ಳಷ್ಟೂ ಸಂದೇಹವಿರಲಿಲ್ಲ. ಚಿಕ್ಕಂದಿನಿಂದ ಕೇವಲ ನಮ್ಮ ಅಮ್ಮನನ್ನು ನೋಡಿರುವೆ. ಪುರಾಣ ಓದಿರುವೆ. ಹರಿಕಥೆ ಕೇಳಿರುವೆ. ಶಾಸ್ತ್ರಗಳ ಅನುಸಾರ ನಡೆದುಕೊಳ್ಳುವುದು ಬಹಳ ಸುಲಭ ಎಂದು ಮನಸ್ಸಿಗೆ ಅನ್ನಿಸಿತ್ತು. ”

“ ಅಕ್ಕಾ, ಹತ್ತೊಂಭತ್ತು ವರ್ಷದ ಕುಮಾರಿಗಾಗಿ ಶಾಸ್ತ್ರ ಬರೆದಿಲ್ಲ. ”

“ ಈಗ ಅರಿವಾಯಿತು. ಸಂಸಾರದಲ್ಲಿ ಪ್ರೀತಿ ಕೊಸರಾಗಿ ಸಿಕ್ಕುವಂಥಾದ್ದು. ಅದನ್ನು ಬದಿಗಿಟ್ಟೇ ಧರ್ಮವನ್ನು ಅನುಸರಿಸಿ ಸಂಸಾರ ಸಾಗರದಲ್ಲಿ ಈಜಬೇಕಾಗಿದೆಯೆನ್ನುವುದೂ ಸುಳ್ಳಲ್ಲ, ನಿಜ. ಧರ್ಮ ಒಂದು ವೇಳೆ ರಸಪುಷ್ಟಿಗೊಂಡು ಹೂ ಬಿಡದಿದ್ದರೂ, ಹಣ್ಣು ಕೊಡದಿದ್ದರೂ ಒಣಗಿದ ಕಟ್ಟಿಗೆಯಾಗಿ ತೇಲಿಸುವುದು. ”

ಮೋತಿಯ ತಾಯಿ ತಾನು ಹೆಚ್ಚಾಗಿ ಏನೂ ಹೇಳದೆ ಕುಮುದಿನಿ ಬಾಯಿಂದ ಮಾತು ಕೇಳುತ್ತಿದ್ದಳು.

೪೫

ಮಧುಸೂದನ ಆಫೀಸಿಗೆ ಹೋದೊಡನೆ ಪರಿಸ್ಥಿತಿ ಚೆನ್ನಾಗಿಲ್ಲವೆಂದು ತಿಳಿಯಿತು. ಮದರಾಸಿನ ದೊಡ್ಡ ಬ್ಯಾಂಕೊಂದು ದಿವಾಳಿಯಾಗಿತ್ತು. ಆ ಬ್ಯಾಂಕಿನೊಡನೆ ಇವರ ಲೇವಾದೇವಿ ಇತ್ತು. ಸಾಲದುದಕ್ಕೆ ಯಾರೋ ಒಬ್ಬರು ಡೈರೆಕ್ಟರ ಕಡೆಯವರೆಂದೂ ಒಬ್ಬಿಬ್ಬರು ಕೆಲಸದವರು ಮಧುಸೂದನನ ಅರಿವಿಲ್ಲದೆ ಲೆಕ್ಕಪತ್ರಗಳನ್ನು ಪರೀಕ್ಷಿಸುತ್ತಿರುವರೆಂದೂ ತಿಳಿಯ ಬಂದಿತ್ತು. ಇಲ್ಲಿಯವರೆಗೆ ಯಾರೂ ಮಧುಸೂದನನಲ್ಲಿ ಸಂದೇಹಪಡುವ ಎದೆಗಾರಿಕೆಯನ್ನು ತೋರಿರಲಿಲ್ಲ. ಒಬ್ಬ ಹಿಡಿದನೋ ಇಲ್ಲವೋ ಆತನ ಮಂತ್ರಶಕ್ತಿಯೇ ಮಾಯವಾದಂತಾಯಿತು. ದೊಡ್ಡ ದೊಡ

ಕೇಸಗಳಲ್ಲಿ ಸಣ್ಣ ಸಣ್ಣ .ತಪ್ಪುಗಳನ್ನು ಹಿಡಿಯುವುದು ಸಹಜವಾದ ಕೆಲಸ. ನುರಿತ ಸೇನಾಪತಿಯಾದವರು ಸಣ್ಣ ಪುಟ್ಟ ಸೋಲುಗಳ ಮೂಲಕವೇ ಕೊನೆಗೆ ಗೆಲ್ಲುವರು. ಮಧುಸೂದನ ಒಂದೇ ಸಮನಾಗಿ ಹೀಗೆ ಜಯಪಡೆಯುತ್ತ ಬಂದಿದ್ದ. ಆದರಿಂದಲೇ ಹುಡುಕಿ ಹುಡುಕಿ ಸಣ್ಣಪುಟ್ಟ ತಪ್ಪುಗಳು ಯಾರ ಕಣ್ಣಿಗೂ ಬೀಳುತ್ತಿರಲಿಲ್ಲ. ಆದರೆ ಆರಿಸಿ ಆರಿಸಿ ಅವುಗಳನ್ನೇ ಒಂದು ಪಟ್ಟಿಮಾಡಿ ಸಾಮಾನ್ಯ ಜನರ ಕಣ್ಣೆದಿರಿನಲ್ಲಿ ಹಿಡಿದರೆ ಅವರು ಇವನ ಬುದ್ಧಿಯನ್ನು ಹೊಗಳುವರು. ಹೀಗೆಂದು ನಾವುಗಳಾಗಿದ್ದರೆ ಇಂತಹ ತಪ್ಪು ಮಾಡೆವು. ಮಧುಸೂದನ ಮುರುಕಲು ದೋಣಿಯಲ್ಲೇ ಹೊಳೆ ದಾಟಿರುವನು. ಇಲ್ಲದಿದ್ದರೆ ದಾಟುವುದೆನ್ನುವುದು ಆಗುತ್ತಲೇ ಇರಲಿಲ್ಲ. ಮುಖ್ಯ ವಿಷಯ ದಡಸೇರಿರುವುದು—ಎಂದು ಅವರಿಗೆ ಅರಿವು ಉಂಟುಮಾಡುವವರಾದರೂ ಯಾರು ? ಇಂದು ನಾವೆಯನ್ನು ದಿಣ್ಣೆಯ ಮೇಲಕ್ಕೆಳೆದು ರಂಧ್ರಗಳನ್ನು ಪರೀಕ್ಷಿಸುವ ಕಾಲದಲ್ಲಿ ನೆಮ್ಮದಿಯಾಗಿ ಘಟ್ಟಕ್ಕೆ ಬಂದು ಯಾರು ಮುಟ್ಟಿರುವರೋ ಅವರ ಮೈ ರೋಮಾಂಚಗೊಳ್ಳುತ್ತಿದೆ. ಈ ಬಗೆಯ ಕ್ಷುದ್ರ ವಿಮರ್ಶೆಯನ್ನು ಕಟ್ಟಿಕೊಂಡು ಹೆಣಗುತ್ತಿರುವುದು ಕ್ಷುದ್ರಮನಸ್ಕರಿಗೆ ಮಾತ್ರ ಸಹಜ. ಸಾಮಾನ್ಯವಾಗಿ ಅವರು ಆಶಿಸುವ ಸೌಕರ್ಯವಾದರೂ ಇಷ್ಟೆ. ಆ ಮೂಲಕ ಅವರು ಲಾಭಹೊಂದ ಬಯಸುವರು. ಯೋಚಿಸಬಯಸರು. ಆದರೆ ದೈವವಶದಿಂದ ಅವರುಗಳೇನಾದರೂ ಕುಳಿತು ಆಲೋಚನೆ ಮಾಡತೊಡಗಿದರೆಂದರೆ ಆಗ ಪ್ರಾಣಾಪಾಯಕಾರಕರಾಗುವರು. ಆದರೆ ಮೂರ್ಖರಿಗೆ ಎಲ್ಲಿ ಪ್ರಾಧಾನ್ಯವಿದೆಯೋ ಅಲ್ಲಿ ಅವರ ಸಂಗಡ ನೀಸಬೇಕಲ್ಲದೆ ಬೇರೆ ಗತಿಯೇ ಇಲ್ಲ-ಹಳೆಯದಾದ ಏಣಿಯ ಲಟಪಟ ಶಬ್ದ ಏಣಿ ಮುರಿಯುವ ಭಯವನ್ನುಂಟುಮಾಡುವುದು. ಅದರ ಮೇಲೆ ಹತ್ತಿರುವ ವ್ಯಕ್ತಿ ಕಾಲಿನಡಿಯ ಈ ಆಧಾರವನ್ನು ಕುರಿತು ಎಚ್ಚರಿಕೆಯಿಂದ ನಡೆದುಕೊಳ್ಳಲೇಬೇಕು. ಕೋಪಗೊಂಡು ಒದೆಯಬೇಕೆಂದು ಮನಸ್ಸಾಗಬಹುದು; ಆಗ ಅದರಿಂದ ಮತ್ತೂ ಹೆಚ್ಚು ತೊಂದರೆ... 

ಮರಿಗಳಿಗೆ ಆಪತ್ತು ಉಂಟಾಗುವ ಸಂಭವ ಕಂಡರೆ ಹೆಣ್ಣುಸಿಂಹ ತನ್ನ ಆಹಾರದ ಆಸೆ ಮರೆತು ಬಿಡುವುದು. ತನ್ನ ವೃತ್ತಿಯ ವಿಷಯ

ದಲ್ಲಿ ಮಧುಸೂದನನಿಗೂ ಅದೇ ರೀತಿಯ ಮನಸ್ಥಿತಿಯಿತ್ತು. ಇದು ಅವನ ಸ್ವಂತ ಕಲ್ಪನೆ. ಇದರ ವಿಷಯದಲ್ಲಿ ಅವನಿಗಿದ್ದ ಆಸಕ್ತಿ ಕೇವಲ ಹಣದ ಆಸಕ್ತಿ ಮಾತ್ರವಲ್ಲ. ರಚನಾತ್ಮಕ ಶಕ್ತಿಯುಳ್ಳವರು ಅಪಾರ ವಾದ ಆತ್ಮ ವಿಶ್ವಾಸವನ್ನುಳ್ಳವರು. ಆ ವಿಷಯಕ್ಕೆ ಧಕ್ಕೆ ತಾಕುವ ಸಂದರ್ಭ ತಲೆದೋರಿದರೆ ಆಗ ತಮ್ಮ ಜೀವನದ ಉಳಿದ ಎಲ್ಲ ಸುಖ ದುಃಖಗಳೂ ಆಸೆ ಆಕಾಂಕ್ಷೆಗಳೂ ತುಚ್ಛವಾಗಿ ಬಿಡುವವು. ಕೆಲವು ದಿನ ಗಳಿಂದೀಚೆಗೆ, ಮಧುಸೂದನನನ್ನು ಕುಮು ಬಹು ಆಕರ್ಷಿಸಿದ್ದಳು. ಅದು ಅಕಸ್ಮಾತ್ತಾಗಿ ಕತ್ತರಿಸಿ ಹೋಯಿತು. ಬಾಳುವೆಯಲ್ಲಿ ಪ್ರೀತಿಸುವುದರ ಪ್ರಯೋಜನವನ್ನು ಮಧುಸೂದನ ಈ ಪ್ರೌಢ ವಯಸ್ಸಿನಲ್ಲಿ ಹೆಚ್ಚಿನ ಆವೇಶದೊಡನೆ ಅನುಭವಿಸಿದ್ದ. ಈ ಉಪಸರ್ಗ ಅಕಾಲದಲ್ಲಿ ಕಾಣಿಸಿ ಕೊಂಡುದಾದರೆ ಆಗ ಪ್ರಬಲವಾಗಿಯೇ ಬೆಳೆಯುವುದು. ಮಧುಸೂದನ ನಿಗೆ ಈ ತಿವಿತ ಕಡಮೆಯಾಗೇನೂ ತಾಕಿರಲಿಲ್ಲ. ಆದರೆ ಇಂದು ಅವನ ವೇದನೆ ಎತ್ತಹೋಯಿತು ?

ನವೀನ ಕೋಣೆಯೊಳಗೆ ಬಂದೊಡನೆ ಮಧುಸೂದನ "ನನ್ನ ಸ್ವಂತ ಜಮಾಖರ್ಚಿನ ಖಾತೆ ಬೇರೆ ಯಾರ ಕೈಗಾದರೂ ಸಿಕ್ಕಿತ್ತೆ ? ನಿನಗೇನಾದರೂ ತಿಳಿದಿದೆಯೇ ?" ಎಂದು ವಿಚಾರಿಸಿದ.

ನವೀನ ಬೆಚ್ಚಿಬಿದ್ದು "ಅದೆಂತಹ ಮಾತು ?" ಎಂದ.

"ಲೆಕ್ಕ ನೋಡುವ ಮುತ್ಸದ್ದಿಯ ಕೋಣೆಯಲ್ಲಿ ಯಾರಾದರೂ ಬಂದು ಹೋಗುತ್ತಿರುವರೇ ಎನ್ನುವುದನ್ನು ನೀನು ಕಂಡು ಹಿಡಿಯಲೇ ಬೇಕು."

"ರತೀಕಾಂತ ವಿಶ್ವಾಸಪಾತ್ರ, ಅವನೇನು ಎಂದಾದರೂ—"

"ಅವನಿಗೆ ಗೋಚರವಿಲ್ಲದೆ ಗುಮಾಸ್ತೆಯರ ಸಂಗಡ ಯಾರೋ ಮಾತುಕತೆ ನಡೆಸುತ್ತಿರುವರೆಂಬ ಸಂದೇಹಕ್ಕೆ ಕಾರಣವಿದೆ. ಇದನ್ನು ಬಹಳ ಎಚ್ಚರಿಕೆಯಿಂದ ಕಂಡುಹಿಡಿಯಬೇಕಾಗಿದೆ."

ಕೆಲಸದವನು ಬಂದು ಊಟ ತಣ್ಣಗಾಗುತ್ತಿದೆ ಎಂದ. ಮಧು ಸೂದನ ಆ ಮಾತಿಗೆ ಕಿವಿಗೊಡದೆಯೇ "ಶೀಘ್ರದಲ್ಲಿ ನನ್ನ ಗಾಡಿ ಸಿದ್ಧ ಪಡಿಸಿಕೊಂಡು ತರ ಹೇಳು" ಎಂದು ನವೀನನಿಗೆ ಹೇಳಿದ.

“ ಊಟಮಾಡಿ ಹೊರಗೆ ಹೋಗುವುದಿಲ್ಲವೆ ? ರಾತ್ರಿ ಹೊತ್ತಾಗುತ್ತಿದೆ. ”

“ ಹೋದ ಕಡೆಯೇ ಊಟಮಾಡುವೆ. ಬಹಳ ಕೆಲಸವಿದೆ. ”

ನವೀನ ತಲೆ ತಗ್ಗಿಸಿಕೊಂಡು ಯೋಚಿಸುತ್ತ, ಯೋಚಿಸುತ್ತ ಹೊರಟು ಹೋದ. ಅವನು ಹೂಡಿದ್ದ ತಂತ್ರ ಉಪಯೋಗವಾಗಲಿಲ್ಲವೇನೋ ಎಂದು ಅಂದುಕೊಂಡ.

ಹಠಾತ್ತಾಗಿ ಮಧುಸೂದನ ನವೀನನನ್ನು ಹಿಂದಕ್ಕೆ ಕರೆದು “ ಈ ಕಾಗದವನ್ನು ಕುಮುವಿಗೆ ಕೊಟ್ಟು ಬಾ ” ಎಂದ.

ನವೀನನಿಗೆ ಅದು ವಿಪ್ರದಾಸನ ಕಾಗದವೆಂದು ಕಂಡುಬಂತು. ಈ ಕಾಗದ ಇವತ್ತು ಬೆಳಗ್ಗೆಯೇ ಬಂದಿದೆ. ಸಂಜೆಯಲ್ಲಿ ತನ್ನ ಕೈಯಾರ ಕುಮುವಿಗೆ ಕೊಡಬೇಕೆಂದು ಮಧುಸೂದನ ಇಟ್ಟುಕೊಂಡಿದ್ದ. ಇದೇ ರೀತಿಯಲ್ಲಿ ಪ್ರತಿಯೊಂದು ಬಾರಿಯೂ ಭೇಟಿಯಾಗುವಾಗ ಯಾವುದಾದರೊಂದು ಅನರ್ಘ್ಯವಾದ ಪದಾರ್ಥವನ್ನು ತಂದು ಕುಮುವಿಗೆ ಒಪ್ಪಿಸಬೇಕೆಂದು ಅವನ ಬಯಕೆ. ಇಂದು ಆಫೀಸಿನ ಕೆಲಸದಲ್ಲಿ ಹಠಾತ್ತಾಗಿ ಬಿರುಗಾಳಿ ಎದ್ದು ಅವನ ಈ ಆದರದ ಏರ್ಪಾಡು ಮುಳುಗಿಹೋಯಿತು.

ಮದರಾಸಿನಲ್ಲಿ ಯಾವ ಬ್ಯಾಂಕು ದಿವಾಳಿಯಾಯಿತೋ ಅದರ ಮೇಲೆ ಜನ ಸಾಮಾನ್ಯರಿಗೆ ದೃಢವಾದ ನಂಬಿಕೆಯಿತ್ತು. ಅದರೊಡನೆ ಘೋಷಾಲ್ ಕಂಪನಿಯ ಸಂಬಂಧವಿತ್ತು, ಆ ವಿಷಯವಾಗಿ ಅಧ್ಯಕ್ಷರಲ್ಲಿ ಅಥವಾ ಪಾಲುದಾರರಲ್ಲಿ ಯಾರಿಗೂ ಎಷ್ಟು ಮಾತ್ರವೂ ಸಂದೇಹವಿರಲಿಲ್ಲ. ಆದರೆ ಯಂತ್ರ ಯಾವಾಗ ಪದಗೆಟ್ಟಿತೋ ಆ ಕ್ಷಣ ಯಾರೆಂದರೆ ಅವರು “ ಹೀಗಾಗುವುದೆಂದು ನಾವುಗಳು ಮುಂಚೆಯೇ ತೀರ್ಮಾನಿಸಿದ್ದೆವು ” ಎಂದು ಮಾತನಾಡಲಾರಂಭಿಸಿದರು.

ಅಪಾಯಕರವಾದ ಹೊಡೆತದ ಸಮಯದಲ್ಲಿ, ವ್ಯಕ್ತಿಯನ್ನು ಸರ್ವಪ್ರಯತ್ನದಿಂದ ರಕ್ಷಿಸುವ ಪ್ರಯತ್ನ ಮಾಡಬೇಕಾಗಿರುವಾಗ ಆಗಲೇ ಪರಾಭವದ ವಿಷಯದಲ್ಲಿ ದೋಷಾರೋಪಣೆ ಪ್ರಬಲವಾಗಿರುವುದು ; ಅದರೊಡನೆ ಯಾರ ಮೇಲೆ ಬಲವಾಗಿ ಹೊಟ್ಟೆಯುರಿಯಿರುವುದೋ

ಅವರನ್ನು ನಿರ್ಮೂಲಮಾಡುವ ಪ್ರಯತ್ನದಲ್ಲಿ ಆ ವೃತ್ತಿಯನ್ನು ನೆಲ ಸಮ ಮಾಡಲಾಗುವುದು. ಇದೇ ಬಗೆಯ ಪ್ರಯತ್ನ ನಡೆದೀತೆಂದು ಮಧುಸೂದನ ತಿಳಿದೇ ಇದ್ದ. ಮದರಾಸಿನ ಬ್ಯಾಂಕು ದಿವಾಳಿ ಎದ್ದುದ ರಿಂದ ಘೋಷಾಲ್ ಕಂಪೆನಿಗೆ ಎಷ್ಟು ನಷ್ಟವಾಗಿದೆ ಎನ್ನುವುದನ್ನು ತಿಳಿ ಯುವ ಸಮಯ ಇನ್ನೂ ಒದಗಿರಲಿಲ್ಲ, ಆದರೆ ಮಧುಸೂದನನ ಗೌರವ ವನ್ನು ನೆಲಸಮ ಮಾಡುವ ಪ್ರಯತ್ನದಲ್ಲಿ ಇದೂ ಒಂದು ಆಯುಧವಾಗಿ ಒದಗುವುದೆನ್ನುವ ವಿಷಯದಲ್ಲಿ ಸಂದೇಹವೇ ಇರಲಿಲ್ಲ. ಏನೇ ಆಗಲಿ, ಕಾಲ ಕೆಟ್ಟಿದೆ, ಈಗ ಉಳಿದ ಸಂಗತಿಯೆಲ್ಲವನ್ನೂ ಮರೆತು ಈ ವಿಷ ಯಕ್ಕೇ ಮಧುಸೂದನ ಸೊಂಟಕಟ್ಟಿ ನಿಲ್ಲಬೇಕಾಗಿದೆ.

ರಾತ್ರಿ ಮಧುಸೂದನನ ಸಂಗಡ ಮಾತು ಕತೆ ನಡೆದ ಅನಂತರ ನವೀನ ಹಿಂದಿರುಗಿ ಬಂದಾಗ ಕುಮುವಿನೊಡನೆ ಮೋತಿಯಮಾಯಿ ಮಾತನಾಡುತ್ತಲೇ ಇದ್ದುದನ್ನು ಕಂಡ. ನವೀನ "ಅತ್ತಿಗೇ, ನಿಮ್ಮ ಅಣ್ಣನವರಿಂದ ಕಾಗದ ಬಂದಿದೆ" ಎಂದ.

ಕುಮು ಬೆಚ್ಚಿ ಎದ್ದು ಕಾಗದ ತೆಗೆದುಕೊಂಡಳು. ಬಿಚ್ಚಿ ನೋಡಲು ಕೈ ನಡುಗಲಾರಂಭಿಸಿತು. ಏನಾದರೂ ಅಪ್ರಿಯವಾದ ಸುದ್ದಿ ಇದ್ದೀತೋ ಎಂದು ಭಯವಾಯಿತು. ಹಾಗಿದ್ದರೆ ಈಗ ಬರುತ್ತಲೇ ಇರಲಿಲ್ಲ. ಬಹಳ ನಿಧಾನವಾಗಿ ಲಕ್ಕೋಟೆ ತೆರೆದು ಓದಿನೋಡಿದಳು. ಸ್ವಲ್ಪ ಹೊತ್ತು ತೆಪ್ಪ ನಿದ್ದಳು. ಮುಖನೋಡಲು ಎಲ್ಲಿಯೋ ವ್ಯಥೆ ಉಂಟುಮಾಡಿದೆ ಎಂದು ಮನಸ್ಸಿಗೆ ತೋರುತ್ತಿತ್ತು. ನವೀನನೊಡನೆ "ಇವತ್ತು ಮಧ್ಯಾಹ್ನ ಮೂರು ಘಂಟೆಗೆ ಅಣ್ಣ ಕಲ್ಕತ್ತೆಗೆ ಬಂದರು." ಎಂದಳು.

"ಇವತ್ತೇ ಬಂದು ಬಿಟ್ಟರೇನು ; ಅವರು ಮತ್ತೆ."

"ಒಂದೆರಡು ದಿವಸಗಳ ಅನಂತರ ಬರುವ ಮಾತಿತ್ತು. ಆದರೆ ವಿಶೇಷ ಕಾರಣದಿಂದ ಇವತ್ತೇ ಬರಬೇಕಾಯಿತು ಎಂದು ಬರೆದಿರುವರು."

ಕುಮು ಬೇರೆ ಏನೂ ಹೇಳಲಿಲ್ಲ. ಕಾಗದದ ಕೊನೆಯಲ್ಲಿ ಸ್ವಲ್ಪ ಆರೋಗ್ಯವಾದೊಡನೆ ವಿಪ್ರದಾಸ ಕುಮುವನ್ನು ಬಂದು ನೋಡುವನೆಂದೂ ಅದಕ್ಕಾಗಿ ಕುಮು ತಲ್ಲಣಗೊಳ್ಳುವುದಾಗಲೀ, ಆತುರಪಡುವುದಾಗಲೀ ಕೂಡದೆಂದೂ ಬರೆದಿತ್ತು. ಹಿಂದಿನ ಕಾಗದದಲ್ಲೂ ಈ ಮಾತೇ ಇತ್ತು.

ಯಾಕೆ ? ಏನಾಯಿತು ? ಕುಮು ಮಾಡಿದ ಅಪರಾಧವೇನು ? ಇದು ಒಂದು ವಿಧದಲ್ಲಿ ನೀನು ನಮ್ಮ ಮನೆಗೆ ಬರಬೇಡ ಎಂದು ಸ್ಪಷ್ಟವಾಗಿ ಹೇಳಿದಂತಲ್ಲವೆ ? ನೆಲದ ಮೇಲೆ ಬಿದ್ದುಕೊಂಡು ಹೊರಳಾಡಿ ಅಳ ಬೇಕೆಂದು ಮನಸ್ಸಾಯಿತು. ಅಳು ಅಡಗಿಸಿಕೊಂಡು ಕಲ್ಲಿನಂತೆ ಕಠಿಣ ವಾಗಿ ಕುಳಿತಿದ್ದಳು.

ಕಾಗದದಲ್ಲಿ ಕಠಿಣವಾದ ಸುದ್ದಿ ಏನೋ ಇದೆಯೆಂದು ನವೀನ ತಿಳಿದ. ಕುಮುವಿನ ಮುಖ ನೋಡಿ ಕರುಣೆಯಿಂದ ಅವನ ಮನಸ್ಸು ವ್ಯಥೆಗೊಂಡಿತು. "ಅತ್ತಿಗೇ, ಅವರ ಹತ್ತಿರಕ್ಕೆ ನೀನು ನಾಳೆಯೇ ಹೋಗಬೇಕು" ಎಂದ.

"ಇಲ್ಲ, ನಾನು ಹೋಗುವುದಿಲ್ಲ" ಎಂದು ಹೇಳಿ, ಕೂಡಲೇ ದುಃಖ ತಡೆಯಲಾರದೆ ಎರಡು ಕೈಗಳಿಂದಲೂ ಮುಖ ಮುಚ್ಚಿಕೊಂಡು ಅಳ ತೊಡಗಿದಳು.

ಮೋತಿಯ ತಾಯಿ ಯಾವ ಪ್ರಶ್ನೆಯನ್ನೂ ಕೇಳದೆ ಕುಮುವನ್ನು ಎದೆಯ ಹತ್ತಿರಕ್ಕೆ ಎಳೆದುಕೊಂಡಳು. ಕುಮು ಬಿಗಿದ ಕೊರಲಿನಲ್ಲಿ "ಅಣ್ಣ ನನ್ನನ್ನು ಬರಬೇಡವೆಂದು ಬರೆದಿರುವರು" ಎಂದಳು.

ನವೀನ "ಇಲ್ಲ, ಇಲ್ಲ ಅತ್ತಿಗೆ, ನೀನು ತಪ್ಪು ತಿಳಿದಿರುವೆ" ಎಂದ.

ಕುಮು ಬಲವಾಗಿ ತಲೆ ಕೊಡವಿ, ತಾನು ಖಂಡಿತವಾಗಿಯೂ ತಪ್ಪು ತಿಳಿದಿಲ್ಲವೆಂದು ಒತ್ತಿ ಹೇಳಿದಳು.

ನವೀನ "ನೀನು ಯಾವೆಡೆಯಲ್ಲಿ ತಪ್ಪಾಗಿ ಅರ್ಥಮಾಡಿಕೊಂಡಿ ರುವೆ ಹೇಳಲೆ ? ವಿಪ್ರದಾಸ ಬಾಬುಗಳು, ನಮ್ಮ ಅಣ್ಣ ನಿನ್ನನ್ನು ಅವರ ಮನೆಗೆ ಹೋಗುವುದಕ್ಕೆ ಬಿಡುವುದಿಲ್ಲ. ನೀನು ಹೋಗಲೆತ್ನಿಸಿದರೆ ನಿನ್ನನ್ನು ಅವಮಾನಗೊಳಿಸಿಯಾರು, ನಿನಗೆ ದುಃಖವಾಗುವುದು, ಎಂದು ಬಗೆ ದಿರುತ್ತಾರೆ. ಅದರಿಂದ ನಿನ್ನ ದಾರಿಗೆ ಅವರು ಅಡ್ಡಿ ಬಂದಿಲ್ಲ, ಅಷ್ಟೆ" ಎಂದನು.

ಕುಮು ಮುಹೂರ್ತ ಮಾತ್ರದಲ್ಲಿ ಗಾಢವಾಗಿ ನೆಮ್ಮದಿ ಪಡೆದಳು. ತನ್ನ ತೊಯ್ದ ಕಣ್ಣುಗಳ ರೆಪ್ಪೆಗಳನ್ನು ಮುಚ್ಚದೆ ನವೀನನ ಮುಖವನ್ನು

ನಷ್ಟದೃಷ್ಟಿಯಿಂದ ನೋಡುತ್ತಿದ್ದಳು. ನವೀನನ ಮಾತು ಸಂಪೂರ್ಣವಾಗಿ ಸತ್ಯವೆನ್ನಲು ಏನೇನೂ ಸಂದೇಹವಿರಲಿಲ್ಲ. ಅಣ್ಣನ ಪ್ರೀತಿಯನ್ನು ಕ್ಷಣಮಾತ್ರವಾದರೂ ತಪ್ಪಾಗಿ ತಿಳಿದುಕೊಂಡೆನಲ್ಲಾ ಎಂದು ವ್ಯಥೆಪಟ್ಟಳು. ಮನಸ್ಸಿನಲ್ಲಿ ಒಂದು ಹುಮ್ಮಸ್ಸು ಉಕ್ಕಿತು. ಈ ಕ್ಷಣವೇ ಅಣ್ಣನ ಬಳಿಗೆ ಓಡಿ ಹೋಗದೆ ಅಣ್ಣ ಬರುವತನಕ ಅವಳು ನಿರೀಕ್ಷಿಸಬಲ್ಲವಳಾಗಿದ್ದಳು. ಅದೇ ಉತ್ತಮವೆನಿಸಿತ್ತು.

ಮೋತಿಯತಾಯಿ ಗಲ್ಲಹಿಡಿದುಕೊಂಡು ಕುಮುವಿನ ಮುಖ ಎತ್ತಿ ಹಿಡಿದು "ಚೆನ್ನಾಯಿತು, ಅಣ್ಣನ ಮಾತಿನಲ್ಲಿ ಸ್ವಲ್ಪ ಅಡ್ಡಗಾಳಿ ಬೀಸಿದ ಮಾತ್ರಕ್ಕೆ ಒಮ್ಮೆಗೇ ದುಗುಡದ ಸಮುದ್ರ ಉಬ್ಬಿ ಬಿಡುತ್ತದಲ್ಲ" ಎಂದಳು.

ನವೀನ "ಅತ್ತಿಗೇ, ಹಾಗಾದರೆ ನಾಳೆ ನೀನು ಹೊರಡಲು ಬೇಕಾದ ಏರ್ಪಾಡು ಮಾಡುತ್ತೇನೆ." ಎಂದನು.

"ಬೇಡ, ಈಗೇನೂ ಆವಶ್ಯಕವಿಲ್ಲ."

"ಆವಶ್ಯಕವಿಲ್ಲವೆ ಏನು? ನಿನಗೆ ಆವಶ್ಯಕವಿಲ್ಲದಿದ್ದರೂ ಇರಬಹುದು. ಆದರೆ ನನಗೆ ಆವಶ್ಯಕವಾಗಿದೆ."

"ನಿನಗೆ ಇನ್ನು ಯಾತರ ಆವಶ್ಯಕತೆ"

"ಚೆನ್ನಾಯಿತು, ನಮ್ಮಣ್ಣನ ವಿಷಯವಾಗಿ ನಿಮ್ಮಣ್ಣ ಏನು ಬೇಕಾದರೂ ತೀರ್ಮಾನಿಸಲಿ. ಅದನ್ನು ಸದ್ದಿಲ್ಲದೆ ಸಹಿಸಬೇಕಲ್ಲವೆ? ನಮ್ಮ ಅಣ್ಣನ ಪಕ್ಷವಾಗಿ ನಾನು ಕಾದಾಡುತ್ತೇನೆ. ನಿನ್ನ ಹತ್ತಿರ ಸೋಲು ಒಪ್ಪಿಕೊಳ್ಳಲಾರೆ. ನಾಳೆ ನೀನು ಅವರ ಹತ್ತಿರಕ್ಕೆ ಹೋಗಲೇಬೇಕು."

ಕುಮು ನಗ ತೊಡಗಿದಳು.

"ಅತ್ತಿಗೇ, ಇದು ಹಾಸ್ಯದ ಮಾತಲ್ಲ. ನಮ್ಮ ಮನೆತನದ ಮೇಲಿನ ಅಪವಾದದಿಂದ ನನಗೆ ಅಗೌರವವನ್ನುಂಟುಮಾಡುವಂತಹುದು. ಈಗ ಕಣ್ಣೊರಸಿಕೊಂಡು ಮುಖತೊಳೆದುಕೊಂಡು ಬಾ. ಊಟಕ್ಕೆ ಹೋಗೋಣ. ಮ್ಯಾನೇಜರ್ ಸಾಹೇಬರ ಮನೆಯಲ್ಲಿ ಇವತ್ತು ಅಣ್ಣನಿಗೆ ಔತಣ

ಇವತ್ತು ಅವರು ಮಲಗಲು ಮನೆಗೆ ಬರುವುದಿಲ್ಲವೆಂದೇ ನನ್ನ ನಂಬಿಕೆ. ಹೊರಗಿನ ಕೋಣೆಯಲ್ಲಿ ಅವರ ಹಾಸಿಗೆ ಸಿದ್ಧವಾಗಿದ್ದುದನ್ನು ಕಂಡೆ."

ಈ ಸುದ್ದಿಯನ್ನು ಕೇಳಿ ಕುಮು ಮನಸ್ಸಿನಲ್ಲೇ ನೆಮ್ಮದಿ ಹೊಂದಿದಳು. ಮರುಕ್ಷಣದಲ್ಲೇ ಈ ಕಾರಣದಿಂದ ಇಷ್ಟು ನೆಮ್ಮದಿ ಆಯಿತಲ್ಲಾ ಎಂದು ನಾಚಿಕೊಂಡಳು.

ರಾತ್ರಿ ಮಲಗುವ ಮನೆಯಲ್ಲಿ ಮೋತಿಯ ತಾಯಿಯೊಡನೆ ನವೀನ ವಿಷಯವನ್ನೆತ್ತಿ ಮಾತನಾಡಿದನು. "ಮೋತಿಯ ತಾಯಿ! ನೀನಂತೂ ಅಕ್ಕನಿಗೆ ಭರವಸೆ ಕೊಟ್ಟೆ. ಆಮೇಲೆ ಮುಂದೆ—"

"ಮುಂದೆ ಇನ್ನೇನು? ಅತ್ತಿಗೆ ಹೋಗಿಯೇ ತೀರಬೇಕು. ಅದರ ಮೇಲೆ ಆಗುವುದೆಲ್ಲ ಆಗಲಿ?"

ಹೊಸದಾಗಿ ಹುಟ್ಟಿದ ರಾಜರುಗಳಿಗೆ ವಂಶದ ಮರ್ಯಾದೆಯ ಅರಿವು ಹೆಚ್ಚು. ಈ ಮನೆಯವರನ್ನು ಮದುವೆ ಮಾಡಿಕೊಂಡು ಕುಮು ತನ್ನ ಮತ್ತು ತನ್ನ ಮನೆಯವರ ಗೌರವವನ್ನು ಮೊದಲಿಗಿಂತ ಬಹಳವಾಗಿ ಹೆಚ್ಚಿಸಿದ್ದಳೆಂದೇ ಇವರುಗಳು ತೀರ್ಮಾನಿಸಿದ್ದರು. ಆದಕಾರಣ ತವರುಮನೆ ಎಂಬ ಒಂದು ಸ್ಥಳ ಇದೆ ಎನ್ನುವುದನ್ನೂ ಮರೆತುಬಿಡುವುದೇ ನ್ಯಾಯ ಎಂದು ಇವರ ಅಭಿಪ್ರಾಯ. ಇಂತಹ ಸ್ಥಿತಿಯಲ್ಲಿ ಎರಡು ಕಡೆಯೂ ಮರ್ಯಾದೆ ಉಳಿಸಿ ನಡೆಯುವುದು ಅಸಾಧ್ಯವಾದರೆ ಒಂದು ಕಡೆಯಾದರೂ ಉಳಿಸಿಕೊಂಡೇ ತೀರಬೇಕು. ಆ ಪಕ್ಷ ಯಾವುದು ಎನ್ನುವುದನ್ನು ನವೀನ ಮನಸ್ಸಿನಲ್ಲೇ ತೀರ್ಮಾನಿಸಿಕೊಂಡ. ಅಣ್ಣನ ಅಧಿಕಾರ ಎಲ್ಲಿ ಬಲವತ್ತರವಾಗಿದೆಯೋ ಆ ಎಡೆಯಲ್ಲಿ ಅಣ್ಣನೊಡನೆ ಕಾದಾಡುವಷ್ಟು ಸಾಹಸವನ್ನು ತಾನು ಮಾಡಬಲ್ಲೆನೆಂದು ಕೆಲವು ದಿನಗಳ ಹಿಂದೆ ನವೀನ ಕನಸಿನಲ್ಲೂ ಎಣಿಸಿರಲಿಲ್ಲ.

ಗಂಡ ಹೆಂಡತಿಯರು ಆಲೋಚಿಸಿ "ಕುಮು ಮರುದಿನ ಬೆಳಗ್ಗೆ ಸ್ವಲ್ಪ ಹೊತ್ತು ಮಾತ್ರ ಹೋಗಿ ಅಣ್ಣನನ್ನು ನೋಡಿಬರಲಿ" ಎಂದು ಮಧುಸೂದನನಿಗೆ ತಿಳಿಸಬೇಕು. ಆತ ಒಪ್ಪಿದರೆ ಮತ್ತು ಕುಮುವನ್ನು ಅಲ್ಲಿಗೆ ಕಳುಹಿಸಿದ್ದೇ ಆದರೆ ಅನಂತರ ಅವಳು ನಾಲ್ಕಾರು ದಿನಗಳವರೆಗೆ ಹಿಂದಿ

ರುಗದಿರುವಂತೆ ಏನಾದರೂ ಕಾರಣವನ್ನು ಕಲ್ಪಿಸುವುದು ಕಷ್ಟವಲ್ಲವೆಂದು ತೀರ್ಮಾನಿಸಿದರು.

ಮಧುಸೂದನ ರಾತ್ರಿ ಸ್ವಲ್ಪ ಹೊತ್ತಿನ ಮೇಲೆ ಮನೆಗೆ ಹಿಂದಿರುಗಿದ. ಅವನ ಸಂಗಡ ಒಂದು ರಾಶಿ ಕಾಗದಪತ್ರಗಳ ಹೊರೆಯಿತ್ತು. ನವೀನ ಇಣಿಕಿ ನೋಡಿದ. ಮಧುಸೂದನ ಮುಖಗಳು ತೋಗದೆ ಕಣ್ಣಿಗೆ ಕನ್ನಡಕ ತಗುಲಿಸಿಕೊಂಡು ನೀಲಿ ಪೆನ್ಸಿಲ್ ಕೈಯಲ್ಲಿ ಹಿಡಿದು ಆಫೀಸಿನ ಮೇಜಿನ ಮೇಲೆ ಯಾವುದೋ ಪತ್ರದ ಮೇಲೆ ಅಲ್ಲಲ್ಲಿ ಗುರುತು ಮಾಡುತ್ತಿದ್ದ. ಆಗಾಗ್ಗೆ ನೋಟ್ ಬುಕ್ಕಿನಲ್ಲಿ ಗುರುತು ಮಾಡಿಕೊಳ್ಳುತ್ತಿದ್ದ. ನವೀನ ಧೈರ್ಯಮಾಡಿ ಕೋಣೆಯೊಳಗೆ ಹೊಕ್ಕವನೇ "ಅಣ್ಣಾ, ನಾನು ನಿನ್ನ ಕೆಲಸ ಏನಾದರೂ ಮಾಡಿಕೊಡಲು ಸಾಧ್ಯವೇ?" ಎಂದು ಕೇಳಿದ. ಮಧುಸೂದನ ಸಂಕ್ಷೇಪವಾಗಿ "ಬೇಡ" ಎಂದ. ಕಾರುಬಾರಿನ ಈ ಸಂಕಟಕರ ಸಂದರ್ಭವನ್ನು ಮಧುಸೂದನ ಸ್ವತಃ ತಿಳಿಯಬಯಸಿದ್ದ. ಎಲ್ಲ ಸಂಗತಿಯೂ ಅವನ ಕಣ್ಣಿಗೆ ಕಾಣಬೇಕಾದುದು ಆವಶ್ಯಕವಾಗಿತ್ತು. ಈ ಕೆಲಸದಲ್ಲಿ ಇತರರ ಸಹಾಯವನ್ನು ಪಡೆಯಹೋದರೆ ತನ್ನ ಶಕ್ತಿ ಕುಂದಿಸಿದಂತಾಗುವುದು ಎಂದು ಭಾವಿಸಿದ.

ನವೀನ ಯಾವ ಮಾತೂ ಆಡಲು ಎಡೆಸಿಕ್ಕದೆ ಹೊರಗೆ ಹೋದ. ಶೀಘ್ರದಲ್ಲಿ ಅಂತಹ ಆಸ್ಪದ ಸಿಕ್ಕುವುದೆಂಬ ಸೂಚನೆಯೂ ಕಾಣಲಿಲ್ಲ. ಮಾರನೆಯ ದಿನ ಬೆಳಗ್ಗೆ ಅತ್ತಿಗೆಯನ್ನು ಖಂಡಿತವಾಗಿ ತವರುಮನೆಗೆ ಕಳುಹಿಸಬೇಕು, ಇವತ್ತು ರಾತ್ರಿಯೇ ಒಪ್ಪಿಗೆ ಪಡೆಯಬೇಕು, ಎಂದು ನವೀನನ ಹಟ.

ಸ್ವಲ್ಪ ಹೊತ್ತಾದ ಮೇಲೆ ನವೀನ ದೀಪವನ್ನು ಕೈಯಲ್ಲಿ ಹಿಡಿದುಕೊಂಡು ಬಂದು ಅದನ್ನು ತಂದು ಅಣ್ಣನ ಮೇಜಿನ ಮೇಲೆ ಇಟ್ಟು "ಅಣ್ಣಾ, ನಿನಗೆ ಬೆಳಕು ಸಾಲದು" ಎಂದ.

ಈ ಎರಡನೆಯ ಲ್ಯಾಂಪಿನಿಂದ ತನ್ನ ಕೆಲಸಕ್ಕೆ ಬಹಳಮಟ್ಟಿಗೆ ಅನುಕೂಲವಾಯಿತೆಂದು ಮಧುಸೂದನನಿಗೆ ಅರಿವಾಯಿತು. ಆದರೆ ಈ

ಸಂದರ್ಭದಲ್ಲೂ ಯಾವ ಮಾತಿಗೂ ಅವಕಾಶವಾಗಲಿಲ್ಲ. ಪುನಃ ನವೀನ ಹೊರಗೆ ಬರಬೇಕಾಯಿತು.

ಕ್ಷಣ ಹೊತ್ತಿನ ಅನಂತರವೇ ಮಧುಸೂದನ ವಾಡಿಕೆಯಾಗಿ ಉಪಯೋಗಿಸುತ್ತಿದ್ದ ಗುಡುಗುಡಿಯಲ್ಲಿ ತಂಬಾಕು ಹಾಕಿ ಸಿದ್ಧಪಡಿಸಿ ತಂದು ಅವನ ಕುರ್ಚಿಯ ಎಡೆಗಡೆ ಇಟ್ಟು ಅದರ ಕೊಳವೆಯನ್ನು ಮೆಲ್ಲಮೆಲ್ಲನೆ ಮಧುಸೂದನನ ಮೇಜಿನ ಮೇಲಿಟ್ಟ. ಇದೂ ಕೂಡ ಆವಶ್ಯಕವಾಗಿತ್ತೆಂದು ಮಧುಸೂದನನಿಗೆ ಅರಿವಾಯಿತು. ಕ್ಷಣ ಹೊತ್ತು ಪೆನ್ಸಿಲ್ ಕೆಳಗಿಟ್ಟು ಗುಡುಗುಡಿ ಸೇದತೊಡಗಿದ.

ಈ ಸಂದರ್ಭದಲ್ಲಿ ನವೀನ ಮಾತಿಗೆ ಆರಂಭಿಸಿದ. “ಅಣ್ಣಾ, ಮಲಗಲು ಹೋಗುವುದಿಲ್ಲವೇ? ರಾತ್ರಿ ಬಹಳ ಹೊತ್ತಾಗಿದೆ. ಅತ್ತಿಗೆ ನಿನಗಾಗಿ ಎಚ್ಚರವಾಗಿದ್ದು ಕಾಯುತ್ತ ಕುಳಿತಿರಬಹುದು.” ಎಂದ.

“ಎಚ್ಚರವಾಗಿ ಕಾಯುತ್ತಿರಬಹುದು” ಎಂಬ ಮಾತು ಮುಹೂರ್ತ ಮಾತ್ರದಲ್ಲಿ ಮಧುಸೂದನನ ಮನಸ್ಸಿನ ಅಂತರ್ಯವನ್ನು ಹೊಕ್ಕಿತು. ಅಲೆಗಳ ಮೇಲೆ ಹಾಯ್ದು ಹಡಗು ಏಕಾಂತ ಬೀಸುತ್ತ ಮುಂದುವರಿಯುತ್ತಿರುವಾಗ ಸಣ್ಣದಾದ ಹಸಿರ ಹಕ್ಕಿಯೊಂದು ಹಾರಿ ಬಂದು ಧ್ವಜಸ್ತಂಭದ ಮೇಲೆ ಕುಳಿತಂತಾಯಿತು. ಕ್ಷುಬ್ಧವಾದ ಸಮುದ್ರದ ನಡುವೆ ಕ್ಷಣಕಾಲದಮಟ್ಟಿಗೆ ಶ್ಯಾಮಲ ದ್ವೀಪದ ವಿಸ್ತೃತ ವನಚ್ಛಾಯೆಯ ಚಿತ್ರವನ್ನು ಮನಸ್ಸಿನಲ್ಲಿ ಮೂಡಿಸಿತು. ಆದರೆ ಆ ವಿಷಯಕ್ಕೆ ಮನಸ್ಸು ಕೊಡುವುದಕ್ಕೆ ಇದು ಹೊತ್ತಲ್ಲ; ಹಡಗನ್ನು ನಡೆಸಲೇಬೇಕು.

ಮಧುಸೂದನ ತನ್ನ ಮನದ ಈ ಅಲ್ಪ ಚಂಚಲತೆಯಿಂದ ಭಯಗೊಂಡ. ತಕ್ಷಣ ಅದನ್ನು ಅಡಗಿಸಿ “ಮಹಾರಾಣಿಯನ್ನು ಮಲಗುವಂತೆ ಹೇಳು. ಇವತ್ತು ನಾನು ಇಲ್ಲೇ ಮಲಗುವೆ” ಎಂದ

“ಆಕೆಯನ್ನು ಇಲ್ಲಿಗೇ ಬರಹೇಳಲೇನು” ಎಂದು ಹೇಳಿ ನವೀನ ಗುಡುಗುಡಿಯ ಚಿಲುಮೆಯನ್ನು ಊದತೊಡಗಿದ.

ಮಧುಸೂದನ ತಕ್ಷಣ ಬೆದರಿಕೊಂಡು ಎದ್ದು, “ಬೇಡ ಬೇಡ” ಎಂದ.

ನವೀನ ಅಷ್ಟಕ್ಕೂ ಸುಮ್ಮನಾಗಲಿಲ್ಲ. "ಆಕೆ ನಿನ್ನನ್ನು ಏನೋ ಕೇಳಬೇಕೆಂದು ಕಾದಿದ್ದಾರೆ" ಎಂದ.

ಮಧುಸೂದನನು ಕಠಿಣವಾಗಿ "ಕೇಳುವುದಕ್ಕೆ ಈಗ ಹೊತ್ತಿಲ್ಲ" ಎಂದ.

"ಅಣ್ಣ ನಿನಗೆ ಸಮಯವಿಲ್ಲ. ಹಾಗೆಯೇ ಆಕೆಗೂ ಸಮಯ ಕಡಮೆ ಅಲ್ಲವೇ?"

"ಏನಾಗಿದೆ. ಏನು ಸಂಗತಿ?"

"ವಿಪ್ರದಾಸ ಬಾಬುಗಳು ಇವತ್ತು ಕಲ್ಕತ್ತಗೆ ಬಂದಿದ್ದಾರೆಂದು ಸುದ್ದಿ ತಿಳಿಯಿತು. ಆದರಿಂದಲೇ ಅತ್ತಿಗೆ ನಾಳೆ ಬೆಳಗ್ಗೆ — "

"ಬೆಳಗ್ಗೆ ಹೋಗ ಬಯಸುವಳೇನು?"

"ಹೆಚ್ಚು ಹೊತ್ತೇನಾಗದು, ಕೇವಲ ಒಂದು ಸಲ ನೋಡಿ —"

ಮಧುಸೂದನ ಕೈ ಒದರಿ, ಹಾಗಾದರೆ ಹೋಗಲಿ. ಹೋಗಿ ಬರಲಿ. ಸರಿ. ಇನ್ನು ಸಾಕು. "ನೀನು ಹೋಗು" ಎಂದ.

ಒಪ್ಪಿಗೆಯನ್ನು ಪಡೆದ ಕೂಡಲೆ ನವೀನ ಇನ್ನು ಕೋಣೆಯಲ್ಲಿ ಹೆಚ್ಚು ಹೊತ್ತು ನಿಲ್ಲಲಿಲ್ಲ. ಹೊರಗೆ ಬರುತ್ತಲೇ ಮಧುಸೂದನ "ನವೀನ್" ಎಂದು ಕೂಗಿದ್ದು ಕಿವಿಗೆ ಬಿದ್ದಿತ್ತು.

ಅಣ್ಣ ಪುನಃ ಅಪ್ಪಣೆಯನ್ನು ವಾಪಸು ತೆಗೆದುಕೊಳ್ಳುವನೇನೋ ಎಂದು ನವೀನನಿಗೆ ಭಯವಾಯಿತು. ಕೋಣೆಯೊಳಗೆ ಬರುತ್ತಲೇ ಮಧುಸೂದನ "ಯಜಮಾನಿ ಕೆಲವು ದಿನಗಳ ಮಟ್ಟಿಗೆ ಅವರ ಅಣ್ಣನ ಮನೆಗೇ ಹೋಗಿ ಇರಲಿ. ನೀನು ಅದಕ್ಕೆ ಆವಶ್ಯಕವಾದ ಏರ್ಪಾಡುಗಳನ್ನು ಮಾಡು" ಎಂದ.

ಅಣ್ಣನ ಈ ಮಾತಿನಿಂದ ತನ್ನ ಮುಖದಲ್ಲಿ ಉತ್ಸಾಹದ ಭಾವ ಎಲ್ಲಿಯಾದರೂ ಅಣ್ಣನಿಗೆ ಕಂಡೀತೋ ಎಂದು ನವೀನ ಅಂಜಿದ. ಅಷ್ಟೇ ಅಲ್ಲ; ಇಬ್ಬಗೆಯಿಂದ, ಮುಖ ಮರು ಮಾಡಿಕೊಂಡು ತಲೆ ಕೆರೆಯುತ್ತ "ಅತ್ತಿಗೆ ಹೊರಟುಹೋದರೆ ಮನೆ ಒಕ [illegible] ಅನ್ನುವುದು" ಎಂದ.

ಮಧುಸೂದನ ಯಾವ ಉತ್ತರವನ್ನೂ ಕೊಡದೆ ಗುಡುಗುಡಿಯ ನಳಿಕೆಯನ್ನು ಕೆಳಗಿಟ್ಟು ಕೆಲಸ ಆರಂಭಿಸಿದ. ತನ್ನ ಚಪಲ ಇನ್ನೂ ಹಾಗೆಯೇ ಇದೆಯೆಂದು ಭಾವಿಸಿದ. ಆದರೆ ಆ ಕಡೆ ಖಂಡಿತವಾಗಿಯೂ ಮುಖ ತಿರುಗಿಸಬಾರದೆಂದು ನಿರ್ಧರಮಾಡಿದ.

ನವೀನ ಆನಂದದಿಂದ ಹೊರಟು ಹೋದ. ಮಧುಸೂದನನ ಕೆಲಸ ಸಾಗುತ್ತಿತ್ತು. ಆದರೆ ಯಾವ ವೇಳೆಯಲ್ಲಿ ಈ ಕೆಲಸದ ಪ್ರವಾಹದ ಪಕ್ಕದಲ್ಲೇ ಮತ್ತೊಂದು ವಿರುದ್ಧವಾದ ಮಾನಸಧಾರೆ ಹರಿಯತೊಡಗಿತೋ ಅದು ಅವನ ಮನಸ್ಸಿಗೆ ಗೊತ್ತಾಗಲಿಲ್ಲ. ಒಮ್ಮೆ ನೀಲಿ ಪೆನ್ಸಿಲ್ಲಿನ ಗೆರೆ ಮುಗಿಯುವುದಕ್ಕೆ ಮುಂಚೆಯೇ ಅದನ್ನು ಬದಿಗಿಟ್ಟು ಗುಡುಗುಡಿಯ ನಳಿಕೆಯನ್ನು ಕೈಗೆ ಎತ್ತಿಕೊಂಡ. ಹಗಲ ವೇಳೆಯಲ್ಲಿ ಮಧುಸೂದನನ ಮನಸ್ಸು ಕುಮುವಿನ ವಿಷಯದ ಯೋಚನೆಯಿಂದ ಪೂರ್ತಿ ಬಿಡುಗಡೆ ಹೊಂದಿದ್ದಾಗ ಮಧುಸೂದನ ಹಿಂದಿನಂತೆ ತನ್ನ ಮೇಲೆ ತನ್ನ ಪೂರ್ಣಾಧಿಕಾರ ಪಡೆದು ಅತ್ಯಾನಂದಿತನಾಗಿದ್ದ. ಆದರೆ ರಾತ್ರಿ ಮುಂದುವರಿದಂತೆಲ್ಲಾ ಶತ್ರು ಕೋಟೆಯನ್ನು ಬಿಟ್ಟು ಇನ್ನೂ ಹೋಗಿಲ್ಲವೆಂದು ಮನದಟ್ಟಾಗತೊಡಗಿತು. ನೆಲಮಾಳಿಗೆಯಲ್ಲಿ ವೈಮುಚ್ಚಿಕೊಂಡು ನೆಲಸಿರುವ ಅಂಶ ಅರಿವಾಯಿತು.

ಮಳೆ ನಿಂತುಬಿಟ್ಟಿತ್ತು. ಕೃಷ್ಣ ಪಕ್ಷದ ಚಂದ್ರ ತೋಟದ ಮೂಲೆಯಲ್ಲಿ ಮುದಿ ಶಿಂಶುಪಾವೃಕ್ಷವೊಂದರ ಮೇಲೆ ಆಕಾಶದಲ್ಲಿ ಉದಯಿಸಿ ಆರ್ದ್ರ ಪೃಥ್ವಿಯನ್ನು ವಿಹ್ವಲದೃಷ್ಟಿಯಿಂದ ನೋಡುತ್ತಿರುವಂತೆ ಕಾಣುತ್ತಿತ್ತು. ಗಾಳಿ ತಣ್ಣಗೆ ಬೀಸುತ್ತಿತ್ತು. ಮಧುಸೂದನನ ಮನಸ್ಸು ಯಾವುದೋ ಒಂದು ಬೆಚ್ಚನೆಯ ಕೋಮಲ ಸ್ಪರ್ಶಕ್ಕಾಗಿ ಹಾತೊರೆಯುತ್ತಿತ್ತು. ನೀಲೀ ಪೆನ್ಸಿಲನ್ನು ಅದುಮಿ ಹಿಡಿದುಕೊಂಡು ಅವನು ಕಾಗದ ಪತ್ರಗಳ ಮೇಲೆ ಬಗ್ಗಿದ. ಆದರೆ ಮನಸ್ಸಿನ ಗಭೀರವಾದ ಆಕಾಶದಲ್ಲಿ "ಅತ್ತಿಗೆ ಒಂದು ಪಮಯ ಇನ್ನೂ ಎಚ್ಚೆತ್ತು ಕಾದಿರಬಹುದು" ಎಂಬುದು ಧ್ವನಿಸುತ್ತಿತ್ತು.

ಮಧುಸೂದನ ಈ ರಾತ್ರಿಯೇ ಒಂದು ಮುಖ್ಯ ಕೆಲಸವನ್ನು ಪೂರೈಸಬೇಕೆಂದು ಪಣ ತೊಟ್ಟಿದ್ದ. ಅದನ್ನು ನಾಳೆ ಮಧ್ಯಾಹ್ನಕ್ಕೆ

ಮುಂಚೆ ಮುಗಿಸಿದರೆ ಹೆಚ್ಚು ಅನಾನುಕೂಲವಾದೀತೆಂಬ ಭಯವೇನೂ ಇರಲಿಲ್ಲ. ಆದರೆ ಪ್ರತಿಜ್ಞೆ ಪಾಲಿಸುವುದು ಅವನ ಜಾಯಮಾನವಾಗಿತ್ತು. ಆದರಿಂದ ಯಾವ ಕಾರಣದಿಂದಲಾದರೂ ಪಾರಿತಪ್ಪಿದುದಾದರೆ ತನ್ನನ್ನು ಕ್ಷಮಿಸುತ್ತಿದ್ದವನಲ್ಲ. ಇಷ್ಟು ದಿನ ಈ ಧರ್ಮವನ್ನು ಅತ್ಯಂತ ಕಠಿಣವಾದ ರೀತಿಯಲ್ಲಿ ಪಾಲಿಸಿಕೊಂಡು ಬಂದಿದ್ದ. ಅದಕ್ಕಾಗಿ ಯಥೇಷ್ಟವಾದ ಬಹುಮಾನವನ್ನೂ ಪಡೆದಿದ್ದ. ಆದರೆ ಇತ್ತೀಚೆಗೆ ಹಗಲುಹೊತ್ತಿನ ಮಧುಸೂದನನ ಸ್ವಭಾವಕ್ಕೂ ರಾತ್ರಿವೇಳೆಯ ಮಧುಸೂದನನ ಸ್ವಭಾವಕ್ಕೂ ಅಲ್ಪಸ್ವಲ್ಪ ವ್ಯತ್ಯಾಸವು ಒಂದೇ ವೀಣೆಯ ಎರಡು ತಂತಿಗಳಂತೆ ಕಾಣತೊಡಗಿತ್ತು. ಯಾವ ಒಂದು ವೃಥ ಪ್ರತಿಜ್ಞೆಯೊಡನೆ ಅವನು ಮೇಜಿನ ಮೇಲೆ ಸೊಂಟ ಬಗ್ಗಿಸಿ ಕುಳಿತಿದ್ದನೋ, ಆ ರಾತ್ರಿ ಮುಂದುವರಿದಂತೆಲ್ಲ ಆ ಪ್ರತಿಜ್ಞೆಯ ಯಾವುದೋ ಒಂದು ಸಂದಿನಿಂದ "ಅತ್ತಿಗೆ ಒಂದು ಸಮಯ ಎಚ್ಚರವಾಗಿ ಕಾದು ಕುಳಿತಿರಬಹುದು" ಎಂಬ ಮಾತು ದುಂಬಿಯಂತೆ ಮತ್ತೆ ಮತ್ತೆ ಗುಯ್‌ಗುಟ್ಟುತ್ತ ಸಂಚರಿಸತೊಡಗಿತ್ತು.

ಎದ್ದು ನಿಂತ. ದೀಪ ಆರಿಸಿದ. ಕಾಗದ ಪತ್ರಗಳು ಹೇಗೆ ಇದ್ದುವೋ ಹಾಗೆಯೇ ಇಟ್ಟು ಮಲಗುವ ಮನೆಯ ಕಡೆಗೆ ನಡೆದ. ಅಂತಃಪುರದ ಅಂಗಳದ ಸುತ್ತಲೂ ವರಾಂಡದ ಮೂಲಕ ಮೂರನೆಯ ಮಹಡಿಯ ಮಲಗುವ ಮನೆಗೆ ದಾರಿ ಸಾಗಿತ್ತು. ಆ ವರಾಂಡದ ಕಟಕಟೆಯ ಅರುಗಿನಲ್ಲಿ ಶ್ಯಾಮಾಸುಂದರಿ ನೆಲದ ಮೇಲೆ ಕುಳಿತಿದ್ದಳು. ಅವಳು ಯಾವುದೋ ಒಂದು ಕಾದಂಬರಿಯೊಳಗಿನ ಚಿತ್ರದಂತೆ ಕಾಣುತ್ತಿದ್ದಳು. ಅರ್ಥಾತ್ ಅವಳು ನಿತ್ಯ ನೋಡುತ್ತಿದ್ದ ವ್ಯಕ್ತಿಯಲ್ಲ. ಅತಿ ಸಮೀಪದ ಅತಿ ಪರಿಚಯದ ಆವರಣದಿಂದ ಬಹು ದೂರವಾಗಿದ್ದಂತೆ ಕಾಣುತ್ತಿದ್ದಳು. ಮಧುಸೂದನ ಈ ಹಾದಿಯಲ್ಲೇ ಮಲಗುವ ಮನೆಗೆ ಹೋಗುವನೆಂದು ಅವಳು ಬಲ್ಲಳು. ಆ ಹೋಗುವ ದೃಶ್ಯ ಅವಳಿಗೆ ಅತಿಯಾದ ವೇದನೆಯನ್ನುಂಟು ಮಾಡುತ್ತಿತ್ತು. ಅದರಿಂದಲೇ ಅವಳ ಆಕರ್ಷಣ ಶಕ್ತಿ ಇಷ್ಟು ಪ್ರಬಲವಾಗಿತ್ತು. ಆದರೆ ಸುಮ್ಮನೆ ಹೃದಯವನ್ನು ವ್ಯರ್ಥವಾದ ವೇದನೆಯಿಂದ ಛಿದ್ರಗೊಳಿಸುವ ಹುಚ್ಚಾಟವಷ್ಟೇ ಈ ಪ್ರತೀಕ್ಷೆಯಲ್ಲಿ ಅಡಗಿದ್ದುದಲ್ಲದೆ,

ಇದರಲ್ಲಿ ಒಂದು ಆಸೆಯೂ ಅಡಗಿತ್ತು. ಮುಹೂರ್ತ ಮಾತ್ರದಲ್ಲಿ ಏನಾದರೊಂದು ಘಟಿಸಬಹುದು ; ಅಸಂಭವ ಎನ್ನುವುದು ಯಾವುದೋ ಒಂದು ಸಮಯದಲ್ಲಿ ಸಂಭವವಾಗಬಹುದು, ಎನ್ನುವ ಆಸೆಯಿಂದಲೇ ಅವಳು ಹೀಗೆ ಎಚ್ಚರವಾಗಿ ಹಾಸಿಗೆಯಲ್ಲಿ ಕಾಯುತ್ತಿದ್ದಳು.

ಮಧುಸೂದನ ಒಂದಾವರ್ತಿ ಅವಳ ಕಡೆಗೆ ದೃಷ್ಟಿ ಬೀರಿ ಮೇಲೆ ಹತ್ತಿಹೋದ. ಶ್ಯಾಮಾಸುಂದರಿ ತನ್ನ ಅದೃಷ್ಟದ ಮೇಲೆ ಕೋಪಗೊಂಡು ಕಟಕಟೆಯನ್ನು ಬಲವಾಗಿ ಹಿಡಿದುಕೊಂಡು ಅದರ ಮೇಲೆ ತಲೆ ಚಚ್ಚಿಕೊಳ್ಳತೊಡಗಿದಳು.

ಮಧುಸೂದನ ಮಲಗುವ ಮನೆಗೆ ಹೋಗಿ ನೋಡಿದಾಗ ಕುಮು ಎಚ್ಚೆತ್ತು ಕುಳಿತಿರಲಿಲ್ಲ. ಕೋಣೆ ಕತ್ತಲೆಯಾಗಿತ್ತು. ಸ್ನಾನದ ಮನೆಯ ತೆರೆದ ಬಾಗಿಲಿಂದ ಸ್ವಲ್ಪ ಬೆಳಕು ಬರುತ್ತಿತ್ತು. ಮಧುಸೂದನ ಹಿಂದಿರುಗಿ ಹೋಗಬೇಕೆಂದು ಒಮ್ಮೆ ಎಣಿಸಿದ. ಆದರೆ ಸಾಧ್ಯವಾಗಲಿಲ್ಲ. ಗ್ಯಾಸ್ ದೀಪವನ್ನು ಹಚ್ಚಿದ. ಕುಮು ಹಾಸಿಗೆಯ ಮಧ್ಯದಲ್ಲಿ ಕೈಕಾಲು ಮುದುರಿಕೊಂಡು ಮಲಗಿದ್ದಳು. ದೀಪ ಹತ್ತಿಸಿದರೂ ನಿದ್ರೆ ತಿಳಿಯಲಿಲ್ಲ. ಕುಮುವಿನ ಈ ನೆಮ್ಮದಿಯಾದ ನಿದ್ರೆಯಿಂದ ಮಧುಸೂದನನಿಗೆ ಕೋಪ ಬಂದಿತು. ಅಸಹನೆಯೊಡನೆ ಸೊಳ್ಳೆಯ ಪರದೆಯನ್ನು ಸರಿಸಿ ಧೊಪ್ಪನೆ ಹಾಸಿಗೆಯ ಮೇಲೆ ಕುಳಿತ. ಮಂಚ ಶಬ್ದದೊಡನೆ ನಡುಗಿತು.

ಕುಮು ಬೆಚ್ಚಿ ಬಿದ್ದು ಎದ್ದು ಕುಳಿತಳು. ಮಧುಸೂದನ ಇಂದು ಬರುವುದಿಲ್ಲವೆಂದೇ ತಿಳಿದಿದ್ದಳು ಹಠಾತ್ತಾಗಿ ಅವನನ್ನು ಕಂಡು ಮುಖದಲ್ಲಿ ಒಂದು ಬಗೆಯ ಭಾವನೆ ಮೂಡಿತು. ಅದನ್ನು ಕಂಡು ಮಧುಸೂದನನ ಹೃದಯದಲ್ಲಿ ಶೂಲ ನಾಟಿದಂತಾಯಿತು. ರಕ್ತ ತಲೆಗೇರಿತು. "ನನ್ನನ್ನು ಯಾವ ವಿಧದಲ್ಲೂ ಸೈರಿಸಲಾರೆ. ಅಲ್ಲವೇ ?" ಎಂದ.

ಇಂತಹ ಪ್ರಶ್ನೆಗೆ ಏನು ಉತ್ತರ ಕೊಡಬೇಕು ಎಂದು ಎಷ್ಟು ಯೋಚಿಸಿಯೂ ಕುಮುವಿಗೆ ಹೊಳೆಯಲಿಲ್ಲ. ವಾಸ್ತವವಾಗಿಯೂ ಮಧುಸೂದನನನ್ನು ಹಠಾತ್ತಾಗಿ ಕಂಡು ಭಯದಿಂದ ಅವಳ ಎದೆ ನಡುಗುತ್ತಿತ್ತು. ಆ ವೇಳೆಯಲ್ಲಿ ಅವಳ ಮನಸ್ಸು ಅವಳ ಹತೋಟಿಯಲ್ಲಿರಲಿಲ್ಲ.

ತಾನು ಯಾವುದನ್ನು ತನ್ನಿಂದ ಮರೆಮಾಚಿ ಇಟ್ಟುಕೊಳ್ಳಬೇಕೆಂದು ಅವಳು ಬಯಸಿದ್ದಳೋ ಅದು ತಾನಾಗಿ ಹೊರಗೆ ಕಾಣಿಸಿಕೊಂಡಿತ್ತು.

ಮಧುಸೂದನ ಮಾತು ನುಂಗುತ್ತ ನುಂಗುತ್ತ, "ಅಣ್ಣನ ಹತ್ತಿರ ಹೋಗಬೇಕೆಂದು ನಿನ್ನ ಬಯಕೆಯೋ ?" ಎಂದ.

ಕುಮು ಆ ಮುಹೂರ್ತದಲ್ಲಿ ಅವನ ಕಾಲಿಗೆ ಬೀಳಲು ಸಿದ್ಧಳಾಗಿದ್ದಳು. ಆದರೆ ಅವನ ಬಾಯಲ್ಲಿ ಅಣ್ಣ ಎಂಬ ಶಬ್ದ ಹೊರಟ ದನಿ ಕೇಳಿ "ಇಲ್ಲವಲ್ಲಾ" ಎಂದಳು.

"ನೀನು ಹೋಗ ಬಯಸಲಿಲ್ಲವೆ ?"

"ಇಲ್ಲ. ನಾನು ಹೋಗಲು ಬಯಸಲಿಲ್ಲ"

"ನವೀನನನ್ನು ನನ್ನ ಬಳಿ ಬೇಡಲು ಕಳುಹಿಸಲಿಲ್ಲವೆ ?"

"ಇಲ್ಲ. ಕಳುಹಿಸಲಿಲ್ಲ."

"ಅಣ್ಣನ ಹತ್ತಿರ ಹೋಗಬೇಕೆಂಬ ಇಷ್ಟವನ್ನು ನೀನು ತಿಳಿಸಲಿಲ್ಲವೆ ?"

"ಅಣ್ಣನನ್ನು ನೋಡಲು ಹೋಗುವುದಿಲ್ಲವೆಂದು ನಾನು ಅವನಿಗೆ ಹೇಳಿದ್ದೆ."

"ಯಾಕೆ ?"

"ಅದನ್ನು ನಾನು ಹೇಳಲಾರೆ."

"ಹೇಳಲಾರೆ! ಪುನಃ ನಿನ್ನ ಆ ನೂರ್ ನಗರದ ಚಾಳಿ !"

"ನಾನು ನೂರ್‌ನಗರದ ಹೆಣ್ಣಷ್ಟೆ"

"ಹೋಗು, ಅವರ ಬಳಿಗೇ ಹೋಗು. ನೀನು ಇಲ್ಲಿಗೆ ತಕ್ಕವಳಲ್ಲ. ಅನುಗ್ರಹ ತೋರಿದ್ದೆ. ಮರ್ಯಾದೆ ಅರಿತುಕೊಳ್ಳಲಿಲ್ಲ. ಇನ್ನು ಈಗ ಪಶ್ಚಾತ್ತಾಪಪಡಬೇಕಾಗುವುದು."

ಕುಮು ಕಟ್ಟಿಗೆಯಂತೆ ಅಲುಗದೆ ಕುಳಿತಿದ್ದಳು. ಏನೂ ಉತ್ತರ ಕೊಡಲಿಲ್ಲ. ಕುಮುವಿನ ಕೈ ಹಿಡಿದುಕೊಂಡು ಬಹಳ ಬಲವಾಗಿ ಒಮ್ಮೆ

ಒದರಿ ಮಧುಸೂದನ "ಕ್ಷಮೆ ಯಾಚಿಸಲೂ ಅರಿಯೆ ಅಲ್ಲವೆ?" ಎಂದ.

"ಯಾವುದಕ್ಕಾಗಿ?"

"ನೀನು ಮತ್ತೆ ನನ್ನ ಈ ಹಾಸಿಗೆಯಲ್ಲಿ ಮಲಗಲು ಸಾಧ್ಯವುಳ್ಳವಳಾದೆಯಲ್ಲ. ಅದಕ್ಕೆ—"

ಕುಮು ಆ ಕ್ಷಣ ಹಾಸಿಗೆ ಬಿಟ್ಟು ಇಳಿದು ಪಕ್ಕದ ಕೊಟಡಿಗೆ ಹೊರಟು ಹೋದಳು.

ಮಧುಸೂದನ ಹೊರಮನೆಗೆ ಹೋಗುವ ಹಾದಿಯಲ್ಲಿ ಶ್ಯಾಮಾಸುಂದರಿ ಆ ವರಾಂಡದಲ್ಲೇ ಬೋರಲಾಗಿ ಬಿದ್ದುಕೊಂಡಿದ್ದುದನ್ನು ಕಂಡ. ಮಧುಸೂದನ ಹತ್ತಿರ ಬಂದವನು ಬಗ್ಗಿ ಅವಳ ಕೈ ಹಿಡಿದೆತ್ತಲು ಯತ್ನಿಸಿ "ಏನುಮಾಡುತ್ತಿರುವೆ ಶ್ಯಾಮಾ?" ಎಂದ. ಆ ಕ್ಷಣ ಶ್ಯಾಮಾ ಎದ್ದು ಕುಳಿತು ಅವನೆರಡು ಕಾಲುಗಳನ್ನು ಎದೆಗೆ ಅಪ್ಪಿಕೊಂಡಳು. ಗದ್ಗದ ಕಂಠದೊಡನೆ "ನೀನು ನನ್ನನ್ನು ಕೊಂದುಹಾಕಿಬಿಡು" ಎಂದಳು.

ಮಧುಸೂದನ ಅವಳ ಕೈ ಹಿಡಿದೆತ್ತಿ ನಿಲ್ಲಿಸಿದ. "ಅಬ್ಬ, ನಿನ್ನ ಮೈ ಮಂಜಿನಂತೆ ಕೊರೆಯುತ್ತಿದೆಯಲ್ಲ ನಡೆ, ನಿನ್ನನ್ನು ನಿನ್ನ ಕೋಣೆಗೆ ಬಿಟ್ಟು ಬರುವೆ" ಎಂದು ಹೇಳಿ ಅವಳಿಗೆ ತನ್ನ ಶಾಲಿನ ಒಂದು ಭಾಗವನ್ನು ಹೊದಿಸಿ ಬಲಗೈಯಿಂದ ಬಲವಾಗಿ ಅಪ್ಪಿ ಹಿಡಿದುಕೊಂಡು ಮಲಗುವ ಮನೆಗೆ ಮುಟ್ಟಿಸಿ ಬಂದ. ಶ್ಯಾಮಾ ಮೆಲುದನಿಯಲ್ಲಿ "ಸ್ವಲ್ಪ ಹೊತ್ತು ಕುಳಿತುಕೊಳ್ಳಬಾರದೆ?" ಎಂದಳು.

ಮಧುಸೂದನ "ಕೆಲಸವಿದೆ" ಎಂದ.

ರಾತ್ರಿಯ ಹೊತ್ತಿನಲ್ಲಿ ಎಲ್ಲಿಂದಲೋ ದೆವ್ವ ಬಂದು ಮೆಟ್ಟಿಕೊಂಡು ಇಷ್ಟು ಹೊತ್ತು ಮಧುಸೂದನನ ಕೆಲಸ ಹಾಳುಮಾಡಿದೆ. ಇನ್ನು ಸುಮ್ಮನೆ ಇದ್ದರಾಗದು. ಕುಮುವಿನ ದೆಸೆಯಿಂದ ಯಾವ ಉಪೇಕ್ಷೆಗೆ ಗುರಿಯಾಗಿದ್ದನೋ ಆ ನಷ್ಟವನ್ನು ಹೋಗಲಾಡಿಸಿಕೊಳ್ಳಲು ಬೇರೊಂದೆಡೆಯಲ್ಲಿ ಬೊಕ್ಕಸವಿದೆ ಎಂದಿಷ್ಟನ್ನು ಅವನು ಅರಿತ. ಪ್ರೇಮದ ಆಂತರ್ಯದಿಂದ ಮನುಷ್ಯ ಯಾವ ಅಮೋಘವಾದ ಸಂಪತ್ತು ಪಡೆಯಬಹುದೋ ಅದನ್ನು

ಅನುಭವಿಸಬೇಕಾದ ಆವಶ್ಯಕತೆ ಆ ರಾತ್ರಿ ಮಧುಸೂದನನಿಗಿತ್ತು. ಶ್ಯಾಮಾಸುಂದರಿ ಸಂಪೂರ್ಣ ತನುಮನಗಳನ್ನರ್ಪಿಸಿ ಅವನಿಗಾಗಿ ಕಾದಿರುವಳು. ಆ ನಂಬಿಕೆಯನ್ನು ಪಡೆದು ಮಧುಸೂದನ ಆ ರಾತ್ರಿ ತನ್ನ ಕೆಲಸದಲ್ಲಿ ಉತ್ಸಾಹವನ್ನು ಪಡೆದ. ಅವನ ಮನಸ್ಸಿನಲ್ಲಿ ಯಾವ ಮುಳ್ಳು ನಾಟಿಕೊಂಡಿತ್ತೋ ಅದರ ವೇದನೆ ಬಹಳಮಟ್ಟಿಗೆ ಕಡಮೆಯಾಯಿತು.

ಇತ್ತ ರಾತ್ರಿಯಲ್ಲಿ ಕುಮು ಯಾವ ಬಗೆಯ ಶಾಂತಿಯನ್ನು ಪಡೆದಳೋ ಅದರಿಂದ ಅವಳಿಗಷ್ಟು ಸಮೃದ್ಧಿಯಾಯಿತು. ಮಧುಸೂದನ ಅದೆಷ್ಟು ಬಾರಿ ಪ್ರೀತಿ ತೋರಿದನೋ ಅಷ್ಟು ಬಾರಿಯೂ ಕುಮುವಿನ ಮನದಲ್ಲಿ ಒಂದು ಬಗೆಯ ತಳಮಳ ಮೊದಲಾಗುತ್ತಿತ್ತು. ಪ್ರೀತಿಯ ಮೂಲಕವೇ ಇದಕ್ಕೆ ಮುಯ್ಯಿ ತೀರಿಸಬೇಕೆಂಬ ಈ ಕರ್ತವ್ಯದ ಅರಿವು ಅವಳಿಗೆ ಕಳವಳವನ್ನುಂಟುಮಾಡಿತು. ಈ ಕಾದಾಟದಲ್ಲಿ ಕುಮು ಜಯ ಹೊಂದುವ ಆಶೆ ಏನೇನೂ ಇರಲಿಲ್ಲ. ಆದರೆ ಪರಾಭವದ ಅಪಲಕ್ಷಣವಿತ್ತು. ಅದನ್ನು ಕೇವಲ ಅಡಗಿಸುವುದಕ್ಕಾಗಿ ಕುಮು ಇಷ್ಟು ದಿನ ಎಲ್ಲ ರೀತಿಯಿಂದಲೂ ಪ್ರಯತ್ನಿಸಿದ್ದಳು. ನಿನ್ನೆ ರಾತ್ರಿ ಆ ಅಡಗಿಸಿಡುವ ಪ್ರಯತ್ನ ಮುಹೂರ್ತ ಮಾತ್ರದಲ್ಲಿ ಸಂಪೂರ್ಣವಾಗಿ ಬಹಿರಂಗವಾಗಿ ಬಿಟ್ಟಿತ್ತು. ಕುಮು ಎಚ್ಚರ ತಪ್ಪಿದ್ದ ವೇಳೆಯಲ್ಲಿ ಕುಮುವಿನ ಇಡೀ ಪ್ರಕೃತಿಯೇ ಮಧುಸೂದನನಿಗೆ ವಿರುದ್ಧವಾಗಿರುವುದೆಂದು ಅವನಿಗೆ ತೋರಿಬಂದಿತು. ಈ ಸಂಗತಿ ಖಂಡಿತವಾಗಿ ತಿಳಿದು ಬಂದಿದ್ದು ಉತ್ತಮವೇ ಆಯಿತು. ಮುಂದೆ ಪರಸ್ಪರ ಕರ್ತವ್ಯವನ್ನು ನಿಷ್ಕಪಟ ಭಾವದಿಂದ ಮಾಡಲು ಸಾಧ್ಯವಾದೀತು. ಮಧುಸೂದನ ಅವಳನ್ನು ಪ್ರೀತಿಸುವನೆಂಬುದು ಸಮಸ್ಯೆಯಾಗಿತ್ತು. ಕೋಪದಿಂದ ಅವಳನ್ನು ದೂರ ಮಾಡಬೇಕೆಂಬುದೇ ಸತ್ಯವಾದ ಅಂಶ. ನಿಜವಾಗಿಯೂ ಮಧುಸೂದನನ ಹಾಸಿಗೆಯಲ್ಲಿ ಮಲಗಲು ಅವಳಿಗೆ ಅಧಿಕಾರವಿಲ್ಲ. ಮಲಗಿ ಅವಳು ಕೇವಲ ಮೋಸ ಮಾಡಿರುವಳು. ಈ ಮನೆಯಲ್ಲಿ ಅವಳಿಗೆ ಲಭಿಸಿರುವ ಪದವಿ ಕೇವಲ ವಿಡಂಬನೆಯಂತೆ ಕಾಣುತ್ತಿತ್ತು.

ಈ ರಾತ್ರಿ ಇದೊಂದೇ ಪ್ರಶ್ನೆ ಅಡಿಗಡಿಗೆ ಅವಳ ಮನಸ್ಸಿನಲ್ಲಿ ತಲೆದೋರುತ್ತಿತ್ತು. ಕುಮುವಿನ ವಿಷಯದಲ್ಲಿ ಮಧುಸೂದನನಿಗೆ ಇಷ್ಟೇಕೆ

ನಿರ್ಬಂಧ? ಆವನು ಮಾತು ಮಾತಿನಲ್ಲಿ ನೂರ್‌ನಗರೀ ಚಾಳಿಯ ವಿಷಯವೆತ್ತಿ ಅವಳನ್ನು ಚುಚ್ಚುತ್ತಿದ್ದನಲ್ಲವೆ! ಅದರ ಅರ್ಥವೇನೆಂದರೆ "ಕುಮು ಅವರಿಂದ ಸಂಪೂರ್ಣವಾಗಿ ಸ್ವಭಾವದಲ್ಲಿ ಬೇರೆ. ಜಾತಿಯಲ್ಲಿ ಬೇರೆ" ಎಂದು. "ಹೀಗಿದ್ದರೂ ಮಧುಸೂದನ ಯಾವ ಕಾರಣದಿಂದ ಅವಳಲ್ಲಿ ಪ್ರೀತಿಯನ್ನು ತೋರಿಸುತ್ತಿರುವನು? ಇದು ಎಂದಾದರೂ ಸತ್ಯವಾದ ಪ್ರೀತಿ ಆದೀತೇನು? ಇವತ್ತು ಮಧುಸೂದನ ಏನು ಅಂದುಕೊಂಡಿದ್ದರೇನು; ಕುಮುವಿನಿಂದ ಅವನ ಮನಸ್ಸು ತೃಪ್ತಿಹೊಂದುವುದು ಎಂದಿಗೂ ಸಾಧ್ಯವಿರಲಿಲ್ಲ." ಎಂದು ಕುಮುವಿನ ನಂಬಿಕೆ. ಅದೆಷ್ಟು ಬೇಗ ಮಧುಸೂದನ ಈ ವಿಷಯವನ್ನು ಅರಿಯುವನೋ ಅಷ್ಟೂ ಅಷ್ಟು ಉಭಯರಿಗೂ ಕ್ಷೇಮ.

ನವೀನ ಹಿಂದಿನ ರಾತ್ರಿ ಅಣ್ಣನಿಂದ ಒಪ್ಪಿಗೆ ಪಡೆದು ಅದೆಷ್ಟು ಆನಂದದಿಂದ ಮಲಗಲು ಹೋದನೋ ಇವತ್ತು ಬೆಳಗ್ಗೆ ಆದರಲ್ಲಿ ಅಷ್ಟಾಗಿ ಏನೂ ಉಳಿದಿರಲಿಲ್ಲ. ಹಿಂದಿನ ರಾತ್ರಿ ಆಗ ಎರಡೂವರೆ ಘಂಟೆ. ಮಧುಸೂದನ ಕೆಲಸ ಮುಗಿಸಿ ತಕ್ಷಣ ನವೀನನಿಗೆ ಹೇಳಿ ಕಳುಹಿಸಿದ. ಅಪ್ಪಣೆ ಇಷ್ಟೇ—"ಕುಮುದಿನಿಯನ್ನು ವಿಪ್ರದಾಸನ ಮನೆಗೆ ಕಳುಹಿಸಬೇಕು, ಎಲ್ಲಿಯವರೆಗೆ ಮಧುಸೂದನ ತಾನಾಗಿ ಅವಳನ್ನು ಕರೆಯ ಕಳುಹುವುದಿಲ್ಲವೋ ಅಲ್ಲಿಯವರೆಗೆ ಅವಳು ಹಿಂದಿರುಗಬೇಕಾದ ಆವಶ್ಯಕತೆಯಿಲ್ಲ. ಇದು ಗಡೀಪಾರು ಶಿಕ್ಷೆ" ಎಂದು ನವೀನ ಅರಿತುಕೊಂಡ.

ಅಂಗಳದ ಸುತ್ತ ಚೌಕವಾದ ವರಾಂಡದ ಯಾವ ಭಾಗದಲ್ಲಿ ಹಿಂದಿನ ರಾತ್ರಿ ಮಧುಸೂದನನೊಡನೆ ಶ್ಯಾಮಾಳ ಭೇಟಿಯಾಗಿತ್ತೋ ಅದಕ್ಕೆ ಇದಿರುಭಾಗದ ವರಾಂಡಕ್ಕೆ ಸೇರಿದ ಹಾಗಿದ್ದ ಕೊಟಡಿ ನವೀನನ ಮಲಗುವ ಮನೆ. ಆಗ ಅವರು ಗಂಡ ಹೆಂಡಿರು ಕುಮುವಿನ ವಿಷಯವಾಗಿಯೇ ಮಾತನಾಡುತ್ತಿದ್ದರು. ಈ ಸಮಯದಲ್ಲಿ ಮಾತಾಡುವ ಸದ್ದು ಕೇಳಿ ಮೋತಿಯ ತಾಯಿ ಕೋಣೆಯ ಕದ ತೆರದೊಡನೆ ಬೆಳದಿಂಗಳ ಬೆಳಕಿನಲ್ಲಿ ಮಧುಸೂದನನ ಸಂಗಡ ಶ್ಯಾಮಾಸುಂದರಿಯ ಮಿಲನದ ದೃಶ್ಯವನ್ನು ಕಂಡಳು. ಕುಮುವಿನ ಅದೃಷ್ಟದ ಬಲೆಯಲ್ಲಿ ಈ ರಾತ್ರಿ ಸದ್ದಿಲ್ಲದೆ ಮತ್ತೊಂದು ತೊಡಕಾದ ಗೋಜು ಘಟಿಸಿತೆಂದು ಅರಿತಳು.

ನವೀನನೊಡನೆ ಮೋತಿಯು ತಾಯಿ “ ಇಂತಹ ಅಪಾಯದ ವೇಳೆ ಯಲ್ಲೇ ಅಕ್ಕ ಹೊರಟು ಹೋಗುವುದು ಸರಿಯೇನು ? ” ಎಂದು ಕೇಳಿದಳು.

ನವೀನನೆಂದನು “ ಇಷ್ಟು ದಿನಗಳು ಅತ್ತಿಗೆಯಿರಲಿಲ್ಲ. ವಿಷಯ ಇಷ್ಟುದೂರ ಎಂದೂ ಮುಂದುವರಿದಿರಲಿಲ್ಲ. ಈಗ ಅತ್ತಿಗೆ ಇರುವಳೆಂದೇ ಇದು ಇಷ್ಟರ ಮಟ್ಟಿಗೆ ನಡೆಯಿತು. ” ಎಂದನು.

“ ಏನೆನ್ನುವೆ ? ”

“ ಅತ್ತಿಗೆ ಗಾಢನಿದ್ರೆಯಲ್ಲಿದ್ದ ಹಸಿವನ್ನು ಎಚ್ಚರಗೊಳಿಸಿದಳು. ತೃಪ್ತಿ ಯಾಗುವಷ್ಟು ಆಹಾರ ಒದಗಿಸಲಾರದೆ ಹೋದಳು. ಆದ್ದರಿಂದ ಅದು ಅನರ್ಥ ನಡೆಸಲು ಎದ್ದು ನಿಂತಿದೆ. ಈ ಸಮಯದಲ್ಲಿ ಆಕೆ ದೂರವಿರು ವುದೇ ಉತ್ತಮವೆಂದು ನನ್ನ ಅಭಿಪ್ರಾಯ. ಅದರಿಂದ ಬೇರೆ ಏನೂ ಸಾಧ್ಯವಾಗದಿದ್ದರೂ ಕೊನೆಯ ಪಕ್ಷ ಆಕೆ ನೆಮ್ಮದಿಯಿಂದಾದರೂ ಇರಬಹುದಲ್ಲ. ”

“ ಮತ್ತೆ ಇದು ಹೀಗೆಯೇ ನಡೆಯುತ್ತಿರಲೇನು ? ”

“ ಯಾವ ಬೆಂಕಿಯನ್ನು ಆರಿಸುವುದಕ್ಕೆ ಯಾವ ಮಾರ್ಗವೂ ಇಲ್ಲವೋ ಅದು ತಾನಾಗಿಯೇ ಉರಿದು ಬೂದಿಯಾಗುವವರೆಗೆ ನೋಡುತ್ತ ಇರಲೇಬೇಕು. ”

ಮರುದಿನ ಬೆಳಗ್ಗೆ ಹಾಬಲೂ ಸದಾ ಕುಮುವಿನ ಸಂಗಡಲೇ ತಿರು ಗುತ್ತಿದ್ದ. ಗುರುಮಹಾಶಯರು ಪಾಠಕ್ಕಾಗಿ ಅವನನ್ನು ಹೊರಗೆ ಕರೆ ಯಲು ಅವನು ಕುಮುವಿನ ಮುಖ ನೋಡತೊಡಗಿದ. ಕುಮುವೇನಾ ದರೂ ಹೋಗಲು ಹೇಳಿದ್ದುದಾದರೆ ಅವನು ಹೋಗುತ್ತಿದ್ದ. ಆದರೆ ಕುಮು ಬೋಯಿಯ ಕೈಯಲ್ಲಿ ಇವತ್ತು ಹಾಬಲೂವಿಗೆ ರಜ ಎಂದು ಹೇಳಿ ಕಳುಹಿಸಿದಳು.

ಸೊಸೆ ಕೆಲವು ದಿನಗಳವುಟ್ಟಿಗೆ ತವರುಮನೆಗೆ ಹೋಗುವಳು ಎನ್ನುವ ಮಾತು ಇಂದು ಕುಮುವಿನ ಪಯಣದ ವೇಳೆಗೆ ಹೊಂದಲಿಲ್ಲ.

ಈ ಮನೆ ಅವಳನ್ನು ಕಳೆದುಕೊಳ್ಳಲಿದೆ ಎಂದು ಅನ್ನಿಸುತ್ತಿತ್ತು. ಯಾವ ಹಕ್ಕಿಯನ್ನು ಪಂಜರದಲ್ಲಿ ಸೆರೆ ಹಾಕಿದ್ದರೋ ಅದು ಇವತ್ತು ಕದ ಸ್ವಲ್ಪ ಸಂದು ಬಿಟ್ಟೊಡನೆ ಹಾರಿಹೋಯಿತು. ಇನ್ನು ಅದು ಈ ಪಂಜರದಲ್ಲಿ ಮತ್ತೆ ನುಗ್ಗದು.

ನವೀನನು "ಅತ್ತಿಗೇ, ಹಿಂದಿರುಗಲು ನಿಧಾನಿಸಬೇಡ ಎಂದು ಮನಃಪೂರ್ವಕವಾಗಿ ಹೇಳಲು ಸಾಧ್ಯವಾಗಿದ್ದಿದ್ದರೆ ನೆಮ್ಮದಿಹೊಂದುತ್ತಿದ್ದೆ. ಆದರೆ ಬಾಯಿಂದ ಮಾತು ಹೊರಡದು. ಯಾರ ಬಳಿ ನಿನಗೆ ಯಥಾರ್ಥವಾದ ಗೌರವ ಸಿಕ್ಕುವುದೋ ಅಲ್ಲೇ ನೀನು ಇರು. ಯಾವಾಗಲಾದರೂ ನವೀನನಿಂದ ಏನಾದರೂ ಪ್ರಯೋಜವಾಗುವ ಸಂದರ್ಭವಿದ್ದರೆ ಅವನನ್ನು ನೆನಪುಮಾಡಿಕೊ." ಎಂದನು.

ಮೋತಿಯ ತಾಯಿ ತಾನು ಕೈಯಾರ ಮಾಡಿದ್ದ ಮಾವಿನಸತ್ವ, ಉಪ್ಪಿನಕಾಯಿ ಮೊದಲಾದುವನ್ನು ಒಂದು ಮಡಕೆಯಲ್ಲಿ ಅಣಿಮಾಡಿ ಮೇನೆಯಲ್ಲಿಟ್ಟಳು. ಹೆಚ್ಚು ಮಾತನಾಡಲಿಲ್ಲ. ಆದರೆ ಮನಸ್ಸಿನಲ್ಲಿ ಅವಳದು ತಕ್ಕಮಟ್ಟಿಗೆ ಆಕ್ಷೇಪಣೆ ಇತ್ತು. ಎಲ್ಲಿಯವರೆಗೆ ಆತಂಕ ಸ್ಥೂಲವಾಗಿತ್ತೋ ಎಷ್ಟು ದಿನಗಳು ಮಧುಸೂದನ ಕುಮುದಿನಿಯನ್ನು ಬಹಿರಂಗವಾಗಿ ಅವಮಾನಪಡಿಸುತ್ತಿದ್ದನೋ ಅಲ್ಲಿಯವರೆಗೆ ಅವಳ ಮನಸ್ಸು ಕುಮುವಿನ ಪಕ್ಷ ವಹಿಸಿತ್ತು. ಆದರೆ ಯಾವ ಬಾಧೆ ಅತಿ ಸೂಕ್ಷ್ಮವಾಗಿದೆ, ಯಾವುದು ಮರ್ಮಸ್ಥಾನದಲ್ಲಿ ಅಡಗಿದೆ, ಪರೀಕ್ಷೆಮಾಡಿ ಯಾವುದರ ಗುರುತು ನಿರ್ಧರಿಸಿ ತಿಳಿಯುವುದು ಕಠಿಣವಾಗಿದೆ, ಯಾವುದರ ಶಕ್ತಿ ಪ್ರಬಲವಾಗಿದೆ ಎಂಬ ವಿಷಯ ಮೋತಿಯ ತಾಯಿಗೆ ಸಹಜವಾಗಿ ಅರಿವಾಗುತ್ತಿರಲಿಲ್ಲ. ಗಂಡ ಯಾವ ಕ್ಷಣದಲ್ಲಿ ಒಲಿಯುವನೋ ಆ ಕ್ಷಣವೇ ಹೆಂಡತಿ ಅದು ತನ್ನ ಸೌಭಾಗ್ಯ ಎಂದು ಎಣಿಸಬೇಕು. ಇದೇ ಸಹಜವಾದ ಸಂಗತಿ ಎಂದು ಮೋತಿಯ ತಾಯಿಯ ಅಭಿಪ್ರಾಯ. ಇದಕ್ಕೆ ವಿರೋಧವಾದುದು ಅಧಿಕ ಪ್ರಸಂಗವೆಂದು ಅವಳ ಎಣಿಕೆ. ಅಷ್ಟೇ ಅಲ್ಲ. ಈಗಲೂ ಅತ್ತಿಗೆಯ ವಿಷಯದಲ್ಲಿ ನವೀನನಿಗೆ ಕನಿಕರವಿದೆಯೆಂದು ಅವಳಿಗೆ ಸಿಟ್ಟು. ಕುಮುವಿನ ಪ್ರಕೃತಿಗತ ವಿತೃಷ್ಣೆ ಸಂಪೂರ್ಣ ಅಕೃತ್ರಿಮ; ಅದು ಅಹಂಕಾರವಲ್ಲ. ಹೆಚ್ಚೇಕೆ; ಈ ವಿಷಯದಲ್ಲಿ ಕುಮುವಿಗೆ ತನ್ನೊ

ಡನೆ ತನಗೆ ದುರ್ಜಯ ವಿರೋಧ ಎನ್ನುವುದನ್ನು ಸಾಧಾರಣವಾಗಿ ಹೆಂಗಸರು ಒಪ್ಪುವುದು ಕಷ್ಟ. ಸಂಪ್ರದಾಯವನ್ನು ಅನುಸರಿಸಿ ಯಾವ ಚೀಣಾ ಹೆಂಗಸೂ ತನ್ನ ಕಾಲನ್ನು ರೂಪುಗೆಡಿಸಲು ಅಡ್ಡಿಮಾಡಳು. ಆಕೆಗೆ ಪ್ರಪಂಚದಲ್ಲಿ ತನ್ನ ಕಾಲನ್ನು ಕಿರಿದು ಮಾಡಲು ಸಮ್ಮತಿಸುವುದು ಅವಮಾನಕರವೆಂದು ಎಣಿಸುವ ಹೆಣ್ಣೂ ಇರುವಳೆಂದರೆ ಆಗ ಅವಳು ಆ ಆಕ್ಷೇಪಣೆಯನ್ನು ಖಂಡಿತ ನಕ್ಕು ಹಾರಿಸಿಬಿಡುವಳು. ಅದೊಂದು ಮೂರ್ಖತೆ ಎಂದು ಖಂಡಿತವಾಗಿ ಹೇಳುವಳು. ಯಾವುದು ಮುಚ್ಚುಮರೆಯಿಲ್ಲದೆ ಸ್ವಾಭಾವಿಕವಾಗಿದೆಯೋ ಅದನ್ನೇ ಅವಳು ಅಸ್ವಾಭಾವಿಕವೆಂದು ಎಣಿಸುವಳು. ಮೋತಿಯ ತಾಯಿ ಒಂದಾನೊಂದು ಕಾಲದಲ್ಲಿ ಕುಮುದಿನಿಯ ಸಂಕಟದಿಂದ ಬಹಳವಾಗಿ ಸಂಕಟಪಟ್ಟಿದ್ದಳು. ಪ್ರಾಯಶಃ ಅದಕ್ಕೇ ಇಂದು ಅವಳ ಮನಸ್ಸು ಇಷ್ಟು ಕಠಿಣವಾಗಲು ಆರಂಭಿಸಿದೆ. ಪ್ರತಿಕೂಲವಾಗಿದ್ದ ಅದೃಷ್ಟ ವರ ಕೊಡಲು ಬಂದಾಗ, ಅದರ ಕಾಲಿಗೆ ತಲೆಮುಟ್ಟಿಸಿ ಆ ವರವನ್ನು ಯಾವ ಹೆಣ್ಣು ಕಾಲ ಕಳೆಯದೆ ಸ್ವೀಕರಿಸಲಾರಳು ? ಅವಳಲ್ಲಿ ಮಮತೆ ಇಡುವುದೂ—ಹೆಚ್ಚೇಕೆ, ಅವಳಲ್ಲಿ ಕ್ಷಮೆ ತೋರುವುದೂ ಮೋತಿಯ ತಾಯಿಗೆ ಅಸಾಧ್ಯವಾಗಿತ್ತು.

೪೬

ಮನೆಯ ಇದಿರಿನಲ್ಲಿ ಬಂದೊಡನೆಯೇ ಪಲ್ಲಕ್ಕಿ ಕದವನ್ನು ಸ್ವಲ್ಪ ಸರಿಸಿ ಕುಮು ಮಹಡಿಯ ಕಡೆ ದಿಟ್ಟಿಸಿ ನೋಡಿದಳು. ನಿತ್ಯ ಈ ಸಮಯದಲ್ಲಿ, ವಿಪ್ರದಾಸ ರಸ್ತೆಯ ಪಕ್ಕದ ವರಾಂಡದಲ್ಲಿ ಕುಳಿತು ಸಮಾಚಾರ ಪತ್ರವನ್ನು ಓದುತ್ತಿದ್ದ. ಇಂದು ನೋಡುವಲ್ಲಿ ಯಾರೂ ಇರಲಿಲ್ಲ.

ಇವತ್ತು ಕುಮು ಇಲ್ಲಿಗೆ ಬರುವಳೆಂಬ ಸುದ್ದಿಯನ್ನು ಇವರಿಗೆ ಕಳಿಸಿರಲಿಲ್ಲ ಪಲ್ಲಕ್ಕಿಯ ಸಂಗಡ ಮಹರಾಜರ ಬಿಲ್ಲೆಯ ಜವಾನನನ್ನು ಈ ಮನೆಯ ದರ್ವಾನ ನೋಡಿ ಸರಸರನೆ ಎದ್ದು, ಕುಮುದಕ್ಕ ಬಂದಿರುವಳೆಂದು ಅರಿತ. ಹೊರಮನೆಯ ಅಂಗಳ ದಾಟಿ ಪಲ್ಲಕ್ಕಿ ಅಂತಃಪುರದ ಕಡೆಗೆ ಹೋಗುತ್ತಿತ್ತು. ಕುಮು ನಿಲ್ಲಿಸಿ ಇಳಿದು ಬೇಗ ಬೇಗ ಮೆಟ್ಟಿಲು ಹತ್ತುತ್ತ ಮಹಡಿಯ ಮೇಲಕ್ಕೆ ಹೋದಳು. ತನ್ನನ್ನು ಮನೆ

-ಯುವರು ಯಾರಾದರೂ ನೋಡುವ ಮುಂಚೆಯೇ ತಾನು ಅಣ್ಣನನ್ನು ನೋಡಬೇಕೆಂದು ಅವಳ ಬಯಕೆ. ಹೊರಗಿನ ವಿಶ್ರಾಂತಿಯ ಕೋಣೆಯಲ್ಲೇ ರೋಗಿ ಇರುವ ಏರ್ಪಾಡು ಆಗಿರುವುದೆಂದು ಅವಳು ಖಂಡಿತ ಬಲ್ಲಳು. ಅಲ್ಲಿ ಕಿಟಿಕಿಯ ಮೂಲಕ ತೋಟದ ಹಾದರಿ ಸಂಪಿಗೆ ಮತ್ತು ಅಶ್ವತ್ಥ ವೃಕ್ಷಗಳ ಸಮೂಹವನ್ನು ನೋಡಲು ಅವಕಾಶವಿದೆ. ಬೆಳಗಿನ ಎಳೆಬಿಸಿಲು ಶಾಖೆ ಉಪಶಾಖೆಗಳ ಮೂಲಕ ಈ ಕೋಣೆಯಲ್ಲೇ ಮೊದಲು ತಲೆಯಿಡುವುದು. ಈ ಕೋಣೆಯೇ ವಿಪ್ರದಾಸನಿಗೆ ಒಗ್ಗಿದ್ದ ಜಾಗ.

ಕುಮು ಮೆಟ್ಟಿಲ ಬಳಿಗೆ ಬಂದೊಡನೆ ಎಲ್ಲಕ್ಕೂ ಮೊದಲು ಟಾಮಿ ನಾಯಿ ಓಡಿಬಂದು ಅವಳ ಮೈಮೇಲೆ ನೆಗೆದು ಬೊಗಳುತ್ತ ಬಾಲ ಬಡಿಯುತ್ತ ಸಾಕುಮಾಡಿ ಬಿಟ್ಟಿತು. ಕುಮುವಿನ ಜೊತೆಯಲ್ಲೇ ನೆಗೆಯುತ್ತ ನೆಗೆಯುತ್ತ ಬೊಗಳುತ್ತ ಬೊಗಳುತ್ತ ಟಾಮಿ ಮುಂದುವರಿಯಿತು. ವಿಪ್ರದಾಸ ಬೆನ್ನು ಎತ್ತರವಾಗಿದ್ದ ಸೋಫಾದಲ್ಲಿ ಒರಗಿಕೊಂಡು ಅರ್ಧ ಮಲಗಿದ್ದ. ಕಾಲುಗಳ ಮೇಲೆ ಒಂದು ಚೀಟಿ ಬಟ್ಟೆಯ ಕವುದಿಯನ್ನು ಹೊದ್ದಿದ್ದ. ಪುಸ್ತಕವೊಂದನ್ನು ಹಿಡಿದಿದ್ದ. ಬಲಗೈ ಹಾಸಿಗೆಯ ಮೇಲೆ ನೀಡಿತ್ತು. ಓದುತ್ತಿದ್ದ ಹಾಗೆಯೇ ದಣಿವಾಗಲು ಆಗತಾನೆ ಓದು ನಿಲ್ಲಿಸಿ ಕೈನೀಡಿಕೊಂಡಿದ್ದಂತಿತ್ತು. ಟೀ ಕಪ್ಪು ಮತ್ತು ತಿಂದುಳಿದ ರೊಟ್ಟಿಯ ತುಂಡುಗಳುಳ್ಳ ಒಂದು ಟ್ರೇ ಪಕ್ಕದಲ್ಲಿ ನೆಲದ ಮೇಲಿತ್ತು. ತಲೆದಿಸೆಯಲ್ಲಿ ಗೋಡೆಯ ಗೂಡಿನಲ್ಲಿ ಪುಸ್ತಕಗಳು ಅಸ್ತವ್ಯಸ್ತವಾಗಿದ್ದುವು. ರಾತ್ರಿ ಉರಿಯುತ್ತಿದ್ದ ದೀಪ ಹೊಗೆಯ ಕಳೆಯೊಡನೆ ಕೋಣೆಯ ಒಂದು ಮೂಲೆಯಲ್ಲಿತ್ತು.

ಕುಮು ವಿಪ್ರದಾಸನ ಮುಖದ ಕಡೆಗೆ ನೋಡಿ ಬೆಚ್ಚಿ ಬಿದ್ದಳು. ಇಷ್ಟು ಅಂದಗೆಟ್ಟ ಅವನ ರೋಗದ ಮುಖವನ್ನು ಅವಳು ಎಂದೂ ಕಂಡವಳಲ್ಲ. ಹಿಂದಿನ ವಿಪ್ರದಾಸನಿಗೂ ಇಂದಿನ ವಿಪ್ರದಾಸನಿಗೂ ಯುಗ ಯುಗಾಂತರದ ಬದಲಾವಣೆಯಿತ್ತು. ಅಣ್ಣನ ಕಾಲಬಳಿ ತಲೆಯಿಟ್ಟು ಕುಮು ಅಳತೊಡಗಿದಳು.

"ಕುಮೂ ! ಬಂದೆಯಾ ? ಬಾ" ಎಂದು ಹೇಳಿ ವಿಪ್ರದಾಸ ಅವಳನ್ನು ಪಕ್ಕದಲ್ಲಿ ಎಳೆದು ಕೂಡಿಸಿದನು. ತಾನು ಬರೆದಿದ್ದ ಕಾಗದದಲ್ಲಿ

ವಿಪ್ರದಾಸ ಅವಳನ್ನು ಬರಬೇಡವೆಂದು ಅರ್ಥಬರುವಂತೆ ಬರೆದಿದ್ದರೂ ಕುಮು ಬರುವಳೆಂದೇ ಅವನ ಮನದಲ್ಲಿ ಆಸೆಯಿತ್ತು. ಅವಳು ಬರಲು ಸಾಧ್ಯವಾದುದನ್ನು ಕಂಡು "ಅವಳಿಗೆ ಯಾವ ಬಗೆಯ ತೊಡಕೂ ಇಲ್ಲ. ಕುಮುವಿನ ಪಾಲಿಗೆ ಅವಳ ಸಂಸಾರ ಸಹಜವಾಗಿದೆ" ಎಂದು ಅವನ ಮನಸ್ಸಿಗೆ ಅನ್ನಿಸಿತು. ಇವರ ಕಡೆಯಿಂದಲೇ ಕುಮುವನ್ನು ಕರೆತರಲು ಪಲ್ಲಕ್ಕಿ ಮತ್ತು ಜನರನ್ನು ಕಳುಹಿಸಬೇಕಾದದ್ದು ಪದ್ಧತಿ. ಆದರೆ ಹಾಗೆ ಆಗದಿದ್ದರೂ ಕೂಡ, "ಕುಮು ಬಂದಳಲ್ಲ" ಎಂದು ಹಿಗ್ಗಿದನು. ಈ ಸಂದರ್ಭದಿಂದ ಮಧುಸೂದನನ ಮನೆಯಲ್ಲಿ ಅವಳಿಗೆ ಇಷ್ಟುಮಟ್ಟಿನ ಸ್ವಾತಂತ್ರ್ಯ ಸ್ವಾಧೀನತೆ ಇದ್ದೀತೆಂದು ವಿಪ್ರದಾಸ ಎಣಿಸಿರಲಿಲ್ಲ.

ಕುಮು ತನ್ನೆರಡು ಕೈಗಳಿಂದಲೂ ವಿಪ್ರದಾಸನ ಗುಂಗುರು ಕೂದಲನ್ನು ಸರಿಪಡಿಸುತ್ತ "ಅಣ್ಣಾ, ನಿನ್ನ ಮುಖ ಹೀಗೇಕಾಗಿದೆ?" ಎಂದಳು.

"ನನ್ನ ಮುಖ ಲಕ್ಷಣವಾಗುವಂತಹ ಘಟನೆ ಸದ್ಯದಲ್ಲಿ ಏನೂ ಸಂಭವಿಸಿಲ್ಲವಲ್ಲ. ಆದರೆ ನಿನ್ನದು ಇದೆಂತಹ ಅವಸ್ಥೆ, ಮುಖ ಒಮ್ಮೆಗೇ ಬಿಳಿಚಿಕೊಂಡು ಹೋಗಿದೆಯಲ್ಲ."

ಇಷ್ಟರಲ್ಲಿ ಸುದ್ದಿ ತಿಳಿದು ಕ್ಷೇಮಾ ಅತ್ತೆ ಬಂದು ನಿಂತಳು. ಸಂಗಡಲೇ ಬಾಗಿಲ ಬಳಿ ಬಂದು ಹಿಂಡು ಆಳುಕಾಳುಗಳು ಗುಂಪುಕೂಡಿದರು. ಕ್ಷೇಮಾ ಅತ್ತೆಗೆ ನಮಸ್ಕಾರ ಮಾಡುತ್ತಲೇ ಆಕೆ ಅವಳನ್ನೆತ್ತಿ ಎದೆಗಪ್ಪಿಕೊಂಡು ನೆತ್ತಿಯನ್ನು ಮುದ್ದಿಟ್ಟಳು. ದಾಸ ದಾಸಿಯರು ಬಂದು ಕೈ ಮುಗಿದರು. ಎಲ್ಲರೊಡನೆ ಕುಶಲ ಸಂಭಾಷಣೆ ಆದ ಮೇಲೆ ಕುಮು— "ಅತ್ತೆ, ಅಣ್ಣನ ಮುಖ ಬಹಳ ಕೆಟ್ಟುಹೋಗಿದೆ" ಎಂದಳು.

"ಆಗಿಲ್ಲವೆ ಮತ್ತೆ? ನಿನ್ನ ಕೈಯ ಸೇವೆಯಿಲ್ಲದೆ ಅವನ ಮೈ ನೆಟ್ಟಗಾಗುವ ಹಾಗೆಯೇ ಇಲ್ಲ. ಎಷ್ಟೋ ದಿನದ ಅಭ್ಯಾಸವಲ್ಲವೆ?"

"ಅತ್ತೆ, ಕುಮುವನ್ನು ಊಟಮಾಡ ಹೇಳುವುದಿಲ್ಲವೆ."

"ಊಟ ಮಾಡದೆ ಏನು? ಅದನ್ನೂ ಹೇಳಬೇಕೇನು? ಅವರ ಕಡೆಯ ಪಲ್ಲಕ್ಕಿಯ ಬೋಯಿಗಳು, ಕಾವಲಿನವರು ಎಲ್ಲರನ್ನೂ ಕೂಡಿಸಿ

ಬಂದಿರುವೆ. ಅವರುಗಳಿಗೆ ಊಟಮಾಡಿಸಿ ಬರುತ್ತೇನಪ್ಪ. ನೀವಿಬ್ಬರೂ ಇನ್ನು ಸ್ವಲ್ಪ ಮಾತನಾಡುತ್ತಿರಿ. ನಾನು ಹೋಗುವೆ."

ವಿಪ್ರದಾಸ ಕ್ಷೇಮಾ ಅತ್ತೆಗೆ ಸನ್ನೆಮಾಡಿ ಹತ್ತಿರ ಕರೆದು ಕಿವಿಯಲ್ಲಿ ಏನೋ ಹೇಳಿದ. ಅತ್ತೆಯು ಮನೆಯ ಆಳುಕಾಳುಗಳಿಗೆ ಯಾವ ವಿಧವಲ್ಲಿ ಮರ್ಯಾದೆಮಾಡಿ ಕಳುಹಿಸಬೇಕೆಂಬ ವಿಷಯವಾಗಿ ಸಲಹೆ ಕೊಡುತ್ತಿರುವನೆಂದು ಕುಮು ಅರಿತಳು. ಈ ಸಲಹೆ ಆಲೋಚನೆಗಳ ವಿಷಯಕ್ಕೆ ಈಗ ಕುಮು ಹೊರಗಿನವಳಾಗಿಬಿಟ್ಟಳು. ಅವಳ ಅಭಿಪ್ರಾಯ ಏನೂ ಇಲ್ಲ. ಈ ಸ್ಥಿತಿ ಅವಳಿಗೆ ಏನೇನೂ ರುಚಿಸಲಿಲ್ಲ. ಕುಮುವೂ ಅದಕ್ಕೆ ಮುಯ್ಯಿ ತೀರಿಸಿಕೊಳ್ಳಲು ನಿರ್ಧರಿಸಿದಳು. ಈ ಮನೆಯಲ್ಲಿ ತನ್ನ ಬಹುದಿನದ ಸ್ಥಾನವನ್ನು ಮತ್ತೆ ವಹಿಸಿಕೊಳ್ಳುವ ಕೆಲಸವನ್ನು ಪ್ರಾರಂಭಿಸಿದಳು.

ಮೊಟ್ಟ ಮೊದಲು ಅಣ್ಣನ ನಚ್ಚಿನ ಪರಿಚಾರಕ ಗೋಕುಲನಿಗೆ ಕಿವಿಮಾತಿನಲ್ಲಿ ಏನೋ ಅಪ್ಪಣೆಕೊಟ್ಟಳು. ಅನಂತರ ತನ್ನ ಮನಸ್ಸಿಗೊಪ್ಪುವಂತೆ ಕೊಟಡಿಯನ್ನು ಅಣಿಮಾಡತೊಡಗಿದಳು. ಟ್ರೇ, ಬಟ್ಟಲು, ಲ್ಯಾಂಪು, ಖಾಲಿ ಸೋಡಾ ಸೀಸೆ, ಬೆತ್ತಹರಿದಿದ್ದ ಒಂದು ಕುರ್ಚಿ, ಕೆಲವು ಕೊಳಕು ಟವಲುಗಳು ಮತ್ತು ಬನಿಯನ್ನುಗಳು ಮೊದಲಾದುವುಗಳನ್ನು ಹೊರಗಿನ ವರಾಂಡಕ್ಕೆ ಸರಿಸಿದಳು. "ಷೆಲ್ಫಿ" ನ ಮೇಲಿನ ಪುಸ್ತಕಗಳನ್ನು ಸರಿಯಾಗಿ ಜೋಡಿಸಿಟ್ಟಳು. ಅಣ್ಣನ ಕೈಗೆ ಎಟಕುವಂತೆ ಟೀಪಾಯ್ ಒಂದನ್ನು ಸರಿಸಿ ಅದರ ಮೇಲೆ ಓದುವ ಪುಸ್ತಕ, ಕಲಮ್ ದಾನಿ, ಬ್ಲಾಟಿಂಗ್ ಪ್ಯಾಡು, ಕುಡಿಯುವ ನೀರಿನ ಗಾಜಿನ ಹೂಜಿ ಮತ್ತು ಟಂಬ್ಲರ್, ಸಣ್ಣದೊಂದು ಕನ್ನಡಿ, ತಲೆಬಾಚಿಕೊಳ್ಳುವ ಬ್ರಷ್ ಮೊದಲಾದುವನ್ನು ಅಣಿಮಾಡಿ ಇಟ್ಟಳು.

ಈ ನಡುವೆ ಗೋಕುಲ ಹಿತ್ತಾಳೆ ಹೂಜಿಯಲ್ಲಿ ಬಿಸಿನೀರನ್ನೂ, ಒಂದು ಹಿತ್ತಾಳೆಯ ಬೋಗುಣಿ, ಮಡಿ ಟವಲುಗಳು ಇವುಗಳನ್ನೂ ತಂದು ಬೆತ್ತದ ಕುರ್ಚಿಯ ಮೇಲಿಟ್ಟನು. ಎಳ್ಳಷ್ಟಾದರೂ ಒಪ್ಪಿಗೆಯನ್ನು ನಿರೀಕ್ಷಿಸದೆ ಕುಮು ಬಿಸಿನೀರಿನಲ್ಲಿ ಟವಲ್ ನೆನೆಸಿ ವಿಪ್ರದಾಸನ ಕೈ ಮುಖಗಳನ್ನು ಒರಸಿ ಅವನ ತಲೆಗೂದಲನ್ನು ಬಾಚಿದಳು. ವಿಪ್ರದಾಸ ಎಳೆಯ

ಮಗುವಿನಂತೆ ಸದ್ದಿಲ್ಲದೆ ಸಹಿಸಿಕೊಂಡಿದ್ದ. ಯಾವಾಗ ಯಾವ ಔಷಧ ಕೊಡಬೇಕು, ಪಥ್ಯದ ನಿಯಮವೇನು ಎಂಬುದನ್ನೆಲ್ಲವನ್ನೂ ವಿಚಾರಿಸಿ ತಿಳಿದುಕೊಂಡು ತನ್ನ ಬಾಳುವೆಯಲ್ಲಿ ಬೇರೆಲ್ಲೂ ಯಾವ ಬಗೆಯ ಕೊರತೆಯೂ ಇಲ್ಲವೆನ್ನುವಂತೆ ಸವರಿಸಿಕೊಂಡು ಕುಳಿತಳು.

ವಿಪ್ರದಾಸ "ಇವಳ ಈ ನಡವಳಿಕೆಯ ಅರ್ಥವೇನು ?" ಎಂದು ಮನದಲ್ಲೇ ಯೋಚಿಸತೊಡಗಿದ. ನೋಡಿಕೊಂಡು ಹೋಗಲು ಬಂದಿರುವಳು ಎಂದು ಯೋಚಿಸಿದ್ದ. ಆದರೆ ಆ ಬಗೆಯ ಲಕ್ಷಣ ಏನೂ ಕಾಣಲಿಲ್ಲ. ಅತ್ತೆಯ ಮನೆಯಲ್ಲಿ ಕುಮುವಿನ ಸಂಬಂಧ ಎಷ್ಟು ಮಟ್ಟಿಗೆ ಹೊಂದಿದೆ ಎನ್ನುವುದನ್ನು ತಿಳಿಯಬೇಕೆಂದು ವಿಪ್ರದಾಸನ ಬಯಕೆ. ಆದರೆ ಸ್ಪಷ್ಟವಾಗಿ ಪ್ರಶ್ನಿಸಲು ಸಂಕೋಚಪಡುತ್ತಿದ್ದ. ಕುಮುವಿನ ಬಾಯಿಂದಲೇ ಈ ವಿವರ ತಿಳಿದೀತೆಂದು ನಿರೀಕ್ಷಿಸುತ್ತಿದ್ದ. ಮೆಲ್ಲಮೆಲ್ಲನೆ ಒಮ್ಮೆ "ನೀನು ಇವತ್ತು ಎಷ್ಟು ಹೊತ್ತಿಗೆ ಹೋಗಬೇಕು ?" ಎಂದು ಕೇಳಿದ.

ಕುಮು "ಹೋಗಬೇಕಾಗಿಲ್ಲ" ಎಂದಳು.

ವಿಪ್ರದಾಸ ವಿಸ್ಮಯಗೊಂಡವನಾಗಿ "ಇದಕ್ಕೆ ನಿಮ್ಮ ಅತ್ತೆಯ ಮನೆಯವರ ಆಕ್ಷೇಪಣೆ ಏನೂ ಇಲ್ಲವೇ ?" ಎಂದು ಕೇಳಿದ.

"ಇಲ್ಲ, ನಮ್ಮ ಯಜಮಾನರ ಒಪ್ಪಿಗೆಯಿದೆ."

ವಿಪ್ರದಾಸ ತೆಪ್ಪನಿದ್ದ. ಕುಮು ಮನೆಯ ಮೂಲೆಯ ಮೇಜಿನ ಮೇಲೆ ವಸ್ತ್ರವೊಂದನ್ನು ಹರವಿ ಅದರ ಮೇಲೆ ಔಷಧದ ಸೀಸೆ, ಮೊದಲಾದುವನ್ನು ಅಣಿಮಾಡತೊಡಗಿದಳು. ಸ್ವಲ್ಪ ಹೊತ್ತಿನ ಮೇಲೆ ವಿಪ್ರದಾಸ "ಹಾಗಾದರೆ ನೀನು ನಾಳೆ ಹೊರಡಬೇಕೇನು ?" ಎಂದ.

"ಇಲ್ಲ. ಇನ್ನು ನಾನು ಕೆಲವು ದಿನಗಳು ನಿನ್ನ ಹತ್ತಿರವೇ ಇರುವೆ."

ನಾಯಿ ಟಾಮಿ, ಸೋಫಾದ ಕೆಳಗೆ ನೆಮ್ಮದಿಯಾಗಿ ನಿದ್ರೆಯಲ್ಲಿ ಮುಳುಗಿತ್ತು. ಕುಮು ಅದನ್ನು ಅದಟಿಸಿ ಅದರ ಪ್ರೀತಿಯ ಉಚ್ಛ್ವಾಸವನ್ನು ಕೆರಳಿಸಿ ಬಿಟ್ಟಳು. ಅದು ನೆಗೆದೆದ್ದು ಕುಮುವಿನ ಮಡಿಲಲ್ಲಿ ಮುಂಗಾಲುಗಳೆರಡನ್ನೂ ಇಟ್ಟುಕೊಂಡು ತನ್ನ ಭಾಷೆಯಲ್ಲಿ ಗಟ್ಟಿಯಾದ ದನಿಯಲ್ಲಿ ಮಾತನ್ನು ಪ್ರಾರಂಭಿಸಿತು. ಕುಮು ಹಠಾತ್ತಾಗಿ ಈ ಗೊಂದಲ

ಎಬ್ಬಿಸಿ ಅದರ ಹಿಂದೆ ತನ್ನನ್ನು ಮರೆಮಾಡಿಕೊಂಡಳೆಂದು ವಿಪ್ರದಾಸ ತಿಳಿದುಕೊಂಡ.

ಸ್ವಲ್ಪ ಹೊತ್ತಾದ ಮೇಲೆ ನಾಯಿಯ ಸಂಗಡ ಆಟ ನಿಲ್ಲಿಸಿ ಕುಮು ತಲೆಯೆತ್ತಿ "ಅಣ್ಣಾ, ನೀನು ಬಾರ್ಲಿ ಕುಡಿಯುವ ಹೊತ್ತಾಯಿತು. ತಂದು ಕೊಡುತ್ತೇನೆ" ಎಂದಳು.

"ಇಲ್ಲ. ಇನ್ನೂ ಹೊತ್ತಾಗಿಲ್ಲ" ಎಂದು ಹೇಳಿ ಕುಮುವಿಗೆ ಸನ್ನೆ ಮಾಡಿ ಹತ್ತಿರ ಕರೆದು ಹಾಸಿಗೆಯ ಪಕ್ಕದಲ್ಲಿ ಕುರ್ಚಿಯ ಮೇಲೆ ಕೂಡಿಸಿದ. ತನ್ನ ಕೈಯಲ್ಲಿ ಅವಳ ಕೈ ಎತ್ತಿಕೊಂಡು "ಕುಮೂ, ನನ್ನ ಹತ್ತಿರ ಮರೆಮಾಚದೆ ಹೇಳು, ನಿನ್ನ ಸ್ಥಿತಿಗತಿ ಹೇಗಿದೆ?" ಎಂದ.

ಆ ಕ್ಷಣದಲ್ಲಿ ಕುಮು ಏನೂ ಹೇಳಲಾರದೆ ಹೋದಳು. ತಲೆ ತಗ್ಗಿಸಿಕೊಂಡು ಕುಳಿತಿದ್ದಳು. ನೋಡುತ್ತ ಇರುವಂತೆಯೇ ಮುಖ ಕೆಂಪೇರಿತು. ಚಿಕ್ಕಂದಿನಂತೆ ವಿಪ್ರದಾಸನ ವಿಶಾಲವಾದ ಎದೆಯ ಮೇಲೆ ತಲೆಯಿಟ್ಟುಕೊಂಡು ಅಳತೊಡಗಿದಳು. "ಅಣ್ಣಾ ನಾನು ಎಲ್ಲವನ್ನೂ ತಪ್ಪಾಗಿ ತಿಳಿದುಕೊಂಡಿರುವೆ. ನಾನು ಏನೇನೂ ಅರಿಯೆ" ಎಂದಳು.

ವಿಪ್ರದಾಸ ಮೆಲ್ಲ ಮೆಲ್ಲನೆ ಕುಮುವಿನ ತಲೆಯ ಮೇಲೆ ಕೈ ಆಡಿಸತೊಡಗಿದ. ಸ್ವಲ್ಪ ಹೊತ್ತಾದ ಮೇಲೆ "ನಾನು ನಿನಗೆ ಸರಿಯಾಗಿ ನಡೆನುಡಿ ಕಲಿಸಲು ಸಾಧ್ಯವಿಲ್ಲದೆ ಹೋದೆ. ಅಮ್ಮ ಇದ್ದಿದ್ದರೆ ನಿನ್ನನ್ನು ನಿನ್ನ ಅತ್ತೆಯ ಮನೆಗೆ ತಕ್ಕಂತೆ ತಯಾರು ಮಾಡುತ್ತಿದ್ದಳು" ಎಂದ.

ಕುಮು "ನಾನು ಸಂಪೂರ್ಣವಾಗಿ ನಿಮ್ಮ ವಿಷಯ ಮಾತ್ರವೇ ಬಲ್ಲೆ. ಬೇರೆ ಜಾಗದಲ್ಲಿ ಇಲ್ಲಿಗಿಂತ ಇಷ್ಟೊಂದು ವ್ಯತ್ಯಾಸ ಇದ್ದೀತೆಂದು ಭಾವಿಸಿರಲಿಲ್ಲ. ಚಿಕ್ಕಂದಿನಿಂದ ನಾನು ಏನೇನು ಊಹಿಸಿದ್ದೇನೋ ಅದೆಲ್ಲ ನಿಮ್ಮ ಪಡಿಯಚ್ಚಿನದೆ. ಅದರಿಂದಲೇ ಮನದಲ್ಲಿ ಸ್ವಲ್ಪವೂ ಭಯವಾಗಲಿಲ್ಲ. ಅಪ್ಪ ಅಮ್ಮನಿಗೆ ಅನೇಕ ಸಲ ಕಷ್ಟ ಕೊಟ್ಟಿದ್ದರು ಬಲ್ಲೆ. ಆದರೆ ಅದು ದುಷ್ಟತನವಾಗಿತ್ತು. ಅವರ ಹಿಂಸೆ ಹೊರಗಿನದು; ಒಳಗಿನದಲ್ಲ. ಇಲ್ಲಿ ಎಲ್ಲ ಒಳಗೊಳಗೇ ನನ್ನನ್ನು ಹೀನಾಯ ಪಡಿಸುವುದಕ್ಕೆ ಎನ್ನುವಂತಿದೆ." ಎಂದಳು.

ವಿಪ್ರದಾಸ ಒಂದು ಮಾತೂ ಆಡದೆ ನಿಟ್ಟುಸಿರು ಬಿಟ್ಟು ಸುಮ್ಮನೆ ಕುಳಿತು ಯೋಚನೆ ಮಾಡತೊಡಗಿದ. ಮಧುಸೂದನ ತಮ್ಮಿಂದ ಸಂಪೂರ್ಣವಾಗಿ ಬೇರೆಯಾಗಿದ್ದ ಇನ್ನೊಂದು ಜಗತ್ತಿನ ಮನುಷ್ಯ ಎಂಬುವುದನ್ನು ಮದುವೆಯ ಪ್ರಾರಂಭದಿಂದಲೇ ತಿಳಿದುಕೊಂಡಿದ್ದ. ಆ ಅಂದಿನ ವಿಷಮ ಉದ್ವೇಗದಿಂದಲೇ ಅವನ ಮೈ ಯಾವ ರೀತಿಯಲ್ಲೂ ನೆಟ್ಟಗಾಗುವಂತಿರಲಿಲ್ಲ. ಈ ಹೆಬ್ಬಾವಿನ ಹಿಡಿತದಿಂದ ಕುಮುವನ್ನು ಉದ್ಧಾರಮಾಡಲು ಯಾವ ಮಾರ್ಗವೂ ಇರಲಿಲ್ಲ. ಎಲ್ಲಕ್ಕಿಂತಲೂ ದೊಡ್ಡ ಸಂಕಟವೆಂದರೆ ಆ ಮನುಷ್ಯನ ಹತ್ತಿರ ಸಾಲಕ್ಕೆ ತನ್ನ ಆಸ್ತಿಯೆಲ್ಲಾ ಈಡಾಗಿದ್ದಿದ್ದು. ಅವಮಾನಕರವಾದ ಈ ಸಂಬಂಧದ ಇರಿತ ಕುಮುವಿಗೂ ತಗಲುವುದು. ಇಷ್ಟುದಿನವೂ ಖಾಯಿಲೆಯಿಂದ ಹಾಸಿಗೆಯಲ್ಲಿ ಮಲಗಿ ವಿಪ್ರದಾಸ ಕೇವಲ ಮಧುಸೂದನನ ಸಾಲದಿಂದ ಬಿಡುಗಡೆ ಹೊಂದುವ ಮಾರ್ಗ ಯಾವುದು ಎಂದು ಮಾತ್ರವೇ ಯೋಚಿಸುತ್ತಿದ್ದ. ಕುಮುವಿನ ಅತ್ತೆಯ ಮನೆಯವರೊಡನೆ ತಮ್ಮ ಸಹಜ ವ್ಯವಹಾರಕ್ಕೆ ಅಡ್ಡಿಯೊದಗೀತೆಂದು ಅವನು ಕಲ್ಕತ್ತೆಗೆ ಬರಲು ಮನಸ್ಸುಳ್ಳವನಾಗಿರಲಿಲ್ಲ. ಕುಮುವಿನಲ್ಲಿ ಅವನಿಗೆ ಸಹಜವಾದ ಸ್ನೇಹದ ಅಧಿಕಾರವಿದ್ದಿತಷ್ಟೆ. ಅದಕ್ಕೆ ಅಡಿಗಡಿಗೆ ಅವಮಾನವಾದೀತೆಂದು ಅವನು ನೂರ್‌ನಗರದಲ್ಲೇ ವಾಸಮಾಡಲು ನಿರ್ಧರಿಸಿದ್ದ. ಬೇರೆ ಯಾರಾದರೊಬ್ಬ ಸಾಹುಕಾರನಲ್ಲಿ ಸಾಲ ತೆಗೆಯುವ ಯತ್ನ ನಡೆಸುವ ಉದ್ದೇಶದಿಂದ ಕಲ್ಕತ್ತೆಗೆ ಬರಬೇಕಾಯಿತು. ಇದು ಬಹಳ ಕಷ್ಟವೆಂದು ಬಲ್ಲ. ಅದರಿಂದ ಈ ದುಶ್ಚಿಂತೆಯ ಹೊರೆ ಅವನ ಎದೆಯ ಮೇಲೆ ಅದುಮಿ ಕುಳಿತಿತ್ತು.

ಸ್ವಲ್ಪ ಹೊತ್ತಿನ ಮೇಲೆ ಕುಮು ವಿಪ್ರದಾಸನಿಂದ ಬೇರೆ ದಿಕ್ಕಿಗೆ ಮೈ ಸ್ವಲ್ಪ ಓರೆ ಮಾಡಿಕೊಂಡು "ಒಳ್ಳೆಯದು, ಅಣ್ಣಾ, ಗಂಡನ ಕಡೆಗೆ ನನ್ನ ಮನಸ್ಸನ್ನು ಯಾವ ಬಗೆಯಲ್ಲೂ ಒಲಿಸಲಾರದೆ ಹೋದೆ. ಇದು ಪಾಪವೇನು ?" ಎಂದಳು.

"ಕುಮು, ಪಾಪ ಪುಣ್ಯದ ವಿಷಯದಲ್ಲಿ ನನ್ನ ಅಭಿಪ್ರಾಯ ಶಾಸ್ತ್ರದೊಂದಿಗೆ ಹೊಂದಿಕೆಯಾಗದೆಂಬ ಸಂಗತಿ ನೀನು ಬಲ್ಲೆಯಲ್ಲವೆ ?"

ಬೇರೆ ಮನಸ್ಸಿನಲ್ಲಿ ಕುಮು ಸಚಿತ್ರವಾದ ಇಂಗ್ಲೀಷ್ ಪತ್ರಿಕೆಯೊಂದರ ಹಾಳೆಗಳನ್ನು ಮಗುಚಿ ಹಾಕುತ್ತ ಕುಳಿತಿದ್ದಳು. ವಿಪ್ರದಾಸ "ಆಯಾ ವ್ಯಕ್ತಿಗಳ ಬದುಕು ಅವರವರ ಘಟನಾವಳಿ ಮತ್ತು ಪರಿಸ್ಥಿತಿಯನ್ನನುಸರಿಸಿ ಬಹಳ ವ್ಯತ್ಯಾಸವಾಗಿರುವುದು. ಒಳ್ಳೆಯದು ಕೆಟ್ಟದು ಎನ್ನುವುದರ ನಿಯಮವನ್ನು ಹೀಗೆಯೇ ಎಂದು ನಿರ್ಧರಿಸಿಬಿಟ್ಟರೆ ಅನೇಕ ವೇಳೆ ನಿಯಮವಾಗಿಯೇ ಇದ್ದುಬಿಡುವುದಲ್ಲದೆ ಧರ್ಮ ಎಂದು ಅನಿಸಿಕೊಳ್ಳದು" ಎಂದ.

ಕುಮು ಮಾಸಪತ್ರಿಕೆಯ ಕಡೆಗೆ ಕಣ್ಣು ತಗ್ಗಿಸಿಕೊಂಡು "ಮೀರಾ ಬಾಯಿಯ ಬಾಳುವೆಯಂತೆ" ಎಂದಳು.

"ಯಾವುದು ಸರಿ. ಯಾವುದು ಸರಿಯಲ್ಲ" ಎನ್ನುವ ದ್ವಂದ್ವ ತನ್ನ ಅಂತರಂಗದಲ್ಲಿ ಕಠಿಣವಾಗಿ ತಲೆದೋರಿದಾಗ ಕುಮುವಿಗೆ ಆ ಕ್ಷಣ ಮೀರಾ ಬಾಯಿಯ ಸಂಗತಿ ನೆನಪಾಗುತ್ತಿತ್ತು. ಯಾರಾದರೂ ತನಗೆ ಮೀರಾ ಬಾಯಿಯ ಆದರ್ಶವನ್ನು ವಿವರಿಸಬಾರದೆ ಎಂದು ಮನಃಪೂರ್ವಕವಾಗಿ ಆಸೆಪಡುತ್ತಿದ್ದಳು.

ಕುಮು ಸ್ವಲ್ಪ ಪ್ರಯತ್ನಪಟ್ಟು ಸಂಕೋಚ ಕಳೆದುಕೊಂಡು ಮಾತನಾಡತೊಡಗಿದಳು. "ಮೀರಾಬಾಯಿ ತನ್ನ ಯಥಾರ್ಥ ಗಂಡನನ್ನು ಹೃದಯಾಂತರಾಳದಲ್ಲಿ ಪಡೆದಿದ್ದುದರಿಂದಲೇ ಕೈಹಿಡಿದ ಗಂಡನನ್ನು ಮನಸ್ಸಿನಿಂದ ದೂರಪಡಿಸಲು ಸಾಧ್ಯವುಳ್ಳವಳಾಗಿದ್ದಳು. ಆದರೆ ಸಂಸಾರಬಿಡುವ ಆ ಮಹತ್ತಾದ ಅಧಿಕಾರ ನನಗಿದೆಯೇನು ?" ಎಂದುಕೊಳ್ಳುವಳು.

ವಿಪ್ರದಾಸ "ಕುಮೂ, ನಿನ್ನ ಗಂಡನನ್ನು ನೀನಂತೂ ಮನಃಪೂರ್ವಕವಾಗಿಯೇ ಪಡೆದೆಯಲ್ಲ." ಎಂದನು.

"ಒಂದಾನೊಂದು ಸಮಯದಲ್ಲಿ ಆ ರೀತಿ ಎಣಿಸಿದ್ದೆ. ಆದರೆ ಸಂಕಟದಲ್ಲಿ ಸಿಕ್ಕಿಕೊಂಡಾಗ ನನ್ನ ಪ್ರಾಣ ಹೇಗೆ ನೀರಸವಾಗಿ ಬಿಟ್ಟದೆಯೆಂಬುದನ್ನು ಕಂಡೆ. ಇಷ್ಟೊಂದು ಪ್ರಯತ್ನಪಡುತ್ತಿರುವೆ; ಆದರೂ ಯಾವ ವಿಧದಲ್ಲೂ ನನ್ನ ಪಾಲಿಗೆ ಆತ ನಾನು ಎಣಿಸಿದಂತೆ ಇರುವನೆಂಬುದನ್ನು ಊಹಿಸಲು ಸಾಧ್ಯವಿಲ್ಲದಿದೆ. ಇದೇ ನನಗೆ ಎಲ್ಲಕ್ಕೂ ಹೆಚ್ಚಿನ ದುಃಖ."

"ಕುಮೂ, ಮನಸ್ಸಿನಲ್ಲಿ ಏರಿಳಿತ ನಡೆಯುತ್ತಿರುವುದು ಸಹಜವೇ. ಏನೂ ಭಯಪಡಬೇಡ. ಮೇಲಿಂದ ಮೇಲೆ ರಾತ್ರಿ ಬಂದೇ ಬರುವುದು. ಹಾಗೆಂದು ಹಗಲು ಜೀವ ಕಳೆದುಕೊಳ್ಳುವುದೇನು? ಯಾವುದನ್ನು ಪಡೆದಿರುವೆಯೋ ಅದು ನಿನ್ನ ಪ್ರಾಣದೊಡನೆ ಒಂದುಗೂಡಿ ಹೋಗಿದೆ."

"ಹಾಗೆಯೇ ಆಶೀರ್ವಾದ ಮಾಡು. ಅದನ್ನು ನಾನು ಕಳೆದುಕೊಳ್ಳದಿರಲಿ. ನಿರ್ದಯನಾದ ಆತ ಸಂಕಟಪಡಿಸುವುದು ಆತನಿಗೇ ಸಂಕಟವಾಗಲಿ. ಅಣ್ಣಾ, ನನ್ನ ವಿಷಯ ಚಿಂತಿಸಲಾರಂಭಿಸಿ ನಾನು ನಿನ್ನನ್ನು ದಣಿಸಿಬಿಟ್ಟೆ."

"ಕುಮೂ, ನಿನ್ನ ಎಳೆವಯಸ್ಸಿನಿಂದಲೂ ನಿನ್ನ ವಿಷಯವನ್ನೇ ಯೋಚಿಸುವುದು ನನಗೆ ಅಭ್ಯಾಸವಾಗಿ ಹೋಗಿದೆ. ಈಗ ಏನಾದರೂ ನಿನ್ನ ವಿಷಯ ಯೋಚಿಸುವುದನ್ನು ಬಿಟ್ಟುಬಿಡುವುದಾದರೆ ಎಲ್ಲ ಶೂನ್ಯವಾಗಿ ಕಾಣುವುದು. ಆ ಶೂನ್ಯತೆಯಲ್ಲಿ ಏನೂ ತೋಚದೆ ಮನಸ್ಸು ಹೀಗೆ ದಣಿದುಬಿಟ್ಟದೆ."

ಕುಮು ವಿಪ್ರದಾಸನ ಪಾದಗಳ ಮೇಲೆ ಕೈ ಆಡಿಸುತ್ತ "ನನಗಾಗಿ ನೀನೇನೂ ಯೋಚನೆ ಮಾಡಬೇಡ. ನನ್ನನ್ನು ರಕ್ಷಿಸುವವನು ಒಳಗೇ ಇದ್ದಾನೆ. ನನಗೆ ವಿಪತ್ತಿಲ್ಲ." ಎಂದಳು.

"ಒಳ್ಳೆಯದು; ಆ ವಿಷಯ ಹಾಗಿರಲಿ. ನಿನಗೆ ಹಿಂದೆ ಕೀರ್ತನೆ ಕಲಿಸುತಿದ್ದೆನಲ್ಲ, ಹಾಗೆಯೇ ಇವತ್ತು ಕಲಿಸೋಣವೆಂದು ಮನಸ್ಸಾಗುತ್ತಿದೆ."

"ಅದೃಷ್ಟ ಚೆನ್ನಾಗಿದ್ದು ಕಲಿತಿದ್ದೆ. ಅಣ್ಣಾ, ಅವೇ ನನ್ನನ್ನು ಬದುಕಿಸಿದ್ದು. ಆದರೆ ಇವೊತ್ತು ಬೇಡ. ಮೊದಲು ನೀನು ಸ್ವಲ್ಪ ಶಕ್ತಿ ಕುದುರಿಸಿಕೊ. ಇವೊತ್ತು ನಾನೇ ಒಂದು ಹಾಡು ಹಾಡುವೆ."

ಅಣ್ಣನ ತಲೆದಿಸೆಯಲ್ಲಿ ಕುಳಿತು ಕುಮು ಮೆಲ್ಲಮೆಲ್ಲನೆ ಹಾಡತೊಡಗಿದಳು.

"ಪಿಯಾ ಘರ್ ಆಯೇ. ಸೋಹೀ ಪೀತಮ ಪಿಯಪ್ಯಾರ್‌ರೇ
ಮೀರಾಕೇ ಪ್ರಭು ಗಿರಿಧರ್ ನಾಗರ್
ಚರಣಕಮಲ ಬಲಿಹಾರಿ ರೇ—"

(ಪ್ರಿಯಳ ಮನೆಗೆ ಬಂದ, ಅವೇ ಪ್ರಿಯತಮ ಪ್ರಾಣ ಪ್ರಿಯ
ಮೀರೆಯ ಒಡೆಯ ಗಿರಿಧಾರಿ
ಚರಣಕಮಲಕೆ ಶರಣು)

ವಿಪ್ರದಾಸ ಕಣ್ಣು ಮುಚ್ಚಿಕೊಂಡು ಕೇಳತೊಡಗಿದ. ಹಾಡುತ್ತ ಹಾಡುತ್ತ ಕುಮುವಿನ ಕಣ್ಣುಗಳು ಅಪೂರ್ವವಾದೊಂದು ದರ್ಶನದಿಂದ ಹೊಳೆಯತೊಡಗಿದವು. ಅಂತರ್ಯಾನ ಆಕಾಶ ಪ್ರಕಾಶಮಾನವಾಯಿತು. ಪ್ರಿಯತಮ ಮನೆಗೆ ಬಂದಿರುವನು. ಚರಣಕಮಲಗಳನ್ನು ಎದೆಯಲ್ಲಿ ಸ್ಪರ್ಶಿಸುವುದು ಸಾಧ್ಯವಾಗಿದೆ. ಮಿಲನ ಘಟಿಸುವ ಆ ಹೃದಯಾಂತರಾಳದಲ್ಲಿ ಅತ್ಯಂತವಾದ ಸತ್ಯ ಗೋಚರಿಸಿತು. ಹಾಡುತ್ತ ಹಾಡುತ್ತ ಅವಳು ಆ "ಚರಣ ಕಮಲ ಬಲಿಹಾರಿರೇ" ಎಡೆಗೆ ಸೇರಿದ್ದಳು. ಆ ಚರಣ ಕಮಲ ಇಡೀ ಬಾಳುವೆಯನ್ನು ತುಂಬಿ ತುಳುಕಿತು. ಅದಕ್ಕೆ ಅಂತವೇ ಇರಲಿಲ್ಲ. ಸಂಸಾರದ ದುಃಖ, ಅಪಮಾನದ ಎಡೆ, ಎಲ್ಲಿಯೋ ಉಳಿಯಿತು. "ಪಿಯಾ ಘರ್ ಆಯ್" (ಪ್ರಿಯ ಮನೆಗೆ ಬಂದ). ಅದಕ್ಕಿಂತ ಹೆಚ್ಚಿಗೆ ಮತ್ತೇನು ಬೇಕಾಗಿದೆ. ಈ ಕೀರ್ತನೆ ಎಂದೂ ಮುಗಿಯದಿರುವುದಾದರೆ ಕುಮು ಶಾಶ್ವತವಾಗಿ ರಕ್ಷೆ ಪಡೆಯುವಳು.

ಗೋಕುಲ ಕೆಲವು ರೊಟ್ಟಿಯ ಚೂರುಗಳನ್ನೂ ಮತ್ತು ಒಂದು ಬಟ್ಟಲು ಬಾರ್ಲಿಯನ್ನೂ ತಂದು ಟೀಪಾಯಿಯ ಮೇಲಿಟ್ಟು ಹೋದ. ಕುಮು ಕೀರ್ತನೆ ನಿಲ್ಲಿಸಿ "ಅಣ್ಣಾ, ಕೆಲವು ದಿನಗಳ ಹಿಂದೆ ಮನಸ್ಸಿನಲ್ಲೇ ಗುರುವನ್ನು ಅರಸುತಿದ್ದೆ. ನನಗೆ ಗುರುವಿನ ಆವಶ್ಯಕತೆಯೇನಿದೆ ? ನೀನು ನನಗೆ ಕೀರ್ತನೆಯ ಮೂಲಕ ಮಂತ್ರೋಪದೇಶ ಕೊಟ್ಟಿರುವೆ."

"ಕುಮೂ ನನ್ನನ್ನು ನಾಚಿಕೆಗೊಳಿಸಬೇಡ. ನನ್ನಂತಹ ಗುರು ಬೀದಿ ಬೀದಿಯಲ್ಲಿ ಸಿಕ್ಕುವನು. ಅವರು ಇತರರಿಗೆ ಯಾವ ಮಂತ್ರವನ್ನು ಉಪದೇಶಿಸುವರೋ ತಾವೇ ಅದರ ಅರ್ಥವನ್ನು ಅರಿಯರು. ಕುಮೂ, ಎಷ್ಟು ದಿನಗಳವರೆಗೆ ಇಲ್ಲಿರುವೆ ? ನಿಜಸ್ಥಿತಿ ಹೇಳು ಮತ್ತೆ ?"

"ಎಂದಿನವರೆಗೆ ಕರೆ ಬರುವುದಿಲ್ಲವೋ ಅಂದಿನವರೆಗೆ."

"ನೀನು ಇಲ್ಲಿಗೆ ಬರಬೇಕೆಂದು ಇಷ್ಟಪಟ್ಟಿದ್ದೆಯೇನು ?"

"ಇಲ್ಲ. ನಾನು ಬಯಸಲಿಲ್ಲ."

"ಇದರ ಅರ್ಥ !"

“ಅರ್ಥವ ಸಂಗತಿ ಯೋಚಿಸಿ ಲಾಭವಿಲ್ಲ. ಅಣ್ಣಾ, ಪ್ರಯತ್ನ ಪಟ್ಟರೂ ಅರಿಯಲಾರೆ. ನಿನ್ನ ಹತ್ತಿರಕ್ಕೆ ಬರಲು ಸಾಧ್ಯವಾಯಿತು. ಅದೇ ಯಥೇಷ್ಟ. ಎಷ್ಟು ದಿನಗಳವರೆಗೆ ಇರಲು ಅವಕಾಶವಿದೆಯೋ ಅದು ಸಾಕು. ಅಣ್ಣಾ, ನೀನು ಏನೂ ತಿನ್ನುತ್ತಿಲ್ಲ. ತಿಂದು ಮುಗಿಸು.”

ಆಳು ಬಂದು, ಮುಖರ್ಜಿ ಮಹಾಶಯರು ಬಂದಿರುವರೆಂದು ತಿಳಿಸಿದ. ವಿಪ್ರದಾಸ ಎದ್ದು ನೆಟ್ಟಗೆ ಕುಳಿತವನು “ಬರಹೇಳು” ಎಂದ.

## ೪೭

ಕಾಳೂ ಕೋಣೆಯೊಳಗೆ ಕಾಲಿಡುತ್ತಲೇ ಕುಮು ಅವನಿಗೆ ನಮಸ್ಕಾರ ಮಾಡಿದಳು.

ಕಾಳೂ “ಪುಟ್ಟಮ್ಮಾ ಬಂದೆಯಾ ತಾಯಿ? ಇನ್ನು ಅಣ್ಣನ ಖಾಯಿಲೆ ಗುಣವಾಗಲು ವಿಳಂಬವಾಗದು” ಎಂದ.

ಕುಮುವಿನ ಕಣ್ಣುಗಳಲ್ಲಿ ನೀರು ಉಕ್ಕಿ ಹರಿಯಿತು. ಕಣ್ಣೀರನ್ನು ತಡೆದುಕೊಂಡು, “ಅಣ್ಣಾ, ನಿನ್ನ ಬಾರ್ಲಿಗೆ ನಿಂಬೇ ಹಣ್ಣಿನ ರಸ ಬೆರಸುವುದಿಲ್ಲವೇನು?” ಎಂದಳು.

ವಿಪ್ರದಾಸ ಉದಾಸೀನ ಭಾವದಿಂದ ಕೈ ಆಡಿಸಿದ. ಅರ್ಥಾತ್ ಇಲ್ಲದೆ ಹೋದರೂ ತಾನೆ ನಷ್ಟವೇನು? ವಿಪ್ರದಾಸ ಬಾರ್ಲಿಗಂಜಿ ಕುಡಿಯಲು ಬೇಸರಗೊಳ್ಳುವನೆಂಬುದನ್ನು ಕುಮು ಬಲ್ಲಳು. ಅದರಿಂದಲೇ ಅಣ್ಣನಿಗೆ ಯಾವಾಗ ಬಾರ್ಲಿಗಂಜಿ ಕುಡಿಸಬೇಕಾದರೂ ಅದಕ್ಕೆ ನಿಂಬೆ ಹುಳಿ ಬೆರಸಿ ಸ್ವಲ್ಪ ಪನ್ನೀರು ಹಾಕಿ ಮಂಜುಗಡ್ಡೆ ಬೆರಸಿ ಷರಬತ್ತಿನಂತೆ ಮಾಡಿಕೊಡುತ್ತಿದ್ದಳು. ಆ ಏರ್ಪಾಡೆಲ್ಲ ಈಗ ಇರಲಿಲ್ಲ. ಆದರೂ ವಿಪ್ರದಾಸ ತನ್ನ ರುಚಿಯನ್ನು ಯಾರಿಗೂ ತಿಳಿಸಿರಲಿಲ್ಲ. ಯಾವುದು ಸಿಕ್ಕಿದರೆ ಅದನ್ನು ತನಗೆ ಹಿಡಿಸಿದಷ್ಟು ನಿರಾಸಕ್ತಿಯಿಂದ ಕುಡಿಯುತ್ತಿದ್ದ.

ಬಾರ್ಲಿಗಂಜಿ ಸರಿಯಾದ ರೀತಿಯಲ್ಲಿ ಮಾಡಿಕೊಂಡು ಬರುವುದಕ್ಕಾಗಿ ಕುಮು ಹೊರಟುಹೋದಳು.

ವಿಪ್ರದಾಸ ಉದ್ವಿಗ್ನಮುಖದೊಡನೆ, “ಕಾಳೂ ಅಣ್ಣಾ, ಏನು ಸಂಗತಿ?” ಎಂದ.

"ನಿನ್ನೊಬ್ಬನ ಕೈ ಬರಹದಿಂದ ಹಣ ಸಾಲ ಕೊಡಲು ಯಾರೂ ಒಪ್ಪುವುದಿಲ್ಲ. ಸುಬೋಧನ ಸಹಿಯೂ ಆಗಬೇಕಾಗಿದೆ. ಮಾರ್ವಾಡಿ ಸಾಹುಕಾರರಲ್ಲಿ ಒಬ್ಬೊಬ್ಬರು ಕೊಡಲು ಸಿದ್ಧರಾಗಿರುವರು. ಆದರೆ ಅದು ಸಂಪೂರ್ಣ ಜೂಜಾಡುವ ಹಾಗೆ. ಅತಿ ಹೆಚ್ಚಿನ ದರದ ಬಡ್ಡಿ ಕೇಳುತ್ತಾರೆ. ಅದು ನಮ್ಮಿಂದ ಸಾಧ್ಯವಿಲ್ಲ."

"ಕಾಳೂ ಅಣ್ಣಾ. ಸುಬೋಧನನ್ನು ಹೊರಟು ಬರಹೇಳಿ ತಂತಿ ಕೊಡಬೇಕು. ಇನ್ನು ಸಾವಕಾಶ ಮಾಡಿದರೆ ನಡೆಯದು."

"ನನಗೂ ಸರಿಯೆನಿಸುತ್ತಿಲ್ಲ. ಹಿಂದಿನ ಸಲ ನಿನ್ನ ಆ ಉಂಗುರ ಮಾರಿ ಬಂದ ಹಣ ತೆಗೆದುಕೊಂಡು ಅಸಲಿನಲ್ಲಿ ಒಂದು ಭಾಗ ತೀರಿಸಲು ಹೋಗಿದ್ದೆ. ಮಧುಸೂದನ ತೆಗೆದುಕೊಳ್ಳಲು ಒಪ್ಪಲಿಲ್ಲ. ಆ ಕ್ಷಣ ಸಂಗತಿ ಅನುಕೂಲವಾಗಿಲ್ಲ ಎಂದು ಸ್ಥಿರವಾಯಿತು. ತನ್ನ ಇಷ್ಟ ಬಂದಾಗ ಒಂದು ದಿನ ಇದ್ದಕ್ಕಿದ್ದಂತೆ ಯಾವಾಗಲೋ ಕುಣಿಕೆ ಬಿಗಿಮಾಡಿ ಬಿಡಬಹುದು."

ವಿಪ್ರದಾಸ ಯೋಚಿಸುತ್ತ ತೆಪ್ಪನೆ ಕುಳಿತಿದ್ದ.

ಕಾಳು ಮಾತು ಮುಂದುವರಿಸಿದ—"ಅಣ್ಣಾ, ಪುಟ್ಟ ಇದ್ದಕ್ಕಿದ್ದ ಹಾಗೆ ಇವತ್ತು ಬೆಳಗ್ಗೆ ಬಂದಿರುವಳಲ್ಲ. ಜಗಳವಾಡಿಕೊಂಡು ಬಂದಿಲ್ಲ. ವಷ್ಟೆ? ಮಧುಸೂದನನನ್ನು ರೇಗಿಸುವಂತಹ ಸ್ಥಿತಿ ನಮಗಿಲ್ಲ. ಈ ವಿಷಯ ನೆನಪಿನಲ್ಲಿಡಬೇಕು."

"ಕುಮು ತನ್ನ ಗಂಡನ ಸಮ್ಮತಿ ಹೊಂದಿಯೇ ಬಂದಿರುವುದಾಗಿ ಹೇಳುತ್ತಾಳೆ."

"ಸಮ್ಮತಿಯ ಸ್ವರೂಪ ಹೇಗಿದೆಯೆನ್ನುವುದನ್ನು ಅರಿತಲ್ಲದೆ ಮನಸ್ಸಿಗೆ ನೆಮ್ಮದಿಯಿರದು. ಅವನೊಡನೆ ನಾನು ಎಷ್ಟು ಜಾಗರೂಕತೆಯೊಡನೆ ನಡೆದುಕೊಳ್ಳುತ್ತಿರುವೆನೆಂಬ ವಿವರವನ್ನು ನಿನಗೆ ಎಷ್ಟು ತಾನೆ ಹೇಳಲಿ? ಕೋಪದಿಂದ ಮೈ ಆದ್ಯಂತವೂ ಉರಿದು ಹೋಗುತ್ತಿದ್ದರೂ ಶಾಂತವಾಗಿಯೇ ಇದ್ದು ಎಲ್ಲವನ್ನೂ ಸಹಿಸುತ್ತಿರುವೆ. ಗೌರೀಶಂಕರ ಶಿಖರದಂತೆ ನಡುಹಗಲ ಉರಿಬಿಸಿಲಿಗೂ ಅವನ ನೀರುಗಡ್ಡೆ ಕರಗದು-

ಒಂದು, ಸಾಲ ಕೊಟ್ಟವನು; ಸಾಲದುದಕ್ಕೆ ತಂಗಿಯ ಗಂಡ. ಇವನನ್ನು ಸುಧಾರಿಸಿಕೊಂಡು ನಡೆಯುವುದೆಂದರೆ ಸಾಮಾನ್ಯ ವಿಷಯವೇನು ?"

ವಿಪ್ರದಾಸ ಒಂದು ಮಾತೂ ಆಡದೆ ಸುಮ್ಮನೆ ಕುಳಿತಿದ್ದ.

ಕುಮು ಬಾರ್ಲಿಗಂಜಿ ತಂದಳು. ವಿಪ್ರದಾಸನ ಬಾಯ ಹತ್ತಿರ ಬಟ್ಟಲು ಹಿಡಿದು "ಅಣ್ಣಾ, ಕುಡಿದುಬಿಡು" ಎಂದಳು.

ವಿಪ್ರದಾಸ ತನ್ನ ಚಿಂತೆಯ ಲೋಕದಿಂದ ಬೆಚ್ಚಿ ಹಿಂದಿರುಗಿದ. ಯಾವುದೋ ಒಂದು ಗಭೀರವಾದ ಚಿಂತೆಯಲ್ಲಿ ಇಷ್ಟು ಹೊತ್ತೂ ಮುಳು ಗಿದ್ದನೆಂದು ಕುಮು ತಿಳಿದುಕೊಂಡಳು.

ಕಾಳೂ ಕೊಟಡಿಯಿಂದ ಹೊರಗೆ ಹೋಗಲು ಕುಮು ಅವನ ಹಿಂದೆ ಹಿಂದೆ ನಡೆದು ವರಾಂಡದಲ್ಲಿ ಅವನನ್ನು ಹಿಡಿದು ನಿಲ್ಲಿಸಿ "ಕಾಳೂ ಅಣ್ಣಾ, ನನಗೆ ಎಲ್ಲ ಸಂಗತಿಯನ್ನೂ ತಿಳಿಸಬೇಕು" ಎಂದಳು.

"ಏನು ಸಂಗತಿ ತಿಳಿಸಬೇಕು ತಾಯಿ ?"

"ನೀವುಗಳು ಏನೋ ಒಂದು ಚಿಂತೆಯಲ್ಲಿ ಮುಳುಗಿದ್ದೀರಿ."

"ವಿಷಯ ಇದ್ದು ಚಿಂತೆಯಿಲ್ಲದಿರುವುದೇ ? ಸಂಸಾರದಲ್ಲಿ ಇದು ಎಂದಾದರೂ ಸಾಧ್ಯವೇ ? ಇದಂತೂ ಮುಳ್ಳುಗಿಡದ ಹಣ್ಣು. ಹಸಿವಿನ ಬೇಗೆ ಅಡಗಿಸಲು ಕಿತ್ತು ತಿನ್ನಬೇಕು. ಕೊಯ್ಯಹೋದರೆ ಮೈಯೆಲ್ಲ ಮುಳ್ಳು ತುಂಬಿಕೊಳ್ಳುವುದು."

"ಆ ಮಾತೆಲ್ಲ ಆಮೇಲಾಗಲಿ. ಸಂಗತಿಯೇನು ಮೊದಲು ಹೇಳು."

"ಆಸ್ತಿಪಾಸ್ತಿಯ ವಿಷಯ ಹೆಂಗಸರೊಡನೆ ಹೇಳಬಾರದಲ್ಲವೆ !"

"ನೀವುಗಳು ಯಾವ ವಿಷಯವಾಗಿ ಚಿಂತಿಸುತ್ತಿರುವಿರೆಂಬುದನ್ನು ನಾನು ಖಂಡಿತವಾಗಿಯೂ ಬಲ್ಲೆ. ಹೇಳಲೋ ?"

"ಒಳ್ಳೆಯದು ಹೇಳು."

"ನಮ್ಮ ಯಜಮಾನರ ಹತ್ತಿರ ಅಣ್ಣ ಸಾಲ ಮಾಡಿದಾರಲ್ಲ, ಆ ವಿಷಯ"

ಕಾಳೂ ಏನೂ ಉತ್ತರ ಕೊಡಲಾರದೆ ತನ್ನ ದೊಡ್ಡ ದೊಡ್ಡ ಕಣ್ಣುಗಳೆರಡನ್ನೂ ಕೌತುಕದಿಂದ ತೆರೆದು ವಿಸ್ಮಯದಿಂದ ಕೂಡಿ ಕುಮುವಿನ ಕಡೆ ನೋಡುತ್ತಿದ್ದ.

"ನಿಜ ಹೇಳಿದನೋ ಇಲ್ಲವೋ, ನನಗೆ ಹೇಳಲೇಬೇಕು."

"ಎಷ್ಟಾದರೂ ಆ ಅಣ್ಣನ ತಂಗಿಯಲ್ಲವೆ ನೀನು, ವಿಷಯ ಪ್ರಸ್ತಾಪ ಮಾಡುವ ಮುಂಚೆಯೇ ಅದರ ಪೂರ್ಣ ತಿಳಿದುಕೊಂಡು ಬಿಡುತ್ತೀಯೆ."

ಮದುವೆಯಾದಂದಿನಿಂದ ವಿಪ್ರದಾಸನಿಗೂ ತನ್ನ ಗಂಡನಿಗೂ ಇರುವ ಈ ಸಂಬಂಧದ ಅಗೌರವವನ್ನು ಕುಮು ತಿಳಿದಿದ್ದಳು. ಇದು ಜಾಗ್ರತೆ ಅಳಿಸಿಹೋಗಲಿ ಎಂದು ಪ್ರತಿ ನಿತ್ಯವೂ ಮನಃಪೂರ್ವಕವಾಗಿ ಬಯಸುತ್ತಿದ್ದಳು. ವಿಪ್ರದಾಸನ ಹೃದಯದಲ್ಲಿ ಈ ಅಗೌರವ ಶೂಲದಂತೆ ಇರಿಯುತ್ತಿದೆ ಎಂಬ ವಿಷಯವಾಗಿ ಕುಮುವಿಗೆ ಸಂದೇಹವೇ ಇರಲಿಲ್ಲ. ಆ ದಿನ ನವೀನ ವಿಪ್ರದಾಸನ ಕಾಗದಕ್ಕೆ ಅರ್ಥಮಾಡಿದಾಗಲೇ ಎಲ್ಲಕ್ಕೂ ಬುಡದಲ್ಲಿ ಈ ಲೇವಾದೇವಿಯ ಸಂಬಂಧ ಇದೆಯೆಂದು ತಿಳಿದಿದ್ದಳು. ಅಣ್ಣನ ಮೈ ಇಷ್ಟೊಂದು ಸೊರಗಿರಲು ಕಾರಣವೇನು, ಯಾವ ಕೆಲಸದ ನಿಮಿತ್ತ ಅಣ್ಣ ಕಲ್ಕತ್ತೆಗೆ ಬಂದಿರುವನು, ಇವೆಲ್ಲವನ್ನೂ ಕುಮು ಊಹಿಸಿ ಬಿಟ್ಟಳು.

"ಕಾಳೂ ಅಣ್ಣಾ, ನನ್ನ ಹತ್ತಿರ ಮರೆಮಾಚಬೇಡ. ಅಣ್ಣ ಹಣವನ್ನು ಸಾಲ ತೆಗೆಯಲು ಬಂದಿದಾರೆ. ಅಲ್ಲವೆ?"

"ಮತ್ತೆ, ಸಾಲ ಮಾಡಿಯೇ ಸಾಲ ತೀರಿಸಬೇಕು. ಹಣವಂತೂ ಆಕಾಶದಿಂದ ಉದುರುವುದಿಲ್ಲವಲ್ಲ. ಸಂಬಂಧೀಕರಲ್ಲಿ ಸಾಲಗಾರನಾಗಿರುವುದಂತೂ ಸರಿಯಲ್ಲವಷ್ಟೇ"

"ಅದು ನ್ಯಾಯವಾದ ಮಾತೇ. ಹಾಗಾದರೆ ಹಣಕ್ಕೆ ಏರ್ಪಾಡು ಮಾಡಲು ಸಾಧ್ಯವಾಯಿತೇನು?"

"ಪ್ರಯತ್ನಮಾಡಿ ನೋಡುತ್ತಿದ್ದೇನೆ. ಆಗುತ್ತೆ, ಅದಕ್ಕೆ ಭಯವೇಕೆ?"

"ಇಲ್ಲ. ನಾ ಬಲ್ಲೆ. ಇನ್ನೂ ಅನುಕೂಲವಾಗಲಿಲ್ಲ."

"ಒಳ್ಳೆಯದು. ಪುಟ್ಟೀ, ಎಲ್ಲವನ್ನೂ ನೀನು ತಿಳಿದುಕೊಂಡೇ ಇರು ವಾಗ ನನ್ನನ್ನು ಕೇಳುವುದಾದರೂ ಯಾಕೆ? ಚಿಕ್ಕಂದಿನಲ್ಲಿ ಒಂದು ದಿನ ನನ್ನ ಮೀಸೆ ಹಿಡಿದು ಎಳೆಯುತ್ತ ಮೀಸೆ ಹೇಗೆ ಬೆಳೆಯುತ್ತೆ ಎಂದು ಕೇಳಿದ್ದೆ. ಸಮಯಪರಿತು ಮೀಸೆಯ ಬೀಜ ನೆಟ್ಟಿದ್ದೆ ಎಂದು ಹೇಳಿದ್ದೆ. ಅಷ್ಟಕ್ಕೇ ಆ ಪ್ರಶ್ನೆ ಅಲ್ಲಿಗೇ ಕೊನೆಯಾಗಿತ್ತು. ಈಗಾಗಿದ್ದರೆ ಉತ್ತರ ಕೊಟ್ಟು ಸಮಾಧಾನ ಮಾಡಲು ಡಾಕ್ಟರನ್ನು ಕರೆಯಬೇಕಾಗುತ್ತಿತ್ತು. ಎಲ್ಲ ವಿಷಯವನ್ನು ನಿನಗೆ ಸ್ಪಷ್ಟವಾಗಿ ತಿಳಿಸಬೇಕೆಂದು ಪ್ರಪಂಚದ ನಿಯಮವೇನೂ ಇಲ್ಲವಲ್ಲ."

"ಇದೋ, ನಾನು ಹೇಳುವೆ ಕಾಳೂ ಅಣ್ಣಾ. ಅಣ್ಣನ ವಿಷಯವಾಗಿ ಎಲ್ಲ ಮಾತನ್ನೂ ನನಗೆ ಹೇಳಬೇಕು."

"ಯಾವ ವಿಧದಲ್ಲಿ ಅಣ್ಣನ ಮೀಸೆ ಬೆಳೆಯಿತು, ಅದನ್ನೂ ಹೇಳ ಬೇಕೆ?"

"ನೋಡು ಹೀಗೆ ಹಾಸ್ಯಮಾಡಿ ಮಾತನ್ನು ಅಡಗಿಸಿದರೆ ಸಾಗದು. ಅಣ್ಣನ ಮುಖ ನೋಡಿದೊಡನೆಯೇ ಹಣ ಒದಗಿಸಲು ಸಾಧ್ಯವಿಲ್ಲದೆ ಹೋಯಿತೆಂದು ನಾನು ತಿಳಿದುಕೊಂಡೆ?"

"ಒದಗಿಸಲು ಸಾಧ್ಯವಾಗದಿದ್ದರೂ ಅದನ್ನು ತಿಳಿದು ನಿನಗೆ ಲಾಭ ವೇನು?"

"ಅದನ್ನು ನಾನು ಹೇಳಲಾರೆ. ಆದರೆ ನಾನು ತಿಳಿಯಲೇಬೇಕು. ಹಣ ಸಾಲ ತರಲು ನಿನಗೆ ಸಾಧ್ಯವಿಲ್ಲ ಅಲ್ಲವೆ?"

"ಹೌದು. ಸಾಧ್ಯವಾಗಲಿಲ್ಲ."

"ಸುಲಭದಲ್ಲಿ ಸಾಧ್ಯವಾಗದು ಅಲ್ಲವೆ?"

"ಸಾಧ್ಯವೇನೋ ಸಾಧ್ಯ, ಸಂದೇಹವಿಲ್ಲ. ಆದರೆ ಅದು ಅಷ್ಟು ಸುಲಭವಲ್ಲ. ತಂಗೀ, ನಿನ್ನ ಮಾತಿಗೆ ಉತ್ತರ ಕೊಡುತ್ತ ಕಾಲ ಕಳೆ

ಯುವುದರ ಬದಲು ಹಣ ಶೇಖರಿಸುವ ಪ್ರಯತ್ನ ಮಾಡಿದರೆ ಕೆಲಸ ಸ್ವಲ್ಪ ಮುಂದುವರಿಯಲು ಅವಕಾಶವಾದೀತು. ನಾನು ಹೋಗುತ್ತೇನೆ."

ಕಾಳು, ಸ್ವಲ್ಪದೂರ ಹೋದವನು ಪುನಃ ಹಿಂದಿರುಗಿ ಬಂದು "ಪುಟ್ಟೀ, ಇನ್ನೊತ್ತು ಇಲ್ಲಿಗೆ ನೀನು ಹೊರಟು ಬಂದಿರುವೆಯಲ್ಲ, ಅದರಲ್ಲಿ ಏನೂ ಮುಳ್ಳು ಅಡಗಿಲ್ಲವಷ್ಟೆ? ಖಂಡಿತ ನಿಜ ಹೇಳು?"

"ಇದೆಯೋ ಇಲ್ಲವೋ ನಾನು ಸ್ಪಷ್ಟವಾಗಿ ತಿಳಿಯೆ."

"ಯಜಮಾನರ ಒಪ್ಪಿಗೆ ಪಡೆದಿರುವೆಯೇನು?"

"ನಾನು ಕೇಳದೆಯೇ ಅವರು ಒಪ್ಪಿಗೆ ಕೊಟ್ಟಿರುವರು."

"ಕೋಪಿಸಿಕೊಂಡೆ?"

"ಅದೊಂದನ್ನೂ ನಾನು ಸರಿಯಾಗಿ ಅರಿಯೆ. ಹೇಳಿ ಕಳುಹಿಸುವ ತನಕ ಬರಬೇಕಾಗಿಲ್ಲವೆಂದು ಹೇಳಿದ್ದಾರೆ."

"ಅದೇನೂ ಕೆಲಸಕ್ಕೆ ಬರುವ ಮಾತಲ್ಲ. ಅದಕ್ಕೆ ಮುಂಚೆಯೇ ಹೋಗು. ನೀನೇ ಸ್ವತಃ ಹೋಗು."

"ಹೋದರೆ ಅಪ್ಪಣೆ ಪಾಲಿಸಿದಂತಾಗದು."

"ಆ ವಿಷಯ ಹಾಗಿರಲಿ, ನಾನು ನೋಡಿಕೊಳ್ಳುತ್ತೇನೆ."

ಅಣ್ಣ ಈ ಸಮಯದಲ್ಲಿ ಯಾವ ಸಂಕಟಕ್ಕೆ ಸಿಕ್ಕಿಕೊಂಡಿರುವರೊ ಅದಕ್ಕೆ ಸಂಪೂರ್ಣವಾಗಿ ತಾನೇ ಕಾರಣ ಎನ್ನುವುದನ್ನು ಕುಮು ಯಾವ ವಿಧದಲ್ಲೂ ಮರೆಯಲಾರದಿದ್ದಳು. ತನ್ನನ್ನು ತಾನೇ ಬಲವಾಗಿ ಹೊಡೆದು ಕೊಳ್ಳಬೇಕೆಂದು ಆಸೆಯಾಯಿತು. ಹಲವು ಜನ ಸಂನ್ಯಾಸಿಗಳು ಮುಳ್ಳು ಹಾಸಿಕೊಂಡು ಅದರ ಮೇಲೆ ಮಲಗುವರೆಂದು ಕೇಳಿದ್ದಳು. ಹಾಗೆ ಮಾಡುವುದರಿಂದ ಏನಾದರೂ ಪ್ರಯೋಜನವಾಗುವುದಾದರೆ ಇವಳೂ ಹಾಗೇ ಮಾಡಲು ಸಿದ್ಧಳಾಗಿದ್ದಳು. ಯಾವನಾದರೊಬ್ಬ ಯೋಗಿ, ಯಾರಾದರೊಬ್ಬ ಸಿದ್ಧಪುರುಷ ಅವಳಿಗೆ ಹಾದಿ ತೋರುವುದಾದರೆ ಜೀವಾವಧಿ ಆತನ ದಾಸಿಯಾಗಿರಲು ಒಪ್ಪುವವಳಾಗಿದ್ದಳು. ನಿಜವಾಗಿಯೂ ಅಂತಹವರು ಯಾರಾದರು ಇದ್ದೇ ಇರುವರು. ಆದರೆ ಅವರನ್ನು ಎಲ್ಲಿ, ಹೇಗೆ

ಕಾಣುವುದು ? ತಾನು ಮಾತ್ರ ಹೆಣ್ಣಾಗಿರದಿದ್ದ ಪಕ್ಷದಲ್ಲಿ ಏನಾದರೊಂದು ಪ್ರಯತ್ನ ಮಾಡಲೇಬಹುದಾಗಿತ್ತು. ಆದರೆ ನಡುಕಲ ಅಣ್ಣ ಏನು ಮಾಡುತ್ತಿದ್ದಾನೆ? ಅಣ್ಣನೊಬ್ಬನ ಹೆಗಲಮೇಲೆಯೇ ಎಲ್ಲ ಹೊರೆಯನ್ನೂ ಹೊರಿಸಿಬಿಟ್ಟು ಹೇಗೆ ತಾನೆ ಇಂಗ್ಲೆಂಡಿಗೆ ಹೋಗಿ ಕುಳಿತಿದ್ದಾನೆ?, ಎಂದು ಆಲೋಚಿಸುವಳು.

ಕುಮು ಕೋಣೆಯೊಳಗೆ ಹೋಗಿ ನೋಡಿದಾಗ ವಿಪ್ರದಾಸ ತಾರಸಿಯ ಜಂತಿಗಳನ್ನು ನೋಡುತ್ತ ತೆಪ್ಪನೆ ಹಾಸಿಗೆಯಲ್ಲಿ ಬಿದ್ದುಕೊಂಡಿದ್ದ. ಹೀಗೆ ಮಾಡಿದರೆ ಮೈ ನೆಟ್ಟಗಾದೀತೇನು? ಪ್ರತಿಕೂಲವಾಗಿದ್ದ ಅದೃಷ್ಟದ ಬಾಗಿಲಲ್ಲಿ ತಲೆ ಚಚ್ಚಿಕೊಂಡು ಸಾಯಬೇಕೆಂದು ಮನಸ್ಸಾಗುತ್ತಿತ್ತು.

ಅಣ್ಣನ ತಲೆಯ ಹತ್ತಿರ ಕುಳಿತು ತಲೆಯನ್ನು ಸವರುತ್ತ ಕುಮು "ಚಿಕ್ಕಣ್ಣ ಯಾವಾಗ ಬರುತ್ತಾನೆ?" ಎಂದಳು.

"ಅದನ್ನು ನಾನು ಹೇಳಲು ಸಾಧ್ಯವಿಲ್ಲ."

"ಅವನನ್ನು ಬರಹೇಳಿ ಬರೆಸು."

"ಯಾತಕ್ಕಾಗಿ ಹೇಳು ನೋಡೋಣ?"

"ಕುಟುಂಬದ ಎಲ್ಲ ಹೊಣೆಯೂ ನಿನ್ನೊಬ್ಬನ ಹೆಗಲ ಮೇಲೆಯೇ?" ಈ ಹೊರೆ ನೀನು ಹೊರುವುದಾದರೂ ಹೇಗೆ?"

"ಯಾರಿಗಾದರೊಬ್ಬರಿಗೆ ಅನುಭವಿಸುವ ಹಕ್ಕಿರುತ್ತೆ. ಯಾರಿಗಾದರೊಬ್ಬರಿಗೆ ಹೊಣೆ ಹೊರುವ ಅಧಿಕಾರವಿರುತ್ತೆ. ಈ ಎರಡರಿಂದಲೇ ಸಂಸಾರದ ಹೊಣೆಯನ್ನು ನಾನು ನನ್ನದಾಗಿ ಮಾಡಿಕೊಂಡಿರುವೆ. ಇದನ್ನು ನಾನು ಬೇರೊಬ್ಬರಿಗೆ ಕೊಡುವುದಾದರೂ ಏತಕ್ಕೆ?"

"ನಾನೇನಾದರೂ ಗಂಡಾಗಿದ್ದಿದ್ದರೆ ಬಲವಂತದಿಂದ ನಿನ್ನಿಂದ ಕಸಿದುಕೊಳ್ಳುತ್ತಿದ್ದೆ."

"ಆದ್ದರಿಂದಲೇ ಹೊಣೆ ಹೊರುವುದರಲ್ಲೂ ಒಂದು ಬಗೆಯ ಆಸೆ ಇದೆಯೆಂಬುದನ್ನು ತಿಳಿಯಬಲ್ಲೆಯಲ್ಲವೆ? ನೀನು ಸ್ವತಃ ಹೊರಲಾರೆ ಎಂದೇ ನಿಮ್ಮ ಚಿಕ್ಕಣ್ಣನ ಮೂಲಕ ನಿನ್ನ ಬಯಕೆ ತೀರಿಸಿಕೊಳ್ಳಬಯಸುವೆ. ಯಾಕೆ ನಾನು ಮಾಡಿರುವ ತಪ್ಪಾದರೂ ಏನು?"

"ಅಣ್ಣಾ. ನೀನು ಹಣ ಸಾಲಮಾಡಲು ಬಂದಿರುವೆ."

"ಯಾವ ಕಾರಣದಿಂದ ತಿಳಿದೆ."

"ನಿನ್ನ ಮುಖ ನೋಡಿಯೇ ತಿಳಿದೆ. ಸರಿ, ನಾನು ಏನು ಮಾಡಲೂ ಸಾಧ್ಯವಿಲ್ಲವೇನು ?"

"ಯಾವ ವಿಧದಲ್ಲಿ ಹೇಳು ?"

"ಇದೇ ಮತ್ತೆ ಯಾವುದಾದರೊಂದು ಪತ್ರಕ್ಕೆ ರುಜು ಮಾಡುವುದು. ನನ್ನ ರುಜುವಿಗೆ ಏನೂ ಬೆಲೆಯೇ ಇಲ್ಲವೆ ?"

"ಅಪಾರವಾದ ಬೆಲೆಯಿದೆ. ಅದು ನಮ್ಮ ಹತ್ತಿರ. ಸಾಹುಕಾರರ ಬಳಿಯಲ್ಲಲ್ಲ."

"ನಿನ್ನ ಕಾಲಿಗೆ ಬೀಳುವೆ. ಅಣ್ಣಾ, ಹೇಳು. ನಾನೇನು ಮಾಡಲು ಸಾಧ್ಯವಿದೆ ?"

"ಲಕ್ಷ್ಮಿಯಂತೆ ನೆಮ್ಮದಿಯಿಂದಿದ್ದು ಧೈರ್ಯದಿಂದ ನೋಡುತ್ತಿರು. ಸಂಸಾರದಲ್ಲಿ ಅದೂ ಒಂದು ದೊಡ್ಡ ಕೆಲಸವೆಂದು ನೆನಪಿಡು. ಬಿರುಗಾಳಿ ಬೀಸುವಾಗ ನಾವೆಯನ್ನು ನೆಟ್ಟಗೆ ನಿಲ್ಲಿಸಿಡುವುದು ಹೇಗೆ ಒಂದು ಮುಖ್ಯ ಕೆಲಸವೋ, ಧೃತಿಗೆಡದಂತಿರುವುದೂ ಹಾಗೆಯೇ ಮುಖ್ಯವಾದುದು. ನನ್ನ ಏಸ್‌ರಾಜ ತೆಗೆದುಕೊಂಡು ಬಾ. ಸ್ವಲ್ಪ ಬಾರಿಸು. ?"

"ಅಣ್ಣಾ, ಏನಾದರೊಂದನ್ನು ಮಾಡಬೇಕೆಂದು ನನ್ನ ಮನಸ್ಸು ಕವಕಪಡುತ್ತಿದೆ."

"ವಾದ್ಯ ಬಾರಿಸುವುದು ಏನೂ ಅಲ್ಲ ಅಲ್ಲವೆ ?"

"ನಾನು ಯಾವುದಾದರೊಂದು ಕಷ್ಟವಾದ ಕೆಲಸ ಮಾಡಬೇಕು"

"ಪತ್ರದಲ್ಲಿ ರುಜು ಮಾಡುವುದಕ್ಕಿಂತಲೂ ಏಸರಾಜ್ ಬಾರಿಸುವುದು ಅತ್ಯಂತ ಕಠಿಣ. ವಾದ್ಯ ತೆಗೆದುಕೊಂಡು ಬಾ."

೪೮

ಒಂದಾನೊಂದು ಕಾಲದಲ್ಲಿ ಮಧುಸೂದನನ್ನು ಕಂಡರೆ ಎಲ್ಲರೂ ಹೇಗೆ ಹೆದರುತ್ತಿದ್ದರೋ ಶ್ಯಾಮಾಸುಂದರಿಗೂ ಹಾಗೆಯೇ ಭಯವಿತ್ತು.

ಮಧುಸೂದನ ಒಳಗೊಳಗೆ ತನ್ನ ಕಡೆಗೆ ಹೇಗೆ ಸರಿಯುತ್ತಿರುವನೆಂಬು ದನ್ನು ಶ್ಯಾಮಾಸುಂದರಿ ಅರಿತಿದ್ದಳು. ಆದರೆ ಯಾವ ರೀತಿಯಲ್ಲಿ ಬೇಲಿ ದಾಟಿ ಅವನ ಬಳಿಗೆ ಸೇರುವುದೆನ್ನುವುದನ್ನು ಊಹಿಸಲಾರದಿದ್ದಳು. ತಡವರಿಸುತ್ತ ತಡವರಿಸುತ್ತ ಒಮ್ಮೊಮ್ಮೆ ಪ್ರಯತ್ನ ಪಟ್ಟಿದ್ದಳು. ಮಧು ಸೂದನ ಏಕಾಗ್ರತೆಯಿಂದ ವ್ಯಾಪಾರವನ್ನು ಗಮನಿಸುತ್ತಿದ್ದ. ಕಾಂಚ ನದ ಸಾಧನೆಯಲ್ಲಿ ನಿರತನಾದ ಅವನು ಕಾಮಿನಿಯನ್ನು ತುಚ್ಛವಾಗಿ ಎಣಿಸುತ್ತಿದ್ದ. ಆದರಿಂದಲೇ ಹೆಂಗಸರು ಅವನನ್ನು ಕಂಡರೆ ಹೆದರು ತ್ತಿದ್ದರು. ಆದರೆ ಈ ಭಯದಲ್ಲಿಯೂ ಒಂದು ಬಗೆಯಾದ ಆಕರ್ಷಣೆ ಯಿದೆ. ದುರುಗುಟ್ಟುವ ದೃಷ್ಟಿ ಮತ್ತು ಸಂಕೋಚದ ನಡೆವಳಿಕೆಗಳನ್ನು ಸಹಿಸಿಕೊಂಡೇ ಶ್ಯಾಮಾಸುಂದರಿ ಎಡೆಸಿಕ್ಕಾಗ ಮುಗ್ಧಮನದೊಡನೆ ಮಧುಸೂದನನ ಹತ್ತಿರ ಹತ್ತಿರ ತಿರುಗುತ್ತಿದ್ದಳು. ಒಮ್ಮೊಮ್ಮೆ ವ್ಯೆಮರೆತ ವೇಳೆಯಲ್ಲಿ ಮಧುಸೂದನ ಆವಳಿಗೆ ಸ್ವಲ್ಪ ಸಲಿಗೆ ಕೊಟ್ಟಿದ್ದ. ಆ ನಿಮಿ ಷದಲ್ಲೇ ನಿಜವಾದ ಅಂಜಿಕೆಯ ಕಾರಣ ಘಟಿಸಿತ್ತು. ಅದಾದ ಸ್ವಲ್ಪ ಸಮಯದಲ್ಲೇ ತನ್ನ ಬಾಳುವೆಯಲ್ಲಿ ಹೆಂಗಸರು ಸಂಪೂರ್ಣವಾಗಿ ಹೇಯರು ಎಂದು ಪ್ರಮಾಣ ಮಾಡಿಕೊಡುವ ಪ್ರಯತ್ನಮಾಡಿದ್ದ. ಆದ್ದರಿಂದಲೇ ಇಷ್ಟು ದಿನಗಳೂ ಶ್ಯಾಮಾಸುಂದರಿ ತನ್ನನ್ನು ತಾನೇ ಹಿಡಿತದಲ್ಲಿಟ್ಟುಕೊಂಡಿದ್ದಳು.

ಮಧುಸೂದನನ ಮದುವೆಯಾದ ಮೇಲೆ ಅವಳಿಂದ ಇನ್ನು ಸುಮ್ಮನಿರಲು ಸಾಧ್ಯವಾಗಲಿಲ್ಲ. ಮಧುಸೂದನ ಒಂದು ಸಮಯ ಇತರ ಹೆಂಗಸರಂತೆಯೇ ಕುಮುವನ್ನು ನಿಕೃಷ್ಟವಾಗಿ ಕಂಡಿದ್ದೇ ಆದರೆ ಅದೊಂದು ರೀತಿಯಲ್ಲಿ ಸಹ್ಯವಾಗುತ್ತಿತ್ತು. ಆದರೆ ಮಧುಸೂದನನೂ ಲಗಾಮು ಕಿತ್ತುಕೊಂಡು ಯಾವಳೋ ಒಬ್ಬ ಹೆಣ್ಣಿನ ಹಿಂದೆ ನಾಗಾ ಲೋಟದಲ್ಲಿ ಹೋಗಬಲ್ಲನೆಂಬುದನ್ನು ಶ್ಯಾಮಾ ಕಂಡಾಗ ಆಗ ಸಂಯ ಮದಿಂದಿರುವುದು ಅವಳಿಗೆ ಅಸಾಧ್ಯವಾಯಿತು. ಈ ಕೆಲವು ದಿನಗಳಿಂದ ಸಾಹಸಪಟ್ಟು ಅವಕಾಶ ಸಿಕ್ಕಿದಂತೆ ಸ್ವಲ್ಪ ಸ್ವಲ್ಪ ಮುಂದುವರಿದಿದ್ದಳು. ಮುಂದುವರಿಯುವುದು ಸಾಧ್ಯವೆಂದು ಅವಳು ಮನಗಂಡಳು. ನಡು ನಡುವೆ ಅಲ್ಪ ಸ್ವಲ್ಪ ಅಡ್ಡಿ ಒದಗಿತ್ತು. ಆದರೆ ಪ್ರಯತ್ನಪಟ್ಟರೆ ಅದನ್ನೂ

ನಿವಾರಿಸಬಹುದಾಗಿತ್ತು. ಮಧುಸೂದನನ ದೌರ್ಬಲ್ಯವು ಗೊತ್ತಾಗಿ ಬಿಟ್ಟಿದ್ದೆ. ಶ್ಯಾಮಾಳಿಗೂ ಸಹ ಧೃತಿಗುಂದದಂತಿರಲು ಸಾಧ್ಯವಾಗಲಿಲ್ಲ. ಕುಮು ಹೊರಟು ಬಂದ ದಿನದ ಹಿಂದಿನ ರಾತ್ರಿ ಮಧುಸೂದನ ಶ್ಯಾಮಾಳನ್ನು ಬಹಳ ಹತ್ತಿರ ಸೆಳೆದುಕೊಂಡಿದ್ದ. ಹಿಂದೆಂದೂ ಹಾಗೆ ಸೆಳೆದುಕೊಂಡಿರಲಿಲ್ಲ. ಅನಂತರವೇ ಅದಕ್ಕೆ ತಕ್ಕ ಶಾಸ್ತಿ ಎಲ್ಲಿಯಾದರೂ ಬಲವಾಗಿ ಬಿದ್ದೀತೆಂದು ಅವಳಿಗೆ ಭಯವಾಗತೊಡಗಿತು. ಆದರೆ ಭಯಪಡದಿದ್ದರೆ ಭಯದ ಕಾರಣ ತಾನಾಗಿಯೇ ಕತ್ತರಿಸಿ ಹೋಗುವುದೆಂದು ಶ್ಯಾಮಾ ತಿಳಿದಿದ್ದಳು.

ಮುಂಜಾನೆಯೇ ಮಧುಸೂದನ ಹೊರಗೆ ಹೋಗಿದ್ದ. ಒಂದು ಘಂಟೆ ಹೊಡೆದ ಮೇಲೆ ಮನೆಗೆ ಹಿಂದಿರುಗಿದ. ಇತ್ತ ಬಹುಕಾಲದಿಂದ ಅವನಿಗೆ ತನ್ನ ಸ್ನಾನ ಆಹಾರಗಳಲ್ಲಿ ಈ ಬಗೆಯ ಅವ್ಯವಸ್ಥೆ ಸಂಭವಿಸಿರಲಿಲ್ಲ. ಇಂದು ಬಹಳ ದಣಿದು ಸೊರಗಿದ ಸ್ಥಿತಿಯಲ್ಲಿ ಮನೆಗೆ ಬಂದಾಗ ಹೊಟ್ಟೆ ಮೊದಲು, ಕುಮು ತನ್ನ ಅಣ್ಣನ ಮನೆಗೆ ಹೊರಟು ಹೋಗಿರುವಳೆಂದೂ, ಸಂತೋಷದೊಡನೆಯೇ ಹೊರಟು ಹೋದಳೆಂದೂ ನೆನಪಾಯಿತು. ಒಂದು ಕಾಲದಲ್ಲಿ ಮಧುಸೂದನ ತನಗೆ ತಾನೇ ದೃಢವಾಗಿ ನಿಂತಿದ್ದ. ಆದರೆ ಯಾವುದೋ ಆತುರದಲ್ಲಿ ಯಾರದೋ ಒಬ್ಬ ಹೆಣ್ಣಿನ ಪ್ರೀತಿಯನ್ನು ಆಶ್ರಯಿಸಬೇಕೆಂಬ ಅಭಿಲಾಷೆಯು ಅವನ ಮನದಲ್ಲಿ ಎಚ್ಚರಗೊಂಡಿತ್ತು. ಅದ್ದರಿಂದಲೇ ಕುಮು ಅನಾಯಾಸವಾಗಿ ಹೊರಟು ಹೋದ್ದರಿಂದ ಅವನಿಗೆ ಅವಳ ಮೇಲೆ ಬೇಸರವುಂಟಾಯಿತು. ಇಂದು ಅವನು ಊಟಮಾಡುವ ಸಮಯದಲ್ಲಿ ಬೇಕೆಂದೇ ಶ್ಯಾಮಾಸುಂದರಿ ಇದಿರಿಗೆ ಬರಲಿಲ್ಲ. ಹಿಂದಿನ ರಾತ್ರಿ ತನ್ನ ದೌರ್ಬಲ್ಯವು ಪ್ರಕಟವಾಗಿದ್ದುದರಿಂದ ಮಧುಸೂದನನಿಗೆ ಅವಳ ಮೇಲೆ ಕೋಪವುಂಟಾಗಿರಲು ಸಾಧ್ಯವಿದೆಯೆಂದು ಅವಳು ಹೆದರಿದ್ದಳು. ಊಟವಾದ ಮೇಲೆ ಮಧುಸೂದನ ಬರಿದಾಗಿದ್ದ ಮಲಗುವ ಮನೆಗೆ ಹೋಗಿ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದವನು, ಅನಂತರ ತಾನೇ ಶ್ಯಾಮಾಸುಂದರಿಗೆ ಹೇಳಿಕಳುಹಿಸಿದ. ಶ್ಯಾಮಾ ವಿಲಾಯತಿಯ ಕೆಂಪು ಬಣ್ಣದ ಒಂದು ಶಾಲನ್ನು ಹೊದೆದುಕೊಂಡು ಸ್ವಲ್ಪ ಸಂಕುಚಿತ ಭಾವದೊಡನೆ ಕೋಣೆಯೊಳಗೆ ಬಂದು

ಒಂದು ಪಕ್ಕದಲ್ಲಿ ತಲೆ ತಗ್ಗಿಸಿಕೊಂಡು ನಿಂತಿದ್ದಳು. ಮಧುಸೂದನ ಅವಳನ್ನು ಹತ್ತಿರ ಕರೆದು, "ಬಾ, ಇಲ್ಲಿ ಬಾ, ಕುಳಿತುಕೊ" ಎಂದ.

ಶ್ಯಾಮಾ ತಲೆಬಿಸೆಯುತ್ತ ಕುಳಿತು "ಇಂದು ನೀನು ಬಹಳ ಕಂಗೆಟ್ಟರುವಂತೆ ಕಾಣುತ್ತಿರುವೆ" ಎಂದು ಸ್ವಲ್ಪ ಮುಂದಕ್ಕೆ ಬಗ್ಗಿ, ಅವನ ತಲೆಯನ್ನು ಸವರತೊಡಗಿದಳು.

ಮಧುಸೂದನ "ಓ! ನಿನ್ನ ಕೈ ಅದೆಷ್ಟು ತಣ್ಣಗಿದೆ." ಎಂದ.

ರಾತ್ರಿ ಮಧುಸೂದನ ಮಲಗುವುದಕ್ಕೆ ಬಂದಾಗ ಶ್ಯಾಮಾಸುಂದರಿ ಕರೆಸಿಕೊಳ್ಳದೆಯೇ ತಾನಾಗಿ ಕೋಣೆಗೆ ಬಂದು "ಅಹಾ, ನೀನು ಒಂಟಿಯಾಗಿಯೇ ಇರುವೆಯಲ್ಲ" ಎಂದಳು.

ಶ್ಯಾಮಾಸುಂದರಿ ಬಹಳ ಧಾರ್ಷ್ಟ್ಯದಿಂದ ಕೂಡಲೇ ಯಾವ ಬಗೆಯ ಮುಚ್ಚುಮರೆಗೂ ಎಡೆಕೊಡದೆ ಮುಂದುವರಿದಳು. ಸಂಕೋಚವಿಲ್ಲದೆ ಎಲ್ಲರನ್ನೂ ಸಾಕ್ಷಿಯಾಗಿಟ್ಟುಕೊಂಡೇ ಅವಳು ತನ್ನ ಅಧಿಕಾರವನ್ನು ದೃಢಪಡಿಸಿಕೊಳ್ಳಬಯಸುವಂತೆ ಕಾಣುತ್ತಿತ್ತು. ಹೆಚ್ಚುಕಾಲ ಅವಕಾಶವಿಲ್ಲ. ಮತ್ತೆ ಕುಮು ಬಂದು ಬಿಡುವಳು. ಅಷ್ಟರಲ್ಲಿ ತಾನು ಜಯಶಾಲಿಯಾಗಬೇಕು. ತಾನು ಮಾಡುವ ಕಾರ್ಯವು ಬಹಿರಂಗವಾಗಿದ್ದರೇನೇ ಅದಕ್ಕೆ ಬಲವಿರುವುದು. ಯಾವೆಡೆಯಲ್ಲಾದರೂ ನಾಚಿಕೆಗೆ ಎಡೆಗೊಟ್ಟರೆ ಸಾಗದು. ಈ ಪರಿಸ್ಥಿತಿಯು, ನೋಡುತ್ತಿದ್ದಂತೆಯೇ ದಾಸಿಗಳ ಗಮನಕ್ಕೂ ಬಂದಿತು. ಮಧುಸೂದನನ ಮನಸ್ಸಿನಲ್ಲಿ ಬಹುಕಾಲದ ಪ್ರವೃತ್ತಿಯ ಅಗ್ನಿಯನ್ನು ಎಷ್ಟು ಬಲವಾಗಿ ಈವರೆಗೆ ಅದಗಿಸಿಡಲಾಗಿತ್ತೋ ಅಷ್ಟೇ ಬಲದೊಡನೆ ಅದು ಹೊರಹೊಮ್ಮಿತು. ಯಾರನ್ನೂ ಲಕ್ಷ್ಯಮಾಡಲಿಲ್ಲ. ಈ ಮದಾಂಧತೆಯು ಒಳ್ಳೆಯ ಸ್ಥೂಲ ರೀತಿಯಲ್ಲೇ ಕುಟುಂಬದಲ್ಲಿ ಎಲ್ಲರ ಗಮನಕ್ಕೂ ಬಂದಿತು.

ನವೀನ ಮತ್ತು ಮೋತಿಯ ತಾಯಿ ಇಬ್ಬರೂ ಈ ಹುಚ್ಚು ಹೊಳೆಯನ್ನು ಅಡ್ಡಗಟ್ಟಿ ತಡೆಯುವುದು ಸಾಧ್ಯವಿಲ್ಲವೆಂದು ನಿರ್ಧರಿಸಿದರು.

"ಅಕ್ಕನನ್ನು ಕರೆತರುವುದಿಲ್ಲವೇನು? ಇನ್ನು ಸಾವಕಾಶಮಾಡುವುದು ಒಳ್ಳೆಯದೇನು?"

"ಆ ವಿಷಯವನ್ನೇ ಯೋಚಿಸುತ್ತಿರುವೆ. ಅಣ್ಣನ ಅಪ್ಪಣೆ ಇಲ್ಲದಿದ್ದರೆ ಅವಕಾಶವಿಲ್ಲ. ಪ್ರಯತ್ನಪಟ್ಟು ನೋಡುತ್ತೇನೆ."

ಯಾವ ದಿನ ಬೆಳಗ್ಗೆ ತಂತ್ರದಿಂದ ಅಣ್ಣನ ಬಳಿ ಈ ವಿಷಯದ ಪ್ರಸ್ತಾಪ ಎತ್ತಬೇಕೆಂದು ಬಂದನೋ ಅಂದು ಮಧುಸೂದನ ಹೊರಗೆ ಹೋಗಲು ಸಿದ್ಧನಾಗಿದ್ದುದನ್ನು ಕಂಡ. ಬಾಗಿಲಲ್ಲಿ ಕುದುರೆಯ ಗಾಡಿ ಬಂದು ನಿಂತಿತ್ತು.

"ಎಲ್ಲಿಗಾದರೂ ಹೋಗುತ್ತಿರುವೆಯೇನು ?" ಎಂದು ನವೀನ ಕೇಳಿದ.

ಮಧುಸೂದನ ಸಂಕೋಚವಿಲ್ಲದೆ "ಅದೇ ಆ ಜೋಯಿಸ ವೆಂಕಟಸ್ವಾಮಿಯ ಹತ್ತಿರಕ್ಕೆ" ಎಂದ.

ನವೀನನ ಹತ್ತಿರ ತನ್ನ ಈ ದೌರ್ಬಲ್ಯವನ್ನು ಮುಚ್ಚಿಡಬೇಕೆಂದೇ ಬಯಸಿದ್ದ. ಅವನನ್ನೂ ಸಂಗಡ ಕರೆದುಕೊಂಡು ಹೋದರೆ ಉತ್ತಮವೆಂದು ಹಠಾತ್ತಾಗಿ ಮನಸ್ಸಿಗೆ ತೋರಿತು. ಅದರಿಂದಲೇ "ನನ್ನ ಸಂಗಡ ನಡೆ" ಎಂದ.

ನವೀನ "ಜೆಂಕಿಯಪ್ಪಿತು" ಎಂದು ಅಂದುಕೊಂಡವನು "ಆತ ಮನೆಯಲ್ಲಿರುವನೋ ಇಲ್ಲವೋ ನೋಡಿಕೊಂಡು ಬರುತ್ತೇನೆ. ಆತ ತಮ್ಮ ಊರಿಗೆ ಹೊರಟು ಹೋಗಿರುವನೆಂದೇ ನನ್ನ ನಂಬಿಕೆ. ಅಂತೂ ಅದೇ ತರಹದ ಸುದ್ದಿ ಕೇಳಿದ್ದೆ" ಎಂದ.

ಮಧುಸೂದನ "ಒಳ್ಳೆಯದು. ಹಾಗೆಯೇ ಆಗಲಿ. ನಡೆ, ಹೋಗಿ ನೋಡಿಕೊಂಡು ಬಂದರಾಯಿತು" ಎಂದ.

ನವೀನ ದಾರಿಗಾಣದೆ ಸಂಗಡ ಹೊರಟ. ಆದರೆ ಮನಸ್ಸಿನಲ್ಲೇ ಪ್ರಮಾದ ಸಂಭವಿಸುವುದೆಂದು ನಿರ್ಧರಿಸಿದ.

ದೈವಜ್ಞನ ಮನೆಯ ಇದಿರಿನಲ್ಲಿ ಗಾಡಿ ನಿಂತೊಡನೆಯೇ ನವೀನ ಅವಸರ ಅವಸರವಾಗಿ ಇಳಿದುಹೋಗಿ ಸ್ವಲ್ಪ ಇಣಕಿನೋಡಿಯೇ "ಮನೆಯಲ್ಲಿ ಯಾರೂ ಇಲ್ಲವಂತೆ ಕಾಣುತ್ತೆ" ಎಂದ.

ಅವನು ಹೀಗೆ ಹೇಳಿದ ಮರುಕ್ಷಣದಲ್ಲೇ ಸ್ವತಃ ವೆಂಕಟಸ್ವಾಮಿಯೇ ಹಲ್ಲುಜ್ಜುವ ಕಡ್ಡಿಯನ್ನು ಅಗಿಯುತ್ತ ಅಗಿಯುತ್ತ ಬಾಗಿಲ ಹತ್ತಿರ ಬಂದು ನಿಂತ. ನವೀನ ತಡಮಾಡದೆ ಅವನ ಕಾಲಿಗೆರಗಿ "ಜಾಗರೂಕತೆಯಿಂದ ಮಾತನಾಡಿ" ಎಂದ.

ತೇವವಾಗಿದ್ದ ಆ ಕತ್ತಲೆ ಕೋಣೆಯಲ್ಲೇ ತಖ್ತಪೋಷಿನ ಮೇಲೆ ಎಲ್ಲರೂ ಕುಳಿತರು. ನವೀನ ಮಧುಸೂದನನ ಹಿಂದೆ ಕುಳಿತ. ಮಧುಸೂದನ ಏನಾದರೂ ಹೇಳುವ ಮುಂಚೆಯೇ ನವೀನ "ಮಹಾರಾಜರ ಕಾಲ ಸ್ವಲ್ಪ ಕೆಟ್ಟಿದೆ. ಗ್ರಹಗಳು ಯಾವಾಗ ಸುಮುಖವಾಗುವುವು. ಹೇಳಿ ಶಾಸ್ತ್ರಿಗಳೇ" ಎಂದನು.

ಮಧುಸೂದನನು ನವೀನನು ಹೀಗೆ ಗುಟ್ಟನ್ನು ಹೊರಗೆಡುವುದನ್ನು ಕಂಡು ಹಿಂದಿನಿಂದ ಅವನ ತೊಡೆಯನ್ನು ಬಲವಾಗಿ ಚುಚ್ಚಿದನು.

ವೆಂಕಟಸ್ವಾಮಿ ರಾಶಿಚಕ್ರವನ್ನು ಬರೆದು ಮಧುಸೂದನನ ಧನಸ್ಥಾನದ ಮೇಲೆ ಶನಿದೃಷ್ಟಿ ಬಿದ್ದಿದೆಯೆಂದು ಸ್ಪಷ್ಟವಾಗಿ ಹೇಳಿಬಿಟ್ಟ.

ಗ್ರಹದ ಹೆಸರು ತಿಳಿದು ಮಧುಸೂದನನಿಗೆ ಯಾವ ಪ್ರಯೋಜನವೂ ಇರಲಿಲ್ಲ. ಅವುಗಳೊಡನೆ ಸಂಧಿ ಸಮಾಧಾನ ಮಾಡಿಕೊಳ್ಳುವುದು ಕಷ್ಟಕರವಾಗಿತ್ತು. ಯಾವ ಯಾವ ಮನುಷ್ಯರು ತನ್ನ ಮೇಲೆ ಶತ್ರುತ್ವವನ್ನು ತೋರುತ್ತಿರುವರೋ ಅವರುಗಳ ಪರಿಚಯ ಬೇಕು. ವರ್ಣಮಾಲೆಯ ಯಾವ ವರ್ಗದಲ್ಲಾದರೂ ಇರಲಿ, ಹೆಸರು ಗೊತ್ತಾಗಲೇಬೇಕು. ನವೀನನಿಗಿದ್ದ ಕಷ್ಟವೆಂದರೆ ಅವನು ಮಧುಸೂದನನ ಆಫೀಸಿನ ವಿಷಯವನ್ನು ಏನೇನೂ ಅರಿತವನಲ್ಲ. ಸನ್ನೆಮಾಡುವುದರಿಂದಲೂ ಸಹಾಯವಾಗುವ ಸಂಭವವಿಲ್ಲ. ವೆಂಕಟಸ್ವಾಮಿ ಮುಗ್ಧಬೋಧದ ಸೂತ್ರಗಳನ್ನು ಉಚ್ಚರಿಸುತ್ತ ಮಧುಸೂದನನ ಮುಖವನ್ನು ಓರೆ ದೃಷ್ಟಿಯಿಂದ ನೋಡುತ್ತಿದ್ದ. ಇವತ್ತಿನ ದಿನ ಹೆಸರಿನ ಪ್ರಸಂಗ ಬಂದಾಗ ಭೃಗುಮುನಿ ಸಂಪೂರ್ಣವಾಗಿ ಮೌನ ಧರಿಸಿದ್ದ. ಹಠಾತ್ತಾಗಿ ಶಾಸ್ತ್ರಿಯು "ಒಬ್ಬ ಹೆಣ್ಣು ಶತ್ರುತ್ವವನ್ನು ತೋರುತ್ತಿರುವಳು" ಎಂದುಬಿಟ್ಟ.

ನವೀನ ನೆಮ್ಮದಿಯ ನಿಟ್ಟುಸಿರುಬಿಟ್ಟ. ಆ ಹೆಂಗಸು ಶ್ಯಾಮಾಸುಂದರಿ ಎನ್ನುವುದನ್ನು ಯಾವ ಬಗೆಯಲ್ಲಾದರೂ ಸ್ಥಿರಪಡಿಸಿದ್ದಾದರೆ

ಮುಂದೆ ಯೋಚನೆಗೇ ಎಡೆಯಿರದು. ಮಧುಸೂದನ ಹೆಸರು ಕೇಳಿದ. ಶಾಸ್ತ್ರಿ ಆಗ ವರ್ಣಮಾಲೆಯ ವರ್ಗ ಆರಂಭಿಸಿದ. "ಕವರ್ಗ" ಎಂದು ಅಂದವನೇ ಅದೃಶ್ಯನಾದ ಭೃಗುಮುನಿಯ ಕಡೆಗೆ ಕಿವಿಗೊಟ್ಟವನಂತೆ ಇದ್ದ. ಓರೆಗಣ್ಣಿನಿಂದ ಮಧುಸೂದನನ ಕಡೆ ನೋಡತೊಡಗಿದ. "ಕವರ್ಗ" ಎಂದು ಕೇಳಿದೊಡನೆ ಮಧುಸೂದನನ ಮುಖದಲ್ಲಿ ಸ್ವಲ್ಪ ಚಿಕ್ಕಿನ ಲಕ್ಷಣ ಕಾಣಿಸಿತು. ಅತ್ತ ಹಿಂಬದಿಯಲ್ಲಿ ಇಲ್ಲವೆಂದು ಸನ್ನೆ ಮಾಡುತ್ತ ನವೀನ ಎಡಕ್ಕೂ ಬಲಕ್ಕೂ ತಲೆ ಅಲುಗಿಸಿದ. ಮದರಾಸ್ ಪ್ರಾಂತದಲ್ಲಿ ಈ ಸನ್ನೆಗೆ ವಿಪರೀತ ಅರ್ಥವಾಗುವುದೆಂದು ನವೀನ ಅರಿಯನು. ವೆಂಕಟ ಸ್ವಾಮಿಗೆ ಇನ್ನು ಸಂದೇಹವಿರಲಿಲ್ಲ. ದೊಡ್ಡ ದನಿಯಲ್ಲಿ "ಕವರ್ಗ" ಎಂದ. ಮಧುಸೂದನ ಮುಖನೋಡಿ ಕವರ್ಗದ ಮೊದಲ ವರ್ಣವೇ ಎಂದು ಖಂಡಿತ ತಿಳಿದಿದ್ದ. ಅದರಿಂದಲೇ ಸಂಗತಿ ಇನ್ನಷ್ಟು ವಿವರಿಸುವ ವಿಧದಲ್ಲಿ ಇಲ್ಲಿ 'ಕ' ದಲ್ಲೇ ಮಧುಸೂದನನ 'ಕು' ಎಲ್ಲ ಇರುವುದು ಎಂದ ಶಾಸ್ತ್ರಿ.

ಇದಾದನಂತರ ಪ್ರಾರ್ಥ ಹೆಸರು ತಿಳಿಯಲು ಪೀಡಿಸದೆ ಮಧು ಸೂದನನು ವ್ಯಗ್ರನಾಗಿ "ಇದಕ್ಕೆ ಪ್ರತೀಕಾರವುಂಟೋ ?" ಎಂದ.

ವೆಂಕಟಸ್ವಾಮಿ ಗಂಭೀರ ಭಾವದೊಡನೆ "ಕಂಟಕೇನೈವ ಕಂಟಕಂ. ಅರ್ಥಾತ್ ಇನ್ನೊಬ್ಬ ಹೆಂಗಸು ಉದ್ಧಾರ ಮಾಡುವಳು" ಎಂದ.

ಮಧುಸೂದನ ಚಕಿತನಾದ. ವೆಂಕಟಸ್ವಾಮಿ ಮಾನವಚರಿತ್ರಕ್ಕೆ ಸಂಬಂಧಿಸಿದ ವಿದ್ಯೆಯ ವಿವರವನ್ನು ಹೇಳಿದ್ದ.

ನವೀನ ಬೇಸರಗೊಂಡವನೇ "ಸ್ವಾಮಿಜೀ, ಕುದುರೆಯ ಜೂಜಿ ನಲ್ಲಿ ಮಹಾರಾಜರ ಕುದುರೆ ಗೆದ್ದೀತೇನು ?" ಎಂದ.

ಹೆಚ್ಚು ಸಂಖ್ಯೆಯ ಕುದುರೆಗಳು ಸೋಲುವುವೆಂಬ ಅಂಶವನ್ನು ವೆಂಕಟ ಸ್ವಾಮಿ ತಿಳಿದಿದ್ದ. ಲೆಕ್ಕನೋಡುವಂತೆ ನಟಿಸಿ "ಸಷ್ಟ ಕಾಣುತ್ತಿದೆ" ಎಂದ.

ಕೆಲವೇ ದಿನಗಳ ಹಿಂದೆ ಮಧುಸೂದನನ ಕುದುರೆ ದೊಡ್ಡ ಮೊತ್ತ ವನ್ನು ಗೆದ್ದಿತ್ತು. ಮಧುಸೂದನನಿಗೆ ಯಾವ ಮಾತೂ ಆಡಲು ಎಡೆ ಕೊಡದೆ ಮುಖವನ್ನು ಬಹಳ ಸಪ್ಪಗೆ ಮಾಡಿಕೊಂಡು ನವೀನ "ಸ್ವಾಮಿಜೀ,

ನನ್ನ ಮಗಳ ಗತಿ ಏನಾಗುವುದು ?" ಎಂದ. ನವೀನನಿಗೆ ಮಗಳೇ ಇರಲಿಲ್ಲವೆಂಬ ಸಂಗತಿ ಹೇಳಬೇಕಾಗಿಯೇ ಇಲ್ಲ.

ಗಂಡು ಹುಡುಕುತ್ತಿರುವನೆಂದು ವೆಂಕಟಸ್ವಾಮಿ ತೀರ್ಮಾನಿಸಿದ. ನವೀನನ ಮುಖ ನೋಡಿದವನೇ ಹುಡುಗಿ ಅಪ್ಸರೆಯೇನೂ ಅಲ್ಲವೆಂದು ಅರಿತುಕೊಂಡ. "ಬೇಗ ಗಂಡು ಸಿಕ್ಕದು. ಬಹಳ ಹಣ ಖರ್ಚು ಮಾಡಬೇಕಾಗುವುದು" ಎಂದ.

ಮಧುಸೂದನನಿಗೆ ಸ್ವಲ್ಪವೂ ಎಡೆಕೊಡದೆ ಮೇಲೆ ಮೇಲೆ ಹತ್ತು ಹನ್ನೆರಡು ಅಸಂಗತ ಪ್ರಶ್ನೆಗಳನ್ನು ಕೇಳಿ ಅವುಗಳಿಗೆ ಅದ್ಭುತ ಉತ್ತರಗಳನ್ನು ಹೊರಡಿಸಿ, ನವೀನನು "ಇನ್ನೇನು ಪ್ರಯೋಜನ ಅಣ್ಣಾ, ಬಾ, ಹೋಗೋಣ" ಎಂದ.

ಗಾಡಿಯಲ್ಲಿ ಕುಳಿತೊಡನೆ ನವೀನನು "ಅಣ್ಣಾ ಅವನದೆಲ್ಲ ಮೋಸ, ಭಂಡ" ಎಂದ.

"ಆದರೆ ಅವತ್ತು!"

"ಅವತ್ತು ಅವನಿಗೆ ಮುಂಚೆಯೇ ಸಂಗತಿ ತಿಳಿದಿತ್ತು"

"ನಾನು ಬರುವೆನೆಂದು ಹೇಗೆ ತಿಳಿದಿದ್ದ ?"

"ನನ್ನದೇ ಮೂರ್ಖತನ. ಮುಂಚೆ ಏರ್ಪಾಡುಮಾಡಿ ಅವನ ಹತ್ತಿರಕ್ಕೆ ನಿನ್ನನ್ನು ಕರೆತಂದಿದ್ದೆ."

ಜೋಯಿಸನ ಮೋಸಗಾರಿಕೆಗೆ ಎಷ್ಟೇ ಸಾಕ್ಷಿ ಸಿಕ್ಕಿದರೂ "ಕ" ವರ್ಗದ "ಕು" ಮಧುಸೂದನನ ಮನದಲ್ಲಿ ನಾಟಿಕೊಂಡಿತ್ತು. "ನಕ್ಷತ್ರಗಳಲ್ಲಿ ಅನಾದರಣೆ ತೋರಿ ಮನಸ್ಸಿಗೆ ಬಂದ ಪ್ರಶ್ನೆಗಳನ್ನು ಕೇಳಿದ್ದರೇನು? ಪದ್ಧತಿಯ ಪ್ರಶ್ನೆಗಳಿಗೆ ಉತ್ತರದಲ್ಲಿ ತಪ್ಪು ಬಾರದು" ಎಂದು ಯೋಚಿಸಲಾರಂಭಿಸಿದ. ಮಧುಸೂದನ ಯಾವ ವಿಷಯವನ್ನು ಎಂದೂ ನಿರೀಕ್ಷಿಸಿರಲಿಲ್ಲವೋ ಅದೇ ಕೆಟ್ಟ ಕಾಲ ಮದುವೆಯ ಹಿಂದೆ ಹಿಂದೆಯೇ ಬಂದಿತ್ತು. ಇದಕ್ಕಿಂತ ಹೆಚ್ಚು ಸಾಕ್ಷಿ ಏನು ಬೇಕಾಗಿದೆ ?

ನವೀನ ಮೆಲ್ಲಮೆಲ್ಲನೆ ವಿಷಯವನ್ನು ಪ್ರಸ್ತಾಪ ಮಾಡಿದ. “ಅಣ್ಣಾ ಎರಡು ವಾರವಾಯಿತು. ಇನ್ನು ಅತ್ತಿಗೆಯನ್ನು ಕರೆತರುತ್ತೇನೆ” ಎಂದ.

“ಯಾಕೆ. ಅವಸರವೇನು? ನೋಡು ನವೀನ್, ಈಗಲೇ ಹೇಳಿಡುತ್ತೇನೆ. ನೆನಪಿರಲಿ; ಇನ್ನು ಮುಂದೆ ಇಂತಹ ಮಾತೆಲ್ಲಾ ನನ್ನ ಹತ್ತಿರ ಬೇಡ. ನನಗೆ ಎಂದು ಮನಸ್ಸು ಬರುವುದೋ ಅಂದು ನಾನೇ ಹೇಳುವೆ.”

ನವೀನ ಅಣ್ಣನನ್ನು ಬಲ್ಲ. ಈ ವಿಷಯ ಇಲ್ಲಿಗೆ ಕೊನೆಗಂಡಿತೆಂದು ಅರಿತನು.

ಆದರೂ ಧೈರ್ಯಮಾಡಿ “ಚಿಕ್ಕ ಸೊಸೆ ಒಂದುವೇಳೆ ಅತ್ತಿಗೆಯನ್ನು ನೋಡಲು ಹೋಗುವುದರಲ್ಲಿ ತಪ್ಪೇನೂ ಇಲ್ಲವಷ್ಟೆ?” ಎಂದ.

ಮಧುಸೂದನ ಅಲಕ್ಷ್ಯಭಾವದಿಂದ “ಹೋದರೆ ಹೋಗಲಿ” ಎಂದ.

೪೯

ಅತ್ಯಂತ ಅಸ್ಥಿರಗೊಂಡವನಾಗಿ ವಿಪ್ರದಾಸನು ಒಂದು ಕುರ್ಚಿಯನ್ನು ತೋರಿಸಿ, “ಬನ್ನಿ, ನವೀನ್ ಬಾಬೂ. ಇಲ್ಲಿ ಕುಳಿತುಕೊಳ್ಳಿ” ಎಂದ.

ನವೀನನು “ನನ್ನ ಪರಿಚಯ ತಮಗೆ ಆಗಿಲ್ಲವೆಂದು ತೋರುತ್ತೆ. ನಾನೊಬ್ಬ ದೊಡ್ಡವರ ಮನೆಯ ಆದರದ ಮಗನೆಂದು ಎಣಿಸಿರುವಂತೆ ಕಾಣುತ್ತೆ. ನಾನು ನಿಮ್ಮ ಚಿಕ್ಕತಂಗಿಯ ಅಧಮ ಸೇವಕ. ನನಗೆ ಗೌರವ ತೋರಿ ನನ್ನನ್ನು ಆಶೀರ್ವದಿಸಲು ಸೊನ್ನೆ ಸುತ್ತಬೇಡಿ. ಆದರೆ ಇದೇನು ಹೀಗೆ ಮಾಡಿರುವಿರಿ. ನಿಮ್ಮ ಮೈಯ ನೆರಳು ಮಾತ್ರವೇ ಉಳಿದಿದೆ” ಎಂದ.

“ಶರೀರವು ಸತ್ಯವಲ್ಲ; ಛಾಯೆ. ನಡುನಡುವೆ ಈ ಸಂಗತಿ ನೆನಪಾಗುವುದು ಒಳ್ಳೆಯದೇ. ಆದರಿಂದ ಕೊನೆಯ ಪಾಠ ಸಹಜವಾಗುವುದು.”

ಕುಮು ಕೊಟಡಿಯೊಳಗೆ ಬಂದವಳೇ “ನಡೆ. ಏನಾದರೂ ಫಲಾಹಾರ ಮಾಡುವೆಯಂತೆ” ಎಂದಳು.

"ಆಗಲಿ. ಆದರೆ ಒಂದು ಕರಾರಿದೆ. ಅದು ಒಪ್ಪಿಗೆಯಾಗುವವರೆಗೆ ಈ ಬ್ರಾಹ್ಮಣ ಅತಿಥಿ ಉಪವಾಸವಾಗಿಯೇ ನಿನ್ನ ಬಾಗಿಲಲ್ಲಿ ಬಿದ್ದಿರುವನು."

"ಏನು ಕರಾರು ಹೇಳು ನೋಡೋಣ?"

"ನಮ್ಮ ಮನೆಯಲ್ಲಿ ಇದ್ದಾಗಲೇ ಬೇಡಿದ್ದೆ. ಆದರೆ ಅಲ್ಲಿ ಪ್ರಯೋಜನವಾಗಲಿಲ್ಲ. ಭಕ್ತನಿಗೆ ನಿನ್ನದೊಂದು ಚಿತ್ರಕೊಡಬೇಕು. ಅವತ್ತು ಇಲ್ಲವೆಂದು ಅಂದಿದ್ದೆ. ಇವತ್ತಂತೂ ಹಾಗೆ ಹೇಳಲು ಅವಕಾಶವಿಲ್ಲ. ನಿಮ್ಮ ಅಣ್ಣನ ಕೊಟಡಿಯ ಗೋಡೆಯ ಮೇಲೆ ಅದೋ ಇದಿರಿನಲ್ಲೇ ತಗಲಿಸಿದೆ."

ಉತ್ತಮವಾದ ಚಿತ್ರ ದೈವವಶಾತ್ ಆಗುವುದು. ಕುಮುವಿನ ಆ ಚಿತ್ರವೂ ಅಂತಹ ದೈವಿಕವಾದ ಘಟನೆ. ಮುಖದ ಮೇಲೆ ಯಾವ ಬೆಳಕು ಬಿದ್ದರೆ ಕುಮುವಿನ ಮನಸ್ಸಿನ ರೂಪ ಹೊರಗೆ ಕಾಣಿಸಲು ಸಾಧ್ಯವಿದೆಯೋ ಆ ಬೆಳಕೇ ಬಿದ್ದಿತ್ತು. ಹಣೆಯಲ್ಲಿ ನಿರ್ಮಲ ಬುದ್ಧಿಯ ದೀಪ್ತಿಯೂ ಕಣ್ಣುಗಳಲ್ಲಿ ಗಭೀರ ಸರಳತೆಯ ಕರುಣಾಪೂರಿತ ದೃಷ್ಟಿಯೂ ಕಾಣುತ್ತಿತ್ತು. ಕುಮುವಿನ ಅಂದವಾದ ಬಲಗೈ ಖಾಲಿ ಕುರ್ಚಿಯೊಂದರ ಕೈಯ ಮೇಲಿತ್ತು. ಇದಿರಿನಲ್ಲಿ ಅವಳು ತನ್ನ ಭವಿಷ್ಯದ ಛಾಯೆಯನ್ನು ಕಂಡು ಥಟ್ಟನೆ ನಿಂತಿರುವಳೋ ಎನ್ನುವಂತಿತ್ತು.

ತನ್ನ ಈ ಚಿತ್ರ ಕುಮುವಿನ ದೃಷ್ಟಿಗೆ ಬಿದ್ದಿರಲಿಲ್ಲ. ಕಲ್ಕತ್ತೆಯಿಂದ ಫೋಟೋ ತೆಗೆಯುವವನನ್ನು ಕರೆಸಿ ಮದುವೆಗೆ ಕೆಲವು ದಿನಗಳ ಹಿಂದೆ ಅವರಣ್ಣ ಈ ಚಿತ್ರವನ್ನು ತೆಗೆಸಿದ್ದ. ಅನಂತರ ಆ ಚಿತ್ರವನ್ನು ತನ್ನ ಕೋಣೆಯಲ್ಲಿ ತಗಲು ಹಾಕಿದ್ದ. ಇದನ್ನು ನೋಡಿ ಕುಮುವಿನ ಮನಸ್ಸು ಕರಗಿ ನೀರಾಗಿ ಬಿಟ್ಟಿತ್ತು. ಫೋಟೋವಿನ ಪ್ರತಿಗಳು ಇನ್ನೂ ಇದ್ದೇ ಇರಬೇಕು. ಅದರಿಂದಲೇ ಅಣ್ಣನ ಕಡೆಗೆ ನೋಡಿದಳು. ನವೀನ "ಗೊತ್ತಾಯಿತೇನು, ವಿಪ್ರದಾಸ ಬಾಬುಗಳೇ, ಅತ್ತಿಗೆಯವರು ಕೃಪೆತೋರಿರುವರು. ಅವರ ಕಣ್ಣು ಕಡೆ ನೋಡಿ. ಅಯೋಗ್ಯನೆಂದೇ ನನ್ನ ಮೇಲೆ ಅವರದು ಸ್ವಲ್ಪ ಹೆಚ್ಚಿನ ದಯೆ" ಎಂದ.

ವಿಪ್ರದಾಸ ನಕ್ಕು "ಕುಮೂ, ನನ್ನ ಈ ಚರ್ಮದ ಪೆಟ್ಟಿಗೆಯಲ್ಲಿ ಇನ್ನೂ ಹಲವು ಚಿತ್ರಗಳಿವೆ. ನಿನ್ನ ಈ ಭಕ್ತನಿಗೆ ವರದಾನ ಮಾಡ ಬಯಸುವೆಯಾಗಿದ್ದರೆ ಅಭಾವವೇನೂ ಇಲ್ಲ" ಎಂದ.

ಕುಮು ನವೀನನನ್ನು ಫಲಾಹಾರಕ್ಕೆ ಕರೆದುಕೊಂಡು ಹೋದ ಅನಂತರ ಕಾಳೂ ಕೋಣೆಯೊಳಕ್ಕೆ ಬಂದು "ನಾನು ಚಿಕ್ಕ ಯಜ ಮಾನರಿಗೆ ಶೀಘ್ರ ಹೊರಟು ಬರುವಂತೆ ತಂತಿ ಕಳುಹಿಸಿರುವೆ" ಎಂದ.

"ನನ್ನ ಹೆಸರಿನಲ್ಲಿ ?"

"ಹೌದು, ನಿನ್ನ ಹೆಸರಿನಲ್ಲೇ ಅಣ್ಣಾ. ನೀವು ಕಡೆಯವರಗೂ ಹಾಗೂ ಹೀಗೂ ತೂಗುತ್ತಿರುವಿರೆಂದು ನಾನು ಬಲ್ಲೆ. ಇತ್ತ ಕಾಲ ಬಹಳ ಕಠಿಣವಾಗತೊಡಗಿದೆ. ನಿನ್ನ ಮೇಲೆ ಇಷ್ಟು ಹೊಣೆ ಹೇರುವುದು ಸಾಧ್ಯವಲ್ಲದ ಕೆಲಸವೆಂದು ಡಾಕ್ಟರು ಹೇಳಿರುವರು."

ಡಾಕ್ಟರು "ಹೃದಯದಲ್ಲಿ ಕೆಡುಕು ಕಂಡಿದೆ. ದೇಹ ಮನಸ್ಸು ಶಾಂತ ವಾಗಿರಬೇಕು" ಎಂದು ಹೇಳಿದ್ದರು. ಒಂದಾನೊಂದು ಕಾಲದಲ್ಲಿ ವಿಪ್ರ ದಾಸನಿಗೆ ಕುಸ್ತಿ ಮಾಡುವುದರಲ್ಲಿ ಬಹಳ ಆಸಕ್ತಿ ಉಂಟಾಗಿತ್ತಷ್ಟೆ. ಇಂದು ಅದರ ಫಲ ತಲೆದೋರಿತ್ತು. ಅದರ ಜೊತೆಗೆ ಈಚೆಗೆ ಮನಸ್ಸಿನ ಉದ್ವೇ ಗವೂ ಕೂಡಿತ್ತು.

ಸುಬೋಧನನ್ನು ಹೀಗೆ ಬಲವಂತವಾಗಿ ಕರೆಸಿಕೊಳ್ಳುವುದರಿಂದ ಒಳ್ಳೆಯದಾಗುವುದೋ ಇಲ್ಲವೋ ಎನ್ನುವ ವಿಷಯವನ್ನು ವಿಪ್ರದಾಸ ಅರಿಯಲಿಲ್ಲ. ಸದ್ದಿಲ್ಲದೆ ಯೋಚಿಸತೊಡಗಿದ. ಕಾಳು ಮಾತು ಮುಂದು ವರಿಸಿದ. "ಅಣ್ಣಾ, ನೀವು ವ್ಯರ್ಥವಾಗಿ ಯೋಚನೆ ಮಾಡುತ್ತಿರುವಿರಿ. ಆಸ್ತಿಪಾಸ್ತಿಗಳ ವಿಷಯ ಒಂದು ಗೊತ್ತಾದ ಏರ್ಪಾಡು ಆಗಬೇಕೇಕು. ಈ ಕೆಲಸಕ್ಕೆ ಆತ ಇಲ್ಲದಿದ್ದರೆ ಸಾಧ್ಯವಿಲ್ಲ. ನೂರಕ್ಕೆ ಹನ್ನೆರಡರ ದರ ದಲ್ಲಿ ಮಾರ್ವಾಡಿಗಳ ಕೈಗೆ ತಲೆ ಮಾರಿಕೊಳ್ಳಲಾರೆ. ಅದಲ್ಲದೆ ಅವರು ಗಳು ಎರಡು ಲಕ್ಷ ರೂಪಾಯಿಗಳನ್ನು ಮುಂಗಡವಾಗಿ ಬಡ್ಡಿಯೆಂದು ಹಿಡಿದುಕೊಂಡು ಬಿಡುವರು. ಅದರ ಮೇಲೆ ದಳ್ಳಾಳಿ ಬೇರೆ ಇದೆ."

ವಿಪ್ರದಾಸ "ಒಳ್ಳೆಯದು. ಸುಬೋಧ ಬರಲಿ. ಅಂತೂ ಬರುವನಲ್ಲವೆ" ಎಂದ.

"ಅವನೆಷ್ಟು ದೊಡ್ಡ ಸಾಹೇಬನೇ ಆಗಿರಲಿ, ನಿಮ್ಮ ತಂತಿ ಕೈಸೇರಿದರೆ ಹೊರಟು ಬರದೆ ಇರಲು ಸಾಧ್ಯವಿಲ್ಲ. ಆ ವಿಷಯದಲ್ಲಿ ನೀವು ನಿಶ್ಚಿಂತೆಯಿಂದಿರಿ. ಆದರೆ ಅಣ್ಣಾ, ಇನ್ನು ಸಾವಕಾಶ ಮಾಡುವುದು ಸರಿಯಲ್ಲ. ಪುಟ್ಟಮ್ಮನನ್ನು ಅತ್ತೆಯ ಮನೆಗೆ ಕಳುಹಿಸಿಬಿಡಿ."

ವಿಪ್ರದಾಸ ಸ್ವಲ್ಪ ಹೊತ್ತು ಸುಮ್ಮನಿದ್ದು "ಮಧುಸೂದನ ಕರೆಯ ಕಳುಹದೆ ಹೋಗುವುದಕ್ಕೆ ಅಡ್ಡಿಯಿದೆ" ಎಂದ.

"ಯಾಕೆ? ಹುಡುಗಿ ಮಧುಸೂದನನ ಸೆಣಬಿನ ಕಾರ್ಖಾನೆಯ ಕೂಲಿಯವಳೇನು? ತನ್ನ ಮನೆಗೆ ತಾನೆ ಹೋಗುತ್ತಾಳೆ. ಅದಕ್ಕೆ ಇನ್ನು ಅಪ್ಪಣೆ ಯಾತರದು?"

ಫಲಾಹಾರ ಮುಗಿಸಿಕೊಂಡು ನವೀನ ಒಂಟಿಯಾಗಿ ಕೊಟಡಿಗೆ ಬಂದ. ಅವನನ್ನು ನೋಡಿ ವಿಪ್ರದಾಸ "ಕುಮು, ನಿನ್ನನ್ನು ಪ್ರೀತಿಸುತ್ತಾಳೆ" ಎಂದ.

ನವೀನ "ಹೌದು, ನಾನು ಅರ್ಹತೆಯಿಲ್ಲದವನೆಂದೇ ಅವರ ಪ್ರೀತಿ ಅಷ್ಟು ಹೆಚ್ಚಾಗಿದೆಯೆಂದು ತೋರುತ್ತೆ" ಎಂದ.

"ಅವಳ ವಿಷಯವಾಗಿ ನೀನು ಏನನ್ನೋ ಹೇಳಬಯಸುತ್ತಿರುವೆ. ನೀನು ನನ್ನಲ್ಲಿ ಯಾವ ಸಂಗತಿಯನ್ನೂ ಮರೆಮಾಚಬೇಡ" ಎಂದ.

"ನಿಮಗೆ ಹೇಳಲು ಮನಸ್ಸು ಅಳುಕುವಂತಹ ವಿಷಯ ನನ್ನಲ್ಲಿ ಯಾವುದೂ ಇಲ್ಲವೇ ಇಲ್ಲ."

"ಕುಮು ಇಲ್ಲಿಗೆ ಬಂದಿರುವಳಲ್ಲ. ಅದರಲ್ಲಿ ಏನೋ ವಕ್ರವಾದದ್ದಿದೆ ಎಂದು ನನ್ನ ಮನಸ್ಸಿಗೆ ತೋರುತ್ತಿದೆ."

"ನೀವು ನಿಜಸ್ಥಿತಿ ಕಂಡುಕೊಂಡಿರುವಿರಿ. ಪ್ರಪಂಚದಲ್ಲಿ ಯಾರನ್ನು ಅನಾದರಿಸುವುದು ಸಾಧ್ಯವೇ ಇಲ್ಲವೆಂದು ಎಣಿಸಬಹುದೋ ಅಂತಹವರಲ್ಲೂ ಅನಾದರಣೆ ತೋರಿರುವುದು ಕಾಣುತ್ತಿದೆ."

“ಅನಾದರಣೆ ಕಂಡು ಬಂದಿದೆಯೇ ಹಾಗಾದರೆ ?”

“ಆ ನಾಚಿಕೆಯಿಂದಲೇ ನಾನು ಬಂದಿರುವೆ. ಬೇರೆ ಏನು ಸಾಧ್ಯವಿಲ್ಲದೆ ಹೋದರೂ ಪಾದಧೂಳಿಯನ್ನು ಶಿರದಲ್ಲಿ ಧರಿಸಿಕೊಂಡು ಹೋಗುವೆ.”

“ಕುಮು ಏನಾದರೂ ಇಂದೇ ಗಂಡನ ಮನೆಗೆ ಹಿಂದಿರುಗುವುದರಲ್ಲಿ ನಷ್ಟವೇನಾದರೂ ಇದೆಯೋ ?”

“ಸತ್ಯವಾದದ್ದನ್ನು ಹೇಳುತ್ತೇನೆ. ಹಿಂದಿರುಗುವಂತೆ ಹೇಳಲು ನನಗೆ ಧೈರ್ಯವಾಗದು.”

ವಾಸ್ತವದಲ್ಲಿ ಏನು ನಡೆದಿದೆ ಎಂಬುದನ್ನು ಕುರಿತು ವಿಪ್ರದಾಸ ನವೀನನನ್ನು ಪ್ರಶ್ನಿಸಲಿಲ್ಲ. ವಿಚಾರಿಸುವುದು ನ್ಯಾಯವಲ್ಲವೆಂದು ಎಣಿಸಿದ. ಕುಮುವನ್ನಾದರೂ ಪ್ರಶ್ನಿಸಿ ಯಾವುದಾದರೂ ಸಂಗತಿಯನ್ನು ವಿಚಾರಿಸಿ ತಿಳಿಯಬೇಕೆಂಬ ಕುತೂಹಲವೂ ವಿಪ್ರದಾಸನಿಗಿರಲಿಲ್ಲ. ಮನಸ್ಸು ತಲ್ಲಣಿಸುತ್ತಿತ್ತು. ಕಾಳುವನ್ನು ಕರೆದು “ನೀನಂತೂ ಅವರ ಮನೆಗೆ ಹೋಗಿ ಬರುತ್ತಿರುವೆಯಲ್ಲ. ಮಧುಸೂದನನ ವಿಷಯದಲ್ಲಿ ನಿನಗೇನಾದರೂ ತಿಳಿದಿರಬಹುದಲ್ಲವೆ” ಎಂದ.

“ಅಲ್ಪ ಸ್ವಲ್ಪ ಸುಳಿವು ತಿಳಿದಿದೆ. ಆದರೆ ಸಂಪೂರ್ಣವಾಗಿ ತಿಳಿದುಕೊಳ್ಳದೆ ನಿಮ್ಮ ಹತ್ತಿರ ಏನೂ ಹೇಳಲಾರೆ. ಇನ್ನೆರಡು ದಿನ ತಡೆಯಿರಿ. ವಿವರವನ್ನು ತಿಳಿದುಕೊಂಡು ಬಂದು ನಿಮಗೆ ಹೇಳುತ್ತೇನೆ”

ಶಂಕೆಯಿಂದ ವಿಪ್ರದಾಸನ ಮನಸ್ಸು ವ್ಯಥೆಗೊಂಡಿತು. ಪ್ರತೀಕಾರ ಮಾಡಲು ಯಾವ ಮಾರ್ಗವೂ ತನ್ನ ಹತೋಟಿಯಲ್ಲಿಲ್ಲವೆಂದು ಅವನ ಹೃದಯ ಕ್ಷಣಕ್ಷಣವೂ ತತ್ತರಿಸುತ್ತಿತ್ತು.

## ೫೦

ಕುಮು ಬಹು ದಿನಗಳಿಂದ ಯಾವುದನ್ನು ಮನಃಪೂರ್ವಕವಾಗಿ ಬಯಸುತ್ತಿದ್ದಳೋ ಅದು ಪೂರ್ಣವಾಯಿತು. ಪರಿಚಿತವಾದ ಆ ಮನೆಯಲ್ಲಿ ಆ ಅಣ್ಣನ ಪ್ರೀತಿಯ ವಾತಾವರಣದಲ್ಲಿ ಹಿಂದಿರುಗಿದಳಾದರೂ

ತನ್ನ ನಾಟಕೀಯ ಸ್ಥಳ ಇಲ್ಲವೆಂದು ಕಂಡಳು. ಒಮ್ಮೊಮ್ಮೆ ಅಭಿಮಾನದಿಂದ ಹಿಂದಕ್ಕೆ ಹೊರಟು ಹೋಗಬೇಕೆಂದು ಅವಳ ಮನಸ್ಸಿಗೆ ಅನ್ನಿಸುತ್ತಿತ್ತು. ಯಾಕೆಂದರೆ ಎಲ್ಲರ ಮನಸ್ಸಿನಲ್ಲೂ "ಇವಳು ಹಿಂದಿರುಗಿ ಹೋಗುವುದಿಲ್ಲವೇಕೆ? ಇವಳಿಗೆ ಏನಾಗಿದೆ?" ಎಂಬ ಪ್ರಶ್ನೆ ಪ್ರತಿನಿತ್ಯವೂ ತಲೆದೋರುತ್ತಿತ್ತು. ಅಣ್ಣನ ಅಗಾಧವಾದ ಪ್ರೀತಿಯಲ್ಲೂ ಈ ಉತ್ಕಂಠತೆ ಇತ್ತು. ಆ ವಿಷಯವಾಗಿ ಅವರುಗಳ ನಡುವೆ ಸ್ಪಷ್ಟವಾದ ಮಾತುಕತೆ ನಡೆಯುತ್ತಿರಲಿಲ್ಲ. ಅವರು ಮಾತನಾಡುತ್ತಿದ್ದುದು ಅನ್ಯರನ್ನು ಕುರಿತು. ಆದರೆ ಆ ವಿಷಯ ಅವರ ಪಾಲಿಗೆ ಕಣ್ಮರೆಯಾಗಿಯೇ ಇರುತ್ತಿತ್ತು.

ಮಧ್ಯಾಹ್ನವಾಗುತ್ತ ಬಂದಿತು. ಬಿಸಿಲು ಏರಿತು. ಮಲಗುವ ಮನೆಯ ಕಿಟಕಿಯ ಬಳಿ ಕುಸುಮ ಕುಳಿತಿದ್ದಳು. ಕಾಗೆಗಳು ಕೂಗಾಡುತ್ತಿದ್ದುವು. ಹೊರಗಿನ ರಸ್ತೆಯಲ್ಲಿ ಗಾಡಿಗಳ ಶಬ್ದ. ಜನಗಳ ನಾನಾ ಕಲರವ. ನವವಸಂತದ ಗಾಳಿ ಪಟ್ಟಣದ ಇಟ್ಟಿಗೆ ಕಟ್ಟಡದ ಮೇಲೆ ತನ್ನ ಪ್ರಭಾವ ಬೀರಲಾರದೆ ಹೋಯಿತು. ಇದಿರಿನ ಮನೆಯನ್ನು ಬಹಳಮಟ್ಟಿಗೆ ಮರೆಮಾಡುತ್ತ ಒಂದು ಬಾದಾಮಿ ಗಿಡವಿತ್ತು. ಚಂಚಲವಾದ ವಾಯು ತನು ಅದರ ದಟ್ಟವಾದ ಹಸುರು ಎಲೆಗಳನ್ನು ತೂಗಾಡಿಸಿ ಅಪರಾಹ್ನದ ಬೆಳಕನ್ನು ಛಿದ್ರಛಿದ್ರಮಾಡಿ ಹರಡುತ್ತಿತ್ತು. ಇಂತಹ ವೇಳೆಯಲ್ಲೇ ಸಾಕಿದ ಜಿಂಕೆ ತನ್ನ ಅಜ್ಞಾತ ವನದತ್ತ ಓಡಿಹೋಗಬಯಸುವುದು. ಯಾವ ದಿನ ವಾಯುವಿನಲ್ಲಿ ವಸಂತದ ಸೋಂಕು ತಗುಲುವುದೋ ಅಂದು ಪೃಥ್ವಿ ಉತ್ಸುಕಗೊಂಡು ದೂರದ ಆಕಾಶದೆಡೆಗೆ ದಿಟ್ಟಿಸಿ ನೋಡುತ್ತಿದೆಯೆಂದು ಮನಸ್ಸಿಗನ್ನಿಸುವುದು. ಎಷ್ಟು ಮಾತ್ರ ನಾಲ್ಕು ದಿಕ್ಕಿನಲ್ಲೂ ಹರಡಿರುವುದೋ ಅದೆಲ್ಲ ಮಿಥ್ಯೆ ಎಂದು ಮನಸ್ಸಿಗೆ ತೋರುವುದು. ಯಾವುದರ ನೆಲೆ ಸಿಕ್ಕದೋ, ಯಾವುದರ ಚಿತ್ರ ಬರೆಯ ಹೊರಟರೆ ಅದರ ವರ್ಣ ಆಕಾಶದಲ್ಲಿ ಕಲೆತುಹೋಗುವುದೋ ರೂಪವನ್ನು ಇಣಿಕಿ ನೋಡಿ ಜಲಸ್ಥಲದ ನಾನಾ ಸಂಕೇತಗಳಲ್ಲಿ ಸೇರಿಕೊಳ್ಳುವುದೋ ಅದನ್ನೇ ಎಲ್ಲಕ್ಕಿಂತ ಸತ್ಯವಾದುದೆಂದು ಮನಸ್ಸು ಎಣಿಸುವುದು. ಕುಸುಮಳ ಮನಸ್ಸು ಬೇಸರಗೊಂಡು ಇಂದು ಎಲ್ಲದರಿಂದಲೂ ಓಡಿ ಹೋಗಲೇಬೇಕೇ ಎನ್ನುವಂತಿತ್ತು. ಆದರೆ ಇದೆಂತಹ ಆವರಣ! ಇಂದು ಈ

ಮನೆಯಲ್ಲೂ ನೆಮ್ಮದಿಯಿಲ್ಲ. ಕಲ್ಪನೆಯಲ್ಲಿ ಮೃತ್ಯುವೂ ಮಧುರವಾಗಿ ತೋರುತ್ತಿತ್ತು. ಮನಸ್ಸಿನಲ್ಲೇ ಹೇಳಿಕೊಳ್ಳತೊಡಗಿದಳು. “ಕಪ್ಪು ಯಮುನೆಯ ಆಚೆ ಆ ಕಪ್ಪು ಬಣ್ಣದವನು; ಅವನನ್ನು ಕೂಡುವುದಕ್ಕಾಗಿಯೇ ಹೋಗುತ್ತಿರುವೆ. ದಿನದ ಮೇಲೆ ದಿನ ಕಳೆಯುತ್ತಿದೆ. ಅದೆಷ್ಟು ದೀರ್ಘವಾದ ಹಾದಿ. ಅದೆಷ್ಟು ದುಃಖದ ಹಾದಿ. ಅಣ್ಣನಿಗೆ ಖಾಯಿಲೆಯಾಗಿದೆ. ಸೇವೆ ಮಾಡುವುದಕ್ಕೆಂದು ಬಂದು ನಾನೇ ಖಾಯಿಲೆ ಹೆಚ್ಚಿಸಿರುವೆ. ಈಗ ನಾನು ಏನನ್ನು ಮಾಡಲು ಪ್ರಯತ್ನಿಸಿದರೂ ಅದಕ್ಕೆ ವಿಪರೀತವಾದುದೇ ಆಗುವುದು.” ಎಂದು ಜೋಪಲಾಗಿ ಯೋಚಿಸತೊಡಗಿದಳು ಎರಡು ಕೈಗಳಿಂದಲೂ ಮುಖ ಮುಚ್ಚಿಕೊಂಡು ಸ್ವಲ್ಪ ಹೊತ್ತು ಅತ್ತಳು. ಅಳುವಿನ ಆವೇಶ ಇಳಿಯಲು “ಮನೆಗೆ ಹಿಂದಿರುಗಿ ಹೊರಟುಹೋಗುವೆ. ಏನಾಗುವುದೋ ಅದನ್ನು ಅನುಭವಿಸುವೆ. ಎಲ್ಲವನ್ನೂ ಸಹಿಸುಕೊಳ್ಳುವೆ. ಕೊನೆಗೆ ಮುಕ್ತಿ ಇದ್ದೇ ಇದೆಯಲ್ಲ” ಶೀತಲ ಗಭೀರ ಮುಕ್ತಿ ಆ ಮೃತ್ಯುವಿನ ಕಲ್ಪನ ಮನಸ್ಸಿನಲ್ಲಿ ಎಷ್ಟೆಷ್ಟು ಸ್ಪಷ್ಟವಾಗ ತೊಡಗಿತೋ ಅಷ್ಟಷ್ಟು ಬಾಳುವೆಯ ಹೊರೆ ಸಂಪೂರ್ಣವಾಗಿ ಹೊರಲಾರದ ಹೊರೆಯಾಗುವುದಿಲ್ಲವೆಂದು ಅವಳ ಮನಸ್ಸಿಗನ್ನಿಸಿತು. ಗುಂಯಿ ಗುಂಯಿ ಎಂದು ಹಾಡತೊಡಗಿದಳು.

ಪಥಪರ್ ರಯುನಿ ಅಂಧೇರೀ

ಕುಂಜಪರ್ ದೀಪ ಉಜಿಯಾರಾ

(ಹಾದಿಯಲ್ಲಿ ರಾತ್ರಿಯ ಅಂಧಕಾರ, ಕುಂಜವನದಲ್ಲಿ ಹೊಳೆಯುವ ಬೆಳಕು.)

ಎರಡನೆಯ ಝಾಮದಲ್ಲಿ ಕುಮು ಅಣ್ಣನನ್ನು ನಿದ್ರೆಹೋಗಿಸಿ ಬಂದಿದ್ದಳು. ಇಷ್ಟು ಹೊತ್ತಿಗೆ ಔಷಧ ಮತ್ತು ಪಥ್ಯ ಸೇವಿಸುವ ಸಮಯವಾಗಿತ್ತು. ಕೋಣೆಗೆ ಬಂದು ನೋಡಿದಾಗ ವಿಪ್ರದಾಸ ಎದ್ದು ಕುಳಿತು ತೊಡೆಯ ಮೇಲೆ ಒತ್ತಿಟ್ಟುಕೊಂಡು ಸುಬೋಧನಿಗೆ ದೊಡ್ಡದಾದ ಒಂದು ಕಾಗದ ಬರೆಯುತ್ತಿದ್ದ. ಭರ್ತ್ಸನೆಯ ದನಿಯಲ್ಲಿ ಕುಮು ಅವನೊಡನೆ “ಅಣ್ಣಾ, ನೀನು ಇಂದು ಚನ್ನಾಗಿ ನಿದ್ರೆಹೋಗಲಿಲ್ಲ” ಎಂದಳು.

ವಿಪ್ರದಾಸ "ನಿದ್ರೆ ಹೋದರೇನೆ ವಿಶ್ರಮಿಸಿಕೊಂಡ ಹಾಗಾಗುವುದೆಂದು ನಿನ್ನ ಅಭಿಪ್ರಾಯ ? ಮನಸ್ಸು ಕಾಗದ ಬರೆಯಬೇಕೆಂದು ಬಯಸಿದಾಗ ಕಾಗದ ಬರೆದರೇನೇ ವಿಶ್ರಾಂತಿ" ಎಂದು ಉತ್ತರಿಸಿದನು.

ತನ್ನಿಂದಲೇ ಈ ಗೊಂದಲವೆಂದು ಕುಮು ಅರಿತಳು. ಸಮುದ್ರದ ಈ ಕಡೆ ಒಬ್ಬ ಒಡಹುಟ್ಟಿದವನನ್ನು ವ್ಯಾಕುಲಗೊಳಿಸಿದೆ. ಸಮುದ್ರದ ಆಚೆ ಇನ್ನೊಬ್ಬನನ್ನು ತಲ್ಲಣಗೊಳಿಸುತ್ತಿದೆ. ಅದೆಂತಹ ಅದೃಷ್ಟವನ್ನು ಕೇಳಿಕೊಂಡು ಈ ತಂಗಿ ಅವರ ನಡುವೆ ಹುಟ್ಟಿದ್ದಳೋ ! ಅಣ್ಣನ ಕೋಣೆ ಕುಡಿದಾದ ಮೇಲೆ ಮೆಲ್ಲ ಮೆಲ್ಲನೆ ಬಂದು, "ಬಹಳ ದಿವಸಗಳಾದುವು. ಇನ್ನು ಈಗ ಮನೆಗೆ ಹೋಗಬೇಕೆಂದು ನಿರ್ಧರಿಸಿದ್ದೇನೆ" ಎಂದಳು.

ವಿಪ್ರದಾಸ ಮಾತಿನ ಭಾವವೇನೆಂಬುದನ್ನು ತಿಳಿಯುವ ಪ್ರಯತ್ನದಲ್ಲಿ ಕುಮುದಿನಿಯ ಮುಖದ ಕಡೆ ನೋಡಿದ. ಇಷ್ಟು ದಿನಗಳವರೆಗೆ ಅಣ್ಣ ತಂಗಿಯರಲ್ಲಿ ಯಾವ ವಿಧವಾದ ಸ್ಪಷ್ಟವಾದ ನಡವಳಿಕೆ ಇತ್ತೋ ಅದು ಈಗ ಇರಲಿಲ್ಲ. ಈಗ ಮನಸ್ಸಿನ ರಹಸ್ಯ ಅರಿಯಲು ತಡವರಿಸುತ್ತ ತಿರುಗಬೇಕಾಗಿದೆ. ವಿಪ್ರದಾಸ ಬರವಣಿಗೆ ನಿಲ್ಲಿಸಿದ. ಕುಮುವನ್ನು ಪಕ್ಕದಲ್ಲಿ ಕೂರಿಸಿಕೊಂಡು ಏನೂ ಹೇಳದೆ ಮೆಲ್ಲಮೆಲ್ಲನೆ ಅವಳ ಕೈ ಸವರುತ್ತಿದ್ದ. ಕುಮು ಅವನ ನಡವಳಿಕೆಯ ಭಾಷೆಯನ್ನು ಅರಿತಳು. ಸಂಸಾರದ ಗ್ರಂಥಿ ಸಿಕ್ಕುಸಿಕ್ಕಾಗಿದೆ. ಆದರೆ ಪ್ರೇಮಕ್ಕೆ ಅಭಾವವಿರಲಿಲ್ಲ. ಕಣ್ಣಿನಿಂದ ನೀರು ಹೊರಹೊಮ್ಮಲು ಬಯಸಿತು. ಬಲವಂತವಾಗಿ ಅಡಗಿಸಿದಳು. ಈ ಪ್ರೀತಿಯ ಮೇಲೆ ತಾನು ಹೊರೆ ಹೇರಕೂಡದೆಂದು ಕುಮು ಮನಸ್ಸಿನಲ್ಲೇ ನಿರ್ಧರಿಸಿದಳು. ಅದರಿಂದಲೇ ಮತ್ತೊಮ್ಮೆ "ಅಣ್ಣಾ, ನಾನು ಹೋಗಲು ತೀರ್ಮಾನಿಸಿರುವೆ" ಎಂದಳು.

ಏನು ಉತ್ತರ ಕೊಡುವುದೆಂದು ವಿಪ್ರದಾಸನಿಗೆ ಹೊಳೆಯಲಿಲ್ಲ. ಯಾಕೆಂದರೆ, ಕುಮು ಹೋಗುವುದೇ ಒಳ್ಳೆಯದು ಕೊನೆಯ ಪಕ್ಷ ಹಾಗೆ ಮಾಡಬೇಕಾದುದೇ ಕರ್ತವ್ಯ. ತೆಪ್ಪನಿದ್ದ, ಈ ಸಮಯದಲ್ಲಿ ನಾಯಿ ನಿದ್ರೆಯಿಂದ ಎಚ್ಚೆತ್ತು ಕುಮುವಿನ ಮಡಿಲಲ್ಲಿ ಎರಡು ಕಾಲುಗಳನ್ನಿಟ್ಟು ಕೊಂಡು ವಿಪ್ರದಾಸನ ಪ್ರಸಾದದ ರೊಟ್ಟಿಗಾಗಿ ಬೇಡಿಕೆಯನ್ನು ಅರಿಕೆ ಮಾಡಿತು.

ಬೋಯಿರಾವ್‌ಸ್ವರೂಪನು ಬಂದು "ಚಟರ್ಜಿ ಮಹಾಶಯರು ಬಂದಿರುವರು" ಎಂದು ಸುದ್ದಿಕೊಟ್ಟ. ಕುಮು ಉದ್ವಿಗ್ನಳಾಗಿ "ಇವತ್ತು ನೀನು ಚೆನ್ನಾಗಿ ನಿದ್ರೆಮಾಡಲಿಲ್ಲ. ಅವರ ಮೇಲೆ ಈಗ ಕಾಳೂ ಅಣ್ಣ ನೊಡನೆ ತರ್ಕವಿತರ್ಕಮಾಡಿ ದಣಿಯುವೆ, ನಾನು ಹೋಗುತ್ತೇನೆ. ಏನಾದರೂ ವಿಶೇಷವಿದ್ದರೆ ಕೇಳಿಕೊಂಡು ಬಂದು ಆಮೇಲೆ ನಿನಗೆ ತಿಳಿಸುತ್ತೇನೆ" ಎಂದಳು.

"ಬಹಳ ದೊಡ್ಡ ಡಾಕ್ಟರ್ ಆಗಿ ಬಿಟ್ಟೆಯಲ್ಲ ನೀನು? ಒಬ್ಬರು ಕೇಳಬೇಕಾದ ವಿಷಯವನ್ನು ಮತ್ತೊಬ್ಬರು ಕೇಳಿ ಬಿಟ್ಟರೆ ಅದರಿಂದ ರೋಗಿಗೆ ಬಹಳ ನೆಮ್ಮದಿಯಾಗುವುದೆಂದು ಭಾವಿಸಿರುವೆಯಲ್ಲವೆ!"

"ಒಳ್ಳೆಯದು, ನಾನು ಕೇಳುವುದಿಲ್ಲ. ಆದರೆ ಇಪ್ರೊತ್ತು ಸುಮ್ಮನಿರು."

"ಕುಮೂ, ಇಂಗ್ಲೀಷ್ ಕವಿ ಹೇಳಿದಾನೆ "ಕೇಳಿದ ಸಂಗೀತ ಇಂಪಾಗಿರುವುದು. ಕೇಳದಿದ್ದ ಸಂಗೀತ ಅತಿ ಇಂಪಾಗಿರುವುದು" ಎಂದು. ಹಾಗೆಯೇ ಕಿವಿಯಾರ ಕೇಳಿದ ಸುದ್ದಿ ದಣಿವನ್ನು ಉಂಟುಮಾಡಬಹುದು. ಆದರೆ ಕೇಳದೆಹೋದ ಸುದ್ದಿ ಮತ್ತೂ ಹೆಚ್ಚಿನ ದಣಿವನ್ನುಂಟುಮಾಡು ವುದು. ಆದ್ದರಿಂದ ಸಾವಕಾಶ ಮಾಡದೆ ಕೇಳಿಬಿಡುವುದೇ ಉತ್ತಮ."

"ನಾನು ಹದಿನೈದು ನಿಮಿಷ ಆದ ಮೇಲೆ ಬರುತ್ತೇನೆ. ಮತ್ತೆ ಆಗಲೂ ನಿಮ್ಮ ಮಾತು ಕತೆ ಮುಗಿಯದಿದ್ದರೆ ಅವರ ಮುಂದಲ್ಲೇ ನಾನು ಏಸ್‌ರಾಜ್ ಬಾರಿಸುವೆ—ಭೀಮ್‌ಪಲಶ್ರೀ"

"ಸರಿ. ಅದಕ್ಕೆ ಒಪ್ಪಿದೆ."

ಅರ್ಧಗಂಟೆಯಾದ ಮೇಲೆ ಕುಮು ಕೈಯಲ್ಲಿ ಏಸ್‌ರಾಜ್ ಹಿಡಿದು ಕೊಂಡೇ ಕೊಟಡಿಯೊಳಗೆ ಬಂದಳು. ಆದರೆ ವಿಪ್ರದಾಸನ ಮುಖದ ಭಾವ ನೋಡಿದವಳೇ ತಕ್ಷಣ ಏಸ್‌ರಾಜನನ್ನು ಗೋಡೆಯ ಮೂಲೆಗೆ ಒರಗಿಸಿಟ್ಟು ಅಣ್ಣನ ಪಕ್ಕದಲ್ಲಿ ಕುಳಿತು ಅವನ ಕೈ ಅದುಮಿ ಹಿಡಿದು ಕೊಂಡು "ಏನಾಯಿತು ಅಣ್ಣಾ?" ಎಂದಳು.

ಕುಮು ಇಷ್ಟುದಿನ ವಿಪ್ರದಾಸನಲ್ಲಿ ಯಾವ ಬಗೆಯ ಚಂಚಲತೆ ಕಂಡಿದ್ದಳೋ ಅದರಲ್ಲೊಂದು ಗಭೀರ ವಿಷಾದವಿತ್ತು. ವಿಪ್ರದಾಸನು

ತನ್ನ ಜೀವನದಲ್ಲಿ ಅನೇಕ ದುಃಖತಾಪಗಳನ್ನು ಅನುಭವಿಸಿದ್ದ. ಯಾವುದೂ ಅವನನ್ನು ಸಹಜವಾಗಿ ವಿಚಲಿತಗೊಳಿಸಲಿಲ್ಲ. ಗ್ರಂಥವ್ಯಾಸಂಗ, ಛಾಯಾಗಾರಿಕೆ, ದುರ್ಬೀನು ಹಿಡಿದು ನಕ್ಷತ್ರಗಳನ್ನು ನೋಡುವುದು, ಕುದುರೆ ಸವಾರಿ, ನಾನಾ ಸ್ಥಳಗಳಿಂದ ಬಗೆಬಗೆಯ ಗಿಡಗಳನ್ನು ತರಿಸಿ ತೋಟದಲ್ಲಿ ಬೆಳೆಸುವುದು, ಇವೇ ಮೊದಲಾದ ನಾನಾ ವಿಷಯಗಳಲ್ಲಿ ಉತ್ಸುಕತೆ ಇರುತ್ತಿದ್ದುದರಿಂದ ತನ್ನ ವಿಷಯವಾದ ದುಃಖ ಕಷ್ಟಗಳು ತನ್ನಲ್ಲಿ ನೆಲೆಗೊಳ್ಳಲು ಎಡೆಕೊಟ್ಟಿರಲಿಲ್ಲ. ಈ ಬಾರಿ ರೋಗದ ದುರ್ಬಲತೆಯಿಂದ ಅವನು ತನ್ನ ಇಕ್ಕಟ್ಟಾದ ಆವರಣದಲ್ಲಿ ಬಹಳವಾಗಿ ಬಂಧಿಯಾಗಿದ್ದ. ಈಗ ಅವನು ಹೊರಗಿನಿಂದ ಸೇವೆ ಮತ್ತು ಸಹವಾಸ ಪಡೆಯುವುದಕ್ಕಾಗಿ ಉತ್ಸುಕನಾಗಿರುತ್ತಿದ್ದ. ಕಾಲಕ್ಕೆ ಸರಿಯಾಗಿ ಕಾಗದಗಳು ಬರದಿದ್ದರೆ ಉದ್ವಿಗ್ನಗೊಳ್ಳುತ್ತಿದ್ದ. ನೋಡನೋಡುತ್ತ ಚಿಂತೆ ಕಾರ್ಮೋಡದಂತೆ ಕೂಡಿಕೊಳ್ಳುತ್ತಿತ್ತು. ಆದ್ದರಿಂದಲೇ ಈಚೆಗೆ ಅಣ್ಣನ ಮೇಲಿನ ಪ್ರೀತಿ, ತಾಯಿಯ ವಾತ್ಸಲ್ಯದ ರೂಪವನ್ನು ಧರಿಸಿತ್ತು. ಅವಳಿಗೆ, ಅಂತಹ ಧೀರಗಂಭೀರನೂ ಆತ್ಮವಿಶ್ವಾಸಪೂರ್ಣನೂ ಆದ ಅಣ್ಣನಲ್ಲಿ ಎಲ್ಲಿಂದಲೋ ಬಾಲಭಾವ ಬಂದು ಕಾಣಿಸಿಕೊಂಡಿತು. ಅದೆಷ್ಟು ಅನಾದರ! ಅದೆಷ್ಟು ಚಂಚಲ! ಅದೆಷ್ಟು ಹಟ! ಮತ್ತೆ ಅದರ ಜೊತೆಯಲ್ಲಿ ಅಂತಹ ಗಂಭೀರ ವಿಷಾದ ಮತ್ತು ಉತ್ಕಂಠತೆಗಳು ಬೆರೆತಿದ್ದುವು.

ಆದರೆ ಕುಮು ಬಂದು ನೋಡಿದಾಗ ಅವಳ ಅಣ್ಣನ ಆ ಆವೇಶ ಕಣ್ಮರೆಯಾಗಿತ್ತು. ಅವನ ದೃಷ್ಟಿಯಲ್ಲಿ ಒಂದು ಬಗೆಯ ಬೆಂಕಿ ಉರಿಯುತ್ತಿತ್ತು. ಮಹಾದೇವನ ಫಾಲನೇತ್ರದಂತಿತ್ತು. ಅದು ತನ್ನ ದುಃಖದಿಂದಾದುದಲ್ಲ. ಅವನು ತನ್ನ ದೃಷ್ಟಿಯ ಇದಿರಿನಲ್ಲಿ ಪ್ರಪಂಚದ ಯಾವುದೋ ಪಾಪವನ್ನು ಕಂಡು ಅದನ್ನು ಸುಟ್ಟುಬಿಡಬೇಕೆಂದು ಬಯಸುತ್ತಿದ್ದ. ಕುಮುವಿನ ಮಾತಿಗೆ ಏನೂ ಉತ್ತರ ಕೊಡದೆ ಇದಿರಿನ ಗೋಡೆಯ ಮೇಲೆ ಎವೆಯಿಕ್ಕದ ದೃಷ್ಟಿಯೊಡನೆ ನೋಡುತ್ತ ವಿಪ್ರದಾಸ ಸುಮ್ಮನೆ ಕುಳಿತಿದ್ದ.

ಸ್ವಲ್ಪ ಹೊತ್ತಾದ ಮೇಲೆ ಕುಮು ಪುನಃ "ಅಣ್ಣಾ, ಏನಾಗಿದೆ ಹೇಳು?" ಎಂದಳು.

ವಿಪ್ರದಾಸನು ದೂರದ ಗುರಿಯೊಂದರ ಕಡೆ ಗಮನವಿಟ್ಟು " ದುಃಖವನ್ನು ದೂರ ಸರಿಸುವುದಕ್ಕೆ ಪ್ರಯತ್ನಮಾಡಿದಷ್ಟೂ ಅದು ಹೆಗಲನ್ನೇರುವುದು. ಅದನ್ನು ಧೈರ್ಯದಿಂದ ಸಹಿಸಲೇಬೇಕಾಗಿದೆ" ಎಂದ.

" ನೀನು ಉಪದೇಶ ಕೊಡು. ನಾನು ಸಹಿಸಬಲ್ಲೆ, ಅಣ್ಣಾ. "

" ಹೆಣ್ಣು ಮಕ್ಕಳ ಮೇಲೆ ಯಾವ ಬಗೆಯ ಅನ್ಯಾಯ ನಡೆಯುತ್ತಿದೆಯೆಂಬುದನ್ನು ನಾನು ಕಾಣುತ್ತಿರುವೆ! ಅದು ಸಂಪೂರ್ಣ ಸಮಾಜಕ್ಕೇ ಅನ್ವಯಿಸುವುದಲ್ಲದೆ ಕೇವಲ ಯಾವಳೋ ಒಬ್ಬ ಹೆಣ್ಣಿಗೆ ಮಾತ್ರ ಅನ್ವಯಿಸುವುದಿಲ್ಲ. "

ಕುಮುವಿಗೆ ಅಣ್ಣನ ಮಾತುಗಳ ಅರ್ಥ ತಿಳಿಯಲಿಲ್ಲ.

ವಿಪ್ರದಾಸ ಮಾತು ಮುಂದುವರಿಸಿದ. " ಇಷ್ಟು ದಿನ ವ್ಯಥೆಯನ್ನು ನನ್ನ ಮನಸ್ಸಿನಲ್ಲೇ ಅಡಗಿಸಿಟ್ಟುಕೊಂಡು ಸಂಕಟಪಡುತ್ತಿದ್ದೆ. ಇವರೊಡನೆ ಎಲ್ಲ ನೊಂದವರ ಪರವಾಗಿ ಕಾದಾಡಲೇ ಬೇಕು ಎಂದು ಈಗ ಅರಿತೆ."

ವಿಪ್ರದಾಸನ ಸಪ್ಪೆ ಬಿದ್ದಿದ್ದ ಬಿಳಿಯ ಮುಖ ಕೆಂಪಡರಿತು. ಅವನ ಮಡಿಲಲ್ಲಿ ರೇಷ್ಮೆ ದಾರದಲ್ಲಿ ಕಸೂತಿ ಕೆಲಸ ಮಾಡಿದ್ದ ಚೌಕನಾದ ಒಂದು ದಿಂಬಿತ್ತು. ಹಠಾತ್ತಾಗಿ ಅದನ್ನು ತಳ್ಳಿ ಕೆಳಗೆ ಕೆಡವಿದ. ಹಾಸಿಗೆ ಬಿಟ್ಟೆದ್ದು ಪಕ್ಕದಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಳ್ಳಲು ಹೋದ. ಕುಮು ಅವನ ಕೈಯನ್ನು ಅದುಮಿ ಹಿಡಿದುಕೊಂಡು " ಶಾಂತವಾಗು ಅಣ್ಣಾ, ಏಳಬೇಡ. ನಿನ್ನ ವ್ಯಾಧಿ ಹೆಚ್ಚುವುದು" ಎಂದಳು. ಹೀಗೆ ಹೇಳಿ ಸ್ವಲ್ಪ ಬಲವಂತವಾಗಿಯೇ ಬೆನ್ನ ಕಡೆ ಎತ್ತರವಾಗಿ ಅಡಕಿದ್ದ ದಿಂಬಿನ ಮೇಲೆ ವಿಪ್ರದಾಸನನ್ನು ಒರಗಿಸಿ ಮಲಗಿಸಿದಳು.

ವಿಪ್ರದಾಸ ಮೈಮೇಲಿನ ಬಟ್ಟೆಯನ್ನು ಮುಷ್ಟಿಯಲ್ಲಿ ಅದುಮಿ ಹಿಡಿದುಕೊಂಡು "ಸಹಿಸುವುದೊಂದಲ್ಲದೆ ಹೆಂಗಸರಿಗೆ ಬೇರೆ ಯಾವ ಮಾರ್ಗವೂ ಇಲ್ಲವೆಂದೇ ಅವರ ಮೇಲೆ ಕೇವಲ ಪೆಟ್ಟು ಬೀಳುತ್ತಿದೆ. ಇನ್ನು ಸಹಿಸಲು ಸಾಧ್ಯವಿಲ್ಲ ಎಂದನ್ನುವ ಕಾಲ ಬಂದೊದಗಿದೆ. ಕುಮು,

ಇದೇ ನಿನ್ನ ಮನೆಯೆಂದು ಎಣಿಸಿಕೊಂಡು ಇರಬಲ್ಲೆಯೇನು ? ಅವರ ಮನೆಗೆ ಇನ್ನು ನೀನು ಹೋಗುವುದು ಸಲ್ಲದು" ಎಂದನು.

ಕಾಳೂವಿನ ಬಾಯಿಂದ ವಿಪ್ರದಾಸ ಇಂದು ಬಹಳ ವಿಷಯಗಳನ್ನು ತಿಳಿದಿದ್ದ.

ಶ್ಯಾಮಾಸುಂದರಿಯೊಡನೆ ಘಟಿಸಿದ್ದ ಮಧುಸೂದನನ ಸಂಬಂಧ ದಲ್ಲಿ ಇತ್ತೀಚೆಗೆ ಏನೇನೂ ಮುಚ್ಚುಮರೆಯೇ ಇರಲಿಲ್ಲ. ಅವರಿಬ್ಬರೂ ಪೂರ್ತಿಯಾಗಿ ನಾಚಿಕೆ ಬಿಟ್ಟಿದ್ದರು. ಜನರು ಅವರುಗಳನ್ನು ಅಪರಾಧಿ ಗಳೆಂದು ಎಣಿಸುವರೆಂದೇ ಅವರುಗಳು ಮತ್ತಷ್ಟು ಹೆಮ್ಮೆಗೊಂಡಿದ್ದರು. ಈ ಸಂಬಂಧದಲ್ಲಿ ಸೂಕ್ಷ್ಮವಿಚಾರ ಏನೂ ಇಲ್ಲವೆಂದೇ ಜನಾಭಿಪ್ರಾಯ ವನ್ನು ಲಕ್ಷಿಸಿ ನಡೆದುಕೊಳ್ಳುವುದು ಅವರಿಗೆ ಅನಾವಶ್ಯಕವಾಗಿತ್ತು. ಮಧು ಸೂದನ ನಡುನಡುವೆ ಶ್ಯಾಮಾಸುಂದರಿಯನ್ನು ಹೊಡೆಯುತ್ತಿದ್ದನೆಂದೂ ಸುದ್ದಿ ಹರಡಿತ್ತು. ಶ್ಯಾಮಾ ದೊಡ್ಡ ದನಿಯಲ್ಲಿ ಜಗಳವಾಡತೊಡಗಿ ದಾಗ ಮಧುಸೂದನ ಎಲ್ಲರ ಇದಿರಿನಲ್ಲೇ ಅವಳನ್ನು "ತೊಲಗಿಹೋಗು ಕುಲಗೆಟ್ಟವಳೆ. ನನ್ನ ಮನೆಯಿಂದ ಹೊರಟು ಹೋಗು" ಎಂದು ಅಂದಿ ದ್ದನಂತೆ. ಆದರೆ ಇದರಿಂದಲೂ ಏನೂ ಪ್ರಯೋಜನವಾಗಿರಲಿಲ್ಲ. ಶ್ಯಾಮಾಳ ವಿಷಯದಲ್ಲಿ ಮಧುಸೂದನ ತನ್ನ ಕರ್ತವ್ಯ ನಡೆಸಿದ್ದ. ಮನಸ್ಸು ಮಾಡಿ ಮಧುಸೂದನ ತಾನಾಗಿ ಏನು ಕೊಡುತ್ತಿದ್ದನೋ ಅದಕ್ಕಿಂತ ಹೆಚ್ಚು ತೆಗೆದುಕೊಳ್ಳಲು ಶ್ಯಾಮಾ ಕೈಹಾಕಿದೊಡನೆ ಗದರಿಕೆಯನ್ನು ಕೇಳಿ ದ್ದುಂಟು. ಸಂಸಾರದಲ್ಲಿ ಮೋತಿಯತಾಯಿಗೆ ಯಾವ ಸ್ಥಾನವಿತ್ತೋ ಅದನ್ನು ಆಕ್ರಮಿಸಬೇಕೆಂದು ಶ್ಯಾಮಾಳ ಮನಸಿತ್ತು. ಆದರೆ ಅದಕ್ಕೂ ಅಡ್ಡಿ ಒದಗಿತ್ತು. ಮಧುಸೂದನ ಮೋತಿಯತಾಯನ್ನು ನಂಬುತ್ತಿದ್ದ. ಶ್ಯಾಮಾಸುಂದರಿಯಲ್ಲಿ ಅವನಿಗೆ ನಂಬಿಕೆಯಿರಲಿಲ್ಲ. ಶ್ಯಾಮಾಳ ವಿಷಯ ದಲ್ಲಿ ಅವನಿಗೆ ಮಮತೆಯೇನೂ ಉಂಟಾಗಿರಲಿಲ್ಲ. ಕೇವಲ ಒಂದು ಬಗೆಯ ಆಸಕ್ತಿಯಿತ್ತು ಅಷ್ಟೆ. ಶೀತಕಾಲದಲ್ಲಿ ಬಹಳವಾಗಿ ಉಪಯೋ ಗಿಸಿದ ಕೊಳಕು ರಜಾಯಿಯಂತೆ, ಅದರಲ್ಲಿ ಚಿತ್ರಗೆಲಸಕ್ಕೆ ಸಂಪೂರ್ಣ ಅಭಾವವಿತ್ತು. ಹೆಚ್ಚು ಎಚ್ಚರಿಕೆಯಿಂದ ನೋಡಿಕೊಳ್ಳಬೇಕಾದ ಪದಾರ್ಥ

ವಲ್ಲ, ಮಂಚದಿಂದ ಕೆಳಗೆ ಧೂಳಿನಲ್ಲಿ ಬಿದ್ದರೂ ಅಷ್ಟಾಗಿ ಗಮನ ಸೆಳೆಯುವಂಥಾದ್ದಲ್ಲ. ಆದರೆ ಅದರಿಂದ ಸುಖವಿದೆ. ಶ್ಯಾಮಾಳ ವಿಷಯದಲ್ಲಿ ಎಚ್ಚರಿಕೆಯಿಂದಿರಬೇಕಾದ ಆವಶ್ಯಕತೆಯೇನೂ ಇರಲಿಲ್ಲ. ಅದಲ್ಲದೆ ಅವಳು ತನ್ನ ಪೂರ್ಣ ತನುಮನಗಳಿಂದ ಅವನನ್ನು ದೊಡ್ಡ ಮನುಷ್ಯನೆಂದು ಅಂಗೀಕರಿಸಿದ್ದಳು. ಅವನಿಗಾಗಿ ಎಲ್ಲವನ್ನೂ ಸಹಿಸಲು, ಏನು ಬೇಕಾದರೂ ಮಾಡಲು ಅವಳು ಸಿದ್ಧಳಾಗಿರುವಳೆಂಬುದನ್ನು ಸಂದೇಹವೇ ಇಲ್ಲದೆ ತಿಳಿದಿದ್ದ ಕಾರಣ ಮಧುಸೂದನನ ಆತ್ಮಗೌರವ ನೆಮ್ಮದಿ ಹೊಂದಿತ್ತು. ಕುಮು ಇದ್ದ ವೇಳೆಯಲ್ಲಿ ಅವನ ಈ ಆತ್ಮಗೌರವ ಸ್ವಲ್ಪ ಹೆಚ್ಚಾಗಿಯೇ ಕುಂದುತ್ತಿತ್ತು.

ಮಧುಸೂದನನ ಈ ಆಧುನಿಕ ಇತಿಹಾಸವನ್ನು ತಿಳಿಯಲು ಕಾಳೂ ಅಷ್ಟು ಹೆಚ್ಚು ಸಂಧಾನ ಮಾಡಬೇಕಾಗಿರಲಿಲ್ಲ. ಆವರ ಮನೆಯ ಜನರಲ್ಲಿ ಈ ವಿಷಯವಾಗಿ ಯಥೇಷ್ಟವಾಗಿ ಮಾತುಕತೆ ನಡೆಯುತ್ತಿತ್ತು. ಕೊನೆಗೆ ಪೂರ್ತಿಯಾಗಿ ಅದು ಸರ್ವೇ ಸಾಧಾರಣವಾಗಲು ಮಾತು ಕತೆಯ ಸರ್ವವೂ ಒಂದು ವಿಧದಲ್ಲಿ ಕೊನೆಗಂಡಿತ್ತು.

ಸುದ್ದಿ ಕೇಳಿದ ಮಾತ್ರದಿಂದ ವಿಪ್ರದಾಸನಿಗೆ ಬೆಂಕಿಯ ಬಾಣದಿಂದ ಚುಚ್ಚಿದಂತಾಯಿತು. ಮಧುಸೂದನ ಏನನ್ನೂ ಮರೆಮಾಚುವುದಿಲ್ಲ. ತನ್ನ ಹೆಂಡತಿಯನ್ನು ಇಷ್ಟು ಬಹಿರಂಗವಾಗಿ ಅವಮಾನಗೊಳಿಸುವುದು ಸಾಧ್ಯ. ಹೆಂಡತಿಯ ಮೇಲೆ ಅನ್ಯಾಯದ ನಡವಳಿಕೆ ನಡೆಸಲು ಹೊರಗಿನ ಅಡ್ಡಿ ಏನೂ ಇಲ್ಲ. ಹೆಣ್ಣನ್ನು ಉಪಾಯವಿಲ್ಲದೆ ಗಂಡನ ಹತೋಟಿಗೊಪ್ಪಿಸಲು ಸಮಾಜ ಸಾವಿರ ಬಗೆಯ ಅವಕಾಶ ಮತ್ತು ಹಿಂಸೆಗಳನ್ನು ಸೃಷ್ಟಿಮಾಡಿದೆ. ಆದರೆ ಅದೇ ಹೆಣ್ಣನ್ನು ಗಂಡನ ಉಪದ್ರವದಿಂದ ರಕ್ಷಿಸಲು ಯಾವ ಆವಶ್ಯಕವಾದ ಮಾರ್ಗವನ್ನೂ ಮಾಡಿಲ್ಲ. ಇಂತಹ ಸಾಧಾರಣ ದುಃಖ ಮತ್ತು ಅಗೌರವ ಮನೆಮನೆಯಲ್ಲಿ ಯುಗಯುಗಗಳಿಂದ ಯಾವ ವಿಧದಲ್ಲಿ ಹರಡಿಕೊಂಡಿದೆಯೆಂಬುದನ್ನು ವಿಪ್ರದಾಸ ಮುಹೂರ್ತ ಮಾತ್ರದಲ್ಲಿ ಅರಿತ. ಪತಿವ್ರತಾಧರ್ಮದ ದಪ್ಪ ಹೊದಿಕೆಯಿಂದ ಈ ವ್ಯಥೆಯನ್ನು ಅಡಗಿಸುವ ಪ್ರಯತ್ನ ನಡೆದಿದೆ. ಆದರೆ ಸಂಪೂರ್ಣವಾಗಿ

ವೇದನೆಯಿಲ್ಲದಂತೆ ಮಾಡಲು ಸ್ವಲ್ಪವೂ ಪ್ರಯತ್ನವಿಲ್ಲ. ಹೆಂಗಸರು ಇಷ್ಟು ಅಗ್ಗವಾಗಿರುವರು. ಇಷ್ಟು ಕೆಲಸಕ್ಕೆ ಬಾರದವರಾಗಿ ಬಿಟ್ಟಿರುವರು.

ವಿಪ್ರದಾಸನು "ಕುಮೂ, ಅವಮಾನ ಸಹಿಸುವುದು ಕಷ್ಟವಲ್ಲ. ಆದರೆ ಸಹಿಸಿಕೊಳ್ಳುವುದು ಅನ್ಯಾಯ. ಒಟ್ಟು ಸ್ತ್ರೀ ಜಾತಿಯ ಪರವಾಗಿ ನೀನು ನಿನ್ನ ಗೌರವವನ್ನು ಬಿಟ್ಟು ಕೊಡಬಾರದು. ಇದಕ್ಕಾಗಿ ಸಮಾಜ ನಿನಗೆಷ್ಟು ಸಂಕಟ ಕೊಟ್ಟರೂ ಕೊಡಲಿ" ಎಂದನು.

ಕುಮು "ಅಣ್ಣಾ, ನೀನು ಯಾವ ಅವಮಾನದ ವಿಷಯ ಹೇಳುತ್ತಿರುವೆಯೋ ನನಗೆ ಸರಿಯಾಗಿ ಅರ್ಥವಾಗಿಲ್ಲ" ಎಂದಳು.

"ಹಾಗಾದರೆ ನೀನು ಎಲ್ಲ ಸಂಗತಿಯನ್ನೂ ಅರಿಯೆಯೇನು ?"

"ಇಲ್ಲ."

ವಿಪ್ರದಾಸ ಸುಮ್ಮನಿದ್ದ. ಸ್ವಲ್ಪ ಹೊತ್ತಿನ ನಂತರ "ಹೆಂಗಸರ ಅವಮಾನದ ಸಂಕಟ ನನ್ನ ಎದೆಯಲ್ಲಿ ಒಟ್ಟುಗೂಡಿದೆ. ಯಾವುದಕ್ಕಾಗಿ ಬಲ್ಲೆಯೇನು ?" ಎಂದು ಕೇಳಿದ.

ಕುಮು ಏನೂ ಹೇಳದೆ ಅಣ್ಣನ ಮುಖ ನೋಡುತ್ತ ಕುಳಿತಿದ್ದಳು.

ಸ್ವಲ್ಪ ಹೊತ್ತಾದ ಮೇಲೆ "ಬದುಕಿದ್ದಷ್ಟು ದಿನಗಳೂ ಅಮ್ಮ ಯಾವ ಸಂಕಟ ಅನುಭವಿಸಿದ್ದಳು ಎನ್ನುವುದನ್ನು ನಾನು ಯಾವ ಬಗೆಯಲ್ಲೂ ಮರೆಯಲಾರೆ. ಧರ್ಮಬುದ್ಧಿ ಹೀನವಾದ ನಮ್ಮ ಸಮಾಜವೇ ಅದಕ್ಕೆ ಹೊಣೆ" ಎಂದು ವಿಪ್ರದಾಸನು ಮಾತನ್ನು ಮುಂದುವರಿಸಿದನು.

ಈ ಎಡೆಯಲ್ಲೇ ಅಣ್ಣ ತಂಗಿಯರಲ್ಲಿ ಭೇದವಿತ್ತು. ಕುಮು ತಮ್ಮ ತಂದೆಯನ್ನು ಬಹಳವಾಗಿ ಪ್ರೀತಿಸುತ್ತಿದ್ದಳು. ಆತನ ಹೃದಯ ಎಷ್ಟು ಕೋಮಲವಾಗಿತ್ತೆಂದು ತಿಳಿದಿದ್ದಳು ಎಲ್ಲ ದೋಷಗಳಿದ್ದೂ ತನ್ನ ತಂದೆ ಬಹಳ ದೊಡ್ಡ ವ್ಯಕ್ತಿ ಎಂದು ಅಂದುಕೊಳ್ಳದೆ ಅವಳ ಮನಸ್ಸು ನೆಮ್ಮದಿ ಹೊಂದುತ್ತಿರಲಿಲ್ಲ. ಅಷ್ಟೇಕೆ; ಅಪ್ಪನ ಬಾಳುವೆಯಲ್ಲಿ ಕೊನೆಯ ಘಟನೆ ಅಷ್ಟು ಶೋಚನೀಯವಾಗಿತ್ತು ಅದರ ದೋಷವನ್ನು ಅವಳು ಅಮ್ಮನ ಮೇಲೇ ಹೊರಿಸುತ್ತಿದ್ದಳು.

ವಿಪ್ರದಾಸನೂ ತಮ್ಮ ತಂದೆ ಹಿರಿಯರೆಂದು ಭಕ್ತಿ ಇಟ್ಟಿದ್ದ. ಆದರೆ ಮೇಲಿಂದ ಮೇಲೆ ಆತ ತನ್ನ ತಾಯಿಯನ್ನು ಎಲ್ಲರಿದಿರಿನಲ್ಲಿ ಅವಮಾನಪಡಿಸಲೂ ಹಿಂಜರಿಯಲಿಲ್ಲವೆನ್ನುವ ಸಂಗತಿಯನ್ನು ಅವನು ಯಾವ ಬಗೆಯಲ್ಲೂ ಕ್ಷಮಿಸಲು ಸಿದ್ಧನಾಗಿರಲಿಲ್ಲ. ಅವನ ತಾಯಿಯೂ ಕ್ಷಮಿಸಿರಲಿಲ್ಲವೆಂದು ವಿಪ್ರದಾಸ ಮನದಲ್ಲಿ ಹೆಮ್ಮೆಪಡುತ್ತಿದ್ದ.

ವಿಪ್ರದಾಸನು "ನಮ್ಮ ತಾಯಿ ಯಾವ ಅಪಮಾನ ಪಟ್ಟಿದ್ದರೋ ಅದರಿಂದ ಒಟ್ಟು ಸ್ತ್ರೀ ಜಾತಿಗೇ ಅಪಮಾನ. ಕುಮೂ, ನೀನು ವೈಯಕ್ತಿಕವಾಗಿ ನಿನ್ನ ಸಂಗತಿ ಮರೆತು ಆ ಅಪಮಾನದ ವಿರುದ್ಧವಾಗಿ ನಿಲ್ಲಬೇಕು. ಖಂಡಿತ ಸೋಲನ್ನೊಪ್ಪಬಾರದು" ಎಂದನು.

ಕುಮು ಮುಖ ತಗ್ಗಿಸಿಕೊಂಡು ಮೆಲ್ಲಮೆಲ್ಲನೆ "ಆದರೆ, ಅಪ್ಪ ಅಮ್ಮನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಆ ಮಾತನ್ನು ಮರೆಯಬೇಡ. ಅಣ್ಣ, ಆ ಪ್ರೀತಿಯಿಂದ ಹಲವು ಪಾಪಗಳು ಅಳಿಸಿ ಹೋಗುವುವು" ಎಂದಳು.

"ಅದನ್ನು ಒಪ್ಪಿದೆ, ಆದರೆ ಇಷ್ಟೊಂದು ಪ್ರೀತಿಯಿದ್ದೂ ಅವರು ಅಮ್ಮನ ಗೌರವಕ್ಕೆ ಹಾನಿ ಉಂಟುಮಾಡಬಲ್ಲವರಾಗಿದ್ದರಲ್ಲ, ಆ ಪಾಪ ಸಮಾಜದ್ದು. ಸಮಾಜವನ್ನು ಅದಕ್ಕಾಗಿ ಕ್ಷಮಿಸಬಾರದು. ಸಮಾಜಕ್ಕೆ ಪ್ರೀತಿ ಎನ್ನುವುದಿಲ್ಲ. ಕೇವಲ ನಿಯಮವಿದೆ."

"ಅಣ್ಣಾ, ನೀನೇನಾದರೂ ಸುದ್ದಿ ಕೇಳಿರುವೆಯೇನು?"

"ಹೌದು ಕೇಳಿರುವೆ, ಆ ಮಾತನ್ನೆಲ್ಲಾ ನಿನಗೆ ನಿಧಾನವಾಗಿ ಆ ಮೇಲೆ ಹೇಳುತ್ತೇನೆ."

"ಅದೇ ಉತ್ತಮ, ಇವೊತ್ತಿನ ಈ ಮಾತುಕತೆಯಿಂದ ನಿನ್ನ ದೇಹಸ್ಥಿತಿ ಮತ್ತಷ್ಟು ಕೆಟ್ಟುಹೋಗುವುದೆಂದು ನನಗೆ ಭಯವಾಗುತ್ತಿದೆ."

"ಇಲ್ಲ ಕುಮೂ. ವಾಸ್ತವಿಕವಾದ ಸಂಗತಿ ತದ್ವಿರುದ್ಧವಾಗಿದೆ. ಇಷ್ಟುದಿನ ದುಃಖದ ದಣಿವಿನಿಂದ ಮೈ ಬಹಳ ಸೊರಗಿ ಹೋಗಿತ್ತು. ಇಂದು ನನ್ನ ಮನಸ್ಸು ಬಾಳುವೆಯ ಕೊನೆಗಾಲದವರೆಗೆ ಕಾದಾಡಲೇಬೇಕು ಎಂದು ಹೇಳುತ್ತಿರುವಾಗ ಒಳಗಿನಿಂದ ಶಕ್ತಿ ಹೊಮ್ಮುತ್ತಿದೆ."

" ಏತರ ಕಾದಾಟಕ್ಕಾಗಿ ಅಣ್ಣಾ ? "

" ಹೆಣ್ಣಿಗೆ ಅವಳ ಬೆಲೆ ಸಲ್ಲಿಸದೆ ಯಾವ ಸಮಾಜ ಇಷ್ಟು ವಂಚನೆ ಮಾಡುತ್ತಿದೆಯೋ ಆ ಸಮಾಜದೊಂದಿಗೆ "

" ನೀನು ಅದಕ್ಕೆ ಏನು ತಾನೆ ಮಾಡಬಲ್ಲೆ ಅಣ್ಣಾ ? "

" ನಾನು ಅದನ್ನು ಲಕ್ಷಿಸದಿರಬಲ್ಲೆ. ಅಷ್ಟೇ ಅಲ್ಲದೆ ಇನ್ನೂ ಏನೇನು ಮಾಡಬಲ್ಲೆ ಎನ್ನುವುದನ್ನು ನಾನು ಯೋಚಿಸಬೇಕಾಗಿದೆ. ಇಂದಿನಿಂದಲೇ ಪ್ರಾರಂಭವಾಯಿತು. ಕುಮೂ, ಈ ಮನೆಯಲ್ಲಿರಲು ನಿನಗೆ ಸ್ಥಳವುಂಟು. ಬೇರೆ ಯಾರೊಡನೆಯೂ ನೀನು ಪಾಲುಗೊಂಡಿರಬೇಕಾಗಿಲ್ಲ. ನಿನಗೆ ಸಂಪೂರ್ಣವಾಗಿ ಸ್ವಾತಂತ್ರ್ಯವುಂಟು. "

" ಒಳ್ಳೆಯದು ಅಣ್ಣಾ, ಹಾಗೆಯೇ ಆಗಲಿ, ಆದರೆ ಇನ್ನು ನೀನು ಮಾತನಾಡಬೇಡ. "

ಈ ಸಮಯದಲ್ಲಿ ಮೋತಿಯತಾಯಿ ಬಂದಳೆಂದು ಸುದ್ದಿ ಬಂದಿತು.

೫೧

ಕುಮು ಮೋತಿಯ ತಾಯಿಯನ್ನು ಕರೆದುಕೊಂಡು ಮಲಗುವ ಮನೆಗೆ ಹೋದಳು. ಮಾತನಾಡುತ್ತ ಆಡುತ್ತ ಕತ್ತಲೆ ಕವಿಯಿತು. ಆಳು ದೀಪ ಹಚ್ಚಲು ಬಂದ. ಕುಮು ಬೇಡವೆಂದಳು.

ಕುಮು ಎಲ್ಲ ಸಂಗತಿ ಕೇಳಿದಳು. ತೆಪ್ಪನಿದ್ದಳು.

ಮೋತಿಯತಾಯಿ " ಮನೆಯಲ್ಲಿ ಭೂತ ಸೇರಿಕೊಂಡಿದೆ. ಅಲ್ಲಿ ವಾಸವಾಗಿರುವುದು ಅಸಾಧ್ಯ. ನೀನೇನು ಬರುವುದಿಲ್ಲವೇನು ? "

" ನನಗೆ ಕರೆ ಬಂದಿದೆಯೇನು ? "

" ಇಲ್ಲ. ಕರೆಯುವ ಸಂಗತಿ ನೆನಪೇ ಆಗಿಲ್ಲವೆಂದು ತೋರುತ್ತೆ. ಆದರೆ ನೀನು ಹೋಗದಿದ್ದರೆ ದಾರಿಯೇ ಇಲ್ಲ. "

" ನಾನು ಮಾಡಬೇಕಾದುದು ಏನಿದೆ ? ನಾನಂತೂ ಅವರನ್ನು ತೃಪ್ತಿಪಡಿಸಲಾರೆ. ಯೋಚಿಸಿ ನೋಡುವುದಾದರೆ ನನ್ನಿಂದಲೇ ಇದೆಲ್ಲ ಸಂಭವಿಸಿದೆ. ಆದರೆ ಬೇರೆ ಮಾರ್ಗವಿಲ್ಲ. ನಾನು ಯಾವುದನ್ನು ಕೊಡ

ಬಲ್ಲೆನಾಗಿದ್ದನೋ ಅದನ್ನು ಅವರು ತೆಗೆದುಕೊಳ್ಳಲು ಶಕ್ಯರಾಗಲಿಲ್ಲ. ಇಂದು ನಾನು ಬರಿಗೈಯಲ್ಲಿ ಹೋಗಿ ಏನು ಮಾಡಲಿ ?"

"ಏನಂದೆ ಅತ್ತಿಗೆ ? ಸಂಸಾರ ನಿನ್ನದೇ. ಅದನ್ನು ನೀನು ಕೈ ಬಿಟ್ಟರೆ ನಡೆಯದು."

"ಸಂಸಾರ ಎಂದರೆ ಏನೆಂದು ಅರ್ಥ ! ಮನೆ ಬಾಗಿಲು ಪಾತ್ರೆ ಪದಾರ್ಥ, ನೆಂಟರಿಷ್ಟರು ಇಷ್ಟೇನೆ ? ನಾಚಿಕೆಯಿಂದ ಇಷ್ಟು ಒಪ್ಪಿ ಕೊಳ್ಳಬೇಕಾಗುತ್ತೆ. ಇವುಗಳ ಮೇಲೆಲ್ಲ ನನ್ನ ಅಧಿಕಾರವಿದೆ. ಒಳಮನೆ ಯಲ್ಲಿ ಮಾತ್ರ ಅಧಿಕಾರವಿಲ್ಲ. ಈ ಹೊರಗಣ ಪದಾರ್ಥಗಳನ್ನು ಕಟ್ಟಿ ಕೊಂಡು ಬಂದ ಭಾಗ್ಯವೇನು ?"

"ಏನು ಹೇಳುತ್ತೀಯೆ ಅತ್ತಿಗೆ ? ಹಾಗಾದರೆ ನೀನು ಖಂಡಿತ ಮನೆಗೆ ಹಿಂದಿರುಗುವುದೇ ಇಲ್ಲವೆ ? ಸ್ಪಷ್ಟವಾಗಿ ಹೇಳಬಾರದೆ ?"

"ಕೆಲವು ದಿನಗಳಿಗೆ ಮುಂಚೆಯಾಗಿದ್ದರೆ ದೇವರ ಬಳಿ ಸಂಕೇತ ಬೇಡು ತ್ತಿದ್ದೆ, ಜೋಯಿಸರ ಹತ್ತಿರ ವಿಚಾರ ಕೇಳಿ ತಿಳಿಯುತ್ತಿದ್ದೆ. ಆದರೆ ನನ್ನ ಆ ನಂಬಿಕೆಯೆಲ್ಲ ಇಂದು ಅಳಿಸಿಹೋಯಿತು. ಆರಂಭದಲ್ಲಿ ಎಲ್ಲ ಲಕ್ಷಣವೂ ಚೆನ್ನಾಗಿತ್ತು. ಕೊನೆಕೊನೆಯಲ್ಲಿ ಅವುಗಳಲ್ಲಿ ಒಂದೂ ಉಪಯೋಗವಾಗ ಲಿಲ್ಲ. ಇಂದು ಕುಳಿತಂತೆಯೇ, ದೇವರನ್ನು ನಂಬುವುದಕ್ಕಿಂತ ಮುಂಚೆ ಅಣ್ಣನ ಮಾತಿನಲ್ಲಿ ನಂಬಿಕೆಯಿದ್ದಿದ್ದರೆ ಇಷ್ಟು ವಿಪತ್ತು ಘಟಿಸುತ್ತಿರಲಿಲ್ಲ ಎಂದು ಅನೇಕ ವೇಳೆ ಮನಸ್ಸಿನಲ್ಲೇ ಅಂದುಕೊಳ್ಳುತ್ತಿರುವೆ. ಆದರೂ ಮನಸ್ಸಿನಲ್ಲಿ ದೇವರ ವಿಷಯದಲ್ಲಿ ಯಾವ ಬಗೆಯ ತುಯ್ದಾಟ ನಡೆ ಯುತ್ತಿದೆಯೋ ಅದನ್ನು ಹೃದಯದಿಂದ ಹೊರದೂಡಲಾರೆ. ಸುತ್ತಿ ಸುತ್ತಿ ಕಡೆಗೆ ಮನಸ್ಸು ಅಲ್ಲಿಗೇ ಬಂದು ನಿಂತುಬಿಡುತ್ತಿದೆ."

"ನಿನ್ನ ಮಾತು ಕೇಳಿ ಭಯವಾಗುತ್ತಿದೆ ಅತ್ತಿಗೆ. ಹಾಗಾದರೆ ಮನೆಗೆ ಬರುವುದೇ ಇಲ್ಲವೇನು ?"

"ಯಾವ ಕಾಲಕ್ಕೂ ಬರಲಾರೆ ಎಂದು ಹೇಳುವುದು ಕಠಿಣ. ಹಾಗೆಯೇ ಯಾವಾಗ ಹಿಂದಿರುಗುವೆನೆಂಬುದೂ ಸಹಜವಲ್ಲ."

" ಸರಿ, ನಿಮ್ಮ ಅಣ್ಣನ ಹತ್ತಿರವಾದರೂ ಒಮ್ಮೆ ಮಾತನಾಡಿ ನೋಡುವೆ. ಅವರು ಏನನ್ನುವರೋ ನೋಡೋಣ. ಅವರ ದರ್ಶನ ದೊರೆಯುವುದಷ್ಟೆ ? "

" ನಡೆ ಮತ್ತೆ. ಈಗಲೇ ಕರೆದುಕೊಂಡು ಹೋಗುವೆ. "

ವಿಪ್ರದಾಸನ ಕೋಣೆಯಲ್ಲಿ ಕಾಲಿಟ್ಟೊಡನೆಯೇ ಅವನ ಮುಖ ನೋಡಿ ಮೋತಿಯತಾಯಿ ಸ್ತಬ್ಧಳಾಗಿ ನಿಂತುಬಿಟ್ಟಳು. ಭೂಕಂಪವಾದ ಅನಂತರ ದೀಪ ಆರಿ, ಗೋಪುರವೇ ಮುರಿದು ಬಿದ್ದ ದೇವಸ್ಥಾನದ ನೆನಪಾಯಿತು. ನಮಸ್ಕರಿಸಿ ಪಾದಧೂಳಿಯನ್ನು ಶಿರಸ್ಸಿನಲ್ಲಿ ಧರಿಸಿಕೊಂಡು ನೆಲದ ಮೇಲೆ ಕುಳಿತಳು.

ವಿಪ್ರದಾಸ ಕಳವಳಗೊಂಡು " ಇದೋ ಕುರ್ಚಿ ಇದೆಯಲ್ಲ " ಎಂದ.

ಮೋತಿಯ ತಾಯಿ ತಲೆ ಆಡಿಸಿ " ಇಲ್ಲ, ಇಲ್ಲೇ ನೆಮ್ಮದಿಯಾಗಿದೆ " ಎಂದಳು.

ಅವಳ ಕಣ್ಣುಗಳಲ್ಲಿ ನೀರು ತುಂಬಿ ಬಂದಿತು. ಅಣ್ಣನ ಈ ಸ್ಥಿತಿಯಿಂದ ಕುಮುದಿಗೆ ಸಂಕಟವಾಗಿದೆಯೆಂದು ಅರಿತಳು.

ಕುಮು ಪ್ರಸಂಗವನ್ನು ಮೊದಲು ಮಾಡುವುದಕ್ಕಾಗಿ " ಅಣ್ಣಾ, ಇವರು ನಿನ್ನೊಡನೆ ಮಾತನಾಡಬೇಕೆಂದೇ ಬಂದಿರುವರು " ಎಂದಳು.

" ಇಲ್ಲ, ಇಲ್ಲ. ಮಾತು ಕತೆ, ಚರ್ಚೆ ಎಲ್ಲ ಬೇರೆಯವರ ಪಾಲಿಗೆ. ನಾನು ಬಂದದ್ದು ಕೇವಲ ಅವರ ಪಾದಗಳನ್ನು ದರ್ಶಿಸುವುದಕ್ಕಾಗಿ. "

" ಈಕೆ, ನಾನು ಅವರ ಮನೆಗೆ ಹೋಗುವುದುಂಟೋ ಇಲ್ಲವೆ ಎನ್ನುವುದನ್ನು ತಿಳಿಯಬಯಸುತ್ತಾರೆ " ಎಂದು ಕುಮು ಹೇಳಿದಳು.

ವಿಪ್ರದಾಸನು " ಅದಂತೂ ಕಂಡವರ ಮನೆ. ಅಲ್ಲಿಗೆ ಕುಮು ಹೋಗಿ ಇರುವುದಾದರೂ ಹೇಗೆ ? " ಎಂದನು.

ಕೋಪದಿಂದ ಹೇಳಿದ್ದು ದಾದರೆ ಮಾತಿನಲ್ಲಿ ಅಡಗಿದ್ದ ಕಿಚ್ಚು ಇಷ್ಟು ಬಲವಾಗಿ ಉರಿದೇಳುತ್ತಿರಲಿಲ್ಲ. ಶಾಂತವಾದ ದನಿಯಿಂದ ಕೂಡಿದ್ದ ಮುಖದಲ್ಲಿ ಉತ್ತೇಜನದ ಲಕ್ಷಣವಿರಲಿಲ್ಲ.

ಮೋತಿಯ ತಾಯಿ ಕಿವಿಮಾತಿನಲ್ಲಿ ಏನೋ ಹೇಳಿದಳು. ಕುಮು ಮುಗ್ಗುಲಲ್ಲಿ ಕುಳಿತು ತನ್ನ ಮಾತುಗಳನ್ನು ವಿಪ್ರದಾಸನ ಕಿವಿಗೆ ಮುಟ್ಟಿಸ ಬೇಕೆಂದು ಅವಳ ಅಭಿಪ್ರಾಯ. ಕುಮು ಒಪ್ಪಲಿಲ್ಲ. "ನೀನೇ ಗಟ್ಟಿ ಯಾಗಿ ಹೇಳು" ಎಂದಳು.

ಮೋತಿಯ ತಾಯಿ ದನಿಯನ್ನು ಮತ್ತಷ್ಟು ದೊಡ್ಡದುಮಾಡಿ "ಯಾವುದು ಆಕೆಗೆ ಸೇರಿದ್ದೋ ಅದನ್ನು ತಮ್ಮದನ್ನಾಗಿ ಮಾಡಿಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ" ಎಂದಳು.

"ಆ ಮಾತು ಸರಿಯಲ್ಲ. ಆಕೆ ಆಶ್ರಿತಳು ಅಷ್ಟೆ. ಅವಳ ಸ್ವಂತ ಅಧಿಕಾರದ ಬಲವಿಲ್ಲ. ಅವಳನ್ನು ಮನೆಯಿಂದ ಹೊರದೂಡಿದರೆ ಜನರು ನಿಂದಿಸಿಯಾರು. ಆದರೆ ಅಡ್ಡಿ ಮಾಡರು. ಅದೆಷ್ಟು ಶಾಸ್ತಿ ಸಾಧ್ಯ ವಿದೆಯೋ ಎಲ್ಲ ಅವಳ ಪಾಲಿಗೇ ಆದರೂ ಮಹದಾಶ್ರಯವೇನಾದರೂ ಆಗಿದ್ದರೆ ಅನುಗ್ರಹದ ಆಶ್ರಯವನ್ನು ಸಹಿಸಬಹುದು."

ಇಂತಹ ಮಾತಿಗೆ ಏನು ಉತ್ತರ ಕೊಡಬೇಕೆಂದು ಮೋತಿಯ ತಾಯಿಗೆ ಹೊಳೆಯಲಿಲ್ಲ. ಗಂಡನ ನೆರಳಿಗೆ ವಿಘ್ನ ಒದಗಿದರೆ ಹೆಣ್ಣಿನ ಕಡೆಯವರೇ ಕೈಕಾಲು ಕಟ್ಟಿಕೊಳ್ಳಬೇಕಲ್ಲವೆ? ಇದಂತೂ ಬಹಳ ವಿಚಿತ್ರ ವಾಗಿತ್ತು.

ಸ್ವಲ್ಪ ಹೊತ್ತು ಸುಮ್ಮನಿದ್ದವಳು, "ಆದರೆ ತಮ್ಮದಾದ ಸಂಸಾರ ಒಂದಿರದಿದ್ದರೆ ಹೆಂಗಸರು ಬದುಕಿರಲಾರರು. ಗಂಡಸರು ತೇಲಿಕೊಂಡು ಹೋಗಬಹುದು, ಆದರೆ ಹೆಂಗಸರಿಗೆ ಯಾವುದಾದರೊಂದು ನೆಲೆ ಇರ ಬೇಕಲ್ಲ" ಎಂದಳು.

"ನೆಲೆಯಲ್ಲಿ? ಅವಮಾನದ ಮಧ್ಯದಲ್ಲಿ? ನಾನು ನಿನಗೆ ಒಂದು ಸಂಗತಿ ಹೇಳುತ್ತೇನೆ. ಕುಮುವನ್ನು ಸೃಷ್ಟಿಸಿದ ಭಗವಂತನು ಆಕೆ ಯನ್ನು ಬಹು ಶ್ರದ್ಧೆಯಿಂದ ಸೃಷ್ಟಿಸಿರುವನು. ಕುಮುವನ್ನು ಕಡೆಗಣಿಸು ವಂತಹ ಯೋಗ್ಯತೆ ಯಾರಿಗೂ ಇಲ್ಲ. ಚಕ್ರವರ್ತಿ ಸಮ್ರಾಟನಿಗೂ ಇಲ್ಲ."

ಮೋತಿಯ ತಾಯಿ ಕುಮುವನ್ನು ಬಹಳವಾಗಿ ಪ್ರೀತಿಸುತ್ತಿದ್ದಳು. ಭಕ್ತಿ ಇಟ್ಟಿದ್ದಳು. ಆದರೆ ಆಗಲೂ ಯಾವ ಹೆಣ್ಣಿಗೇ ಆಗಲಿ ತನ್ನ

ಗಂಡನನ್ನು ಮೀರಿಸುವಷ್ಟರಮಟ್ಟಿನ ಗೌರವ ಇರಲು ಸಾಧ್ಯವಿದೆ ಯೆಂಬ ಮಾತು ಮೋತಿಯ ತಾಯಿಯ ಕಿವಿಗೆ ಹಿತವಾಗಿರಲಿಲ್ಲ. ಪ್ರಪಂಚ ದಲ್ಲಿ ಗಂಡನೊಡನೆ ಜಗಳ, ಕದನ, ಏನೇ ನಡೆಯಲಿ, ಹೆಂಡತಿಯ ಅದೃಷ್ಟದಲ್ಲಿ ಅನಾದರಣೆ ಮತ್ತು ಅವಮಾನ ಯಥೇಷ್ಟವಾಗಿ ಇದ್ದೇ ಇರುವುದು. ಹೆಚ್ಚೇಕೆ, ಇವುಗಳಿಂದ ಬಿಡುಗಡೆ ಹೊಂದಲು ಹೆಣ್ಣು ಅಫೀಮು ತಿಂದು, ನೇಣುಹಾಕಿಕೊಂಡು ಸಾಯುವುಳಲ್ಲ, ಅದೂ ಅರ್ಥ ವಾದೀತು. ಆದರೆ ಹಾಗೆಂದು ಗಂಡನನ್ನು ದೂರಮಾಡಿ ತನ್ನ ಶಕ್ತಿ ಯನ್ನು ಅವಲಂಬಿಸಿ ನಿಲ್ಲುವೆನೆನ್ನುವುದು ಅಹಂಭಾವದ ಮಾತೆಂದು ಮೋತಿಯ ತಾಯಿಯ ಅಭಿಪ್ರಾಯ. ಹೆಣ್ಣಾದವಳಿಗೆ ಇಷ್ಟೊಂದು ದರ್ಪ ಏತಕ್ಕೆ. ಮಧುಸೂದನ ಎಷ್ಟೇ ಅಯೋಗ್ಯನಾಗಿರಲಿ, ಎಷ್ಟೇ ಅನ್ಯಾಯ ಮಾಡಲಿ ಆಗಲೂ ಅವನು ಗಂಡನೇ ಸರಿ. ಒಂದು ಕಡೆ ಅವನು ತನ್ನ ಹೆಂಡತಿಗಿಂತ ಶ್ರೇಷ್ಠನಾದವನು. ಅಲ್ಲಿ ಯಾವ ಸಂದೇಹಕ್ಕೂ ಆಸ್ಪದವಿರಲಿಲ್ಲ. ಬ್ರಹ್ಮನೊಡನೆ ವ್ಯಾಜ್ಯಹೂಡಿ ಗೆಲ್ಲುವವನಾದರೂ ಯಾರು ?

"ಕೊನೆಗೆ ಒಂದು ದಿನ ಅಲ್ಲಿಗೆ ಹೋಗಲೇಬೇಕಲ್ಲವೆ. ಬೇರೆ ಮಾರ್ಗವೇ ಇಲ್ಲವಲ್ಲ." ಎಂದಳು ಮೋತಿಯತಾಯಿ.

"ಹೋಗಲೇಬೇಕೆನ್ನುವ ಮಾತು ಜೆಲೆಗೆ ಕೊಂಡ ಗುಲಾಮನ ವಿಷಯದಲ್ಲಿ ಬಿಟ್ಟು ಬೇರೆ ಯಾರ ವಿಷಯದಲ್ಲೂ ಪ್ರಯೋಜನವಾಗದು."

"ಮಂತ್ರ ಉಚ್ಚರಿಸದ ಮೇಲೆ ಹೆಂಡತಿಯನ್ನು ಕೊಂಡು ಕೊಂಡಂತೆಯೆ. ಏಳು ಸುತ್ತು ಎಂದು ಸುತ್ತಿದ್ದಾಯಿತೋ ಅಂದೇ ಅವಳು ತನು ಮನಗಳೆರಡರಿಂದಲೂ ಬಂಧಿತಳಾದಳು. ಆಮೇಲೆ ಅವಳು ಓಡಿ ಹೋಗಲು ಎಡೆಯೇ ಇಲ್ಲ. ಈ ಕಟ್ಟು ಸಾವಿನವರೆಗಿನ ಕಟ್ಟು. ಹೆಣ್ಣಾಗಿ ಜನ್ಮವೆತ್ತಿದ ಮೇಲೆ ಈ ಜನ್ಮವಿರುವವರೆಗೆ ಹೆಣ್ಣಿನ ಅದೃಷ್ಟ ಮತ್ತಾವ ವಿಧದಲ್ಲೂ ಮಾರ್ಪಡಿಸಲು ಅವಕಾಶವಿಲ್ಲವಲ್ಲ."

ಹೆಣ್ಣುಮಕ್ಕಳ ಗೌರವದ ಅಭಿಮಾನ ಹೆಣ್ಣುಮಕ್ಕಳ ಬಳಿಯಲ್ಲೇ ಬಹಳ ಕಡಮೆ ಎಂಬ ಅಂಶವನ್ನು ವಿಪ್ರದಾಸ ಅರಿತ. ಈ ಕಾರಣದಿಂದಲೇ ಮನೆ ಮನೆಯಲ್ಲಿ ಅವಮಾನಗೊಳ್ಳುವುದು ಹೆಂಗಸರ ಹಣೆಯ ಬರಹ.

ವಾಗಿದೆಯೆಂಬುದನ್ನೂ ಅವರುಗಳು ಅರಿಯರು. ಅವರು ತಮ್ಮ ದೀವಿಗೆಯನ್ನು ತಾವೇ ನಂದಿಸಿ ಕುಳಿತಿರುವರು. ಅನಂತರ ಕೇವಲ ಹೆದರಿಕೆಯಿಂದ ಸಾಯುವರು, ಕೇವಲ ಚಿಂತೆಯಲ್ಲೇ ಸಾಯುವರು. ಅಯೋಗ್ಯ ವ್ಯಕ್ತಿಗಳ ಕೈಯಲ್ಲಿ ಕೇವಲ ಏಟು ತಿನ್ನುವರು ಮತ್ತು ಅದನ್ನು ಸಹಿಸುವುದೇ ಹೆಣ್ಣಾಗಿ ಹುಟ್ಟಿದುದರ ಅತ್ಯುನ್ನತವಾದ ಸಾರ್ಥಕತೆ ಎಂದೆಣಿಸುವರು. ಇಲ್ಲ, ಮನುಷ್ಯ ಜೀವ ಇಷ್ಟೊಂದು ಅವಮಾನ ಹೊಂದಲು ಅವಕಾಶ ಕೊಡುವುದು ನಡೆಯದು. ಸಮಾಜ ಯಾರನ್ನು ಇಷ್ಟು ಕೆಳಗೆ ಇಳಿಸಿ ಬಿಟ್ಟಿದೆಯೋ ಅವರು ಪ್ರತಿನಿತ್ಯವೂ ಸಮಾಜವನ್ನೇ ಕೆಳಗಿಳಿಸುತ್ತಿರುವರು.

ವಿಪ್ರದಾಸನ ಮಂಚದ ಹತ್ತಿರದಲ್ಲೇ ನೆಲದಮೇಲೆ ಕುಮು ತಲೆ ಬಗ್ಗಿಸಿಕೊಂಡು ಕುಳಿತಿದ್ದಳು. ವಿಪ್ರದಾಸ ಮೋತಿಯ ತಾಯಿಯೊಡನೆ ಏನೂ ಹೇಳದೆ ಕುಮುವಿನ ತಲೆಯಮೇಲೆ ಕೈ ಆಡಿಸುತ್ತ "ಒಂದು ಮಾತು ನಿನಗೆ ಹೇಳುತ್ತೇನೆ. ತಿಳಿದುಕೊಳ್ಳಲು ಯತ್ನಿಸು. ಸಾಮರ್ಥ್ಯ ಎನ್ನುವುದು ಎಲ್ಲಿ ಕಾಲಕಸವಾಗಿ ಬಿದ್ದಿರುವುದೋ, ಎಲ್ಲಿ ಯಾವುದಕ್ಕೆ ಯಾವ ವಿಧವಾದ ಪರಿಶೋಧನೆಯೂ ಇರದೋ, ತನ್ನ ಅಧಿಕಾರ ನೆಲೆಗೊಳಿಸುವುದಕ್ಕಾಗಿ ಎಲ್ಲಿ ಯಾವುದಕ್ಕೆ ಯೋಗ್ಯತೆಯ ಪ್ರಮಾಣ ಕೊಡಬೇಕಾಗಿರದೋ ಅಂತಹದು ಆ ಪ್ರಪಂಚದಲ್ಲಿ ಕೇವಲ ಹೀನತೆಯನ್ನೇ ಸೃಷ್ಟಿ ಮಾಡುತ್ತಿರುವುದು. ಈ ವಿಷಯ ನಿನಗೆ ಹಲವು ಬಾರಿ ತಿಳಿಸಿದ್ದೇನೆ. ನನ್ನ ಸಂಸ್ಕಾರವನ್ನು ನೀನು ಮರೆಯಲಾರದೆ ಹೋದೆ. ಕಷ್ಟ ಅನುಭವಿಸಿದೆ. ನೀನು ಯಾವ ಸಂದರ್ಭದಲ್ಲಿ ಬ್ರಾಹ್ಮಣ ಭೋಜನ ಮಾಡಿಸಿದೆಯೋ ಆಗ ಎಂದೂ ನಿನಗೆ ನಾನು ಅಡ್ಡಿ ಮಾಡಲಿಲ್ಲ. ಕೇವಲ ವಿವೇಚಿಸದೆ ಯಾವ ಮನುಷ್ಯನ ಶ್ರೇಷ್ಠತೆಯನ್ನಾದರೂ ಅಂಗೀಕರಿಸಿದಲ್ಲಿ ಅದರಿಂದ ಕೇವಲ ಅವನಿಗೆ ಮಾತ್ರ ಕೇಡಾಗುವುದಲ್ಲದೆ ಸಮಾಜದ ಶ್ರೇಷ್ಠತೆಯ ಆದರ್ಶಕ್ಕೇ ಕುಂದು ಉಂಟಾಗುವುದೆಂದು ಬಾರಿಬಾರಿಗೆ ನಿನಗೆ ತಿಳಿಸಲು ಯತ್ನಿಸಿರುವೆ. ಈ ಬಗೆಯ ಅಂಧ ಶ್ರದ್ಧೆಯ ಮೂಲಕ ತನ್ನ ಮನುಷ್ಯತ್ವವನ್ನೇ ಅಲಕ್ಷಿಸುತ್ತಿರುವೆವೆಂಬ ಮಾತನ್ನು ಯಾರೂ ಯೋಚಿಸುವುದಿಲ್ಲವೇಕೆ? ನೀನಂತೂ ಅಲ್ಪ ಸ್ವಲ್ಪ

ಇಂಗ್ಲೀಷ್ ಸಾಹಿತ್ಯ ಓದಿರುವೆ. ಈ ಬಗೆಯ ಗುಂಪಿಗೆ ಶಾಸ್ತ್ರಿಗಳ ವಶವಾಗಿರುವ ನಿರ್ವಿಕಾರದ ಸಾಮರ್ಥ್ಯದ ವಿರುದ್ಧವಾಗಿ ಸಮಸ್ತ ಪ್ರಪಂಚದಲ್ಲಿ ಇಂದು ಯುದ್ಧದ ಗಾಳಿ ಬೀಸತೊಡಗಿದೆ ಎನ್ನುವುದನ್ನು ಅರಿಯೆಯೇನು? ಅದೆಷ್ಟು ಬಗೆಯ ಸ್ವೇಚ್ಛಾಕಲ್ಪನೆಯ ಅಂಧದಾಸತ್ವಕ್ಕೆ ದೊಡ್ಡ ದೊಡ್ಡ ಹೆಸರಿಟ್ಟು ಮನುಷ್ಯನು ಬಹುಕಾಲ ಪೋಷಿಸಿರುವನೋ ಅದರ ನೆಲೆಯನ್ನೇ ನಿರ್ಮೂಲ ಮಾಡುವ ದಿನ ಒದಗಿದೆ'' ಎಂದನು.

ಕುಮು ತಲೆ ತಗ್ಗಿಸಿಕೊಂಡೇ "ಅಣ್ಣಾ, ದಂಪತಿ ಗಂಧನವನ್ನು ಅತಿಕ್ರಮಿಸಬೇಕೆಂದು ನೀನು ಹೇಳುವೆಯೇನು?"

"ಅನ್ಯಾಯವಾಗಿ ಅತಿಕ್ರಮಿಸಿ ನಡೆಯುವುದಕ್ಕೆ ಮಾತ್ರವೇ ಆಕ್ಷೇಪಿಸುತ್ತೇನೆ. ಗಂಡನಾದವನೂ ಸಹ ಹೆಂಡತಿಯನ್ನು ಅತಿಕ್ರಮಿಸಕೂಡದು. ಇದೇ ನನ್ನ ಅಭಿಪ್ರಾಯ."

"ಒಂದು ವೇಳೆ ಹಾಗೆ ಮಾಡಿದರೆ ಅದಕ್ಕಾಗಿ ಹೆಂಡತಿ...."

ಕುಮುದಿನಿ ಮಾತು ಮುಗಿಯುವ ಮುಂಚೆಯೇ ವಿಪ್ರದಾಸನು, "ಹೆಂಡತಿ ಏನಾದರೂ ಆ ಅನ್ಯಾಯವನ್ನು ಸಹಿಸಿಕೊಂಡು ಸುಮ್ಮನಿದ್ದರೆ ಆಗ ಇಡೀ ಹೆಣ್ಣು ಜಾತಿಗೇ ಅವಳು ಅನ್ಯಾಯ ಮಾಡಿದಂತಾಗುವುದು. ಹೀಗೆ ಮಾಡಿಯೇ ಒಬ್ಬೊಬ್ಬರ ಮೂಲಕ ಎಲ್ಲರ ದುಃಖ ಹೆಚ್ಚುತ್ತ ಬಂದಿದೆ. ಅನ್ಯಾಯದ ನಡವಳಿಕೆಯ ಹಾದಿ ಸುಗಮವಾಗಿ ಬಿಟ್ಟಿದೆ'' ಎಂದನು.

ಮೋತಿಯ ತಾಯಿ ಸ್ವಲ್ಪ ಧೈರ್ಯಗೆಟ್ಟ ದನಿಯಲ್ಲೇ "ನಮ್ಮ ಅತ್ತಿಗೆ ಸತೀ ಲಕ್ಷ್ಮಿಯ ಸಮಾನಳು. ಅವಮಾನ ಮಾಡಿದರೆ ಆ ಅವಮಾನ ಅವಳನ್ನು ಸೋಕದು."

ವಿಪ್ರದಾಸನ ದನಿ ಈ ಸಲ ಉತ್ತೇಜಿತವಾಯಿತು. "ನೀವುಗಳು ಸತೀ ಲಕ್ಷ್ಮಿಯ ವಿಷಯವನ್ನೇ ನೆನೆಯುವಿರಿ. ಮತ್ತೆ ಯಾವ ಹೇಡಿ ಅವಳನ್ನು ತಡೆಯಿಲ್ಲದೆ ಅವಮಾನಗೊಳಿಸುವನೋ ಅಧಿಕಾರ ಪಡೆದು ಅದನ್ನು ಪ್ರತಿನಿತ್ಯ ಪ್ರಯೋಗಿಸುವನೋ ಅವನ ದುರ್ಗತಿಯ ವಿಷಯವನ್ನೇಕೆ ನೆನೆಯಿರಿ?"

ಕುಮು ಆ ಕ್ಷಣ ಎದ್ದು ನಿಂತು ವಿಪ್ರದಾಸನ ತಲೆಗೂದಲ ನಡುವೆ ಬೆರಳು ಆಡಿಸುತ್ತ “ಅಣ್ಣಾ, ನೀನು ಇನ್ನು ಹೆಚ್ಚಾಗಿ ಮಾತನಾಡಬೇಡ. ನೀನು ಯಾವುದನ್ನು ಮುಕ್ತಿಯೆನ್ನುವೆಯೋ ಯಾವುದು ಜ್ಞಾನದ ಮೂಲಕ ಸಂಭವಿಸುವುದು ಎನ್ನುವೆಯೋ ಅದಕ್ಕೆ ನಮ್ಮ ರಕ್ತದಲ್ಲೇ ಅಡಚಣೆಗಳಿವೆ. ನಾವುಗಳು ಮನುಷ್ಯನನ್ನೂ ಒಪ್ಪಿಕೊಂಡಿರುವೆವು. ನಂಬಿಕೆಯನ್ನೂ ಒಪ್ಪಿಕೊಂಡಿರುವೆವು. ಯಾವ ಬಗೆಯಲ್ಲೂ ಅದರ ಬುಡವನ್ನು ಬಿಡಲು ಬಯಸುವುದಿಲ್ಲ. ಎಷ್ಟೇ ಹೊಡೆತ ತಿಂದರೂ ಸುತ್ತಿ ತಿರುಗಿ ಅಲ್ಲೇ ನೆಲೆಸಿರುವೆವು. ನೀವುಗಳು ಹೆಚ್ಚಾಗಿ ತಿಳಿದವರು. ಅದರಿಂದಲೇ ನಿಮ್ಮ ಮನಸ್ಸು ಮುಕ್ತಿ ಹೊಂದುವುದು. ನಾವುಗಳು ಹೆಚ್ಚಾಗಿ ನಂಬುವವರು. ಅದರಿಂದಲೇ ನಮ್ಮ ಬದುಕು ಶೂನ್ಯದಿಂದ ತುಂಬಿದೆ. ನೀನು ತಿಳಿಯಪಡಿಸಿದಾಗ ನನ್ನದು ತಪ್ಪೆಂದು ಅರಿಯಲು ಸಾಧ್ಯವಾಗಿದೆ. ಆದರೆ ತಪ್ಪೆಂದು ಅರಿಯುವುದೂ, ಮತ್ತು ತಪ್ಪನ್ನು ತ್ಯಜಿಸುವುದೂ ಎರಡೂ ಒಂದೇ ಎನ್ನುವೆಯಾ ಏನು? ಬಳ್ಳಿಯ ಹಿಡಿತದಂತೆ ನಮ್ಮ ಮಮತ್ವವು ಎಲ್ಲವನ್ನೂ ಅಪ್ಪಿ ಅಪ್ಪಿ ಹಿಡಿದುಕೊಂಡಿರುವುದು. ಅದು ಒಳ್ಳೆಯದಾಗಿಯೇ ಇರಲಿ, ಕೆಟ್ಟದಾಗಿಯೇ ಇರಲಿ ಅನಂತರ ಅದನ್ನು ಬಿಡಲು ಸಾಧ್ಯವಾಗದು” ಎಂದಳು.

ವಿಪ್ರದಾಸನು “ಅದರಿಂದಲೇ ಮತ್ತೆ ಪ್ರಪಂಚದಲ್ಲಿ ಹೇಡಿಗಳನ್ನು ಪೂಜಿಸುವ ಪೂಜಾರಿಣಿಯರಿಗೆ ಅಭಾವವಿರದು. ಅವರುಗಳು ಅಪವಿತ್ರವನ್ನು ಅಪವಿತ್ರವೆಂದು ತಿಳಿದಿದ್ದರೂ ಸಹ ಅದನ್ನು ಗೌರವಿಸುವ ವೇಳೆಯಲ್ಲಿ ಪವಿತ್ರವೆಂದೇ ಗೌರವಿಸುವರು” ಎಂದನು.

ಕುಮು “ಏನು ಮಾಡುವುದು ಅಣ್ಣಾ, ಪ್ರಪಂಚವನ್ನು ಎರಡು ಕೈಗಳಿಂದಲೂ ಅಪ್ಪಿಕೊಳ್ಳಬೇಕೆಂದೇ ನಮ್ಮಗಳ ಸೃಷ್ಟಿ ಆಗಿದೆ. ಅದರಿಂದಲೇ ನಾವುಗಳು ಗಿಡವನ್ನೂ ಅಪ್ಪಿ ಹಿಡಿಯುವೆವು. ಹಾಗೆಯೇ ಒಣಗಿದ ರೆಂಬೆಯನ್ನೂ ಅಪ್ಪಿಕೊಳ್ಳುವೆವು. ಗುರುವನ್ನೂ ಗೌರವಿಸುವೆವು. ಅದರೊಡನೆ ಭಂಡನನ್ನೂ ಗೌರವಿಸುವೆವು. ಮೋಸ ಎನ್ನುವುದು ನಮ್ಮ ಅಂತರ್ಯದಲ್ಲೇ ಅಡಗಿದೆ. ದುಃಖದಿಂದ ನಮ್ಮನ್ನು ರಕ್ಷಿಸುವವರು ಯಾರು? ಅದರಿಂದಲೇ ದುಃಖವನ್ನು ಸಹಿಸಬೇಕಾಗಿಯೇ ಇರುವಾಗ

ಅದನ್ನು ಅಂಗೀಕರಿಸಿಯೂ ಅದನ್ನು ಗೆಲ್ಲಲು ದಾರಿ ಹುಡುಕಬೇಕಾಗಿದೆ. ಅದರಿಂದಲೇ ಮತ್ತೆ ಹೆಂಗಸರು ಧರ್ಮವನ್ನು ಇಷ್ಟರವರೆಗೆ ಆಶ್ರಯಿ ಸಿರುವರು." ಎಂದಳು.

ವಿಪ್ರದಾಸ ಏನೂ ಹೇಳಲಿಲ್ಲ. ಸುಮ್ಮನೆ ಕುಳಿತಿದ್ದ.

ಅವನ ಆ ಮೌನದಿಂದಲೂ ಕುಮುವಿಗೆ ಕಷ್ಟವಾಯಿತು. ಮಾತ ನಾಡುವುದಕ್ಕಿಂತ ಇದರ ಹೊರೆ ಬಹಳ ಹೆಚ್ಚೆಂದು ಕುಮು ಬಲ್ಲಳು.

ಕೋಣೆಯಿಂದ ಹೊರಗೆ ಬಂದು, ಮೋತಿಯ ತಾಯಿ "ಏನು ತೀರ್ಮಾನಿಸಿದೆ ಅತ್ತಿಗೆ?" ಎಂದು ಕುಮುವನ್ನು ಕೇಳಿದಳು.

ಕುಮು "ಹೋಗಲಾರೆ—ಅದಲ್ಲದೆ, ನಾನು ಹಿಂದಿರುಗಲು ಅನುಮತಿ ಕೊಟ್ಟಿಲ್ಲವಲ್ಲ" ಎಂದಳು.

ಮೋತಿಯ ತಾಯಿ ಮನಸ್ಸಿನಲ್ಲೇ ಸ್ವಲ್ಪ ಬೇಸರಗೊಂಡಳು. ಅತ್ತೆಯ ಮನೆಯ ವಿಷಯದಲ್ಲಿ ಅವಳಿಗೆ ಹೆಚ್ಚು ಶ್ರದ್ಧೆ ಇತ್ತೆಂದು ಹೇಳುವ ಹಾಗಿಲ್ಲ. ಆದರೂ ಅತ್ತೆಯ ಮನೆಯ ವಿಷಯದಲ್ಲಿ ಬಹು ದಿನಗಳ ಮಮತ್ವದ ಅರಿವು ಅವಳ ಹೃದಯದಲ್ಲಿ ನೆಲೆಗೊಂಡಿತ್ತು. ಆ ಮನೆಯ ಸೊಸೆಯೊಬ್ಬಳು ಆ ಮನೆಯನ್ನು ಅಲಕ್ಷಿಸುವಳೆನ್ನುವುದು ಅವಳಿಗೆ ಸರಿ ಯೆನಿಸಲಿಲ್ಲ. ಕುಮುವಿಗೆ ಅವಳು ಹೇಳಿದ ಮಾತುಗಳ ತಾತ್ಪರ್ಯವಿಷ್ಟೆ. ಸ್ವಾಭಾವಿಕವಾಗಿ ಗಂಡಸರ ಪ್ರಕೃತಿಯಲ್ಲಿ ಮಮತೆ ಕಡಮೆ. ಅಲ್ಲದೆ ಅವರಿಗೆ ಸಂಯಮ ಕಡಮೆ ಎನ್ನುವುದು ಮೊದಲಿಂದಲೂ ಜನಜನಿತವಾದ ವಿಷಯ. ಸೃಷ್ಟಿಯಂತೂ ನಮ್ಮ ಕೈಯಲ್ಲಿಲ್ಲ. ಯಾವುದನ್ನು ಪಡೆ ದಿರುವೆವೋ ಅದಷ್ಟನ್ನೇ ಉಪಯೋಗ ಮಾಡಿಕೊಳ್ಳಬೇಕಾಗಿದೆ. "ಅವರು ಗಳು ಅಂತಹವರೇ" ಎಂದು ಹೇಳಿ ಮನಸ್ಸನ್ನು ಸಿದ್ಧಪಡಿಸಿಕೊಂಡು ಯಾವ ವಿಧದಲ್ಲಾದರೆ ಹಾಗೆ ಸಂಸಾರವನ್ನು ನಡೆಸಿಕೊಂಡೇ ಹೋಗ ಬೇಕು. ಯಾಕೆಂದರೆ ಸಂಸಾರ ಹೆಂಗಸರ ಪಾಲಿನದು. ಗಂಡ ಒಳ್ಳೆಯ ವನೇ ಆಗಲಿ, ಕೆಟ್ಟವನೇ ಆಗಲಿ, ಸಂಸಾರವನ್ನು ಅಂಗೀಕರಿಸಲೇಬೇಕು. ಅದೇನಾದರೂ ಅಸಾಧ್ಯವಾದರೆ ಸಾವಲ್ಲದ ಬೇರೆ ದಾರಿಯೇ ಇಲ್ಲ."

ಕುಮು ನಕ್ಕು, "ಇಲ್ಲದೆ ಹೋದರೆ ಹಾಗೆಯೇ ಆಯಿತು. ಸಾವಿ ನಲ್ಲಿ ಇರುವ ಅಪರಾಧವೇನು?" ಎಂದಳು.

ಮೋತಿಯ ತಾಯಿ ಉದ್ವಿಗ್ನಗೊಂಡು "ಅಂತಹ ಮಾತನ್ನು ಆಡಬೇಡ" ಎಂದಳು.

ಕುಮು ತಿಳದಿರಲಿಲ್ಲ. ಅವರ ಬೀದಿಯಲ್ಲೇ ಹದಿನೇಳು ವರ್ಷದ ಸೊಸೆಯೊಬ್ಬಳು "ಕಾರ್ಬಾಲಿಕ್ ಆಸಿಡ್" ಕುಡಿದು ಆತ್ಮಹತ್ಯೆ ಮಾಡಿಕೊಂಡಿದ್ದಳು. ಅವಳ ಎಮ್. ಎ. ಪ್ಯಾಸ್ ಮಾಡಿದ ಗಂಡ ಸರ್ಕಾರೀ ಕಛೇರಿಯಲ್ಲಿ ದೊಡ್ಡ ಹುದ್ದೆಯಲ್ಲಿದ್ದ. ಹೆಂಡತಿ ಹೆರಳಲ್ಲಿ ಸೆಕ್ಕಿಸುವ ಬೆಳ್ಳಿಯ ಬಾಚಣಿಗೆಯೊಂದನ್ನು ಹಾಳುಮಾಡಿದ್ದಳು. ತಾಯಿಯಿಂದ ಈ ದೂರು ಕೇಳಿ ಆ ಗೃಹಸ್ಥ ಅವಳನ್ನು ಒದ್ದಿದ್ದ. ಮೋತಿಯ ತಾಯಿಗೆ ಆ ಸಂಗತಿ ನೆನಪಾಗಿ ಮೈಯಲ್ಲಿ ಮುಳ್ಳು ಚುಚ್ಚಿದಂತಾಯಿತು.

ಈ ಸಮಯದಲ್ಲಿ ನವೀನ ಅಲ್ಲಿಗೆ ಬಂದ.

ಕುಮು ಸಂತೋಷಗೊಂಡಳು. "ಮೈದುನ ಬರುವುದಕ್ಕೆ ಸಾವಕಾಶ ಆಗದೆಂದು ಬಲ್ಲೆ" ಎಂದಳು.

ನವೀನನು ನಕ್ಕು "ನ್ಯಾಯಶಾಸ್ತ್ರದಲ್ಲಿ ಅತ್ತಿಗೆಗೆ ವ್ಯುತ್ಪತ್ತಿಯಿದೆ. ಮೊದಲು ಶ್ರೀಮತೀ ಹೋಗೆದೇವಿಯನ್ನು ನೋಡಿದವರು. ಅವರ ಹಿಂದೆಯೇ ಶ್ರೀಮಾನ್ ಬೆಂಕಿ ಮಹಾಶಯರು ಬರುವರೆನ್ನುವುದನ್ನು ನಿರ್ಣಯಿಸುವುದು ಕಷ್ಟವಾದ ವಿಷಯವಲ್ಲ." ಎಂದ.

ಮೋತಿಯ ತಾಯಿ "ಅತ್ತಿಗೇ ನೀನೇ ಅವರಿಗೆ ಸಲಿಗೆಕೊಟ್ಟು ಹೆಚ್ಚಿಸಿಬಿಟ್ಟಿರುವೆ. ಅವರನ್ನು ಕಂಡರೆ ನೀನು ಸಂತೋಷಗೊಳ್ಳುವೆಯೆಂದು ಬಲ್ಲರು. ಅದೇ ಹೆಮ್ಮೆಯಿಂದ...."

"ನನ್ನನ್ನು ನೋಡಿಯೂ ಸಂತೋಷ ಪಡಬಲ್ಲವರ ಶಕ್ತಿ ಸಾಮಾನ್ಯವಾದುದೇನು? ಯಾರು ನನ್ನನ್ನು ಸೃಷ್ಟಿಸಿದರೋ ಆತನೂ ತನ್ನ ಕೈಯ ಕೆಲಸದ ಪರಿಣಾಮವನ್ನು ನೋಡಿ ಅನುತಾಪ ಪಡುವನು. ಮತ್ತೆ ಯಾರು ನನ್ನ ಕೈ ಹಿಡಿದಿರುವರೋ ಅವರ ಮನಸ್ಸಿನ ಭಾವವನ್ನು "ದೇವೋ ನಜಾನಾತಿ ಕುತೋ ಮನುಷ್ಯತಿ." ಎಂದ ಮೇಲೆ ಹೇಳುವುದೇನಿದೆ?"

"ನೋಡು. ನೀವಿಬ್ಬರೂ ಕಲೆತು ಮಾತು ಕತೆ ಚರ್ಚೆಮಾಡಿ. ಮೂರನೆಯ ವ್ಯಕ್ತಿ ಛಂದೋಭಂಗ ಮಾಡಬಯಸದು. ಇದೋ ನಾನು ಹೊರಟೆ."

ಮೋತಿಯ ತಾಯಿ "ಅದೆಂತಹ ಮಾತಮ್ಮಾ. ಇಲ್ಲಿ ಮೂರನೆಯ ವ್ಯಕ್ತಿ ಯಾರು? ನೀನೋ ನಾನೋ? ಗಾಡಿ ಬಾಡಿಗೆಕೊಟ್ಟು ಕೊಂಡು ಅವರು ನನ್ನನ್ನು ನೋಡಲು ಬಂದರೆಂದು ಎಣಿಸಿರುವೆ ಯೇನು?" ಎಂದಳು.

"ಇಲ್ಲ, ಅವನ ಊಟದ ಏರ್ಪಾಡು ಮಾಡುತ್ತೇನೆ" ಎಂದು ಹೇಳಿ ಹೊರಟು ಹೋದಳು.

೫೨

ಮೋತಿಯತಾಯಿ "ಏನೋ ಸುದ್ದಿಯಿದೆಯೆಂದು ಕಾಣುತ್ತೆ" ಎಂದಳು.

"ಇದೆ. ಸಾವಕಾಶ ಮಾಡಲಾರದವನಾದೆ. ನಿನ್ನೊಡನೆ ಆಲೋಚನೆ ನಡೆಸಲು ಬಂದೆ. ನೀನಂತೂ ಹೊರಟು ಬಂದೆ. ಅನಂತರ ಅಣ್ಣ ಹಠಾತ್ತಾಗಿ ನನ್ನ ಕೋಣೆಗೆ ಬಂದರು. ಮುಖಭಾವ ಕೆಟ್ಟಿತ್ತು. ಸಾಮಾನ್ಯ ಬೆಲೆಯ ಗಿಲೀಟಿನ 'ಆಷ್‌ಟ್ರೇ' ಮೇಜಿನ ಮೇಲಿನಿಂದ ಕಣ್ಮರೆಯಾಗಿದೆ. ಈಗ ಅದು ಯಾರ ವಶದಲ್ಲಿದೆಯೋ ಅವರು ಖಂಡಿತವಾಗಿ ಅದು ಭಂಗಾರದ್ದೆಂಪೇ ನಿರ್ಣಯಿಸಿರುವರು. ಇಲ್ಲದಿದ್ದರೆ ಇಹ ಪರ ಕಳೆದುಕೊಳ್ಳಲು ಯಾರು ಸಿದ್ಧರಾಗುವರು? ತುಚ್ಛವಾದ ಪದಾರ್ಥವೊಂದು ಕಣ್ಮರೆಯಾದರೂ ಅಣ್ಣ ತನ್ನ ವಿಪುಲ ಐಶ್ವರ್ಯದ ಪಾಯ ಕಳಚಿ ಹೋದಂತೆ ಎಣಿಸುವರೆನ್ನುವುದನ್ನು ನೀನು ಬಲ್ಲೆಯಷ್ಟೆ. ಇವತ್ತು ಬೆಳಗ್ಗೆ ಆಫೀಸಿಗೆ ಹೋಗುವಾಗ ಶ್ಯಾಮಾಳನ್ನು ಊರಿಗೆ ಕಳುಹಿಸಿಬಿಡೆಂದು ನನ್ನೊಡನೆ ಹೇಳಿಹೋದರು. ನಾನು ಬಹಳ ಉತ್ಸಾಹದೊಡನೆಯೇ ಆ ಪವಿತ್ರ ಕಾರ್ಯದಲ್ಲಿ ನಿರತನಾಗಿದ್ದೆ. ಅವರು ಆಫೀಸಿನಿಂದ ಹಿಂದಿರುಗುವುದರೊಳಗೆ ಈ ಕೆಲಸ ಮುಗಿಸಿಬಿಡಬೇಕೆಂದು ತೀರ್ಮಾನಿಸಿದ್ದೆ. ಇಂತಹ ಸಮಯದಲ್ಲಿ ಮಧ್ಯಾಹ್ನ ಒಂದೂವರೆ ಘಂಟೆಯ ಸಮಯ

ದಲ್ಲಿ ಹಠಾತ್ತಾಗಿ ಅಣ್ಣ ನೆಟ್ಟಗೆ ನನ್ನ ಕೊಟಡಿಗೆ ನುಗ್ಗಿದರು. ಸದ್ಯಕ್ಕೆ ಆ ವಿಷಯ ಹಾಗೆಯೇ ಇರಲೆಂದರು. ಕೋಣೆಯಿಂದ ಹೊರಗೆ ಹೋಗುತ್ತಿದ್ದಾಗ ಮೇಜಿನ ಮೇಲಿದ್ದ ಅತ್ತಿಗೆಯ ಪಠ ಕಣ್ಣಿಗೆ ಬಿತ್ತು. ಅಲ್ಲೇ ನಿಂತರು. ಓರೆ ನೋಟವನ್ನು ನೆಟ್ಟಗೆ ಮಾಡಿಕೊಂಡು ಚಿತ್ರ ನೋಡಲು ಅಣ್ಣನಿಗೆ ನಾಚಿಕೆಯಾಗುತ್ತಿದೆಯೆಂದು ಅರಿತೆ. ಆಗ "ಅಣ್ಣಾ, ಸ್ವಲ್ಪ ಕುಳಿತುಕೋ. ಢಾಕಾ ಸೀರೆಯೊಂದನ್ನು ನಿನಗೆ ತೋರಿಸಬೇಕಾಗಿದೆ. ಮೋತಿಯ ತಾಯಿಯ ಕಿರಿಯ ಅತ್ತಿಗೆಗೆ ಹೂ ಮುಡಿಸುವರು, ಅದಕ್ಕೇ ಅವಳಿಗೆ ಒಂದು ಉಡುಗೊರೆ ಕೊಡಬೇಕಾಗಿದೆ. ಆದರೆ ಗಣೇಶ್‌ರಾಮ್ ಬೆಲೆಯಲ್ಲಿ ನನ್ನನ್ನು ಮೋಸಗೊಳಿಸುತ್ತಿರುವಂತೆ ಅನುಮಾನವಾಗುತ್ತಿದೆ. ಒಮ್ಮೆ ಅದನ್ನು ನಿನಗೆ ತೋರಿಸಬೇಕೆಂದು ಬಯಸುತ್ತೇನೆ. ನನಗೆ ತೋರುವಮಟ್ಟಿಗೆ ಅದಕ್ಕೆ ಹದಿಮೂರು ರೂಪಾಯಿ ಬೆಲೆಯಾಗಬಹುದೆಂದು ಕಾಣಿಸದು. ಬಹಳವಾದರೆ ಒಂಬತ್ತು, ಇಲ್ಲ ಒಂಬತ್ತೂವರೆ ಆಗುವುದು ನ್ಯಾಯ" ಎಂದೆ.

ಮೋತಿಯ ತಾಯಿ ಮೂಕಳಾದಳು. "ಇವೆಲ್ಲ ನಿನ್ನ ತಲೆಯಲ್ಲಿ ಎಲ್ಲಿಂದ ಹೊಳೆದುವು? ನನ್ನ ಕಿರಿಯ ಅತ್ತಿಗೆಗೆ ಹೂಮುಡಿಸುವುದಕ್ಕೆ ಅವಕಾಶವೇ ಇಲ್ಲವಲ್ಲ. ಅವಳ ಕೈ ಮಗುವಿಗೆ ಕೇವಲ ಒಂದೂವರೆ ತಿಂಗಳು ವಯಸ್ಸಲ್ಲ. ಕಲ್ಪಿಸಿಕೊಂಡು ಹೇಳುವುದೆಂದರೆ ಇತ್ತೀಚೆಗೆ ನಿನ್ನ ಬಾಯಿಗೆ ತಡೆಯಿಲ್ಲವೆನ್ನುವುದು ತಿಳಿಯುತ್ತದೆ. ಈ ಹೊಸ ವಿದ್ಯೆ ಎಲ್ಲಿ ಸಂಪಾದಿಸಿದೆ—"

"ಎಲ್ಲಿಂದ ಕಾಳಿದಾಸ ತನ್ನ ಕವಿತ್ವ ಪಡೆದನೋ ಅಲ್ಲಿಂದ. ವೀಣಾಪಾಣಿ ವಾಣಿಯ ಬಳಿಯಿಂದ?"

"ವೀಣಾಪಾಣಿ ನಿನ್ನನ್ನು ಬಿಟ್ಟುಬಿಡುವವರೆಗೆ ನಿನ್ನನ್ನು ಕಟ್ಟಿಕೊಂಡು ಸಂಸಾರ ನಡೆಸುವುದು ಸಾಧ್ಯವಿಲ್ಲವಾಗಿದೆ."

"ಪಣ ತೊಟ್ಟಿರುವೆ. ಸ್ವರ್ಗಾರೋಹಣ ಕಾಲದಲ್ಲಿ ನರಕ ದರ್ಶನ ಮಾಡಿ ಹೋಗುವೆ. ಅತ್ತಿಗೆಯ ಚರಣತಲದಲ್ಲಿ ಇದೇ ನನ್ನ ಕಾಣಿಕೆ."

" ಆದರೆ ಒಂಬತ್ತೂವರೆ ರೂಪಾಯಿ ಬೆಲೆಯ ಢಾಕಾ ಸೀರೆ ಆ ನಿಮಿಷದಲ್ಲಿ ನಿನಗೆ ಸಿಕ್ಕಿದ್ದಾದರೂ ಎಲ್ಲಿಂದ ? "

" ಎಲ್ಲಿಂದಲೂ ಇಲ್ಲ. ಇಪ್ಪತ್ತು ನಿಮಿಷವಾದ ಮೇಲೆ ಹಿಂದಿರುಗಿ ಬಂದು ಗಣೇಶರಾವ್ ಆ ಸೀರೆಯನ್ನು ನನಗೆ ಹೇಳದೆಯೇ ತೆಗೆದು ಕೊಂಡು ಹೊರಟುಹೋದ " ಎಂದೆ. ಅಣ್ಣನ ಮುಖ ನೋಡಿ ಈ ನಡುವೆ ಚಿತ್ರ ಅವನ ಮೆದುಳನ್ನು ಹೊಕ್ಕು ಸ್ವಪ್ನದ ರೂಪ ತಾಳಿದೆಯೆಂದು ಅರಿತುಕೊಂಡೆ. ಯಾವುದಕ್ಕೋ ಏಸು ಬಲ್ಲೆ. ಪ್ರಪಂಚದಲ್ಲಿ ನನ್ನ ಹತ್ತಿರವೇ ಅಣ್ಣನಿಗೆ ಸ್ವಲ್ಪ ಚಕ್ಷು ಲಜ್ಜೆಯಿದೆ. ಬೇರೆ ಯಾರಾದರೂ ಆಗಿದ್ದರೆ ಪಠವನ್ನು ತಕ್ಷಣ ಕಸಿದುಕೊಂಡು ಹೋಗಲು ಅವನಿಗೆ ತೊಡಕಾಗುತ್ತಿರಲಿಲ್ಲ.

" ನೀನೂ ಕಡಮೆಯ ಜಿಪುಣನೇನೂ ಅಲ್ಲ ! ಅಣ್ಣನವರಿಗೆ ಅದನ್ನು ಕೊಟ್ಟುಬಿಡಬಾರದಿತ್ತೇನು ? "

" ಕೊಟ್ಟೇ ಇರುವೆ. ಆದರೆ ಸಹಜವಾದ ಮನಸ್ಸಿನಿಂದ ಕೊಡಲಿಲ್ಲ. ಅಣ್ಣಾ, ಈ ಫೋಟೋವಿನಿಂದ ಒಂದು ಆಯಿಲ್ ಪೆಯಿಂಟಿಂಗ್ ಮಾಡಿಸಿ ನಿನ್ನ ಮಲಗುವ ಮನೆಯಲ್ಲಿಟ್ಟರೆ ಆಗದೇನು ? ಎಂದೆ. ಅಣ್ಣ ಉದಾಸೀನ ಭಾವದಲ್ಲಿ " ಒಳ್ಳೆಯದು ನೋಡೋಣ " ಎಂದರು. ಹಾಗೆ ಹೇಳಿದವರೇ ಪಠವನ್ನು ಎತ್ತಿಕೊಂಡು ಮಹಡಿಯ ಮೇಲಕ್ಕೆ ಹೊರಟು ಹೋದರು. ಅನಂತರ ಏನಾಯಿತೋ ಸರಿಯಾಗಿ ತಿಳಿಯೆ. ಆಫೀಸಿಗೆ ಹೋಗಲಿಲ್ಲವೆಂದು ಕಾಣುತ್ತೆ. ಮತ್ತೆ ಆ ಪಠ ಹಿಂದಕ್ಕೆ ಸಿಕ್ಕುವ ಆಸೆ ಇಟ್ಟುಕೊಂಡಿಲ್ಲ."

" ನಿಮ್ಮ ಅತ್ತಿಗೆಗೋಸ್ಕರ ಸ್ವರ್ಗವನ್ನೇ ಕೈ ಬಿಡಲು ಸಿದ್ಧನಾಗಿರುವಾಗ ಒಂದು ಫೋಟೋ ಹೋದರೆ ಏನಾಯಿತು ? "

" ಸ್ವರ್ಗದ ವಿಷಯ ಸಂದೇಹವಿದೆಯಲ್ಲ. ಪಠದ ವಿಷಯದಲ್ಲಿ ಯಾವ ಬಗೆಯ ಸಂದೇಹವೂ ಇರಲಿಲ್ಲವಲ್ಲ. ಇಂತಹ ಫೋಟೋ ದೈವವಶಾತ್ ಯಾವಾಗಲೋ ಒಮ್ಮೆ ತೆಗೆಯಲು ಸಾಧ್ಯ. ಯಾವ ದುರ್ಲಭ ಮುಹೂರ್ತದಲ್ಲಿ ಅವಳ ಮುಖದಲ್ಲಿ, ಲಕ್ಷ್ಮಿಯ ಕಳೆ ಪೂರ್ಣ

ವಾಗಿ ಇಳಿಯದಿತ್ತೋ ಆ ಶುಭಯೋಗವನ್ನು ಆ ಪಠದಲ್ಲಿ ಹಿಡಿದಿಟ್ಟಿದೆ. ಒಂದೊಂದು ದಿನ ರಾತ್ರಿಯಲ್ಲಿ ನಿದ್ರೆಯಿಂದ ಎದ್ದು ದೀಪ ಹತ್ತಿಸಿ ಆ ಚಿತ್ರವನ್ನು ನೋಡಿರುವೆ. ದೀಪದ ಬೆಳಕಿನಲ್ಲಿ ಅದರ ಕಳೆ ಮತ್ತಷ್ಟು ಹೆಚ್ಚಾಗಿ ಕಾಣುವುದು."

"ನೋಡು ನನ್ನ ಹತ್ತಿರ ಇಷ್ಟೊಂದು ಹೆಚ್ಚು ಮಾತು ಆಡಲು ನಿನಗೆ ಸ್ವಲ್ಪವೂ ಭಯವಿಲ್ಲವೇನು ?"

"ಭಯವೇನಾದರೂ ಇದ್ದಿದ್ದರೆ ನಿನಗೆ ಯೋಚನೆ ಮಾಡಬೇಕಾದ ಸಂದರ್ಭವೂ ಇರುತ್ತಿತ್ತು. ಆಕೆಯನ್ನು ನೋಡಿ ನನ್ನ ಆಶ್ಚರ್ಯಕ್ಕೆ ಪಾರವೇ ಇಲ್ಲ. ನಮ್ಮ ಅದೃಷ್ಟದಲ್ಲಿ ಇದು ಹೇಗೆತಾನೆ ಸಾಧ್ಯವಾಯಿತು ಎಂದು ಯೋಚಿಸುತ್ತೇನೆ. ನಾನು ಆಕೆಯನ್ನು ಅತ್ತಿಗೆ ಎಂದು ಕರೆಯುವುದು ಸಾಧ್ಯವಾಗಿದೆಯಲ್ಲ, ಅದನ್ನು ಯೋಚಿಸಿದರೇನೇ ಮೈಯಲ್ಲಿ ಮುಳ್ಳು ಚುಚ್ಚಿದಂತಾಗುತ್ತೆ. ಮತ್ತೆ ಆಕೆ ಸಾಮಾನ್ಯ ನವೀನನಂತಹ ಮನುಷ್ಯ ನನ್ನ ಹತ್ತಿರ ಕೂರಿಸಿಕೊಂಡು ಉಪಚಾರ ಮಾಡಿ ಬಡಿಸಿ ಆದರಿಸುವುದು ಸಾಧ್ಯವಾಗಿದೆ. ಪ್ರಪಂಚದಲ್ಲಿ ಇದೂ ಸಹಜವಾದುದು ಹೇಗೆ? ನಮ್ಮ ಕುಟುಂಬದಲ್ಲಿ ಎಲ್ಲರಿಗಿಂತ ನಿರ್ಭಾಗ್ಯನಾದ ನಮ್ಮ ಅಣ್ಣ, ಯಾವುದನ್ನು ಸುಲಭವಾಗಿ ಪಡೆದನೋ ಅದನ್ನು ಬಲವಾಗಿ ಕಟ್ಟಿಡಲು ಹೋಗಿ ಕಳೆದುಕೊಂಡ."

"ಸಾಕು ಸಾಕು. ಅತ್ತಿಗೆಯ ವಿಷಯ ಹೇಳಲು ನಿನ್ನ ಬಾಯಿ ತೆರೆಯಿತೆಂದರೆ ಮತ್ತೆ ನಿಲ್ಲುವ ಹಾಗೆಯೇ ಇಲ್ಲ."

"ನೋಡು, ನಿನ್ನ ಮನಸ್ಸಿನಲ್ಲಿ ಸ್ವಲ್ಪ ಅಳುಕುವುದೆಂಬುದನ್ನು ನಾನು ಬಲ್ಲೆ."

"ಇಲ್ಲ ಎಂದೆಂದಿಗೂ ಇಲ್ಲ."

"ಇದೆ, ಸ್ವಲ್ಪ ಇದೆ. ಆದರೆ ಈ ಸಂದರ್ಭದಲ್ಲಿ ಒಂದು ಮಾತು ನೆನಪು ಮಾಡಿಕೊಡುವುದು ಉತ್ತಮ. ನೂರನಗರದ ಸ್ಟೇಷನ್ನಿನಲ್ಲಿ ಮೊಟ್ಟಮೊದಲು ಅತ್ತಿಗೆಯ ಅಣ್ಣನನ್ನು ಕಂಡಾಗ ಏನೇನು ಹೇಳಿದ್ದೆಯೋ ಅವೆಲ್ಲಾ ಅತ್ಯುಕ್ತಿಯೆಂದರೆ ಆಗುವುದಲ್ಲ."

"ಸರಿ ಸರಿ. ಆ ಮಾತೆಲ್ಲ ಇರಲಿ. ಈಗ ಏನು ಹೇಳಬೇಕೆಂದು ಎಣಿಸಿದ್ದೆ, ಹೇಳು ?"

"ಒಂದೆರಡು ದಿನಗಳಲ್ಲೇ ಅಣ್ಣ ಅತ್ತಿಗೆಯನ್ನು ಕರೆಯುವರೆಂದು ನನ್ನ ನಂಬಿಕೆ. ಅತ್ತಿಗೆ ಇಷ್ಟು ಆಗ್ರಹದೊಡನೆ ತವರು ಮನೆಗೆ ಹೊರಟು ಬಂದಳು. ಆಮೇಲೆ ಇಷ್ಟು ದಿನಗಳವರೆಗೆ ಹಿಂದಿರುಗುವ ಸುದ್ದಿಯಿಲ್ಲ. ಇದರಿಂದ ಅಣ್ಣನಿಗೆ ಬಹಳ ದುಗುಡವುಂಟಾಗಿದೆ. ಹಕ್ಕಿ ಭಂಗಾರದ ಪಂಜರಕ್ಕೆ ಯಾಕೆ ಹಿಂದಿರುಗುವುದಿಲ್ಲ ಎನ್ನುವುದನ್ನೂ ಅಣ್ಣ ಅರಿಯರು. ಅರಿಯುವ ಹಕ್ಕಿ-ಕೃತಜ್ಞತೆಯಿಲ್ಲದ ಹಕ್ಕಿ."

"ಅದು ಒಳ್ಳೆಯದೇ ಆಯಿತು. ದೊಡ್ಡ ಅಣ್ಣ ಕರೆಯಕಳುಹಿಸಲಿಲ್ಲ. ಅದೇ ಏರ್ಪಾಡಿತ್ತಲ್ಲವೆ ?"

"ನನಗೆ ಹೀಗೆ ತೋರುತ್ತಿದೆ. ದೊಡ್ಡಣ್ಣ ಹೇಳಿ ಕಳುಹಿಸುವ ಮುಂಚೆ ಅತ್ತಿಗೆ ಹೋಗುವುದಾದರೆ ಉತ್ತಮ. ಅಣ್ಣನ ಬಿಗುಮಾನಕ್ಕೆ ಅಷ್ಟಾದರೂ ಜಯವಿಪ್ಪೀತು. ಅದಲ್ಲದೆ ಅತ್ತಿಗೆ ತನ್ನ ಸಂಸಾರಕ್ಕೆ ಹಿಂದಿರುಗಬೇಕೆಂಬುದೇ ವಿಪ್ರದಾಸ ಬಾಬುಗಳು ಬಯಸಿದ್ದರು. ನಾನೇ ಬೇಡವೆಂದಿದ್ದೆ."

ವಿಪ್ರದಾಸನೊಡನೆ ಈ ವಿಷಯವಾಗಿ ಏನು ಮಾತುಕತೆ ನಡೆಯಿತು ಎನ್ನುವುದರ ಸುಳಿವು ಕೊಡದೆ ಮೋತಿಯತಾಯಿ "ಹಾಗಾದರೆ ವಿಪ್ರದಾಸ ಬಾಬುಗಳ ಹತ್ತಿರವೇ ಹೋಗಿ ಹೇಳು ಮತ್ತೆ" ಎಂದಳು.

"ಹಾಗೆಯೇ ಮಾಡುತ್ತೇನೆ. ಅವರು ಕೇಳಿ ಸಂತೋಷಪಡುವರು."

ಈ ಸಮಯದಲ್ಲಿ ಬಾಗಿಲ ಹೊರಗಿನಿಂದ ಕುಮು "ಒಳಗೆ ಬರಬಹುದೇನು ?" ಎಂದು ಕೇಳಿದಳು.

ಮೋತಿಯ ತಾಯಿ "ನಿನ್ನ ಮೈದುನ ಹಾದಿ ಕಾಯುತ್ತ ಕುಳಿತ್ತಿರುವರು" ಎಂದಳು.

ಜನ್ಮಜನ್ಮಗಳಿಂದ ಹಾದಿ ಕಾಯುತ್ತಿದ್ದೆ. ಈ ಜನ್ಮದಲ್ಲಿ ದರ್ಶನ ಸಿಕ್ಕಿತು."

"ಓ ! ನೀನು ಇಷ್ಟೊಂದು ಮಾತುಗಳನ್ನು ಸೃಷ್ಟಿಸಿಕೊಂಡು ಹೇಳಲು ಹೇಗೆ ಕಲಿತೆ ?"

"ನನಗೇ ಆಶ್ಚರ್ಯವಾಗುತ್ತೆ. ತಿಳಿಯಲಾರದಿರುವೆ."

"ಸರಿ. ನಡೆ. ಇನ್ನು ಊಟಮಾಡು."

"ಊಟಕ್ಕೆ ಮುಂಚೆ ಒಮ್ಮೆ ನಿಮ್ಮ ಅಣ್ಣನ ಸಂಗಡ ಸ್ವಲ್ಪ ಮಾತ ನಾಡುವುದಿದೆ."

"ಊಹುಂ. ಅದು ಸಾಧ್ಯವಿಲ್ಲ."

"ಯಾಕೆ ?"

"ಅಣ್ಣ ಇವತ್ತು ಬಹಳ ಮಾತನಾಡಿದ್ದಾರೆ. ಇನ್ನು ಇವತ್ತು ಬೇಡ."

"ಒಳ್ಳೆಯ ಸಮಾಚಾರವಿದೆ."

"ಇರಲಿ, ನಾಳೆ ಬಾ, ಇವತ್ತು ಇನ್ನು ಮಾತು ಬೇಡ."

"ನಾಳೆ ಒಂದು ಸಮಯ ಬಿಡುವಾಗದು. ಇಲ್ಲದೆ ಅಡ್ಡಿ ಒದಗ ಬಹುದು. ನಿನ್ನ ದಮ್ಮಯ್ಯ. ಇವತ್ತು ಒಂದು ಐದೇ ಐದು ನಿಮಿಷ ಹೊತ್ತು ಮಾತನಾಡುತ್ತೇನೆ. ನಿಮ್ಮ ಅಣ್ಣ ಸಂತೋಷಪಡುವರು. ಯಾವ ಬಗೆಯ ನಷ್ಟವೂ ಆಗದು."

"ಇರಲಿ. ಮೊದಲು ನೀನು ಊಟಮಾಡು. ಆಮೇಲೆ ಆಗಲಿ."

ಊಟವಾದ ಮೇಲೆ ಕುಮು ನವೀನನನ್ನು ವಿಪ್ರದಾಸನ ಕೊಟಡಿಗೆ ಕರೆದುಕೊಂಡು ಬಂದಳು. ಅಣ್ಣ ಇನ್ನೂ ನಿದ್ದೆಹೋಗಿರಲಿಲ್ಲ. ಕೋಣೆ ಬಹುಮಟ್ಟಿಗೆ ಕತ್ತಲೆಯಾಗಿತ್ತು. ದೀಪ ಸಣ್ಣಗೆ ಮಾಡಿತ್ತು. ತೆರೆದಿದ್ದ ಕಿಟಕಿಯಿಂದ ನಕ್ಷತ್ರಗಳು ಕಾಣುತ್ತಿದ್ದುವು. ಒಮ್ಮೊಮ್ಮೆ ಇದ್ದಕ್ಕಿದ್ದಂತೆ ಹೊರಗಿನಿಂದ ದಕ್ಷಿಣದ ಗಾಳಿ ಬೀಸುತ್ತಿತ್ತು. ಕೊಟಡಿಯ ಪರದೆ, ಮಂಚದ ಮೇಲಿನ ಸೊಳ್ಳೆಯ ಪರದೆ, ಗೂಟಕ್ಕೆ ತಗುಲಿ ಹಾಕಿದ್ದ ವಿಪ್ರ ದಾಸನ ಬಟ್ಟೆಗಳು ನಾನಾ ಬಗೆಯ ನೆರಳು ಹರಡಿ ಅಲುಗಾಡುತ್ತಿದ್ದುವು.

ನೆಲದ ಮೇಲಿದ್ದ ಪತ್ರಿಕೆಯ ಹಾಳೆಗಳು ಅಸ್ತವ್ಯಸ್ತವಾಗಿ ಗಾಳಿಗೆ ಅಲುಗು ತ್ತಿದ್ದುವು. ಮಧುಸೂದನ ಅರ್ಧ ಮಲಗಿದ ಸ್ಥಿತಿಯಲ್ಲಿದ್ದ. ಮುಂದೆ ಹೆಜ್ಜೆಯಿಡಲು ನವೀನನಿಗೆ ಮನಸ್ಸಾಗಲಿಲ್ಲ. ಪ್ರದೋಷದ ಮಬ್ಬುಗತ್ತಲು ಮತ್ತು ಖಾಯಿಲೆಯ ದುರ್ಬಲತೆ ಎರಡೂ ಕಲೆತು ವಿಪ್ರದಾಸನಿಗೆ ಒಂದು ಬಗೆಯ ಆವರಣ ಹೊದಿಸಿದ್ದವು. ಅವನು ಪ್ರಪಂಚದಿಂದ ಬಹಳ ದೂರದ ಬೇರೊಂದು ಲೋಕದಲ್ಲಿದ್ದವನಂತೆ ಕಾಣುತ್ತಿದ್ದ. ಅವನಂತಹ ಒಬ್ಬಂಟಿಗ, ಪ್ರಪಂಚದಲ್ಲಿ ಬೇರೆ ಯಾರೂ ಇಲ್ಲ ಎನ್ನುವಂತಿತ್ತು.

ನವೀನ ಬಂದವನು ವಿಪ್ರದಾಸನಿಗೆ ನಮಸ್ಕಾರ ಮಾಡಿ "ವಿಶ್ರಾಂತಿಗೆ ಅಡ್ಡಿಮಾಡಬಯಸುವುದಿಲ್ಲ. ಒಂದು ಮಾತು ಹೇಳಿ ಹೋಗುವೆ. ಸಮಯ ಒದಗಿದೆ. ಇನ್ನು ಅತ್ತಿಗೆಯವರು ಮನೆಗೆ ಹಿಂದಿರುಗಿ ಬರುವ ರೆಂದು ನಾವುಗಳು ನಿರೀಕ್ಷಿಸುತ್ತಿರುವೆವು" ಎಂದ.

ವಿಪ್ರದಾಸ ಏನೂ ಉತ್ತರ ಕೊಡಲಿಲ್ಲ. ಅಲ್ಲಾಡದೆ ಕುಳಿತಿದ್ದ.

ಸ್ವಲ್ಪ ಹೊತ್ತಿನ ಮೇಲೆ ನವೀನ "ನಿಮ್ಮ ಅನುಮತಿ ದೊರೆತರೆ ಆಕೆಯನ್ನು ಕರೆದುಕೊಂಡು ಹೋಗಲು ಏರ್ಪಾಡು ಮಾಡುತ್ತೇನೆ" ಎಂದ.

ಈ ನಡುವೆ ಕುಮು ಮೆಲ್ಲಮೆಲ್ಲನೆ ಬಂದು ಅಣ್ಣನ ಕಾಲಬಳಿ ಕುಳಿ ತಿದ್ದಳು. ವಿಪ್ರದಾಸ ಅವಳ ಮುಖವನ್ನು ದಿಟ್ಟಿಸಿ ನೋಡಿ "ನೀನು ಹೋಗಬಹುದಾದ ಸಮಯ ಒದಗಿತು ಎಂದು ಎಣಿಸುವೆಯಾದರೆ ಹೋಗು ಕುಮು" ಎಂದ.

ಕುಮು "ಇಲ್ಲ, ನಾನು ಹೋಗುವುದಿಲ್ಲ" ಎಂದಳು. ವಿಪ್ರದಾಸನ ಮೊಣಕಾಲ ಮೇಲೆ ಬೋರಲಾಗಿ ಬಿದ್ದಳು.

ಕೊಟಡಿ ನಿಶ್ಶಬ್ದವಾಗಿತ್ತು. ಕೇವಲ ನಡುನಡುವೆ ಗಾಳಿ ಬೀಸಿ ದಾಗ ಸಡಿಲವಾದ ಕಿಟಕಿಯ ಬಾಗಿಲೊಂದು ಅಲುಗಿಸಿ ಸದ್ದು ಮಾಡು ತ್ತಿತ್ತು. ಹೊರಗೆ ತೋಟದ ಮರಗಿಡಗಳ ಎಲೆಗಳಲ್ಲಿ ಮರ್ಮರ ಧ್ವನಿ ಕೇಳಿ ಬರುತಿತ್ತು.

ಸ್ವಲ್ಪ ಹೊತ್ತಾದ ಮೇಲೆ ಕುಮು ಹಾಸಿಗೆಯಿಂದ ಎದ್ದವಳೇ ನವೀನನೊಡನೆ "ನಡೆ, ಇನ್ನು ಹೊತ್ತು ಮಾಡಬೇಡ" ಎಂದು, "ಅಣ್ಣ ನೀನು ಮಲಗು" ಎಂದಳು.

ಮೋತಿಯ ತಾಯಿ ಮನೆಗೆ ಹಿಂತಿರುಗಿದ ಮೇಲೆ "ಇಷ್ಟು ಅತಿಯಾದರೆ ಚೆನ್ನಾಗಿರದು" ಎಂದಳು.

ಅಂದರೆ, ಕಣ್ಣನೋಟದಲ್ಲಿ ಗದರಿಸುವುದು ಇದ್ದರೆ ಇರಲಿ, ಆದರೆ ಕಣ್ಣು ಕೆಂಪಗೆ ಮಾಡಿಕೊಳ್ಳುವುದು ಖಂಡಿತ ಚೆನ್ನಲ್ಲ ಎಂದರ್ಥ.

"ಇಲ್ಲ ಇಲ್ಲ. ಇದು ಅವರುಗಳ ಪ್ರತಿಷ್ಠೆ. ಪ್ರಪಂಚದಲ್ಲಿ ಅವರಿಗೆ ಸಮಾನವಾದುದು ಏನೂ ಇಲ್ಲ. ಅವರು ಎಲ್ಲರಿಗಿಂತ ಶ್ರೇಷ್ಠರು ಎಂದು ಅವರ ಅಭಿಪ್ರಾಯ."

"ನೋಡು, ಇಷ್ಟು ಪ್ರತಿಷ್ಠೆ ಎಲ್ಲರಿಗೂ ಹೊಂದಿಕೆಯಾಗದು. ಆದರೆ ಅವರುಗಳ ಮಾತು ಬೇರೆ."

"ಹಾಗೆಂದು ಹೇಳಿ ನೆಂಟರಿಷ್ಟರ ಸಂಗ ಬಿಟ್ಟು ಬಿಡಬೇಕೇನು?"

"ನೆಂಟರು ಇಷ್ಟರು ಎಂದು ಹೇಳಿದ ಮಾತ್ರಕ್ಕೆ ನೆಂಟರಿಷ್ಟರು ಆಗುವುದಿಲ್ಲ. ಅವರುಗಳು ನಮ್ಮಿಂದ ಸಂಪೂರ್ಣವಾಗಿ ಪ್ರತ್ಯೇಕವಾದ ಶ್ರೇಣಿಯ ಜನ. ನಂಟಸ್ತಿಕೆ ಹಚ್ಚಿಕೊಂಡು ಅವರೊಡನೆ ಕಲೆಯಲು ನನಗೆ ಸಂಕೋಚವಾಗುತ್ತೆ."

"ಯಾರು ಎಷ್ಟೇ ದೊಡ್ಡವರಾಗಿರಲಿ ಆಗಲೂ ನಂಟನ ಹೊಣೆ ಇದ್ದೇ ಇರುತ್ತೆ. ಇದನ್ನು ಮನಸ್ಸಿನಲ್ಲಿಡು."

ಈ ಚರ್ಚೆಯಲ್ಲಿ ಕುಮುವಿನ ವಿಷಯದಲ್ಲಿ ಮೋತಿಯತಾಯಿಗೆ ಸ್ವಲ್ಪ ಹೊಟ್ಟೆಯ ಉರಿಯೂ ಇದೆಯೆಂದು ನವೀನ ತಿಳಿದುಕೊಂಡ. ಅಷ್ಟೇ ಅಲ್ಲದೆ ನೆಂಟಸ್ತಿಕೆಯ ಬೆಲೆ ಹೆಂಗಸರಲ್ಲಿ ಹೆಚ್ಚಾಗಿರುವುದು ಎಂಬುದೂ ವಾಸ್ತವ. ಆದರಿಂದಲೇ ನವೀನ ಈ ವಿಷಯವಾಗಿ ವ್ಯರ್ಥವಾದ ತರ್ಕಮಾಡದೆ "ಇನ್ನು ಸ್ವಲ್ಪ ದಿನಗಳು ನೋಡೋಣ. ಅಣ್ಣನ ಆಸಕ್ತಿ ಇನ್ನಷ್ಟು ಬೆಳೆಯಲಿ. ಆದರಿಂದ ನಷ್ಟವೇನೂ ಆಗದು" ಎಂದ.

೫೩

ಮಧುಸೂದನನ ಸಂಸಾರದಲ್ಲಿ ತನ್ನ ಸ್ಥಾನ ದೃಢವಾಯಿತು ಎಂದೇ ಶ್ಯಾಮಾಸುಂದರಿ ಊಹಿಸಲು ಎಡೆಯಿತ್ತು. ಆದರೆ ಆ ಸಂಗತಿ ಅನುಭವಿಸಲು ಸಾಧ್ಯವಾಗಿರಲಿಲ್ಲ. ಮನೆಯ ಆಳುಕಾಳುಗಳ ಮೇಲೆ ಅವಳ ಯಾಜಮಾನ್ಯದ ಹಕ್ಕು ಉಂಟಾಗಿದೆಯೆಂದು ಅವಳು ಪ್ರಾರಂಭದಲ್ಲಿ ಎಣಿಸಿದ್ದಳು. ಆದರೆ ಹೆಜ್ಜೆಹೆಜ್ಜೆಗೆ ಅವರುಗಳು ತಮ್ಮ ಮನಸ್ಸಿನಲ್ಲಿ ಅವಳನ್ನು ಒಡತಿಯ ಸ್ಥಾನದಲ್ಲಿ ಕೂಡಿಸಲು ಒಪ್ಪುತ್ತಿಲ್ಲವೆಂದು ಅರಿತಳು. ಧೈರ್ಯವಾಗಿ ಅವಳನ್ನು ಬಹಿರಂಗವಾಗಿಯೇ ಅಲಕ್ಷಿಸಲು ಸಾಧ್ಯವಾಗುವುದಾದರೆ ಅವರು ನೆಮ್ಮದಿ ಹೊಂದುವರೆಂದು ಸ್ಪಷ್ಟವಾಗಿ ಕಾಣುತ್ತಿತ್ತು. ಅದರಿಂದಲೇ ಶ್ಯಾಮಾ ಅವರುಗಳ ಮೇಲೆ ಆಗಾಗ್ಗೆ ಅನಾವಶ್ಯಕವಾಗಿ ಗದರಿಸಿಕೊಳ್ಳುತ್ತಿದ್ದಳು. ನಿಷ್ಕಾರಣವಾದ ಕೆಲಸ ಹೇಳಿ ಅದರಲ್ಲಿ ತಪ್ಪು ಹುಡುಕಿ ಅವರ ಮೇಲೆ ರೇಗುತ್ತಿದ್ದಳು. ಅಪ್ಪ ಅಮ್ಮನ ಹೆಸರೆತ್ತಿ ಬಯ್ಯುತ್ತಿದ್ದಳು. ಕೆಲವು ದಿನಗಳ ಹಿಂದೆ ಈ ಮನೆಯಲ್ಲೇ ಶ್ಯಾಮಾ ಲೆಕ್ಕಕ್ಕಿಲ್ಲದವಳಾಗಿದ್ದಳು. ಅದರ ನೆಪವನ್ನು ಕುಟುಂಬದಿಂದ ಅಳಿಸಿಬಿಡಬೇಕೆಂದು ಅವಳು ಬಹು ಕಠಿಣವಾಗಿ ಉಜ್ಜಿ ತೊಳೆಯಲು ಹೋಗಿ ಅದು ಸಾಧ್ಯವಿಲ್ಲವೆಂದು ಕಂಡುಕೊಂಡಿದ್ದಳು. ಮನೆಯಲ್ಲಿದ್ದ ಹಳೆಯ ಆಳೊಬ್ಬ ಶ್ಯಾಮಾಳ ಗದರಿಕೆ ಸಹಿಸಲಾರದೆ ಕೆಲಸಕ್ಕೆ ರಾಜೀನಾಮೆ ಕೊಟ್ಟ. ಆ ವಿಷಯದಲ್ಲಿ ಶ್ಯಾಮಾ ತಲೆತಗ್ಗಿಸಬೇಕಾಗಿ ಬಂದಿತ್ತು. ಅದಕ್ಕೆ ಕಾರಣ ತನ್ನ ಸಂಪತ್ತಿನ ಏಳಿಗೆಯ ವಿಷಯದಲ್ಲಿ ಮಧುಸೂದನನಿಗೆ ಹಲವು ಬಗೆಯ ಕುರುಡು ನಂಬಿಕೆಗಳಿದ್ದವು. ತನ್ನ ಐಶ್ವರ್ಯ ಅಭಿವೃದ್ಧಿಯಾಗತೊಡಗಿದ ಕಾಲದಿಂದ ತನ್ನಲ್ಲಿ ಯಾವ ಯಾವ ಆಳುಕಾಳುಗಳು ಇದ್ದರೋ ಅವರಲ್ಲಿ ಯಾರಾದರೊಬ್ಬರು ಕೆಲಸಬಿಡುವುದು ಅಥವಾ ಸಾಯುವುದು ಅವಲಕ್ಷಣವೆಂದು ಅವನು ಎಣಿಸಿದ್ದ. ಇದೇ ತರಹದ ಕಾರಣದಿಂದ ಆ ಕಾಲದ ಶಾಯಿಯ ಕಲೆಗಳಿಂದ ತುಂಬಿದ ಹಳೆಯ ಮೇಜೊಂದು ಅವನ ಆಫೀಸಿನಲ್ಲಿ ಈಗಿನ ಕಾಲದ ಬೆಲೆ ಬಾಳುವ ಮೇಜು ಕುರ್ಚಿಗಳ ನಡುವೆ ಸ್ಥಳವನ್ನು ಪಡೆದಿತ್ತು. ಅದರ ಮೇಲೆ ಆ ಕಾಲದ ಮಣ್ಣಿನ ಮಸಿಕುಡಿಕೆಯೊಂದೂ, ಕಡಮೆ ಬೆಲೆಯ ವಿಲಾಯತಿ ಲೇಖಣಿಯೊಂದೂ ಇತ್ತು.

ತನ್ನ ವ್ಯಾಪಾರದ ಪ್ರಾರಂಭದಲ್ಲಿ ಮಧುಸೂದನ ಆ ಲೇಖಣಿಯಲ್ಲಿ ಮುಖ್ಯವಾದೊಂದು ಕರಾರಿಗೆ ರುಜು ಮಾಡಿದ್ದ. ಆ ಕಾಲದವನಾದ ಉಡಿಯಾ ಆಳು ದಧಿ ಕೆಲಸ ಬಿಡುವೆನೆಂದು ಹೇಳಲು ಮಧುಸೂದನ ಅವನ ಮಾತನ್ನು ಒಪ್ಪಲೇ ಇಲ್ಲ. ಪ್ರತಿಯಾಗಿ ಆಳಿನ ಅದೃಷ್ಟಕ್ಕೆ ಇನಾಮು ಸೇರಿಕೊಂಡಿತ್ತು. ಶ್ಯಾಮಾ ಸುಂದರಿ ಈ ವಿಷಯವಾಗಿ ಬಲವಾದ ಬಿಗುಮಾನ ತೋರ ಹೋಗಿ ಜಗಳಕ್ಕೆ ತಳ ಸಿಕ್ಕದೆಂಬುದನ್ನು ಕಂಡುಕೊಂಡಳು. ದಧಿಯ ನಗುಮುಖ ಅವಳಿಂದ ನೋಡಲಾಗಲಿಲ್ಲ. ಶ್ಯಾಮಾವಿಗೆ ಇದ್ದ ತೊಡಕು ಇಷ್ಟೆ. ಮಧುಸೂದನನ್ನು ಅವಳು ನಿಜವಾಗಿಯೂ ಪ್ರೀತಿಸುತ್ತಿದ್ದಳು. ಆದರಿಂದಲೇ ಮಧುಸೂದನನ ಸ್ವಭಾವದ ಮೇಲೆ ಹೆಚ್ಚು ಹೆಚ್ಚು ಬಲಾತ್ಕಾರ ಮಾಡಲು ಅವಳಿಗೆ ಧೈರ್ಯ..ಾಗುತ್ತಿರಲಿಲ್ಲ. ಬಿಗುಮಾನ ಯಾವ ಎಲ್ಲೆಯಲ್ಲಿ ಜಂಭವಾಗಿ ಗಣಿಸಲಾಗುವುದೆಂಬ ಹೆದರಿಕೆಯಿಂದ ಬಹಳ ಎಚ್ಚರಿಕೆಯಿಂದ ನಡೆದುಕೊಳ್ಳಬೇಕಾಗಿತ್ತು. ಶ್ಯಾಮಳ ವಿಷಯವಾಗಿ ಕಾಲವನ್ನಾಗಲಿ, ಯೋಚನೆಯನ್ನಾಗಲಿ ವ್ಯರ್ಥವಾಗಿ ಖರ್ಚುಮಾಡಬೇಕಾದ ಆವಶ್ಯಕತೆ ಇಲ್ಲವೆಂದು ಮಧುಸೂದನನೂ ಅರಿತಿದ್ದ. ಆದರ ಉಪಚಾರಗಳಿಗೆ ಆಗುತ್ತಿದ್ದ ಖರ್ಚನ್ನು ಕಡಮೆ ಮಾಡಿದರೂ ಕೆಡಕಾಗುವುದೆಂಬ ಸಂದೇಹ ಅಲ್ಪವಾಗಿತ್ತು. ಶ್ಯಾಮಾಳ ವಿಷಯದಲ್ಲಿ ಅವನಿಗೊಂದು ಬಗೆಯ ಸ್ಥೂಲ ಮೋಹವಿತ್ತು. ಆ ಮೋಹವನ್ನು ಹದಿನಾರಾಣೆ ಉಪಯೋಗ ಮಾಡಿಕೊಂಡೂ ಅವಳನ್ನು ಅನಾಯಾಸವಾಗಿ ಸಹಿಸಿಕೊಂಡು ಹೋಗಬಹುದು ಎಂಬ ಆನಂದದಿಂದ ಮಧುಸೂದನ ಉತ್ಸಾಹಪಡೆಯುತ್ತಿದ್ದ. ಇದಕ್ಕೆ ವ್ಯತಿರಿಕ್ತವಾದರೆ ಕಟ್ಟು ಬಿಚ್ಚಿಹೋಗುವುದು. ತನ್ನ ವೃತ್ತಿಗಿಂತ ಹಿರಿದಾದುದು ಮಧುಸೂದನನಿಗೆ ಯಾವುದೂ ಇರಲಿಲ್ಲ. ಆ ವೃತ್ತಿಗೆ ಅಗತ್ಯವಾದುದೆಂದರೆ ವಿಚಲಗೊಳ್ಳದ ಆತ್ಮ ಕರ್ತೃತ್ವ. ಅದರ ಎಲ್ಲೆಯಲ್ಲಿ ತಲೆಯಿಡಲು ಶ್ಯಾಮಾಳಿಗೆ ಧೈರ್ಯವಾಗುತ್ತಿರಲಿಲ್ಲ. ಅಲ್ಪ ಸ್ವಲ್ಪ ಹೆಜ್ಜೆ ಮುಂದುವರಿಸ ಹೋಗಿ ಎಡವಿ ಹಿಮ್ಮೆಟ್ಟುತ್ತಿದ್ದಳು. ಆದರಿಂದ ಶ್ಯಾಮಾ ಕೇವಲ ತನ್ನನ್ನು ಅರ್ಪಣೆ ಮಾಡಿಕೊಳ್ಳುತ್ತಿದ್ದಳು. ಹಕ್ಕನ್ನು ನೆಲೆಗೊಳಿಸಲು ಹೋಗಿ ವಿಫಲವಾಗುತ್ತಿದ್ದಳು. ಹಣಕಾಸು ಸಾಮಾನು ಸರಂಜಾಮುಗಳಿಂದ ಶ್ಯಾಮಾ ಸದಾ ವಂಚಿತಳಾ

ಗಿದ್ದಳು. ಅದರ ಮೇಲೆ ಅವಳ ಆಸೆಗೆ ಎಲ್ಲೆಯೇ ಇರಲಿಲ್ಲ. ಇದರಲ್ಲೂ ಅವಳು ಅಳತೆ ನೋಡಿಕೊಂಡು ಹೆಜ್ಜೆ ಇಡಬೇಕಾಗಿತ್ತು. ಇಂತಹ ಮಹಾ ಧನಿಕನಲ್ಲೂ ಅನಾಯಾಸವಾಗಿ ಏನು ನಿರೀಕ್ಷಿಸಬಹುದಾಗಿತ್ತೋ ಅದೂ ಅವಳ ಪಾಲಿಗೆ ಅಸಾಧ್ಯವಾಗಿತ್ತು. ಮಧುಸೂದನ ನಡುನಡುವೆ ಒಮ್ಮೊಮ್ಮೆ ಸಂತೋಷಗೊಂಡು ಅವಳಿಗೆ ಬಟ್ಟೆಬರೆ, ಒಡವೆವಸ್ತು ಮೊದ ಲಾದವುಗಳನ್ನು ತಂದುಕೊಡುತ್ತಿದ್ದ. ಅದರಿಂದ ಕೂಡಿಡಬೇಕೆಂಬ ಅವಳ ಹಸಿವು ಅಡಗುತ್ತಿರಲಿಲ್ಲ. ಸಣ್ಣಪುಟ್ಟ ಆಸೆಯ ಪದಾರ್ಥ ಗಳನ್ನು ಕೈವಶಪಡಿಸಿಕೊಳ್ಳಲು ಅವಳ ಕೈ ಸದಾ ಚಂಚಲವಾಗಿರುತ್ತಿತ್ತು. ಆ ದಾರಿಯಲ್ಲೂ ಅಡ್ಡಿಯಿತ್ತು. ಇಂತಹದೇ ಒಂದು ಸಾಮಾನ್ಯ ಸಂದ ರ್ಭದಲ್ಲಿ ಕೆಲವು ದಿನಗಳಿಗೆ ಮುಂಚೆ ಅವಳಿಗೆ ಗಡೀಪಾರಾಗಿತ್ತು. ಆದರೆ ಶ್ಯಾಮಾಳ ಸಹವಾಸ ಮತ್ತು ಸೇವೆ ಮಧುಸೂದನನಿಗೆ ಅಭ್ಯಾಸವಾಗಿ ಬಿಟ್ಟಿತ್ತು. ಎಲೆಯಡಿಕೆ ತಂಬಾಕು ಇವುಗಳ ಅಭ್ಯಾಸದಂತೆಯೇ ಅಗ್ಗ. ಆದರೆ ಪ್ರಬಲವಾದುದು. ಅದಕ್ಕೆ ಅಡ್ಡಿ ಒದಗಿದರೆ ಮಧುಸೂದನನ ಕೆಲ ಸಕ್ಕೆ ಅಡ್ಡಿ ಒದಗೀತೆಂಬ ಭಯದಿಂದ ಸದ್ಯದಮಟ್ಟಿಗೆ ಶ್ಯಾಮಾಳ ಶಿಕ್ಷೆ ರದ್ದಾಯಿತು. ಆದರೆ ಶಿಕ್ಷೆಯ ಹೆದರಿಕೆ ತಲೆಯ ಮೇಲೆ ತೂಗಾಡು ತ್ತಿತ್ತು.

ತನ್ನ ಈ ಬಗೆಯ ದುರ್ಬಲ ಅಧಿಕಾರದ ಮಧ್ಯೆ ಶ್ಯಾಮಾಸುಂದ ರಿಯ ಮನಸ್ಸಿನಲ್ಲಿ ಕುಮು ಮತ್ತೆ ಯಾವ ವೇಳೆಯಲ್ಲಿ ತನ್ನ ಸಿಂಹಾ ಸನಕ್ಕೆ ಹಿಂದಿರುಗುವಳೋ ಎಂಬ ಹೆದರಿಕೆಯೂ ಇತ್ತು. ಈ ಹೊಟ್ಟೆ ಕಿಚ್ಚಿನ ಹಿಂಸೆಯಿಂದ ಅವಳ ಮನಸ್ಸಿಗೆ ಸ್ವಲ್ಪವೂ ನೆಮ್ಮದಿಯಿರಲಿಲ್ಲ. ಕುಮುವಿಳೊಡನೆ ಪೈಪೋಟಿ ಮಾಡುವುದು ತನ್ನಿಂದ ಸಾಧ್ಯವೇ ಇಲ್ಲ ವೆಂದೂ, ಅವರಿಬ್ಬರೂ ಒಂದು ಸಮದಲ್ಲಿ ನಿಂತಿಲ್ಲವೆಂಬುದನ್ನೂ ಅವಳು ಬಲ್ಲಳು. ಕುಮು ಮಧುಸೂದನನ ಅಧಿಕಾರಕ್ಕೆ ಸಿಕ್ಕಿದವಳು. ಅದ ರಿಂದಲೇ ಅವಳ ಬಲ ಹೆಚ್ಚು. ಮತ್ತೆ ಶ್ಯಾಮಾ ಎಷ್ಟರ ಮಟ್ಟಿಗೆ ಮಧು ಸೂದನನ ಅಧಿಕಾರದಲ್ಲಿ ಇರುವವಳೆಂದರೆ, ಅವಳಿಂದ ಉಪಯೋಗ ಮಾತ್ರವಿದ್ದಿತೇ ಹೊರತು ಅವಳಿಗೆ ಬೆಲೆಯಿರಲಿಲ್ಲ. ಈ ವಿಷಯವಾಗಿ ಶ್ಯಾಮಾ ಬಹಳವಾಗಿ ಅತ್ತಿದ್ದಳು. ಎಷ್ಟೋ ಸಲ ನಾನು ಸತ್ತರೆ ನೆಮ್ಮದಿ

ಎಂದು ಅಂದುಕೊಂಡಿರುವಳು. ಇಷ್ಟು ಹೆಚ್ಚಾಗಿ ಅಗ್ಗವೇಕಾದೆ ಎಂದು ಕೆನ್ನೆಗೆ ಹೊಡೆದುಕೊಂಡಿರುವಳು. ಅನಂತರ ಯೋಚಿಸಿ ಅಗ್ಗವಾದ್ದರಿಂದಲೆ ಸ್ಥಳ ಪಡೆದೆ. ಯಾವ ಪದಾರ್ಥಕ್ಕೆ ಬೆಲೆ ಹೆಚ್ಚೋ ಅದರ ಆದರವೂ ಹೆಚ್ಚು. ಯಾವುದು ಅಗ್ಗವೋ ಅದು ಅಗ್ಗವೆಂದೇ ಗೆಲ್ಲುವುದು —ಎಂದು ಅಂದುಕೊಂಡಳು.

ಮಧುಸೂದನ ಶ್ಯಾಮಾಳನ್ನು ವಶಪಡಿಸಿಕೊಳ್ಳದಿದ್ದಾಗ ಶ್ಯಾಮಳಿಗೆ ಇಷ್ಟೊಂದು ಅಸಹನೀಯ ದುಃಖವಿರಲಿಲ್ಲ. ಅವಳು ತನ್ನ ಅದೃಷ್ಟವನ್ನು ಒಂದು ವಿಧವಲ್ಲಿ ಒಪ್ಪಿಕೊಂಡುಬಿಟ್ಟಿದ್ದಳು. ನಡುನಡುವೆ ಅದೃಷ್ಟ ಒದಗಿಸಿದ ಸಾಮಾನ್ಯ ಪಡಿತರವೇ ಯಥೇಷ್ಟವೆಂದು ಎಣಿಸಿದ್ದಳು. ಈಗ ಅಧಿಕಾರ ಹೊಂದಿರುವುದು ಅಥವಾ ಹೊಂದಿಲ್ಲದಿರುವುದರಲ್ಲಿ ಸಾಮಂಜಸ್ಯ ಕಾಣುತ್ತಿರಲಿಲ್ಲ. "ಹೋದೀತು ಹೋದೀತು" ಎಂಬ ಹೆದರಿಕೆಯಿಂದ ಮನಸ್ಸು ಕಳವಳಗೊಂಡಿತ್ತು. ಅದೃಷ್ಟದ "ರೈಲ್‌ಕಂಬಿ" ಅದೆಷ್ಟು ದೃಢವಿಲ್ಲದೆ ಹಾಸಿತ್ತೆಂದರೆ ಗಾಡಿ ಕಂಬಿ ಬಿಡುವ ಭಯ ಸದಾ ಎಲ್ಲೆಡೆಯಲ್ಲೂ ಇದ್ದೇ ಇತ್ತು. ಮೋತಿಯ ತಾಯಿಯ ಬಳಿ ಮನಬಿಚ್ಚಿ ಮಾತನಾಡಿ ಸಮಾಧಾನ ಹೊಂದಲು ಒಮ್ಮೆ ಪ್ರಯತ್ನಿಸಿದ್ದಳು. ಅವಳು ಸ್ವಲ್ಪ ರೋಷದೊಡನೆ ತಲೆ ಕೊಡವಿಕೊಂಡು ಸರಿದುಹೋದಳು. ಮುಯ್ಯಿ ತೀರಿಸಿಕೊಳ್ಳಲು ಎಡೆಯೇನಾದರೂ ಇದ್ದ ಪಕ್ಷಕ್ಕೆ ತೀರಿಸಿಕೊಳ್ಳುತ್ತಿದ್ದಳು. ಆದರೆ ಸಂಸಾರ ನಡೆಸುವ ವಿಷಯದಲ್ಲಿ ಮಧುಸೂದನನ ಬಳಿ ಮೋತಿಯ ತಾಯಿಗೆ ಬೆಲೆ ಇದೆಯೆಂಬುದನ್ನೂ ಅಲ್ಲಿ ಎಳ್ಳಷ್ಟೂ ಬದಲಾವಣೆಗೆ ಸಾಧ್ಯವಿಲ್ಲವೆಂಬುದನ್ನೂ ತಿಳಿದಿದ್ದಳು. ಆ ಸಮಯದಿಂದಲೇ ಇಬ್ಬರಿಗೂ ಮಾತುಕತೆ ಇರಲಿಲ್ಲ. ಸಾಧ್ಯವಾದರೆ ಮುಖ ನೋಡುತ್ತಲೂ ಇರಲಿಲ್ಲ. ಇದೇ ರೀತಿಯಲ್ಲಿ ಈ ಮನೆಯಲ್ಲಿ ಶ್ಯಾಮಾಳ ಸ್ಥಾನ ಹಿಂದೆ ಇದ್ದುದಕ್ಕಿಂತ ಇನ್ನೂ ಕುಗ್ಗಿ ಹೋಗಿತ್ತು. ಎಲ್ಲೂ ಅವಳಿಗೆ ಸ್ವಲ್ಪವೂ ಸ್ವಚ್ಛಂದತೆ ಇರಲಿಲ್ಲ.

ಇಂತಹ ಸಮಯದಲ್ಲಿ ಒಂದು ದಿನ ಸಂಜೆಯಲ್ಲಿ ಮಲಗುವ ಮನೆಗೆ ಬಂದು ನೋಡಿದಾಗ ಮೇಜಿನ ಮೇಲುಗಡೆ ಗೋಡೆಗೆ ತಗುಲಿ ಹಾಕಿದ್ದ ಕುಮುದಿನಿ ಪಟವನ್ನು ಕಂಡಳು. ಯಾವ ಸಿಡಿಲು ತಲೆಯ ಮೇಲೆ ಬಡಿ

ಯಲಿತ್ತೋ ಅವರ ಮಿಂಚಿನ ಕಾವು ಅವಳ ಕಣ್ಣನ್ನು ಕೋರೈಸಿತು. ಗಾಳ ಚುಚ್ಚಿಕೊಂಡಿರುವ ಮೀನಿನಂತೆ ಅವಳ ಎದೆ ಥರಥರಗುಟ್ಟಿತು. ಬಲವಂತವಾಗಿ ಚಿತ್ರದಿಂದ ದೃಷ್ಟಿಯನ್ನು ಸರಿಸಲೆತ್ನಿಸಿದಳು. ಸಾಧ್ಯ ವಾಗಲಿಲ್ಲ. ನಟ್ಟ ದೃಷ್ಟಿಯಿಂದ ನೋಡುತ್ತಿದ್ದಳು. ಮುಖದ ಬಣ್ಣ ಕೆಟ್ಟಿತು. ಎರಡು ಕಣ್ಣುಗಳಲ್ಲೂ ಆತುರ. ಮುಷ್ಟಿ ಬಿಗಿಯಾಗಿ ಹಿಡಿ ದಿದ್ದಳು. ಏನಾದರೂ ಒಂದನ್ನು ಒಡೆಯಬೇಕು, ಏನಾದರೊಂದನ್ನು ಹರಿಯಬೇಕು ಎಂದೆನಿಸಿತು. ಈ ಕೊಟಡಿಯಲ್ಲಿದ್ದರೆ ಏನಾದರೊಂದು ನಷ್ಟ ಆದೀತೆಂದು ಹೆದರಿ ಹೊರಗೆ ಓಡಿಹೋದಳು. ತನ್ನ ಕೊಟಡಿಗೆ ಹೋಗಿ ಹಾಸಿಗೆಯ ಮೇಲೆ ಬೋರಲಾಗಿ ಬಿದ್ದುಕೊಂಡು ಮಗ್ಗುಲು ಹಾಸಿಗೆಯನ್ನು ತುಂಡು ತುಂಡಾಗಿ ಹರಿದೆಸೆದಳು.

ರಾತ್ರಿಯಾಯಿತು. ಹೊರಗಿನಿಂದ ಆಳು, ಮಹಾರಾಜರು ಮಲ ಗುವ ಮನೆಗೆ ಬರಹೇಳಿದ್ದರೆಂದು ಹೇಳಿದ. ಬಾರನೆಂದು ಹೇಳುವ ಧೈರ್ಯವಿಲ್ಲ. ಅವಸರ ಅವಸರವಾಗಿ ಎದ್ದು ಬಾಟಾ ಹಾಕಿದ್ದ ಢಾಕಾ ಸೀರೆಯೊಂದನ್ನು ಉಟ್ಟು ಮೈಗೆ ಸ್ವಲ್ಪ ಗಂಧ ಹಚ್ಚಿಕೊಂಡು ಮಲಗುವ ಮನೆಗೆ ಹೋದಳು. ಹೋದಾಗ ಪಠ ತನ್ನ ದೃಷ್ಟಿಗೆ ಬೀಳದಿರಲೆಂದು ಅವಳ ಪ್ರಯತ್ನ. ಆದರೆ ನೆಟ್ಟಗೆ ಆ ಪಠಕ್ಕೆ ನೇರವಾಗಿಯೇ ದೀಪ ವಿತ್ತು ಅಷ್ಟು ಬೆಳಕೂ ಯಾರದೋ ದೀಪ್ತ ದೃಷ್ಟಿಯಂತೆ ಆ ಪಠವನ್ನು ಎತ್ತಿ ತೋರಿಸುತ್ತಿದೆ ಅನ್ನಿಸಿತು. ಇಡೀ ಕೋಣೆಯಲ್ಲಿ ಆ ಪಠವೇ ಎಲ್ಲಕ್ಕಿಂತ ಹೆಚ್ಚಾಗಿ ಕಣ್ಣಿಗೆ ಕಾಣಿಸುತ್ತಿತ್ತು. ಶ್ಯಾಮಾ ಪದ್ಧತಿಯಂತೆ ಎಲೆಯಡಿಕೆ ಅಣಿಮಾಡಿ ಮಧುಸೂದನನಿಗೆ ವೀಳ್ಯ ಕೊಟ್ಟಳು. ಅನಂತರ ಕಾಲದೆಸೆಯಲ್ಲಿ ಕುಳಿತು ಕಾಲು ಒತ್ತಲಾರಂಭಿಸಿದಳು. ಯಾವ ಕಾರಣ ದಿಂದಲೋ ಏನೋ ಮಧುಸೂದನ ಇಂದು ಸಂತೋಷದಿಂದಿದ್ದ. ವಿಲಾ ಯತಿ ಸಾಮಾನಿನ ಅಂಗಡಿಯಿಂದ ಬೆಳ್ಳಿಯ ಫೋಟೋ ಫ್ರೇಮ್ ಒಂದನ್ನು ಕೊಂಡು ತಂದಿದ್ದ. ಗಂಭೀರ ಭಾವದಲ್ಲಿ ಶ್ಯಾಮಳಿಗೆ “ ಇದನ್ನು ತೆಗೆದುಕೊ ” ಎಂದ. ಶ್ಯಾಮಾಳಿಗೆ ಪ್ರೀತಿ ತೋರುವ ವೇಳೆಯಲ್ಲೂ ಮಧುಸೂದನ ಮಧುರರಸ ಹರಿಸುವುದರಲ್ಲಿ ಜಿಪುಣತನ ತೋರುತ್ತಿದ್ದ. ಯಾಕೆಂದರೆ ಅವಳಿಗೆ ಸ್ವಲ್ಪ ಎಡೆಕೊಟ್ಟರೂ ಅನಂತರ ಮರ್ಯಾದೆ

ಉಳಿಸಿಕೊಳ್ಳುವುದು ಅಸಾಧ್ಯವೆಂದು ಅವನು ತಿಳಿದಿದ್ದ. ಚೌಕಟ್ಟನ್ನು ಕತ್ತೆ ಕಾಗದದಲ್ಲಿ ಸುತ್ತಿತ್ತು. ಮೆಲ್ಲಮೆಲ್ಲನೆ ಕಾಗದದ ಹೊದಿಕೆ ತೆರೆದು. "ಇದನ್ನು ಏನು ಮಾಡಬೇಕು ?" ಎಂದಳು.

ಮಧುಸೂದನ "ತಿಳಿಯದೇನು, ಇದರಲ್ಲಿ ಫೋಟೋ ಇಡಬಹುದು" ಎಂದ.

ಶ್ಯಾಮಾಳ ಹೃದಯವನ್ನು ಯಾರೋ ಚಾವಟಿಯಿಂದ ಹೊಡೆದಂತೆ ಆಯಿತು. "ಯಾರ ಫೋಟೋ ಇಡಲಿ ?" ಎಂದಳು.

"ನಿನ್ನ ಸ್ವಂತದ್ದು. ಆವತ್ತು ಫೋಟೊ ತೆಗೆದಿದೆಯಲ್ಲ."

"ನನಗೆ ಅಂತಹ ಸೌಭಾಗ್ಯದಿಂದ ಉಪಯೋಗವಿಲ್ಲ" ಎಂದು ಹೇಳಿ ಆ ಚೌಕಟ್ಟನ್ನು ನೆಲದ ಮೇಲೆ ಬಲವಾಗಿ ಬಿಸುಟಳು.

ಮಧುಸೂದನ ಆಶ್ಚರ್ಯಗೊಂಡ. "ಇದರ ಅರ್ಥವೇನು" ಎಂದ.

"ಇದರ ಅರ್ಥ ಏನೂ ಇಲ್ಲ" ಎಂದವಳು ಕೈಗಳಿಂದ ಮುಖ ಮುಚ್ಚಿಕೊಂಡು ಅಳತೊಡಗಿದಳು. ಅನಂತರ ಹಾಸಿಗೆಯಿಂದ ಇಳಿದು ನೆಲದ ಮೇಲೆ ಜೋರಲಾಗಿ ಬಿದ್ದುಕೊಂಡು ತಲೆ ಚಚ್ಚಿಕೊಳ್ಳಲಾರಂಭಿಸಿದಳು. "ಕಡಮೆ ಬೆಲೆಯ ಪದಾರ್ಥ ಶ್ಯಾಮಾಳಿಗೆ ಒಪ್ಪಿಗೆಯಾಗಲಿಲ್ಲ. ಬೆಲೆಬಾಳುವ ಒಡವೆ ಯಾವುದೋ ಇದ್ದೀತೆಂದು ಅವಳು ಎಣಿಸಿರಬೇಕು" ಎಂದು ಮಧುಸೂದನ ಯೋಚಿಸಿದ. ಇಡೀ ಹಗಲು ಆಫೀಸಿನ ಕೆಲಸ ಮುಗಿಸಿ ಬಂದ ಮೇಲೆ ಈ ಉಪದ್ರವ ಸ್ವಲ್ಪವೂ ರುಚಿಸಲಿಲ್ಲ. ಇದು ಪ್ರಾಯಶಃ ಮೆದುಳಿನವ್ಯಾಧಿಯಿರಬೇಕು. ಮೆದುಳಿನ ವ್ಯಾಧಿಯೆಂದರೆ ಅವನಿಗೆ ಬಹಳ ಅವಜ್ಞೆ. ಬಲವಾಗಿ ಗದರಿಸಿ "ಏಳು. ಈಗಲೇ ಏಳು" ಎಂದ.

ಶ್ಯಾಮಾ ಎದ್ದು ವೇಗವಾಗಿ ಕೋಣೆಯಿಂದ ಹೊರಗೆ ಹೋದಳು. ಮಧುಸೂದನ "ಇದೆಲ್ಲ ಖಂಡಿತ ನಡೆಯದು" ಎಂದ.

ಮಧುಸೂದನ ಶ್ಯಾಮಾಳನ್ನು ಚೆನ್ನಾಗಿಯೇ ಅರಿತಿದ್ದ. "ಸ್ವಲ್ಪ ಹೊತ್ತಿನ ಅನಂತರವೇ ಹಿಂದಿರುಗಿ ಬಂದು ಕಾಲಡಿಯಲ್ಲಿ ಹೊರಳಾಡಿ

ಕ್ಷಮೆ ಬೇಡುವಳು, ಆ ಸಮಯದಲ್ಲಿ ಕಟುವಾಗಿ ನಾಲ್ಕು ಮಾತು ಹೇಳ ಬೇಕು" ಎಂದು ಅಂದುಕೊಂಡ.

ಹತ್ತು ಘಂಟೆಯಾಯಿತು. ಶ್ಯಾಮಾ ಬರಲಿಲ್ಲ. ಮತ್ತೊಮ್ಮೆ ಶ್ಯಾಮಾಳ ಕೊಟಡಿಯ ಬಾಗಿಲಲ್ಲಿ "ಮಹಾರಾಜರು ಕರೆಯುತ್ತಾರೆ" ಎಂದು ಆಳು ಕೂಗು ಹಾಕಿದ.

ಶ್ಯಾಮಾ "ನನಗೆ ಮೈ ನೆಟ್ಟಗಿಲ್ಲವೆಂದು ಮಹಾರಾಜರಿಗೆ ಹೇಳು" ಎಂದಳು.

ಮಧುಸೂದನ "ಪ್ರತಿಷ್ಠೆ ಕಡಮೆಯೇನೂ ಇಲ್ಲ. ಅಪ್ಪಣೆ ಮಾಡಿ ದರೆ ಬರುವುದಿಲ್ಲ" ಎಂದು ಯೋಚಿಸಿದ.

ಇನ್ನು ಸ್ವಲ್ಪ ಹೊತ್ತಾದ ಮೇಲೆ ಬರುವಳೆಂದು ತೀರ್ಮಾನಿಸಿದ್ದ. ಆಗಲೂ ಬರಲಿಲ್ಲ. ಹನ್ನೊಂದು ಹೊಡೆಯಲು ಹದಿನೈದು ನಿಮಿಷ ಉಳಿದಿತ್ತು. ಹಾಸಿಗೆ ಬಿಟ್ಟು ಮಧುಸೂದನ ಬಿರುಸಾದ ನಡಗೆಯಲ್ಲಿ ಶ್ಯಾಮಾಳ ಕೋಣೆಗೆ ಹೋಗಿ ನುಗ್ಗಿದ. ಕೋಣೆಯಲ್ಲಿ ದೀಪವಿರಲಿಲ್ಲ. ಕತ್ತಲೆಯಲ್ಲಿ ಶ್ಯಾಮಾ ನೆಲದ ಮೇಲೆ ಬಿದ್ದಿದ್ದುದು ಚೆನ್ನಾಗಿ ಕಾಣಿಸಿತು. ಇದೆಲ್ಲ ಕೇವಲ ಆದರ ಕಸಿಯುವುದಕ್ಕಾಗಿ ವೇಷ ಎಂದು ಮಧುಸೂದನ ನಿರ್ಧರಿಸಿದ.

ಗರ್ಜನೆಯ ದನಿಯಲ್ಲಿ "ಎದ್ದು ಬಾ, ಹೇಳಿದ್ದೇನೆ. ಶೀಘ್ರವಾಗಿ ಎದ್ದು ಬಾ. ಮೂರ್ಖತನ ತೋರಬೇಡ" ಎಂದ.

ಶ್ಯಾಮಾ ಏನೂ ಹೇಳದೆ ಎದ್ದು ಹೊರಟಳು.

## ೫೪

ಮರುದಿನ ಆಫೀಸಿಗೆ ಹೋಗುವ ಮುಂಚೆ ಊಟವಾದ ಮೇಲೆ ಮಲಗುವ ಮನೆಗೆ ವಿಶ್ರಮಿಸಿ ಕೊಳ್ಳಲು ಬಂದೊಡನೆ ಮಧುಸೂದನ ಪತ ಇಲ್ಲದುದನ್ನು ಕಂಡ. ಇತರ ದಿನಗಳಂತೆ ಇಂದು ಶ್ಯಾಮಾ ಮಧುಸೂದನ ನಿಗೆ ಉಪಚರಿಸಲು ಮುಂದಾಗಿ ಬಂದಿರಲಿಲ್ಲ ಅವಳನ್ನು ಕರೆಯ ಕಳುಹಿದ. ಸ್ವಲ್ಪ ಬಿಗುಮಾನದೊಡನೆಯೇ ಅವಳು ಬಂದದ್ದು ಅರಿವಾಯಿತು.

ಮಧುಸೂದನ "ಮೇಜಿನ ಮೇಲಿದ್ದ ಪಟ ಏನಾಯಿತು" ಎಂದು ಕೇಳಿದ.

ಶ್ಯಾಮಾ ಅತ್ಯಂತ ವಿಸ್ಮಯದ ವೇಷತಾಳಿ "ಪಠ! ಯಾರಪಠ?" ಎಂದಳು.

ವೇಷದ ಆಳತೆ ಸ್ವಲ್ಪ ಹೆಚ್ಚೇ ಆಯಿತು. ಸಾಮಾನ್ಯವಾಗಿ ಗಂಡಸರ ಬುದ್ಧಿಯ ವಿಷಯದಲ್ಲಿ ಹೆಂಗಸರಿಗೆ ಅಶ್ರದ್ಧೆ ಇದೆಯೆಂದೇ ಇದು ಸಾಧ್ಯವಾಗಿತ್ತು.

ಮಧುಸೂದನ ಕೋಪದ ದನಿಯಲ್ಲಿ "ಪಠ ನೋಡಲಿಲ್ಲವೆ?" ಎಂದ.

ಶ್ಯಾಮಾ ಏನೂ ಅರಿಯದವಳಂತೆ "ಇಲ್ಲವಲ್ಲ ಕಾಣೆನಲ್ಲ" ಎಂದಳು.

ಮಧುಸೂದನ ಗರ್ಜಿಸುತ್ತ "ಸುಳ್ಳು ಹೇಳುತ್ತೀಯೆ" ಎಂದ.

"ಸುಳ್ಳು ಏಕೆ ಹೇಳಲಿ. ಪಠತೆಗೆದುಕೊಂಡು ನಾನೇನು ಮಾಡಲಿ?"

"ಎಲ್ಲಿ ಇಟ್ಟಿರುವೆ? ತೆಗೆದುಕೊಂಡು ಬಾ. ಹೇಳಿದ್ದೇನೆ ನೋಡು! ಇಲ್ಲದಿದ್ದರೆ ಒಳ್ಳೆಯದಾಗದು."

"ಅಮ್ಮಾ ಇದೆಲ್ಲಿಯ ಆಪತ್ತು. ನಿನ್ನ ಪಠ ನಾನೆಲ್ಲಿ ಕಾಣಲಿ? ಹೋಗಿ ತಂದಿಡುವುದಕ್ಕೆ"

ಆಳನ್ನು ಕರೆದ. ಮಧುಸೂದನ "ಚಿಕ್ಕ ಬಾಂಬುಗಳನ್ನು ಕರೆ" ಎಂದು ಅವನಿಗೆ ಹೇಳಿದ.

ನವೀನ ಬಂದ. ಮಧುಸೂದನ ಅವನಿಗೆ "ದೊಡ್ಡ ಯಜಮಾನಿಯನ್ನು ಕರೆದುಕೊಂಡು ಬಾ" ಎಂದ.

ಶ್ಯಾಮಾ ಮುಖ ಸೊಟ್ಟಗೆ ಮಾಡಿಕೊಂಡು ಮರದ ಬೊಂಬೆಯಂತೆ ಕದಲದೆ ನಿಂತಿದ್ದಳು.

ನವೀನ ಸ್ವಲ್ಪ ಹೊತ್ತಾದ ಮೇಲೆ ತಲೆ ಕೆರೆದುಕೊಳ್ಳುತ್ತ "ಅಣ್ಣಾ, ಅವರ ಮನೆಗೆ ಒಮ್ಮೆ ನೀನೇ ಸ್ವತಃ ಹೋಗುವುದು ಉಚಿತವಲ್ಲವೆ?

ನೀನೇ ಸ್ವತಃ ಹೋಗಿ ಕರೆದರೆ ಅತ್ತಿಗೆ ಬಹಳ ಸಂತೋಷಪಡುವಳು" ಎಂದ.

ಮಧುಸೂದನ ಗಂಭೀರಭಾವದಿಂದ ಸ್ವಲ್ಪ ಹೊತ್ತು ಗುಡುಗುಡಿ ಸೇದುತ್ತಿದ್ದು "ಒಳ್ಳೆಯದು. ನಾಳೆ ಭಾನುವಾರವಾಗಿದೆ. ನಾಳೆ ಹೋಗುತ್ತೇನೆ" ಎಂದ.

ನವೀನ ಮೋತಿಯಬಾಯಿಯ ಹತ್ತಿರ ಬಂದವನು "ಒಂದು ಕೆಲಸ ಮಾಡಿ ಬಿಟ್ಟಿದ್ದೇನೆ" ಎಂದ.

"ನನ್ನ ಅಭಿಪ್ರಾಯ ಕೇಳದೆಯೇ ?"

"ಅಭಿಪ್ರಾಯ ಕೇಳಲು ಅವಕಾಶವಿರಲಿಲ್ಲ."

"ಹಾಗಾದರೆ ನೀನು ಪಶ್ಚಾತ್ತಾಪ ಪಡಬೇಕಾಗುವುದೆಂದು ಗೊತ್ತಾಗುತ್ತೆ."

"ಅಸಂಭವವಲ್ಲ. ಜಾತಕದಲ್ಲಿ ನನ್ನ ಬುದ್ಧಿಯ ಸ್ಥಾನದಲ್ಲಿ ಬೇರೆ ಯಾವ ಗ್ರಹವೂ ಇಲ್ಲ. ಕೇವಲ ಸ್ವಂತ ಹೆಂಡತಿ ಇರುವಳು. ಅದಕ್ಕಾಗಿಯೇ ನಿನ್ನನ್ನು ಸದಾ ಹತ್ತಿರ ಇಟ್ಟುಕೊಂಡೇ ಮುಂದುವರಿಯುತ್ತಿರುವೆ. ವಿಷಯ ಇಷ್ಟೇ. ಅಣ್ಣ ಇವತ್ತು ಅತ್ತಿಗೆಯನ್ನು ಕರೆಕೊಂಡು ಬರುವಂತೆ ಅಪ್ಪಣೆ ಮಾಡಿದರು. ನಾನು ತಟ್ಟನೆ "ನೀನೇ ಸ್ವತಃ ಒಂದಾವರ್ತಿಹೋಗಿ ಬಂದರೆ ಉತ್ತಮ" ಎಂದೆ. ಅಣ್ಣನ ಮನೋಭಾವ ಹೇಗಿತ್ತೋ ಏನೋ, ಒಪ್ಪಿಕೊಂಡು ಬಿಟ್ಟರು. ಅನಂತರ, ಇದರ ಫಲ ಏನಾಗುವುದು ಎಂದು ಯೋಚಿಸುತ್ತಿರುವೆ."

"ಒಳ್ಳೆಯದಾಗದು. ವಿಪ್ರದಾಸ ಬಾಬುಗಳ ಭಾವವಿದ್ದ ಬಗೆ ನೋಡಿದ್ದರಲ್ಲಿ ಏನೋ ಹೇಳಹೋಗಿ ಏನೋ ಹೇಳುವರು. ಕೊನೆಗೆ ಕುರುಕ್ಷೇತ್ರದ ಯುದ್ಧ ಪ್ರಾರಂಭವಾಗುವುದು. ಇಂತಹ ಕೆಲಸ ಮಾಡಿದೆಯೇಕೆ ?"

"ಮೊದಲನೆಯ ಕಾರಣ, ಬುದ್ಧಿಯ ಭರಣಿ ಆ ಸಮಯದಲ್ಲಿ ಬರಿಯದಾಗಿತ್ತು. ನೀನು ಬೇರೆ ಕಡೆಯಲ್ಲಿದ್ದೆ. ಎರಡನೆಯದು, ಅವತ್ತು ಅತ್ತಿಗೆ ನಾನು ಬರುವುದಿಲ್ಲ ಎಂದು ಹೇಳಿದಳಲ್ಲ ಅದರ ಗೂಢಾರ್ಥವನ್ನು ಅರಿತೆ. ಅವರ ಅಣ್ಣ ಖಾಯಿಲೆಯ ಮೈಯೊಡನೆ ಕಲ್ಕತ್ತೆಗೆ ಬಂದರು.

ಆಗಲೂ ಒಂದು ದಿನವಮಟ್ಟಿಗಾದರೂ ಮಹಾರಾಜರು ಅವರನ್ನು ನೋಡಲು ಹೋಗಲಿಲ್ಲ. ಈ ಅನಾದರ ಅವಳ ಮನಸ್ಸನ್ನು ಎಲ್ಲಕ್ಕೂ ಹೆಚ್ಚಾಗಿ ಚುಚ್ಚುತ್ತಿತ್ತು."

ಇದನ್ನು ಕೇಳಿದೊಡನೆ ಮೋತಿಯತಾಯಿ ಸ್ವಲ್ಪ ಬೆಚ್ಚಿ ಬಿದ್ದಳು. ವಿಷಯ ತನಗೇಕೆ ಮುಂಚೆ ಹೊಳೆಯಲೇ ಇಲ್ಲ ಎಂದು ಅವಳಿಗೆ ಆಶ್ಚರ್ಯವಾಯಿತು. ವಾಸ್ತವದಲ್ಲಿ ತನಗೆ ಅರಿವಿಲ್ಲದೆಯೇ ಅತ್ತೆಯಮನೆಯ ದೊಡ್ಡಸ್ತಿಕೆಯನ್ನು ಕಂಡು ಅವಳಲ್ಲಿ ಒಂದು ಬಗೆಯ ಹೆಮ್ಮೆ ನೆಲಸಿತ್ತು. ಇತರ ಸಾಮಾನ್ಯ ಜನರಂತೆಯೇ ಮಹಾರಾಜ ಮಧುಸೂದನನಿಗೂ ನೆಂಟಸ್ತಿಕೆಯ ಹೊಣೆಯಿದೆಯೆನ್ನುವ ವಿಷಯ ಅವಳಿಗೇಕೆ ಹೊಳೆಯಲಿಲ್ಲ ಎನ್ನಿಸಿತು.

ನವೀನ ಬಂದು ಮಾತನ್ನು ಮುಂದುವರಿಸಿ "ಸ್ವಂತ ಬುದ್ಧಿಯಿಂದಾಗಿದ್ದರೆ ಈ ವಿಷಯ ನನಗೆ ನೆನಪಾಗುತ್ತಿರಲಿಲ್ಲ. ನೀನೇ ನನಗೆ ನೆನಪು ಮಾಡಿಕೊಟ್ಟಿದ್ದೆ" ಎಂದು ಹೇಳಿದ.

"ಯಾವ ವಿಧದಲ್ಲಿ ಹೇಳು ನೋಡೋಣ?"

"ಅದೇ ಮತ್ತೆ, ಆ ದಿನ ಹೇಳಿದ್ದೆಯಲ್ಲ; ನೆಂಟಸ್ತಿಕೆಯ ಹೊಣೆ ಆತ್ಮಗೌರವದ ಹೊಣೆಗಿಂತ ದೊಡ್ಡದು ಎಂದು. ಅದರಿಂದಲೇ ಮಹಾರಾಜರಂತಹ ಅಷ್ಟು ದೊಡ್ಡ ವ್ಯಕ್ತಿಗೂ ವಿಪ್ರದಾಸ ಬಾಬುಗಳನ್ನು ನೋಡಲು ಹೋಗುವುದು ಉಚಿತ ಎಂದು ಮನಸ್ಸಿಗೆ ಹೊಳೆಯಿತು."

ಮೋತಿಯತಾಯಿ ಸೋಲನ್ನೊಪ್ಪಲು ಸಿದ್ಧಳಾಗಿರಲಿಲ್ಲ. ಮಾತನ್ನು ಹಾರಿಸಿ ಬಿಡಲು "ಕೆಲಸದ ವೇಳೆಯಲ್ಲಿ ಇಷ್ಟೊಂದು ಹೆಚ್ಚಿನ ಮಾತು ಹೇಳಲೂ ಸಾಧ್ಯವಿದೆಯಲ್ಲವೆ! ಏನು ಮಾಡುವುದು ಉಚಿತ ಎನ್ನುವುದನ್ನು ಮೊದಲು ಯೋಚಿಸು ನೋಡೋಣ" ಎಂದಳು.

"ಪ್ರಾರಂಭದಲ್ಲೇ ಎಲ್ಲ ವಿಷಯದ ಕೊನೆಯನ್ನು ಯೋಚಿಸಲು ಹೋದರೆ ಎಡವಬೇಕಾಗುವುದು. ಅಲ್ಪಸ್ವಲ್ಪವಾಗಿ ಯೋಚನೆಮಾಡುವುದು ಉಚಿತ. ಅಣ್ಣ ವಿಪ್ರದಾಸ ಬಾಬುಗಳನ್ನು ನೋಡಲು ಹೋಗುವುದು ಮೊದಲ ಕರ್ತವ್ಯ. ನೋಡಲು ಹೋದರೆ ಅದರ ಫಲ ಏನಾಗ

ಬಹುದು, ಅದಕ್ಕೆ ಉಪಾಯವೇನು ಎಂದು ಈಗಲೇ ಯೋಚಿಸತೊಡ ಗಿದರೆ ಅದರಿಂದ ಚಿಂತೆ ಹೆಚ್ಚುವುದಲ್ಲದೆ ಬೇರೇನೂ ಫಲವಿಲ್ಲ.''

"ಏಕೋ ಏನೋ ಗೊಂದಲವಾಗುವುದೆಂದು ನನಗೆ ಅನ್ನಿಸುತ್ತಿದೆ."

ஐஐ

ಆ ದಿನ ಬೆಳಗ್ಗೆ ಬಹಳ ಹೊತ್ತಿನಿಂದ ಕುಮು ಅಣ್ಣನ ಕೊಟಡಿ ಯಲ್ಲಿ ಕುಳಿತು ಹಾಡುತ್ತಿದ್ದಳು. ಉದಯರಾಗದಲ್ಲಿ ಆತ್ಮವೇದನೆ ವಿಶ್ವದ ಸ್ವತ್ತಾಗಿ ಅಸೀಮರೂಪದಲ್ಲಿ ಕಾಣಿಸುವುದು. ಅದರ ಬಂಧನ ಮುಕ್ತ ವಾಗುವುದು. ಸರ್ಪಗಳು ಮಹಾದೇವನ ಭೂಷಣವಾಗಿ ಸೊಬಗನ್ನು ಪಡೆಯುವಂತೆ ವ್ಯಥೆಯ ನದಿಗಳು ವ್ಯಥೆಯ ಸಮುದ್ರವನ್ನು ಸೇರಿ ಅಪಾರ ವಾದ ವಿಶ್ರಾಂತಿಯನ್ನು ಹೊಂದುವವು. ಅವುಗಳ ರೂಪಮಾರ್ಪಡು ವುದು. ಚಂಚಲತೆ ಗಂಭೀರತೆಯಲ್ಲಿ ಅಡಗಿಹೋಗುವುದು. ವಿಪ್ರದಾಸ ನಿಟ್ಟುಸಿರುಬಿಟ್ಟು "ಸಂಸಾರದಲ್ಲಿ ಕ್ಷುದ್ರವಾದ ಕಾಲವೇ ಸತ್ಯವಾಗಿ ಕಾಣಿಸಿಕೊಳ್ಳುವುದು. ಕುಮೂ, ಚಿರಕಾಲ ಎನ್ನುವುದು ಮರೆಯಲ್ಲಿರು ವುದು. ಸಂಗೀತದಲ್ಲಿ ಚಿರಕಾಲವೇ ಪ್ರತ್ಯಕ್ಷವಾಗುವುದು. ಕ್ಷುದ್ರಕಾಲ ತುಚ್ಛವಾಗಿ ಹೋಗುವುದು. ಅದರಿಂದಲೇ ಮನಸ್ಸು ನೆಮ್ಮದಿಯನ್ನು ಹೊಂದುವುದು" ಎಂದನು.

ಈ ಸಮಯದಲ್ಲಿ ಮಹಾರಾಜಾ ಮಧುಸೂದನರು ಬಂದಿರುವರು, ಎಂದು ಸುದ್ದಿ ಬಂದಿತು

ಮುಹೂರ್ತ ಮಾತ್ರದಲ್ಲಿ ಕುಮುವಿನ ಮುಖ ಕಳೆಗುಂದಿತು. ಅದನ್ನು ನೋಡಿ ವಿಪ್ರದಾಸನ ಮನಸ್ಸಿಗೆ ಬಹಳ ನೋವಾಯಿತು. "ಕುಮು, ನೀನು ಒಳಕ್ಕೆಹೋಗು. ಒಂದು ಸಮಯ ನಿನ್ನ ಆವಶ್ಯಕತೆಯಿರದು'' ಎಂದ.

ಕುಮು ವೇಗ ವೇಗವಾಗಿ ಒಳಕ್ಕೆ ಹೋದಳು. ಮಧುಸೂದನ ಬೇಕೆಂದೇ ಮುಂದಾಗಿ ತಿಳಿಸದೆ ಬಂದಿದ್ದ. ಇವರ ಮನೆಯವರಿಗೆ ತಮ್ಮ ಬಡತನವನ್ನು ಮುಚ್ಚಲು ಅವಕಾಶ ಸಿಕ್ಕಕೂಡದೆಂಬುದೇ ಅವನ ಉದ್ದೇಶ. ದೊಡ್ಡಮನೆಯವರೆಂದು ವಿಪ್ರದಾಸನಿಗೆ ಒಂದು ಬಗೆಯ ದೊಡ್ಡಸ್ತಿಕೆ ಇರುವುದೆಂದು ಮಧೂಸೂದನನ ನಂಬಿಕೆ. ಆ ಕಲ್ಪನೆ ಅವನಿಗೆ ಸಹಿಸಲು ಕಷ್ಟವಾಗಿತ್ತು. ಆದ್ದರಿಂದಲೇ ಅವನು ಇಂದು ನೋಡಿ

ಕೊಂಡು ಹೋಗಲು ಬರಲಿಲ್ಲ. ತೋರಿಸಿಕೊಟ್ಟು ಹೋಗಲು ಬಂದಿರುವವನಂತೆ ಬಂದಿದ್ದ.

ಮಧುಸೂದನನ ಉಡಿಗೆ ವಿಚಿತ್ರರೀತಿಯದು. ಮನೆಯ ದಾಸದಾಸಿಯರು ನೋಡಿ ಬೆರಗಾಗುವಂತಹ ವೇಷ. ಗೆರೆಗೆರೆಯ ವಿಲಾಯತಿ ಷರ್ಟಿನ ಮೇಲೆ ಬಣ್ಣಬಣ್ಣದ ಹೂ ಹೆಣೆದ ರೇಷ್ಮೆಯ "ವೆಯಿಸ್ಟ್ ಕೋಟು". ಹೆಗಲ ಮೇಲೆ ಮಡಿಸಿ ಇಸ್ತ್ರಿಮಾಡಿದ ವಲ್ಲಿ. ಜಾಗರೂಕತೆಯಿಂದ ನೆರಿಹಿಡಿದ ಕರೀ ಅಂಚಿನ ಶಾಂತಿಪುರದ ಧೋತಿ. ವಾರ್ನಿಷ್ ಮಾಡಿದ ಕರಿಯ ಬಣ್ಣದ ದರ್ಬಾರ್ ಬೂಟ್ಸು. ದೊಡ್ಡ ದೊಡ್ಡ ವಜ್ರ ಪಚ್ಚೆಯ ಉಂಗುರಗಳಿಂದ ಕೈಬೆರಳುಗಳು ಥಳಥಳಿಸುತ್ತಿದ್ದುವು. ವಿಶಾಲವಾದ ಹೊಟ್ಟೆಯ ಮುಂಭಾಗವನ್ನು ಸುತ್ತುವರಿದ ದಪ್ಪನಾದ ಭಂಗಾರದ ಗಡಿಯಾರದ ಸರಪಣಿ. ಕೈಯಲ್ಲಿ ಒಂದು ಸೊಗಸಾದ ದೊಣ್ಣೆ. ಅದರ ಭಂಗಾರದ ಹಿಡಿ ಆನೆಯ ತಲೆಯ ಆಕೃತಿಯಲ್ಲಿ ಮಾಡಿದ್ದು, ನಾನಾ ರತ್ನಗಳಿಂದ ಅಲಂಕೃತವಾಗಿತ್ತು. ಬಂದು, ಅರ್ಧ ನಮಸ್ಕಾರದ ಸೂಚನೆ ತೋರಿ, ಮಂಚದ ಮಗ್ಗುಲಲ್ಲಿದ್ದ ಒಂದು ಆರಾಮ ಕುರ್ಚಿಯ ಮೇಲೆ ಕುಳಿತು "ಹೇಗಿರುವಿರಿ, ವಿಪ್ರದಾಸ ಬಾಬೂ! ದೇಹಸ್ಥಿತಿ ಅಷ್ಟು ಚೆನ್ನಾಗಿದ್ದಂತೆ ಕಾಣುವುದಿಲ್ಲವಲ್ಲ" ಎಂದ.

ವಿಪ್ರದಾಸ ಅದಕ್ಕೆ ಏನೂ ಉತ್ತರ ಕೊಡದೆ, "ನಿನ್ನ ದೇಹಸ್ಥಿತಿ ಚೆನ್ನಾಗಿಯೇ ಇದೆಯೆಂದು ಕಾಣುತ್ತಿದೆ" ಎಂದ.

"ವಿಶೇಷವಾಗಿ ಚನ್ನೆಂದು ಹೇಳಲಾರೆ. ಸಂಜೆಯ ಹೊತ್ತಿನಲ್ಲಿ ತಲೆ ನೋಯುತ್ತೆ. ಮೇಲಾಗಿ ಹೊಟ್ಟೆ ಹಸಿವೂ ಚೆನ್ನಾಗಿಲ್ಲ. ಊಟ ತಿಂಡಿಯಲ್ಲಿ ಸ್ವಲ್ಪ ಹೆಚ್ಚು ಕಡಮೆಯಾದರೂ ಸಹಿಸಲಾರದಿರುವೆ. ಇದರ ಮೇಲೆ ನಿದ್ರೆಯಿಲ್ಲದೆಯೂ ಆಗಾಗ್ಗೆ ಸಂಕಟ ಪಡುತ್ತಿರುವೆ. ಅದೇ ಎಲ್ಲಕ್ಕಿಂತ ಹೆಚ್ಚು ಸಂಕಟಕರವಾಗಿದೆ."

ಶುಶ್ರೂಷೆ ಮಾಡುವ ಜನರ ಆವಶ್ಯಕತೆ ಸರ್ವದಾ ಇದೆ ಎನ್ನುವುದರ ಪೀಠಿಕೆ ಹಾಕಿದಂತಾಯಿತು.

ವಿಪ್ರದಾಸ "ಆಫೀಸಿನ ಕೆಲಸಕ್ಕಾಗಿ ಹೆಚ್ಚು ದುಡಿಯಬೇಕಾಗುವು ದೆಂದು ಕಾಣುತ್ತೆ" ಎಂದ.

"ಅಂಥಾದ್ದೇನೂ ಇಲ್ಲ. ಆಫೀಸಿನ ಕೆಲಸಕಾರ್ಯ ತಾನಾಗಿ ನಡೆದುಕೊಂಡು ಹೋಗುತ್ತೆ. ನಾನು ಅಷ್ಟಾಗಿ ಏನೂ ಮಾಡಬೇಕಾ ಗಿರದು. ಮ್ಯಾಕಿನ್‌ಟನ್ ಸಾಹೇಬನ ಮೇಲೆಯೇ ಹೆಚ್ಚು ಭಾಗ ಕೆಲಸದ ಹೊಣೆಯೆಲ್ಲ ಬಿದ್ದಿರುತ್ತದೆ. ಸರ್ ಆರ್ಥರ್ ಪೀಬಾಡಿಯೂ ನನಗೆ ಬಹಳ ನೆರವಾಗುವರು."

ಗುಡುಗುಡಿ ಬಂದಿತು. ಪಾನ್‌ದಾನಿಯಲ್ಲಿ ಎಲೆಯಡಕೆ, ಮಸಾಲೆ ಮೊದಲಾದುವನ್ನು ಎತ್ತಿಕೊಂಡು ಒಬ್ಬ ಆಳು ಬಂದು ನಿಂತ. ಅದರಿಂದ ಒಂದು ಸಣ್ಣ ಯಾಲಕ್ಕಿಕಾಯಿ ತೆಗೆದುಕೊಂಡು ಬಾಯಿಗೆ ಹಾಕಿ ಕೊಂಡ. ಮತ್ತೇನೂ ತೆಗೆದುಕೊಳ್ಳಲಿಲ್ಲ. ಗುಡುಗುಡಿಯ ನಳಿಕೆಯಲ್ಲಿ ಒಂದೆರಡು ಸೆಳೆದ. ಅನಂತರ ಗುಡುಗುಡಿಯ ನಳಿಕೆ ಎಡಗೈಯಲ್ಲಿ ಮಡಿ ಲಲ್ಲಿತ್ತು. ಮತ್ತೆ ಅದು ಉಪಯೋಗವಾಗಲಿಲ್ಲ. ಅಂತಃಪುರದಿಂದ ಫಲಾ ಹಾರ ಸಿದ್ಧವಾಗಿದೆಯೆಂದು ಸುದ್ದಿಬಂದಿತು. ವ್ಯಸ್ತನಾಗಿ "ಅದು ಸಾಧ್ಯ ವಿಲ್ಲ. ಊಟ ತಿಂಡಿಯ ವಿಷಯದಲ್ಲಿ ಬಹಳ ಲೆಕ್ಕಾಚಾರದಿಂದ ಇರ ಬೇಕೆಂದು ಮುಂಚೆಯೇ ಹೇಳಿದೆನಲ್ಲ" ಎಂದ.

ವಿಪ್ರದಾಸ ಎರಡನೆಯ ಬಾರಿ ಬಲವಂತ ಮಾಡಲಿಲ್ಲ. ಆಳಿನೊಡನೆ "ಅತ್ತಿಗೆ ಹೇಳು, ಅವರ ಮೈ ಹುಷಾರಿಲ್ಲವಂತೆ. ಫಲಾಹಾರ ಮಾಡಲು ಸಾಧ್ಯವಿಲ್ಲವಂತೆ" ಎಂದ.

ವಿಪ್ರದಾಸ ಸುಮ್ಮನಿದ್ದ. ಕುಮುದಿನ ಪ್ರಸ್ತಾಪ ತಾನಾಗಿಯೇ ಬರುವುದೆಂದು ಮಧುಸೂದನ ನಿರೀಕ್ಷಿಸಿದ್ದ. ಇಷ್ಟು ದಿನಗಳಾದುವು. ಇನ್ನು ಕುಮುವನ್ನು ಅತ್ತೆಯ ಮನೆಗೆ ಹಿಂದಕ್ಕೆ ಕರೆದುಕೊಂಡು ಹೋಗುವ ವಿಷಯ ವಿಪ್ರದಾಸ ತಾನಾಗಿಯೇ ಪ್ರಸ್ತಾಪಮಾಡುವನೆಂದಿದ್ದ. ಆದರೆ ಕುಮುವಿನ ಹೆಸರು ಕೂಡ ಉಚ್ಚರಿಸಲಿಲ್ಲ. ಒಳಗೊಳಗೆ ಸ್ವಲ್ಪ ಕೋಪವೂ ತಲೆ ಹಾಕಿತು. ಇಲ್ಲಿಗೆ ಬಂದು ತಪ್ಪು ಮಾಡಿದೆನೆಂದು ಅಂದುಕೊಳ್ಳ ತೊಡಗಿದ. ಇದೆಲ್ಲ ನವೀನನ ಕೈವಾಡ. ಈ ಕ್ಷಣ ಹಿಂದಿರುಗಿ ಅವನಿಗೆ ಕಠಿಣವಾದ ಶಾಸ್ತಿ ಮಾಡಬೇಕೆಂದು ಮನಸ್ಸು ತಳಮಳಗೊಳ್ಳುತ್ತಿತ್ತು.

ಈ ಸಮಯದಲ್ಲಿ ಸಾಮಾನ್ಯವಾದ ಕರಿ ಅಂಚಿನ ಸೀರೆಯೊಂದನ್ನು ಉಟ್ಟು ತಲೆಯ ಮೇಲೆ ಮುಸುಕು ಎಳೆದುಕೊಂಡು ಕುಮು ಕೊಟ್ಟಡಿಯೊಳಕ್ಕೆ ಬಂದಳು. ವಿಪ್ರದಾಸ ಇದನ್ನು ನಿರೀಕ್ಷಿಸಿರಲಿಲ್ಲ. ಅವನು ಆಶ್ಚರ್ಯದಲ್ಲಿ ಮುಳುಗಿದ. ಮೊದಲು ಗಂಡನಿಗೆ, ಅನಂತರ ಅಣ್ಣನ ಕಾಲಿಗೆ ನಮಸ್ಕರಿಸಿ ಕುಮು ಮಧುಸೂದನನೊಡನೆ "ಅಣ್ಣನ ಮೈ ಬಹಳ ಸೊರಗಿದೆ. ಅವನೊಡನೆ ಹೆಚ್ಚು ಮಾತನಾಡುವುದನ್ನು ಡಾಕ್ಟರು ಆಕ್ಷೇಪಣೆ ಮಾಡಿರುವರು. ನೀನು ಈ ಪಕ್ಕದ ಕೊಟಡಿಗೆ ಬಾ" ಎಂದಳು.

ಮಧುಸೂದನನ ಮುಖ ಕೆಂಪಡರಿತು. ಥಟ್ಟನೆ ಕುರ್ಚಿ ಬಿಟ್ಟೆದ್ದ. ಮಡಿಲಿಂದ ಗುಡುಗುಡಿಯ ನಲ್ಲಿ ನೆಲದ ಮೇಲೆ ಬಿದ್ದುಬಿಟ್ಟಿತು. ವಿಪ್ರದಾಸನ ಮುಖದ ಕಡೆಗೆ ನೋಡದೆಯೇ "ಒಳ್ಳೆಯದು, ನಾನು ಬರುವೆ" ಎಂದ.

ಮೊದಲ ಆವೇಶದಲ್ಲಿ ದಡದಡನೆ ಗಾಡಿ ಹತ್ತಿ ಮನೆಗೆ ಹೊರಟು ಹೋಗಬೇಕೆಂದು ಅನ್ನಿಸಿತು. ಆದರೆ ಮನಸ್ಸು ಸಿಕ್ಕಿಕೊಂಡಿತ್ತು. ಬಹು ದಿವಸಗಳ ಮೇಲೆ ಇಂದು ಕುಮುವನ್ನು ನೋಡಿದ್ದ. ಅವಳನ್ನು ಅತ್ಯಂತ ಸಾಮಾನ್ಯ ತರಹದ ಉಡಿಗೆಯಲ್ಲಿ ಇಂದೇ ನೋಡಿದ್ದು. ಅವಳು ಇಷ್ಟು ಸುಂದರವಾಗಿ ಎಂದೂ ಅವನಿಗೆ ಕಂಡಿರಲಿಲ್ಲ. ಅಷ್ಟು ಸಹಜವಾಗಿ ಅಷ್ಟು ಶಾಂತರೀತಿಯಲ್ಲಿದ್ದಳು. ಮಧುಸೂದನನ ಮನೆಯಲ್ಲಿ ಅವಳು ಹೊರಗಿನವಳಂತೆ ಸಿಂಗರಿಸಿದ ಹೆಣ್ಣಾಗಿದ್ದಳು. ಇಲ್ಲಿ ಅವಳು ಸಂಪೂರ್ಣವಾಗಿ ಮನೆಯ ಹೆಂಗಸಾಗಿದ್ದಳು. ಅದೆಷ್ಟು ಸ್ನಿಗ್ಧವಾದ ರೂಪ! ಮತ್ತು ಮಧುಸೂದನನಿಗೆ ಸ್ವಲ್ಪವೂ ಅವಕಾಶಮಾಡದೆ ಅವಳನ್ನು ಈಗಲೇ ಸಂಗಡ ಕರೆದುಕೊಂಡು ಹೋಗೋಣವೇ ಎಂದು ಮನಸ್ಸಾಯಿತು. "ಅವಳು ನನ್ನವಳು, ಅವಳು ನನ್ನವಳೇ, ಅವಳು ನನ್ನ ಮನೆಯವಳು ನನ್ನ ಸಂಪತ್ತಿನವಳು, ನನ್ನ ಸಂಪೂರ್ಣ ದೇಹ ಮನದೊಡನೆ ಕೂಡಿದವಳು" ಎಂದು ತಿರುವಿಮುರುವಿ ಹೇಳುತ್ತಿರಬೇಕೆಂದು ಆಸೆಯಾಯಿತು. ಪಕ್ಕದ ಕೋಣೆಯಲ್ಲಿ ಒಂದು ಸೋಫಾ ತೋರಿಸಿ ಕುಮು ಕುಳಿತುಕೊಳ್ಳಲು ಹೇಳಿದಾಗ ಅವನು ಕುಳಿತುಕೊಳ್ಳಲೇಬೇಕಾಯಿತು. ಪೂರ್ತ ಹೊರ

ಮನೆಯ ಕೋಣೆಯಾಗಿರದಿದ್ದರೆ ಕುಮುವನ್ನು ಹಿಡಿದು ಎಳೆದು ಸೋಫಾದ ಮೇಲೆ ತನ್ನ ಪಕ್ಕದಲ್ಲಿ ಕೂಡಿಸಿಕೊಳ್ಳುತ್ತಿದ್ದ. ಕುಮು ಕುಳಿತುಕೊಳ್ಳದೆ ಕುರ್ಚಿಯೊಂದರ ಹಿಂದೆ ಅದರ ಬೆನ್ನಮೇಲೆ ಕೈ ಇಟ್ಟುಕೊಂಡು ನಿಂತು "ನನಗೆ ಏನಾದರೂ ಹೇಳಬಯಸುವೆಯೇನು ?" ಎಂದಳು.

ಈ ಪ್ರಶ್ನೆ ಕೇಳಿದ ದನಿಯಿಂದ ಮಧುಸೂದನನಿಗೆ ಸ್ವಲ್ಪವೂ ಹಿತವಾಗಲಿಲ್ಲ "ಮನೆಗೆ ಬರುವುದಿಲ್ಲವೇನು ?" ಎಂದ.

"ಊಹೂಂ."

ಮಧುಸೂದನ ಬೆಚ್ಚಿದ. "ಅದೆಂತಹ ಮಾತು !" ಎಂದ.

"ನಿನಗೆ ನನ್ನ ಆವಶ್ಯಕತೆಯೇನೂ ಇಲ್ಲವಲ್ಲ."

ಶ್ಯಾಮಾಸುಂದರಿಯ ಸಮಾಚಾರ ಕಿವಿಗೆ ಮುಟ್ಟಿದೆಯೆಂದೂ ಇದು ಅದರ ಫಲವಾದ ಬಿಗುಮಾನವೆಂದೂ ಮಧುಸೂದನ ತಿಳಿದುಕೊಂಡ. ಈ ಬಿಗುಮಾನ ಮನಸ್ಸಿಗೆ ಹಿತವಾಗಿಯೇ ಇತ್ತು. "ಎಂತಹ ಅರ್ಥ ವಿಲ್ಲದ ಮಾತನಾಡುತ್ತೀಯೆ. ಆವಶ್ಯಕವಿಲ್ಲದೆ ಮತ್ತೆ ಬರಿದಾದ ಮನೆ ಹಿತವಾಗಿರುವುದೇನು ?"

ಈ ವಿಷಯವಾಗಿ ಮಾತು ಬೆಳಸಲು ಕುಮುವಿಗೆ ಇಷ್ಟವಾಗಲಿಲ್ಲ. ಸಂಕ್ಷೇಪವಾಗಿ ಮತ್ತೊಮ್ಮೆ "ನಾನು ಬರುವುದಿಲ್ಲ" ಎಂದಳು.

"ಅದರ ಅರ್ಥ ? ಮನೆಯ ಯಜಮಾನಿ ಮನೆಗೆ ಬರುವುದಿಲ್ಲವೆ ?"

ಕುಮು ಸಂಕ್ಷೇಪವಾಗಿ "ಇಲ್ಲ" ಎಂದಳು.

ಮಧುಸೂದನ ಸೋಫಾದಿಂದ ಎದ್ದು ನಿಂತುಕೊಂಡು "ಏನು ? ಹೊರಡುವುದಿಲ್ಲವೆ ? ಹೋಗಲೇಬೇಕು" ಎಂದ.

ಕುಮು ಏನೂ ಉತ್ತರ ಕೊಡಲಿಲ್ಲ.

ಮಧುಸೂದನನು "ಬಲ್ಲೆಯೋ ಪೋಲೀಸಿನವರನ್ನು ಕರೆದು ನಿನ್ನನ್ನು ರಟ್ಟೆ ಹಿಡಿದು ಕರೆದುಕೊಂಡು ಹೋಗಬಲ್ಲೆ, ಇಲ್ಲ ಎಂದರೆ ಆಗಿಹೋಯಿತೇನು" ಎಂದನು.

ಕುಮು ತೆಪ್ಪಗಿದ್ದಳು.

ಮಧುಸೂದನ "ಅಣ್ಣನ ಶಾಲೆಯಲ್ಲಿ ಮತ್ತೆ ನೂರ್‌ನಗರೀ ಚೌಕಿಯ ಪಾಠ ಆರಂಭವಾಯಿತು ಅಲ್ಲವೆ?" ಎಂದು ಗರ್ಜಿಸಿದ.

ಕುಮು ಅಣ್ಣನ ಕೊಟಡಿಯ ಕಡೆಗೆ ಒಮ್ಮೆ ದೃಷ್ಟಿ ಬೀರಿ "ಸುಮ್ಮ ನಿರು. ಅಷ್ಟು ಗಟ್ಟಿಯಾಗಿ ಮಾತನಾಡಬೇಡ" ಎಂದಳು.

"ಯಾಕೆ? ನಿಮ್ಮ ಅಣ್ಣನಿಗೆ ಹೆದರಿ ಮಾತನಾಡಬೇಕಲ್ಲವೆ? ಬಲ್ಲೆಯೋ, ಈ ಗಳಿಗೆಯಲ್ಲಿ ಅವನನ್ನು ಬೀದಿಗೆ ಹೊರಡಿಸಬಲ್ಲೆ!"

ಮರುನಿಮಿಷವೇ ಕೊಟಡಿಯ ಬಾಗಿಲ ಹತ್ತಿರ ತನ್ನ ಅಣ್ಣ ಬಂದು ನಿಂತಿರುವುದನ್ನು ಕುಮು ಕಂಡಳು. ದೀರ್ಘ ಆಕೃತಿ. ಸೊರಗಿದ ಮೈ. ಬಿಳುಪೇರಿದ ಮುಖ. ಬೆಂಕಿ ಕಾರುತ್ತಿರುವ ದೊಡ್ಡ ದೊಡ್ಡ ಕಣ್ಣುಗಳು. ಒಂದು ಒರಟಾದ ಅಂಗವಸ್ತ್ರ ಮೈ ಮುಚ್ಚಿ ನೆಲದವರೆಗೆ ಜೋಲಾಡುತ್ತಿತ್ತು. ಬಂದವನು ಕುಮುವನ್ನು ಕರೆದು "ಬಾ ಕುಮೂ, ಬಾ ನನ್ನ ಕೊಟಡಿಗೆ" ಎಂದ.

ಮಧುಸೂದನ ಕೋಪದಿಂದ ಕಿಡಿಕಿಡಿಯಾಗಿ "ನಿನ್ನ ಈ ಪ್ರತಿಷ್ಠೆ ನೆನಪಿರುವುದು. ನಿನ್ನ ನೂರ್‌ನಗರದ *ನೂರ್ ನಂದಿಸಿ ಬಿಡದಿದ್ದರೆ ನನ್ನ ಹೆಸರು ಮಧುಸೂದನನಲ್ಲ" ಎಂದ. ಎದ್ದು ಹೊರಟನು.

ಕೋಣೆಗೆ ಹೋದವನೇ ವಿಪ್ರದಾಸ ಹಾಸಿಗೆಯ ಮೇಲೆ ಮಲಗಿದ. ಕಣ್ಣು ಮುಚ್ಚಿಕೊಂಡ. ಆದರೆ ನಿದ್ರೆಯಿಂದಲ್ಲ, ದಣಿವಿನಿಂದ; ಚಿಂತೆಯಿಂದ. ಕುಮು ತಲೆದೆಸೆಯಲ್ಲಿ ಕುಳಿತು ಬೀಸಣಿಗೆಯಿಂದ ಗಾಳಿ ಹಾಕುತ್ತಿದ್ದಳು. ಹೀಗೆಯೇ ಬಹಳ ಹೊತ್ತು ಕಳೆಯಲು ಕ್ಷೇಮಾ ಅತ್ತೆ ಬಂದು "ಇವತ್ತೇನು ಊಟ ಮಾಡುವುದಿಲ್ಲವೆ? ಕುಮೂ ಹೊತ್ತು ಬಹಳವಾಗಿ ಹೋಯಿತಲ್ಲ" ಎಂದಳು.

ವಿಪ್ರದಾಸ ಕಣ್ಣು ಬಿಟ್ಟು "ಕುಮೂ, ಹೋಗು, ಊಟಕ್ಕೆ ಹೋಗು. ನಿಮ್ಮ ಕಾಳೂ ಅಣ್ಣನನ್ನು ಕಳುಹಿಸು" ಎಂದ.

ಕುಮು "ಅಣ್ಣಾ, ನಿನ್ನ ಕಾಲಿಗೆ ಬೀಳುತ್ತೇನೆ. ಈಗ ಕಾಳೂ ಅಣ್ಣ ಬೇಡ. ಸ್ವಲ್ಪ ನಿದ್ರೆಹೋಗಲು ಪ್ರಯತ್ನ ಮಾಡು" ಎಂದಳು.

---

* ನೂರ್ - ಬೆಳಕು.

ವಿಪ್ರದಾಸ ಏನೂ ಹೇಳದೆ ಗಂಭೀರ ವೇದನೆಯ ದೃಷ್ಟಿಯಿಂದ ಕುಮುದಿನಿ ಮುಖ ನೋಡುತ್ತಿದ್ದ. ಸ್ವಲ್ಪ ಹೊತ್ತಿನ ಮೇಲೆ ನಿಟ್ಟುಸಿರು ಬಿಟ್ಟು ಮತ್ತೆ ಕಣ್ಣುಮುಚ್ಚಿಕೊಂಡ. ಕುಮು ಮೆಲ್ಲಮೆಲ್ಲನೆ ಹೊರಗೆ ಹೋಗಿ ಕದ ಮುಚ್ಚಿಕೊಂಡಳು.

ಸ್ವಲ್ಪ ಹೊತ್ತಾದ ಮೇಲೆ ಕಾಳೂವಿಗೆ ಹೇಳಿ ಕಳುಹಿಸಿದ. ವಿಪ್ರದಾಸ ಎದ್ದು ದಿಂಬು ಒರಗಿಕೊಂಡು ಕುಳಿತ. ಕಾಳೂ "ಅಳಿಯಂದರು ಬಂದು ಸ್ವಲ್ಪ ಹೊತ್ತಿನಲ್ಲೇ ಹೊರಟು ಹೋದರಲ್ಲ. ಏನಾಯಿತು ಹೇಳು ಮತ್ತೆ? ಕುಮುವನ್ನು ಅವರ ಮನೆಗೆ ಕರೆದುಕೊಂಡು ಹೋಗುವ ಮಾತು ಏನಾದರೂ ಹೇಳಿದರೇನು?" ಎಂದು ಕೇಳಿದ.

"ಹೌದು ಹೇಳಿದ್ದರು. ಕುಮು ಅದಕ್ಕೆ ಉತ್ತರ ಕೊಟ್ಟಳು. ಅವಳು ಹೋಗುವುದಿಲ್ಲವಂತೆ."

ಕಾಳೂ ಭಯಪಟ್ಟವನಾಗಿ "ಏನಂದೆ ಅಣ್ಣಾ! ಇದಂತೂ ಮನೆ ಹಾಳಾಗುವ ಸುದ್ದಿ" ಎಂದ.

"ಹಾಳಾಗುವ ವಿಷಯಕ್ಕೆ ನಾವುಗಳು ಎಂದೂ ಹೆದರಿಲ್ಲ. ಅಗೌರವಕ್ಕೆ ಅಂಜುವೆವು."

"ಹಾಗಾದರೆ ಸಿದ್ಧವಾಗಿರು. ಇನ್ನು ಹೆಚ್ಚು ಸಾವಕಾಶವಿಲ್ಲ. ರಕ್ತಗತವಾಗಿದೆ. ಎಲ್ಲಿ ಹೋದೀತು? ನಿಮ್ಮ ತಂದೆ ಮ್ಯಾಜಿಸ್ಟ್ರೇಟರನ್ನು ಕಡೆಗಣಿಸಹೋಗಿ ಏನಿಲ್ಲವೆಂದರೆ ಎರಡು ಲಕ್ಷ ರೂಪಾಯಿ ಖರ್ಚುಮಾಡಿದ್ದನ್ನು ಬಲ್ಲೆಯಷ್ಟೆ? ಎದೆ ಉಬ್ಬಿಸಿ ತಮ್ಮ ವಿಪತ್ತನ್ನು ಉಂಟುಮಾಡಿಕೊಳ್ಳುವುದು ನಿಮ್ಮ ವಂಶಪಾರಂಪರ್ಯಕ್ಕೆ ಬಂದಿದ್ದು. ಅಂತೂ ಕನಿಷ್ಟಪಕ್ಷ ಅದು ನಮ್ಮ ವಂಶದಲ್ಲಿಲ್ಲ. ಅದರಿಂದಲೇ ನಿಮ್ಮ ಅನಿಷ್ಟಕಾರಕವಾದ ಹುಚ್ಚಾಟಗಳನ್ನೆಲ್ಲಾ ಸದ್ದಿಲ್ಲದೆ ಸಹಿಸಲಾರದಿರುವೆ. ಆದರೆ ಉಳಿಯುವುದಾದರೂ ಹೇಗೆ?"

ವಿಪ್ರದಾಸ ಕಾಲು ಮೇಲೆ ಕಾಲು ಹಾಕಿಕೊಂಡು ದಿಂಬನ್ನು ಒರಗಿಕೊಂಡು ಕಣ್ಣು ಮುಚ್ಚಿಕೊಂಡು ಸ್ವಲ್ಪ ಹೊತ್ತು ಯೋಚಿಸುತ್ತಿದ್ದ. ಕೊನೆಗೆ ಕಣ್ಣು ಬಿಟ್ಟು "ಪತ್ರದ ಕರಾರಿನಂತೆ ಮಧುಸೂದನ ಆರು

ತಿಂಗಳ ವಾಯಿದೆ ಕೊಡದೆ ನನ್ನ ಹತ್ತಿರ ಹಣಕ್ಕೆ ತಗಾದೆ ಮಾಡಲು ಅವಕಾಶವಿಲ್ಲ. ಇಷ್ಟರಲ್ಲಿ ಸುಬೋಧ ಆಷಾಢ ಮಾಸದಲ್ಲೇ ಬಂದು ಬಿಡುವನು. ಆಗ ಏನಾದರೊಂದು ಉಪಾಯ ಮಾಡಬಹುದು" ಎಂದನು

ಕಾಳೂ ಸ್ವಲ್ಪ ಬೇಸರದೊಡನೆ "ಉಪಾಯ ಮಾಡದೆ ಏನು, ಥಟ್ಟನೆ ಒಟ್ಟಿಗೆ ನಂದಿಹೋಗುವ ದೀಪಗಳು ಮರ್ಯಾದೆಯಿಂದ ಒಂದೊಂದಾಗಿ ಆರುವುವು ಅಷ್ಟೆ" ಎಂದನು.

"ದೀಪದ ಬತ್ತಿ ಮುಗಿಯುತ್ತ ಬಂದಿದೆ. ಈಗ ಯಾವ ಮಸಾಲ್ ಚಿಯೇ ಆಗಲಿ ಬಂದು ಅದನ್ನು ಊದಿ ಆರಿಸಲಿ. ಅದರಿಂದ ಹೆಚ್ಚು ಹತಾಶನಾಗಬೇಕಾದುದೇನೂ ಇಲ್ಲ. ಆ ನಂದಲಿರುವ ದೀಪದ ಉಸ್ತುವಾರಿ ಮಾಡುವುದು ಇನ್ನು ಚೆನ್ನಾಗಿ ಕಾಣಿಸದು. ಅದಕ್ಕಿಂತ ಪೂರ್ಣ ಕಗ್ಗತ್ತಲೆಯಲ್ಲೇ ನೆಮ್ಮದಿ ಹೊಂದಬಹುದು."

ಕಾಳೂವಿನ ಹೃದಯದಲ್ಲಿ ವೇದನೆಯಾಗತೊಡಗಿತು. ಇದಂತೂ ಅಸ್ವಸ್ಥ ಮನುಷ್ಯನ ಮಾತು ಕತೆ ಎಂದು ಅವನು ಅರಿತ. ವಿಪ್ರದಾಸ ಈ ರೀತಿ ಕೈಬಿಟ್ಟು ಕೂಡುವ ಪ್ರಾಣಿಯಲ್ಲ. ಪರಿಣಾಮವನ್ನು ತಪ್ಪಿಸುವುದಕ್ಕಾಗಿ ವಿಪ್ರದಾಸ ಇಷ್ಟುದಿನ ನಾನಾ ತರಹದ ಏರ್ಪಾಟನ್ನು ಮಾಡಿದ್ದ. ಗೆದ್ದು ತಲೆಯೆತ್ತುವೆನೆಂದು ಅವನಿಗೆ ನಂಬಿಕೆಯಿತ್ತು. ಇಂದು ಯೋಚನೆಯನ್ನೂ ಮಾಡಲಾರ. ನಂಬುವಷ್ಟೂ ಶಕ್ತಿಯಿಲ್ಲ.

ಕಾಳೂ ಸ್ನಿಗ್ಧದೃಷ್ಟಿಯಿಂದ ವಿಪ್ರದಾಸನ ಮುಖ ನೋಡಿ "ನೀನೇನೂ ಯೋಚಿಸಬೇಕಾದ್ದಿಲ್ಲ. ಮಾಡಬೇಕಾದ್ದನ್ನು ನಾನೇ ಮಾಡುತ್ತೇನೆ, ಹೋಗಿ. ಒಮ್ಮೆ ದಳ್ಳಾಳಿಗಳ ಮನೆ ನೋಡಿಕೊಂಡು ಬರುತ್ತೇನೆ" ಎಂದ.

ಮರುದಿನ ವಿಪ್ರದಾಸನಿಗೆ ಒಂದು ಇಂಗ್ಲಿಷ್ ಕಾಗದ ಬಂದಿತು. ಮಧುಸೂದನ ಬರೆದದ್ದು. ಭಾಷೆ ವಕೀಲೀ ಅಚ್ಚಿನದು. ಒಂದು ಸಮಯ ಅಟಾರ್ನಿಗೆ ಹೇಳಿ ಬರೆಸಿದ್ದರೂ ಇರಬಹುದು. "ಕುಮು ತಮ್ಮ ಮನೆಗೆ ಹಿಂದಿರುಗಿ ಬರುವಳೇ ಇಲ್ಲವೇ ಖಂಡಿತವಾಗಿ ತಿಳಿಯಬೇಕು. ಅನಂತರ ಮುಂದಿನ ಕರ್ತವ್ಯ ನಿರ್ಧರಿಸಲಾಗುತ್ತೆ" ಎಂದಿತ್ತು.

ವಿಪ್ರದಾಸ "ಕುಮೂ, ಚೆನ್ನಾಗಿ ಎಲ್ಲ ಸಂಗತಿಯನ್ನೂ ಯೋಚಿಸಿರುವೆಯೋ ?" ಎಂದು ಕುಮುವನ್ನು ಕೇಳಿದ.

ಕುಮು "ಚೆನ್ನಾಗಿ ಯೋಚನೆ ಮಾಡಿರುವೆ. ಅದರಿಂದಲೇ ನನ್ನ ಮನಸ್ಸು ಇಂದು ಸಂಪೂರ್ಣ ನಿಶ್ಚಿಂತವಾಗಿದೆ. ಇದುವರೆಗೆ ಇಲ್ಲಿ ಯಾವ ವಿಧದಲ್ಲಿ ಇದ್ದೆನೋ ಹಾಗೆಯೇ ಇದ್ದೇನೆ. ನಡುವೆ ಏನು ನಡೆಯಿತೋ ಅದೆಲ್ಲ ಕನಸು ಎಂದು ಮನಸ್ಸಿಗೆ ಅನ್ನಿಸುತ್ತಿದೆ" ಎಂದಳು.

"ಒಂದು ವೇಳೆ ನಿನ್ನನ್ನು ಬಲಾತ್ಕಾರವಾಗಿ ಕರೆದುಕೊಂಡು ಹೋಗಲು ಪ್ರಯತ್ನಿಸಿದರೆ ನೀನೂ ಬಲವಾಗಿಯೇ ತಡೆದು ನಿಲ್ಲಲು ಸಾಧ್ಯವೋ ?"

"ನಿನ್ನ ಮೇಲೆ ಉತ್ಪಾತ ನಡೆಸದಿದ್ದರೆ ಮಾತ್ರ ಸಾಧ್ಯ."

"ಇದಕ್ಕಾಗಿಯೇ ವಿಚಾರಿಸುತ್ತಿರುವೆ. ಕೊನೆಗೆ ಹೋಗಲೇ ಬೇಕಾದರೆ ಎಷ್ಟು ಸಾವಕಾಶಮಾಡಿ ಹೋಗುವೆಯೋ ಅಷ್ಟೂ ಅವಲಕ್ಷಣವೆನ್ನಿಸುವುದು. ಅವನೊಡನೆ ನಿನ್ನ ಸಂಬಂಧದ ಸೂತ್ರ ನಿನ್ನ ಮನಸ್ಸನ್ನು ಎಲ್ಲಾದರೂ ಎಷ್ಟು ಮಾತ್ರವಾದರೂ ಬಿಗಿದಿದೆಯೋ ?"

"ಏನೇನೂ ಇಲ್ಲ. ನಾನು ಕೇವಲ ನವೀನನನ್ನು, ಮೋತಿಯ ತಾಯಿಯನ್ನು, ಹಾಬಲೂವನ್ನು ಪ್ರೀತಿಸುತ್ತೇನೆ. ಆದರೆ ಅವರುಗಳು ಪೂರ್ತಿಯಾಗಿ ಬೇರೆ ಮನೆತನದ ಜನರಂತೆ ಇರುವರು."

"ನೋಡು ಕುಮು, ಅವರು ಹಿಂಸೆಮಾಡುವರು. ಸಮಾಜದ ಬಲದಿಂದ, ಕಾನೂನಿನ ಆಶ್ರಯದಿಂದ ಹಿಂಸಿಸುವ ಶಕ್ತಿ ಅವರಿಗೆ ಇದೆ. ಅದರಿಂದಲೇ ಅದನ್ನು ಅಂಗೀಕರಿಸದಿರಬೇಕು. ಹಾಗೆ ಮಾಡಬೇಕಾದರೆ ನಾಚಿಕೆ, ಸಂಕೋಚ, ಭಯ ಎಲ್ಲವನ್ನೂ ಬಿಟ್ಟು ಸಮಾಜದ ಇದಿರಿನಲ್ಲಿ ನಿಲ್ಲಬೇಕಾಗುವುದು. ಮನೆಯೊಳಗೆ ಹೊರಗೆ ನಾಲ್ಕು ಕಡೆಯಲ್ಲೂ ನಿಂದೆಯ ಬಿರುಗಾಳಿ ಎದ್ದೀತು. ಅದರ ನಡುವೆ ತಲೆಯೆತ್ತಿಕೊಂಡು ನೀನು ಇರಬೇಕಾಗುವುದು."

"ಅಣ್ಣಾ, ಅದರಿಂದ ನಿನಗೆ ಕೇಡು, ನಿನಗೆ ಅಶಾಂತಿ ಆಗದೋ ?"

" ಕೇಡು, ಅಶಾಂತಿಯೆಂದು ನೀನು ಯಾವುದಕ್ಕೆ ಹೇಳುವೆ ಕುಮು ? ನೀನು ಅವಮಾನದ ನಡುವೆ ಮುಳುಗಿರುವುದಾದರೆ ಅದಕ್ಕಿಂತ ಕೇಡು ನನಗೆ ಮತ್ತಾವುದು ಇರಲು ಸಾಧ್ಯ ? ಯಾವ ಮನೆಯಲ್ಲಿ ನೀನಿರುವೆಯೋ ಅದು ಪೂರ್ಣವಾಗಿ ನಿನ್ನದಾಗದಿದ್ದು, ನಿನ್ನ ಮೇಲೆ ಯಾರಿಗೆ ಪೂರ್ಣ ಅಧಿಕಾರವಿದೆಯೋ ಅದು ಸಂಪೂರ್ಣವಾಗಿ ನಿನಗೆ ಹೊರಗಾದರೆ, ಆಗ ನನ್ನ ಪಾಲಿಗೆ ಅದಕ್ಕಿಂತ ಹೆಚ್ಚು ಅಶಾಂತಿಯ ವಿಷಯ ಬೇರೆ ಏನಿರಲು ಸಾಧ್ಯ ? ಅಪ್ಪ ನಿನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಆದರೆ ಆಗಿನ ಕಾಲದಲ್ಲಿ ಯಜಮಾನರೆನಿಸಿಕೊಂಡವರು ದೂರದೂರದಲ್ಲೇ ಇರುತ್ತಿದ್ದರು. ನಿನಗೆ ಓದುಬರಹ ಆವಶ್ಯಕವೆಂದು ಅವರುಗಳು ಭಾವಿಸಿಯೇ ಇರಲಿಲ್ಲ. ನಾನೇ ಸ್ವತಃ ಪ್ರಾರಂಭದಿಂದ ನಿನಗೆ ವಿದ್ಯೆ ಕಲಿಸಿದೆ. ನಿನ್ನನ್ನು ದೊಡ್ಡವಳನ್ನಾಗಿ ಮಾಡಿದೆ. ನಿನ್ನ ತಾಯಿ ತಂದೆಗಳಿಗಿಂತ ನಾನು ಯಾವ ವಿಧದಲ್ಲೂ ಕಡಮೆಯಿಲ್ಲ. ನಿನ್ನನ್ನು ದೊಡ್ಡವಳನ್ನಾಗಿ ಬೆಳೆಸಿದುದರ ಹೊಣೆಯನ್ನು ಯಾರಾದರೂ ಬಲ್ಲರೇನು ? ನೀನು ಇತರ ಹುಡುಗಿಯರಂತಾಗಿದ್ದರೆ ಎಲ್ಲೂ ನಿನಗೆ ತೊಡಕು ಆಗುತ್ತಿರಲಿಲ್ಲ. ಇನ್ನು ಯಾವೆಡೆಯಲ್ಲಿ ನಿನ್ನ ಸ್ವಾತಂತ್ರ್ಯವನ್ನು ಯಾರೂ ಅರಿಯರೋ ಅದನ್ನು ಗೌರವಿಸರೋ ಅಲ್ಲಿ ನಿನಗೆ ನರಕಯಾತನೆ. ನಾನು ಹೇಗೆ ತಾನೆ ನಿನ್ನನ್ನು ಅಲ್ಲಿಗೆ ಗಡೀಪಾರುಮಾಡಿ ಇರಲಿ. ನೀನು ನನ್ನ ತಮ್ಮನೇನಾದರೂ ಆಗಿದ್ದರೆ ಇದುವರೆಗೆ ಹೇಗೋ, ಹಾಗೆಯೇ ಶಾಶ್ವತವಾಗಿ ನನ್ನ ಸಂಗಡ ಇರುತ್ತಿದ್ದೆ. "

ಅಣ್ಣನ ಎದೆಯ ಬಳಿ ಮಂಚದ ಮೇಲೆ ತಲೆಯಿಟ್ಟುಕೊಂಡು ಬೇರೆ ಕಡೆಗೆ ಮುಖಮಾಡಿಕೊಂಡು ಕುಮು " ಆದರೆ ನಾನು ನಿನಗೆ ಹೊರೆಯಾಗಿ ಇರಲಾರೆ ? ಖಂಡಿತ ಇರಲಾರೆ " ಎಂದಳು.

ಕುಮುವಿನ ತಲೆ ಸವರುತ್ತ, ಸವರುತ್ತ ವಿಪ್ರದಾಸ ಹೇಳಿದ. " ಹೊರೆ ಏಕಾಗುವೆ ತಂಗಿ ? ನಿನ್ನ ಕೈಯಲ್ಲಿ ಪೂರ್ತಿಯಾಗಿ ದುಡಿಸಿಕೊಳ್ಳುವೆ— ನನ್ನ ಕೆಲಸಗಳನ್ನೆಲ್ಲ ನಿನಗೆ ವಶಪಡಿಸುವೆ. ಯಾವ " ಪ್ರೈವೇಟ್ ಸೆಕ್ರೆಟರಿ " ಯೂ ಅಷ್ಟು ಕೆಲಸ ಮಾಡುವುದು ಸಾಧ್ಯವಿರದು. ನನಗಾಗಿ ನೀನು ವಾದ್ಯವನ್ನು ನುಡಿಸಬೇಕು. ನನ್ನ ಕುದುರೆ ನಿನ್ನ ಸುಪರ್ದಿ

ನಲ್ಲಿರುವುದು. ಅದಲ್ಲದೆ ಬೇರೊಬ್ಬರಿಗೆ ಕಲಿಸುವುದರಲ್ಲಿ ನನಗೆ ಸಂತೋಷ ಎನ್ನುವುದನ್ನು ಬಲ್ಲೆಯೇನು ! ನಿನ್ನಂತಹ ಶಿಷ್ಯಳು ಎಲ್ಲಿಂದ ಸಿಕ್ಕುವಳು ? ಒಂದು ಕೆಲಸ ಮಾಡಬಹುದು. ಬಹು ದಿನಗಳಿಂದ ಪಾರಸಿ ಓದಬೇಕೆಂಬ ಹಂಬಲವಿದೆ. ಒಂಟಿಯಾಗಿ ಓದಲು ಮನಸಾಗದು. ನಿನ್ನೊಡನೆ ಓದುವೆ. ನೀನು ಖಂಡಿತವಾಗಿ ನನಗಿಂತ ಮುಂದುವರಿಯುವೆ. ನಾನು ಸ್ವಲ್ಪ ವಾದರೂ ಹಿಂಸೆಪಡಿಸುವುದಿಲ್ಲ ; ನೋಡುವೆಯಂತೆ."

ಕೇಳುತ್ತ ಕೇಳುತ್ತ ಕುಮುವಿನ ಮನಸ್ಸು ಪುಳಕಿತವಾಯಿತು. "ಬಾಳುವೆಯಲ್ಲಿ ಇದಕ್ಕಿಂತ ಹೆಚ್ಚಿನ ಸುಖ ಬೇರೆ ಏನೂ ಇರಲು ಸಾಧ್ಯ ವಿಲ್ಲ" ಎಂದುಕೊಂಡಳು.

ಸ್ವಲ್ಪ ಹೊತ್ತಾದ ಮೇಲೆ ವಿಪ್ರದಾಸ ಮತ್ತೆ ಹೇಳಿದ. "ಇನ್ನೂ ಒಂದು ಸಂಗತಿ ನಿನಗೆ ಹೇಳಿರುತ್ತೇನೆ. ಕುಮೂ, ಬಹಳ ಬೇಗಲೇ ನಮ್ಮ ಸ್ಥಿತಿ ಮಾರ್ಪಡುವುದು. ನಮ್ಮ ನಡೆನುಡಿಯಲ್ಲೂ ಮಾರ್ಪಡಾದೀತು. ನಾವು ಬಡವರಂತೆ ಇರಬೇಕಾಗುವುದು. ಆಗ ನೀನು ನಮ್ಮ ಬಡತನದ ಸಂಪತ್ತಾಗಿ ಇರುವೆ !"

ಕುಮುವಿನ ಕಣ್ಣಿನಲ್ಲಿ ನೀರು ತುಂಬಿತು. "ನನಗೆ ಅಂತಹ ಅದೃಷ್ಟ ಒದಗಿದರೆ ನಾನು ಬದುಕಿಕೊಳ್ಳುವೆ."

ವಿಪ್ರದಾಸ ಮಧುಸೂದನನ ಕಾಗದವನ್ನು ಪೆಟ್ಟಿಗೆಯಲ್ಲಿಟ್ಟ. ಉತ್ತರ ಕೊಡಲಿಲ್ಲ.

೫೭

ಎರಡು ದಿನಗಳ ಅನಂತರವೇ ನವೀನನು, ಮೋತಿಯ ತಾಯಿ ಮತ್ತು ಹಾಬಲೂವಿನೊಡನೆ ಬಂದು ಸೇರಿದ. ಹಾಬಲೂ ದೊಡ್ಡಮ್ಮನ ಬಳಿಸಾರಿ ಅವಳ ಎದೆಯಲ್ಲಿ ತಲೆಯಿಟ್ಟುಕೊಂಡು ಅಳತೊಡಗಿದ. ಅಳು ಯಾವು ದಕ್ಕಾಗಿ ಎನ್ನುವುದು ಸ್ಪಷ್ಟವಾಗಲಿಲ್ಲ. ಹಿಂದಿನ ನಡವಳಿಕೆಗಾಗಿ ದುಗುಡವೇ ? ಈಗಿನ ಸಂದರ್ಭದ ಅನುರೋಧವೇ ? ಇಲ್ಲ. ಭವಿಷ್ಯತ್ತನ್ನು ಕುರಿತ ಚಿಂತೆಯೇ ?

ಕುಮು ಹಾಬಲೂವನ್ನು ತಬ್ಬಿಕೊಂಡು "ಕಠಿಣಸಂಸಾರ ! ಗೋಪಾಲ, ಅಳುವಿಗೆ ಕೊನೆಯೇ ಇಲ್ಲ. ನನ್ನದಾಗಿ ಏನು ತಾನೆ ಇದೆ.

ಮನುಷ್ಯ ಮಾತ್ರದ ಮಕ್ಕಳ ಅಳು ಕಡಮೆಯಾಗಲು ನಾನು ಏನು ತಾನೆ ಕೊಡಬಲ್ಲೆ. ಅಳುವಿನಿಂದ ಅಳುವನ್ನು ಸಂತೈಸಬಯಸುವೆ. ಅದಕ್ಕಿಂತ ಹೆಚ್ಚಿನ ಶಕ್ತಿ ಇಲ್ಲ. ನಿಮ್ಮಲ್ಲಿ ಯಾವ ಪ್ರೀತಿ ತೋರಿರುವೆನೋ ಅದಕ್ಕಿಂತ ಹೆಚ್ಚು ಏನನ್ನೂ ಕೊಡಲಾರೆ. ಮಕ್ಕಳೇ ಆ ಪ್ರೀತಿ ನಿಮಗೆ ಅರ್ಪಿಸಿಯಾಗಿದೆ. ದೊಡ್ಡಮ್ಮ ಚಿರಕಾಲ ಇರಲಾರಳು. ಆದರೆ ಈ ಮಾತನ್ನು ಮಾತ್ರ ನೆನಪಿಟ್ಟಿರಿ. ನೆನಪಿಡಿ, ನೆನಪಿಡಿ" ಎಂದು ಹೇಳಿ ಅವನ ಕೆನ್ನೆಗೆ ಮುತ್ತಿಟ್ಟಳು.

ನವೀನ "ಅತ್ತಿಗೇ, ಈ ಬಾರಿ ರಜಬ್‌ಪುರದಲ್ಲಿ ಪೂರ್ವಿಕರ ಮನೆಗೆ ಹೋಗುತ್ತೇನೆ. ಇಲ್ಲಿಯ ಪರ್ವ ಮುಗಿಯಿತು" ಎಂದ.

ಕುಮು ವ್ಯಾಕುಲಗೊಂಡು "ನಿರ್ಭಾಗ್ಯಳಾದ ನಾನು ಬಂದು ನಿಮಗೆ ಈ ಆಪತ್ತನ್ನುಂಟುಮಾಡಿದೆ" ಎಂದಳು.

ನವೀನನು "ಇಲ್ಲ. ನಿಜಸ್ಥಿತಿ ಅದಕ್ಕೆ ಪೂರ್ಣ ವಿರುದ್ಧವಾಗಿದೆ. ಬಹಳ ದಿವಸಗಳಿಂದಲೇ ಹೋಗಬೇಕೆಂದು ನಿರ್ಧರಿಸಿಕೊಂಡಿದ್ದೆ. ಗಂಟು ಮೂಟೆ ಕಟ್ಟಿಕೊಂಡು ಸಿದ್ಧವಾಗಿದ್ದೆ. ಇಂತಹ ಸಮಯದಲ್ಲಿ ನೀನು ನಮ್ಮ ಮನೆಗೆ ಬಂದೆ. ಮನೆಯ ಬಯಕೆಯನ್ನು ಬೇಕಾದಷ್ಟು ತೃಪ್ತಿ ಪಡಿಸಿದ್ದೆ. ಆದರೆ ವಿಧಿ ಸಹಿಸಲಿಲ್ಲ" ಎಂದನು.

ಅಂದು ಮಧುಸೂದನ ಹಿಂದಿರುಗಿ ದೊಡ್ಡದೊಂದು ರಗಳೆ ಹೂಡಿದ ನೆಂಬ ಸಂಗತಿ ತಿಳಿಯಿತು.

ನವೀನ ಏನೇ ಹೇಳಲಿ, "ಕುಮುವೇ ಅವರ ಸಂಸಾರದಲ್ಲಿ ಎಲ್ಲ ವನ್ನು ತಲೆಕೆಳಗು ಮಾಡಿಬಿಟ್ಟಳು" ಎಂದೇ ಮೋತಿಯತಾಯಿಯ ನಂಬಿಕೆ. ಈ ವಿಷಯದಲ್ಲಿ ಅವಳು ಕುಮುವನ್ನು ಕ್ಷಮಿಸಲು ಸಿದ್ಧಳಾ ಗಿರಲಿಲ್ಲ. "ಕುಮು ಈಗಲೇ ತಲೆ ತಗ್ಗಿಸಿಕೊಂಡು ಗಂಡನ ಮನೆಗೆ ಹೋಗುವುದೇ ಉಚಿತ. ಆ ಮೇಲೆ ಅದೆಷ್ಟು ಅವಮಾನವಾದರೂ ಸಹಿಸಿ ಕೊಳ್ಳಬೇಕು" ಎಂದು ಅವಳ ಅಭಿಪ್ರಾಯ. ಸ್ವಲ್ಪ ಕಠಿಣವಾದ ದನಿಯಲ್ಲೇ "ಹಾಗಾದರೆ ನೀನು ಅತ್ತೆಯ ಮನೆಗೆ ಖಂಡಿತವಾಗಿ ಹೋಗುವುದಿಲ್ಲವೆಂದು ತೀರ್ಮಾನಿಸಿರುವೆಯೇನು ?" ಎಂದು ಕೇಳಿದಳು.

ಕುಮು ಅದಕ್ಕೆ ಉತ್ತರವಾಗಿ "ಇಲ್ಲ, ಹೋಗುವುದಿಲ್ಲ" ಎಂದು ದೃಢವಾದ ದನಿಯಲ್ಲೇ ಹೇಳಿದಳು.

ಮೋತಿಯತಾಯಿ "ಹಾಗಾದರೆ ನಿನ್ನ ಗತಿ ಏನು?" ಎಂದು ಕೇಳಿದಳು.

ಕುಮು "ಈ ಭೂಮಿ ವಿಸ್ತಾರವಾಗಿದೆ. ಇದರಲ್ಲಿ ಎಲ್ಲಿಯಾದರೂ ಒಂದೆಡೆಯಲ್ಲಿ ನನಗೂ ಸ್ವಲ್ಪ ಸ್ಥಳ ಸಿಕ್ಕೀತು. ಜೀವನದಲ್ಲಿ ಎಷ್ಟೋ ಪಾಲು ಜಾರಿ ಕಳೆದುಹೋಗುವುದು. ಆದರೂ ಅಲ್ಪಸ್ವಲ್ಪ ಉಳಿದೇ ಇರುವುದು" ಎಂದಳು.

ಮೋತಿಯತಾಯಿಯು ಪುನಸ್ಸು ತನ್ನಿಂದ ಬಹುದೂರ ಸರಿದು ಹೋಗಿದೆಯೆಂದು ಕುಮು ತಿಳಿದುಕೊಂಡಳು. "ಹಾಗಾದರೆ ಇನ್ನು ನೀವುಗಳು ಏನು ಮಾಡುವಿರಿ?" ಎಂದು ನವೀನನನ್ನು ಕೇಳಿದಳು.

"ನದಿಯ ಅರುಗಿನಲ್ಲಿ ಸ್ವಲ್ಪ ಜಮೀನಿದೆ. ಅದರಿಂದ ಅಷ್ಟಿಷ್ಟು ದಪ್ಪಕ್ಕೆ ಅನ್ನವೂ ಒದಗುವುದು. ಅಷ್ಟು ಗಾಳಿಯ ಸೇವನೆಯೂ ಆಗುವುದು."

ಮೋತಿಯತಾಯಿ ಸ್ವಲ್ಪ ಕಾವಿನೊಡನೆಯೇ "ಓ, ಮಹರಾಯರೇ, ಅದಕ್ಕಾಗಿ ನೀವು ಯೋಚನೆ ಮಾಡಬೇಕಾದುದಿಲ್ಲ. ಅದೇ ಆ ಮಿರ್ಜಾಪುರದ * ಮನೆಯ ಅನ್ನ ನೀರಿನ ಹಕ್ಕಿದೆ. ಅದನ್ನು ಯಾರೂ ಕಸಿದುಕೊಳ್ಳಲು ಸಾಧ್ಯವಿಲ್ಲ. ನಾವುಗಳಂತೂ ದೊಡ್ಡ ಯಜಮಾನರು ಗದರಿಸಿಕೊಂಡ ಮಾತ್ರಕ್ಕೆ ಆ ಕ್ಷಣ ಬೈರಾಗಿಗಳಾಗಿ ಹೊರಟು ಹೋಗಲು ನಾವೇನೂ ಹೆಚ್ಚು ಗೌರವದ ಜನರಲ್ಲ. ಅವರೇ, ಮತ್ತೆ ಇವತ್ತು ಕಳೆದರೆ ನಾಳೆ ಹಿಂದಕ್ಕೆ ಕರೆಯುವರು. ಆಗ ಹಿಂದಿರುಗಿಯೂ ಬರುವೆವು. ಈ ಮಧ್ಯೆ ಸಹನೆ ತಾಳಬಹುದು. ಈ ಮಾತು ಈಗಲೇ ಹೇಳಿದೇನೆ" ಎಂದಳು.

ನವೀನ ಸ್ವಲ್ಪ ನೊಂದವನಾಗಿ "ಆ ಸಂಗತಿ ಬಲ್ಲೆ ಯಜಮಾನೀ! ಆದರೆ ಆ ವಿಷಯವಾಗಿ ಬಡಾಯಿ ಮಾಡಲಾರೆ. ಪುನರ್ಜನ್ಮವೇನಾ

---

* ಮಿರ್ಜಾಪುರ– ಕಲ್ಕತ್ತೆಯ ಒಂದು ಮೊಹಲ್ಲದ ಹೆಸರು.

ದರೂ ಇರುವುದಾದರೆ ಆಗ ಗೌರವದೊಡನೆಯೇ ಜನ್ಮ ತಾಳುವುದಾಗಲಿ. ಆದರಿಂದ ಅನ್ನ ನೀರಿಗೆ ಅವಕಾಶ ಒದಗಿದರೆ ಅದಕ್ಕೂ ಒಪ್ಪಿಕೊಳ್ಳುತ್ತೇನೆ" ಎಂದ.

ವಾಸ್ತವವಾಗಿ ನವೀನ ಅನೇಕ ಬಾರಿ ಅಣ್ಣನ ಆಶ್ರಯ ಬಿಟ್ಟು ಹಳ್ಳಿಯಲ್ಲಿ ವ್ಯವಸಾಯ ಮಾಡುವ ಸಂಕಲ್ಪ ಮಾಡಿದ್ದ. ಮೋತಿಯ ತಾಯಿ ಕೇವಲ ಕೂಗಾಟ ಚೀರಾಟ ಮಾಡಿದ್ದಳು. ಅವಶ್ಯಕವಾದ ಸಮಯದಲ್ಲಿ ಯಾವ ವಿಧದಲ್ಲೂ ಅಲುಗಲಿಲ್ಲ. ನವೀನನನ್ನು ಬಾರಿಬಾರಿಯೂ ತಡೆದಿದ್ದಳು. ಗಂಡನ ಅಣ್ಣನ ಮೇಲೆ ತಮಗೆ ಪೂರ್ತಿ ಹಕ್ಕಿದೆ. ಗಂಡನ ಅಣ್ಣ ಮಾವನ ಸಮಾನ, ಎಂದು ಅವಳ ಅಭಿಪ್ರಾಯ. ಭಾವ ಅನ್ಯಾಯ ಮಾಡಬಹುದು, ಆದರೆ ಅದನ್ನು ಅಪಮಾನವೆಂದು ಎಣಿಸುವುದು ಸರಿಯಲ್ಲ, ಎಂದು ಅವಳ ಮನೋಭಾವ. ಕುಮುವಿನ ವಿಷಯದಲ್ಲಿ ಅವಳ ಗಂಡನ ನಡವಳಿಕೆ ಎಂಥಾದ್ದೇ ಆಗಿರಲಿ ಅದಕ್ಕಾಗಿ ಕುಮು ಗಂಡನ ಮನೆ ತ್ಯಾಗಮಾಡಬಹುದು ಎನ್ನುವ ಮಾತು ಮೋತಿಯ ತಾಯಿಗೆ ಅತ್ಯಂತ ವಿಚಿತ್ರವೆನಿಸುತ್ತಿತ್ತು.

ಡಾಕ್ಟರು ಬಂದಿದ್ದಾರೆಂದು ಸುದ್ದಿ ಬಂದಿತು. ಕುಮು "ಸ್ವಲ್ಪ ಕುಳಿತಿರಿ, ಡಾಕ್ಟರು ಏನು ಹೇಳುವರೆಂದು ಕೇಳಿಕೊಂಡು ಬರುತ್ತೇನೆ" ಎಂದು ಹೇಳಿ ಹೋದಳು.

ಡಾಕ್ಟರು ಕುಮುವಿನೊಡನೆ "ನಾಡಿ ಮತ್ತಷ್ಟು ಕೆಟ್ಟಿದೆ. ರಾತ್ರಿಯಲ್ಲಿ ನಿದ್ರೆಯಿಲ್ಲ. ರೋಗಿ ಸರಿಯಾಗಿ ವಿಶ್ರಾಂತಿ ಹೊಂದುತ್ತಿಲ್ಲವೆಂದು ಕಾಣುತ್ತೆ" ಎಂದು ಹೇಳಿ ಹೋದರು.

ಅತಿಥಿಗಳ ಹತ್ತಿರಕ್ಕೆ ಕುಮು ಹಿಂದಿರುಗುತ್ತಿದ್ದಳು. ಈ ಸಮಯದಲ್ಲಿ ಕಾಳೂ ಬಂದು "ಒಂದು ಸಂಗತಿ ಹೇಳದಿರಲಾರೆ. ಬಲೆ ಬಹಳ ಜಟಿಲವಾಗುತ್ತಲಿದೆ. ನೀನು ಈ ಸಮಯದಲ್ಲಿ ಮಾವನ ಮನೆಗೆ ಹಿಂದಿರುಗಿ ಹೋಗದಿದ್ದರೆ ವಿಪತ್ತು ಮತ್ತಷ್ಟು ಪ್ರಬಲವಾಗುವುದು. ನನಗಂತೂ ಬೇರೆ ಯಾವ ಉಪಾಯವೂ ಹೊಳೆಯದು" ಎಂದ.

ಕುಮು ತೆಪ್ಪನೆ ನಿಂತಿದ್ದಳು.

"ನಿಮ್ಮ ಯಜಮಾನರ ಕಡೆಯಿಂದ ಕರೆ ಬಂದಿದೆ. ಅದನ್ನು ಲಕ್ಷಿಸದೆ ಇರುವ ಶಕ್ತಿ ನಮಗಿದೆಯೇನು? ನಾವುಗಳಂತೂ ಸಂಪೂರ್ಣವಾಗಿ ಅವರ ಮುಷ್ಟಿಯಲ್ಲಿರುವೆವು" ಎಂದು ಕಾಳೂ ಹೇಳಿದ.

ಕುಮು ವರಾಂಡದ ಕಟಕಟೆ ಹಿಡಿದುಕೊಂಡು, "ನನಗೆ ಏನೂ ಅರ್ಥವಾಗುತ್ತಿಲ್ಲ. ಕಾಳೂ ಅಣ್ಣ; ಜೀವ ಹೋಲುಸಿರು ಬಿಡುತ್ತಿದೆ. ಸಾಪಲ್ಲದೆ ಬೇರೆ ಯಾವ ಮಾರ್ಗವೂ ಇಲ್ಲವೇ ಇಲ್ಲವೆಂದು ಮನಸ್ಸಿಗೆ ಅನ್ನಿಸುತ್ತಿದೆ" ಎಂದು ಹೇಳಿ ಬೇಗ ಬೇಗ ನಡೆದು ಹೊರಟುಹೋದಳು.

ಅಣ್ಣನ ಕೋಣೆಯಲ್ಲಿ ಕುಮು ಇದ್ದಾಗ, ಆ ಎಡೆಯಲ್ಲಿ ಕ್ಷೇಮಾ ಅತ್ತೆಯು ಸಂಗಡ ಮೋತಿಯತಾಯಿ ಮಾತನಾಡಿದಳು. ನಾನಾ ಬಗೆಯ ಲಕ್ಷಣವನ್ನು ಹೋಲಿಸಿ ನೋಡಿದ ಮೇಲೆ ಕುಮು ಗರ್ಭಿಣಿಯೆಂಬ ವಿಷಯದಲ್ಲಿ ಇಬ್ಬರಿಗೂ ಸಂದೇಹವೇ ಇರಲಿಲ್ಲ. ಮೋತಿಯತಾಯಿ ಸಂತೋಷದಿಂದ ಉಬ್ಬಿದಳು. "ತಾಯಿ ಮಹಾಕಾಳಿ ಇದು ನಿಜವಾಗುವಂತೆ ಮಾಡಲಿ. ಇನ್ನು ಸಿಕ್ಕಿಬಿದ್ದಳು. ದುಮ್ಮಾನಗಾತಿ ಅತ್ತೆಯ ಮನೆಯನ್ನು ಅಲಕ್ಷಿಸಬಯಸುವಳು. ಆದರೆ ಈಗ ನರದಲ್ಲಿ ಗಂಟು ಬಿದ್ದು ಹೋಯಿತಲ್ಲ. ಬರಿಯ ಸೆರಗು ಸೆರಗಿನ ಗಂಟಲ್ಲವಲ್ಲ. ಓಡಿ ಎಲ್ಲಿಗೆ ಹೋದಾಳು" ಎಂದು ತನಗೆ ತಾನೇ ಅಂದುಕೊಂಡಳು.

ಕುಮುವನ್ನು ಮರೆಯಲ್ಲಿ ಕರೆದುಕೊಂಡುಹೋಗಿ ಮೋತಿಯತಾಯಿ ತನ್ನ ಸಂದೇಹದ ಸಂಗತಿ ಅವಳಿಗೆ ತಿಳಿಸಿದಳು. ಕುಮುವಿನ ಮುಖ ಬಣ್ಣಗೆಟ್ಟಿತು. ಅವಳು ಮುಷ್ಟಿಯನ್ನು ಬಿಗಿಯಾಗಿ ಹಿಡಿದುಕೊಂಡು, "ಇಲ್ಲ ಇಲ್ಲ. ಇದು ಎಂದಿಗೂ ಸಾಧ್ಯವಿಲ್ಲ, ಖಂಡಿತ ಇಲ್ಲ" ಎಂದಳು.

ಮೋತಿಯತಾಯಿ ಬೇಸರಮೊಡನೆಯೇ "ಹೇಗೆ ಆಗಲಾರದಮ್ಮಾ? ನೀನು ಎಷ್ಟೇ ದೊಡ್ಡ ಮನುಷ್ಯರ ಮಗಳೇ ಆಗಿರಬಹುದು, ನಿನ್ನ ವಿಷಯಕ್ಕೆ ಮಾತ್ರ ಸಂಸಾರದ ನಿಯಮ ತಲೆ ಕೆಳಗಾಗುವುದೇನು! ನೀನು ಘೋಷಾಲರ ಮನೆಯ ಸೊಸೆಯಲ್ಲವೆ? ಘೋಷಾಲ್ ಮನೆತನದ ಇಷ್ಟದೈವ ನಿನ್ನನ್ನು ಸಹಜದಲ್ಲಿ ಬಿಟ್ಟು ಬಿಡುವುದೇನು? ಓಡಿ ಹೋಗುವ ದಾರಿ ತಡೆದುಕೊಂಡು ನಿಂತಿರುವಳು ಆಕೆ" ಎಂದಳು.

ಗಂಡನೊಡನೆ ಕುಮುವಿನ ಸ್ವಲ್ಪ ದಿನದ ಪರಿಚಯ ದಿನದಿನಕ್ಕೆ ಒಳಗೊಳಗೆ ಯಾವ ವಿಕೃತರೂಪವನ್ನು ತಾಳಿದ್ದಿತು ಎನ್ನುವುದು ಗರ್ಭದ ಸಂದೇಹದಿಂದ ಅವಳ ಮನಸ್ಸಿಗೆ ಸ್ಪಷ್ಟವಾಗತೊಡಗಿತು. ಮನುಷ್ಯ ಮನುಷ್ಯರಲ್ಲಿರುವ ಭೇದ ಎಲ್ಲಕ್ಕಿಂತಲೂ ಅತಿಕ್ರಮಿಸಲಸಾಧ್ಯವಾದುದು. ಅದರ ಸಲಕರಣೆಗಳು ಅತ್ಯಂತ ಸೂಕ್ಷ್ಮವಾದುದು. ಮಾತಿನಿಂದ, ಭಾವ ಭಂಗಿಯಿಂದ ಸಣ್ಣ ಪುಟ್ಟ ಸಂಜ್ಞೆಗಳಿಂದ ಏನೂ ಸಾಧ್ಯವಾಗದಿದ್ದಲ್ಲಿ ಆ ಸಮಯದ ಅನಭಿವ್ಯಕ್ತ ಇಂಗಿತವು ಗಂಟಲ ದನಿಯಲ್ಲಿ ಅಭಿರುಚಿ ಯಲ್ಲಿ, ನಡವಳಿಕೆಯಲ್ಲಿ, ಜೀವನಯಾತ್ರೆಯ ಆದರ್ಶದಲ್ಲಿ ಕಂಡುಬರುವ ಮಾರ್ಪಾಡಿನ ಲಕ್ಷಣಗಳಲ್ಲಿ ಹರಡಿರುವುವು. ಮಧುಸೂದನನ ಸ್ವಭಾವ ದಲ್ಲಿ ಕುಮುವಿಗೆ ಬಲವಾಗಿ ನೋಯಿಸುವಂಥಾದ್ದು ಇತ್ತೆಂಬುದು ಅವ ಳಿಗೆ ನಾಚಿಕೆಯುಂಟುಮಾಡುತ್ತಿತ್ತು; ಅಷ್ಟೆ. ಅದು ಅಶ್ಲೀಲವೆಂದು ಅವಳಿಗನ್ನಿಸುತ್ತಿತ್ತು. ಮಧುಸೂದನ ತನ್ನ ಬಾಳುವೆಯ ಮೊದಲ ದಿನಗಳಲ್ಲಿ ಕಡುಬಡವನಾಗಿದ್ದ. ಆದರಿಂದಲೇ ಹಣದ ಹಿರಿಮೆಯ ವಿಷಯವಾಗಿ ಅವನು ಮಾತು ಮಾತಿನಲ್ಲಿ ವ್ಯಕ್ತಪಡಿಸುತ್ತಿದ್ದ ಸಪ್ರೋ ಕ್ತಿಯಲ್ಲಿ ಅವನ ರಕ್ತಗತ ದಾರಿದ್ರ್ಯದ ಹೀನತೆ ಇತ್ತು. ಈ ಧನಪೂಜೆಯ ಮಾತನ್ನು ಕುಮುವಿನ ತವರುಮನೆಯವರನ್ನು ಹಿಯ್ಯಾಳಿಸುವುದ ಕ್ಕಾಗಿ ಮಧುಸೂದನ ಬಾರಿಬಾರಿಗೆ ಎತ್ತುತ್ತಿದ್ದ. ಅವನ ಆ ಸ್ವಾಭಾ ವಿಕವಾದ ಆರೋಪಣೆ, ಭಾಷೆಯ ಕರ್ಕಶತೆ, ಡಾಂಬಿಕ ಅಸೌಜನ್ಯತೆ, ಮಧುಸೂದನನ ತನುಮನದ ಒರಟುತನ ಮತ್ತು ಸಂಸಾರದಲ್ಲಿ ನಯ ವಿಲ್ಲದಿರುವಿಕೆ ಇವೆಲ್ಲ ಪ್ರತಿನಿತ್ಯ ಕುಮುವಿನ ತನುಮನಗಳನ್ನು ಕುಗ್ಗಿ ಸುತ್ತಿದ್ದುವು. ಯಾವ ಯಾವ ಬಗೆಯಲ್ಲಿ ಇವುಗಳನ್ನು ದೃಷ್ಟಿಯಿಂದ, ಮತ್ತು ತನ್ನ ಮನಸ್ಸಿನಿಂದ ದೂರಮಾಡಲು ಯತ್ನಿಸಿದಷ್ಟೊ ಅಷ್ಟೊ ಅಷ್ಟು ಇವುಗಳು ಅಪಾರವಾದ ಕಸದಂತೆ ನಾಲ್ಕು ದಿಕ್ಕಿನಲ್ಲೂ ಶೇಖರ ವಾಗುತ್ತಿದ್ದುವು. ತನ್ನ ಮನದಲ್ಲಿದ್ದ ಭಾವದೊಡನೆ ಕುಮು ತಾನೇ ಸರ್ವ ಪ್ರಯತ್ನದಿಂದಲೂ ಕಾದಾಡುತ್ತ ಬಂದಿದ್ದಳು. ಗಂಡನನ್ನು ಪೂಜಿಸುವ ಕರ್ತವ್ಯದ ಸಂಬಂಧದಲ್ಲಿ ತನ್ನ ಸಂಸ್ಕಾರವನ್ನು ಪರಿಶುದ್ಧ ವಾಗಿಟ್ಟುಕೊಳ್ಳಲು ಅವಳು ಮಾಡುತ್ತಿದ್ದ ಪ್ರಯತ್ನಕ್ಕೆ ಕೊನೆಯೇ ಇರ ಲಿಲ್ಲ. ಆದರೆ ಎಷ್ಟು ದೊಡ್ಡ ಸೋಲಾಗಿದೆ ಎನ್ನುವುದನ್ನು ಇದಕ್ಕೆ

ಮುಂಚೆ ಇಷ್ಟು ತಿಳಿದಿರಲಿಲ್ಲ. ಮಧುಸೂದನನ ಸಂಗಡ ತನ್ನ ರಕ್ತ ಮಾಂಸದ ಸಂಬಂಧ ಅವಿಚ್ಛಿನ್ನವಾಗಿಬಿಟ್ಟಿತ್ತು. ಇದರ ಬೀಭತ್ಸತೆ ಅವಳಿಗೆ ಬಹಳ ನೋವು ಉಂಟುಮಾಡುತ್ತಿತ್ತು. ಕುಮು ಅತ್ಯಂತ ಉದ್ವಿಗ್ನ ಮುಖಭಾವದೊಡನೆ “ಯಾವ ವಿಧದಲ್ಲಿ ನೀನು ಇದರ ನಿಜಸ್ಥಿತಿ ನಿರ್ಧರಿಸಿದೆ” ಎಂದು ಕೇಳಿದಳು.

ಮೋತಿಯತಾಯಿಗೆ ಬಹಳ ಕೋಪ ಬಂದಿತು. ಅಡಗಿಸಿಕೊಂಡು “ನಾನು ಒಂದು ಮಗುವಿನ ತಾಯಿ. ನಾನು ಅರಿಯಲಾರೆನಾದರೆ ಬೇರೆ ಯಾರು ಅರಿತಾರು? ಆದರೂ ಸಂಪೂರ್ಣವಾಗಿ ನಿರ್ಧರಿಸಿ ಹೇಳುವ ಸಮಯವಾಗಿಲ್ಲ. ಅನುಭವಸ್ಥಳಾದ ಸೂಲಗಿತ್ತಿ ಯಾವಳನ್ನಾದರೂ ಕರೆಸಿ ಪರೀಕ್ಷೆ ಮಾಡಿಸುವುದು ಉತ್ತಮ” ಎಂದಳು.

ನವೀನ, ಮೋತಿಯತಾಯಿ, ಹಾಬಲೂ ಇವರುಗಳು ಹೊರಡುವ ಸಮಯ ಒದಗಿತು. ಆದರೆ ದೈವದ ಈ ಕಡೆಯ ಅನ್ಯಾಯದ ವಿಷಯವಲ್ಲದೆ ಬೇರೆ ಯಾವುದರಲ್ಲೂ ಯಾವ ವಿಧದಲ್ಲೂ ಕುಮು ಇಂದು ಮನಸ್ಸಿಡಲು ಸಾಧ್ಯವಿಲ್ಲದವಳಾಗಿದ್ದಳು. ಆದ್ದರಿಂದಲೇ ಅತ್ಯಂತ ಸಾಮಾನ್ಯ ರೀತಿಯಲ್ಲೇ ಅವಳು ಅತ್ತೆಯ ಮನೆಯ ನೆಂಟರನ್ನು ಬೀಳ್ಕೊಟ್ಟಳು. ಹೋಗುವ ಸಮಯದಲ್ಲಿ ನವೀನ “ಅತ್ತಿಗೇ, ಪ್ರಪಂಚದಲ್ಲಿ ಎಲ್ಲ ವಿಷಯಗಳಿಗೂ ಕೊನೆಯಿದೆ. ಆದರೆ ನಿನ್ನ ಸೇವೆ ಮಾಡುವಂತಹ ಯಾವ ಅಧಿಕಾರ ಅಕಸ್ಮಾತ್ತಾಗಿ ಒಂದು ದಿನ ಪಡೆದಿದ್ದೆನೋ ಅದು ಇಂತಹ ಅಸಂಬದ್ಧ ರೀತಿಯಲ್ಲಿ ಅಕಸ್ಮಾತ್ತಾಗಿ ಮತ್ತೊಂದು ದಿನ ಕೊನೆಗಾಣುವುದು ಸಾಧ್ಯವೆನ್ನುವುದನ್ನು ಮನಸ್ಸಿನಲ್ಲೂ ಊಹಿಸಲಾರದಿದ್ದೆ. ಪುನಃ ಬಂದು ನೋಡುವೆ” ಎಂದ. ನವೀನ ನಮಸ್ಕಾರ ಮಾಡಿದ. ಹಾಬಲೂ ಸದ್ದಿಲ್ಲದೆ ಅಳತೊಡಗಿದ. ಮೋತಿಯತಾಯಿ ಮುಖ ಗಂಟುಹಾಕಿಕೊಂಡಿದ್ದಳು. ಒಂದು ಮಾತೂ ಆಡಲಿಲ್ಲ.

## ೫೭

ಸುದ್ದಿ ವಿಪ್ರದಾಸನ ಕಿವಿ ಮುಟ್ಟಿತು. ಸೂಲಗಿತ್ತಿ ಬಂದಳು. ಕುಮು ಗರ್ಭಿಣಿ ಎನ್ನುವ ವಿಷಯದಲ್ಲಿ ಸಂದೇಹ ನಿವೃತ್ತಿಯಾಯಿತು. ಮಧುಸೂದನನ ಕಿವಿಗೂ ಸುದ್ದಿ ತಲುಪಿತು. ಮಧುಸೂದನ ಹಣ ಬಯಸಿದ್ದ.

ಹಣ ಪೂರ್ಣವಾದ ಆಕೃತಿಯಲ್ಲೇ ಶೇಖರವಾಗಿತ್ತು. ಹಣಕ್ಕೆ ತಕ್ಕಂತಹ ಬಿರುದೂ ಸಿಕ್ಕಿತ್ತು. ಈಗ ತನ್ನ ಮಹಿಮೆಯನ್ನೂ ಮುಂದಿನ ಪೀಳಿಗೆಯಲ್ಲಿ ಸ್ಥಾಪಿಸುವುದು ಸಾಧ್ಯವಾಗುವುದಾದರೆ ಈ ಪ್ರಪಂಚದಲ್ಲಿ ಅವನ ಕರ್ತವ್ಯ ಕೊನೆಯ ಗುರಿಯನ್ನು ಮುಟ್ಟಿದ ಹಾಗಾಗುವುದು. ಮನಸ್ಸಿಗೆ ಆನಂದವಾದ ಹಾಗೆಲ್ಲಾ ಎಲ್ಲ ಅಪರಾಧದ ಹೊಣೆಯೂ ಕುಮುವಿನ ಮೇಲಿಂದ ಸರಿದು ವಿಪ್ರದಾಸನ ಮೇಲೆ ಏರಿತು. ಎರಡನೆಯ ಕಾಗದವೊಂದನ್ನು ಆವನಿಗೆ ಬರೆದ. "Where as" ಎಂದು ಆರಂಭಿಸಿದ. "Your obedient servant" ಎಂದು ಮುಗಿಸಿ, ಮಧುಸೂದನ ಘೋಷಾಲ್ ಎಂದು ರುಜುಮಾಡಿದ್ದ. ನಡುವೆ "I shall have the painful necessity" ಇತ್ಯಾದಿ ಇತ್ಯಾದಿ. ಇತ್ತು. ಇಂತಹ ಭಯ ತೋರುವಂತಹ ಕಾಗದಗಳಿಂದ ಚಟರ್ಜಿ ಮನೆತನದವರಲ್ಲಿ ಮುಖ್ಯವಾಗಿ ನಷ್ಟದ ಶಂಕೆಯಿದ್ದುದಾದರೆ ವಿರುದ್ಧವಾದ ಫಲ ಫಲಿಸುವುದು. ವಿಪ್ರದಾಸ ಕಾಗದವನ್ನು ಕಾಕೂವಿಗೆ ತೋರಿಸಿದ. ಅವನ ಮುಖ ಕೆಂಪೇರಿತು. "ಇಂತಹ ಕಾಗದದಿಂದ ನನ್ನಂತಹ ಸಾಮಾನ್ಯ ಮನುಷ್ಯನ ಮೈಯಲ್ಲೂ ಒಮ್ಮೆಗೇ ಬಾಪಪಹರ ಅಳತೆಯಲ್ಲಿ ರಕ್ತ ಕುದಿಯತೊಡಗುವುದು. ಕಣ್ಣೆದಿರಿನಲ್ಲಿಲ್ಲದ ಕೊತ್ವಾಲ....ಮಗನನ್ನು ಕೂಗಿ ಕರೆದು, "ಇವನ ತಲೆ ಹಾರಿಸಿ ಬಿಡು" ಎಂದು ಅಪ್ಪಣೆ ಮಾಡುವಂತೆ ಆಗುತ್ತೆ" ಎಂದನು.

ಹಗಲಲ್ಲಿ ನಾನಾ ಬಗೆಯ ಬರವಣಿಗೆಯ ಕೆಲಸವಿತ್ತು. ಅವೆಲ್ಲ ಮುಗಿಸಿಕೊಂಡು ಸಂಜೆಯಲ್ಲಿ ವಿಪ್ರದಾಸ ಕುಮುವನ್ನು ಕರೆಯ ಕಳುಹಿಸಿದ. ಕುಮು ಇಂದು ಇಡೀ ದಿನ ಅಣ್ಣನ ಹತ್ತಿರ ಬಂದಿರಲಿಲ್ಲ. ತನ್ನನ್ನು ಮರೆಸಿಕೊಂಡೇ ತಿರುಗುತ್ತಿದ್ದಳು.

ವಿಪ್ರದಾಸ ಹಾಸಿಗೆ ಬಿಟ್ಟು ಕುರ್ಚಿಯ ಮೇಲೆ ಕುಳಿತ. ರೋಗಿಯಂತೆ ಮಲಗಿದ್ದರೆ ಮನಸ್ಸು ದುರ್ಬಲವಾಗಿರುವುದು. ಇದಿರಿನಲ್ಲಿ ಕುಮುವಿಗಾಗಿ ಸಣ್ಣ ಕುರ್ಚಿಯೊಂದನ್ನು ಸಿದ್ಧಪಡಿಸಿತ್ತು. ಕೋಣೆಯ ಒಂದು ಮೂಲೆಯಲ್ಲಿ ದೀಪ ಸ್ವಲ್ಪ ಮರೆಯಾಗಿತ್ತು. ತಲೆಯ ಮೇಲೆ ದೊಡ್ಡದೊಂದು ಎಳೆಯುವ ಬೀಸಣಿಗೆ ಹುಸ್ ಹುಸ್ ಎಂದು ಸದ್ದು ಮಾಡುತ್ತ ಆಡುತ್ತಿತ್ತು. ವೈಶಾಖದ ಕೊನೆಗಾಲದ ಆಕಾಶದಲ್ಲಿ ಇನ್ನೂ

ಸೆಕೆ ಇತ್ತು. ದಕ್ಷಿಣದ ಗಾಳಿ ಒಮ್ಮೊಮ್ಮೆ ಸ್ವಲ್ಪ ಬೀಸಿ ಪುನಃ ಅಡಗಿ ಹೋಗುತ್ತಿತ್ತು. ಗಿಡದ ಎಲೆಗಳು ಕಿವಿಗೊಟ್ಟು ಏಕಾಗ್ರತೆಯಿಂದ ಆಲಿಸುತ್ತಿರುವಂತೆ ಅಲುಗದಿದ್ದುವು. ಕತ್ತಲೆ ನದೀಮುಖದಲ್ಲಿ ಗಂಗಾನದಿಯ ನೀಲೀ ನೀರನ್ನು ಬೆಳ್ಳಗೆ ಮಾಡಿರುವ ಹಾಗೆ ಇತ್ತು. ದೀರ್ಘಕಾಲ ವಿಳಂಬ ಮಾಡಿದ ಗೋಧೂಳಿಯ ಕೊನೆಯ ಬೆಳಕು ಆದರ ಕಪ್ಪಿನಲ್ಲಿ ಅಲ್ಲಲ್ಲಿ ಬೆರೆತಿತ್ತು. ತೋಟದ ಪುಷ್ಕರಿಣಿ ನೆರಳಿನಿಂದ ಅದೃಶ್ಯವಾಗುತ್ತಿತ್ತು. ಆದರೆ ಚೆನ್ನಾಗಿ ಥಳಥಳಿಸುವ ನಕ್ಷತ್ರಗಳ ಪ್ರತಿಬಿಂಬ ಆಕಾಶ ಬೆರಳು ತೋರಿಸುವ ಸನ್ನೆಯಂತೆ ಅದನ್ನು ತೋರಿಸುತ್ತಿತ್ತು. ಗಿಡಮರಗಳ ಅಡಿಯಲ್ಲಿ ಆಳುಕಾಳುಗಳು ದೀಪ ಹಿಡಿದುಕೊಂಡು ಘಳಿಗೆಗೊಮ್ಮೆ ಓಡಾಡುತ್ತಿದ್ದರು. ಗೂಬೆ ಕೂಗು ಹಾಕುತ್ತಿತ್ತು.

ಕುಮು ಸ್ವಲ್ಪ ಹಿಂಜರಿಯುತ್ತ ಸ್ವಲ್ಪ ಸಾವಕಾಶವಾಗಿಯೇ ಬಂದಳು. ವಿಪ್ರದಾಸನ ಹತ್ತಿರ ಕುರ್ಚಿಯಲ್ಲಿ ಕುಳಿತು "ಅಣ್ಣಾ, ನನಗೆ ಯಾವುದೂ ಸರಿಯಾಗಿ ಕಾಣುತ್ತಿಲ್ಲ. ಎಲ್ಲಿಗಾದರೂ ಹೊರಟು ಹೋಗೋಣವೇ ಎಂದು ಅನ್ನಿಸುತ್ತದೆ" ಎಂದಳು.

ವಿಪ್ರದಾಸ "ತಪ್ಪು ಎಣಿಸಿರುವೆ. ಕುಮು ನಿನಗೆ ಸಮಾಧಾನವೇ ಆಗುವುದು. ಇನ್ನು ಕೆಲವು ದಿನಗಳಲ್ಲೇ ನಿನ್ನ ಮನಸ್ಸು ನೆಮ್ಮದಿ ಹೊಂದುವುದು" ಎಂದ.

"ಅಂತೂ ಹಾಗಾದರೆ" ಎಂದು ಕುಮು ಸುಮ್ಮನಾದಳು.

"ಅದನ್ನು ಬಲ್ಲೆ. ಈಗ ನಿನ್ನ ಬಂಧನ ಕತ್ತರಿಸುವವರು ಯಾರು?"

"ಹಾಗಾದರೆ ಹೋಗಲೇ ಬೇಕೆ ಅಣ್ಣ ?"

"ನಿನಗೆ ಅಡ್ಡಿಮಾಡಬಲ್ಲ ಅಧಿಕಾರ ಇನ್ನು ನನಗಿಲ್ಲ. ನಿನ್ನ ಮಗುವಿಗೆ ಅವರ ಸ್ವಂತ ಮನೆಯಿಂದ ಹೇಗೆ ತಾನೆ ದೂರ ಮಾಡಲಿ?"

ಕುಮು ಬಹಳ ಹೊತ್ತು ಸುಮ್ಮನಿದ್ದಳು. ವಿಪ್ರದಾಸನೂ ಏನೂ ಮಾತನಾಡಲಿಲ್ಲ.

ಕೊನೆಗೆ ಕುಮು ಅತ್ಯಂತ ಮೆಲುದನಿಯಲ್ಲಿ "ಹಾಗಾದರೆ ಯಾವಾಗ ಹೊರಡಬೇಕು ?" ಎಂದು ಕುಮು ಕೇಳಿದಳು.

" ನಾಳೆಯೋ, ಇನ್ನು ಸಾವಕಾಶ ಮಾಡುವುದು ಸರಿಯಲ್ಲ. "

" ಅಣ್ಣಾ. ಒಂದು ವಿಷಯ ಸ್ಪಷ್ಟವಾಗಿ ಕಾಣುತ್ತಿದೆ. ಈ ಬಾರಿ ನಾನು ಹೋದರೆ ಅವರುಗಳು ಪುನಃ ನನ್ನನ್ನು ನಿನ್ನ ಬಳಿಗೆ ಬರುವುದಕ್ಕೆ ಅವಕಾಶ ಕೊಡುವುದಿಲ್ಲ. "

" ಅದನ್ನು ನಾನು ಚೆನ್ನಾಗಿ ಬಲ್ಲೆ. "

" ಒಳ್ಳೆಯದು. ಹಾಗೆಯೇ ಆಗಲಿ. ಆದರೆ ಒಂದು ಮಾತು ಹೇಳುತ್ತೇನೆ. ಯಾವತ್ತೇ ಆಗಲಿ ಯಾವ ಕಾರಣದಿಂದಲೂ ನೀನು ಅವರ ಮನೆಗೆ ಹೋಗಕೂಡದು. ನಾ ಬಲ್ಲೆ ಅಣ್ಣಾ. ನಿನ್ನನ್ನು ನೋಡಬೇಕೆಂದು ನನ್ನ ಜೀವ ತಲ್ಲಣಗೊಳ್ಳುವುದು. ಆದರೆ ಅವರುಗಳ ಮನೆಯಲ್ಲಿ ಎಂದೂ ನಿನ್ನನ್ನು ನೋಡದಂತೆ ಆಗಬೇಕು. ಹಾಗೆ ನೋಡುವುದು ನನ್ನಿಂದ ಸಹಿಸಲಸಾಧ್ಯ. "

" ಇಲ್ಲ ಕುಮು, ಇದಕ್ಕೆ ನೀನು ಯೋಚನೆ ಮಾಡಬೇಕಾಗಿಲ್ಲ. "

" ಅವರುಗಳಂತೂ ನಿನ್ನನ್ನು ಸಂಕಟದಲ್ಲಿ ಸೂಕಲು ಪ್ರಯತ್ನಿಸುವರು. "

" ಅವರು ಏನು ಮಾಡಲು ಸಾಧ್ಯ ? ಅದೆಲ್ಲ ಮುಗಿಸಿದರೇನೇ ನನ್ನಮೇಲೆ ಅವರ ಶಕ್ತಿ ಕೊನೆಗಾಣುವುದು. ಆಗಲೇ ನಾನು ಸ್ವತಂತ್ರನಾಗುವೆ. ಅದನ್ನು ವಿಪತ್ತೆಂದು ಎಣಿಸುವೆಯೇಕೆ ? "

" ಅಣ್ಣಾ, ಅಂದೇ ನೀನು ನನ್ನನ್ನೂ ಸ್ವತಂತ್ರಳನ್ನಾಗಿ ಮಾಡು. ಅಷ್ಟರಲ್ಲಿ ನಾನು ಅವರ ಮಗುವನ್ನು ಅವರ ಕೈಯಲ್ಲಿ ಒಪ್ಪಿಸಿ ಬಿಡುವೆ. ಮಗುವಿಗೋಸ್ಕರವಾಗಿಯೇ ಕಳೆದುಕೊಳ್ಳಲಾರದಂತಹದೂ ಒಂದು ಇದೆ. "

" ಸರಿ. ಮೊದಲು ಮಗು ಆಗಲಿ. ಆ ಮೇಲೆ ಇದೆಲ್ಲ ಹೇಳುವೆಯಂತೆ. "

" ನೀನು ನಂಬುವುದಿಲ್ಲ. ಆದರೆ ಅಮ್ಮನ ಸಂಗತಿ ನೆನಪಿದೆಯಷ್ಟೆ ? ಅವಳದಂತೂ ಇಚ್ಛಾಮರಣವಾಗಿತ್ತು. ಅಂದು ಕುಟುಂಬದಲ್ಲಿ ಅವಳು ತನ್ನ ಜಾಗವನ್ನು ಪಡೆದಿರಲಿಲ್ಲ. ಅದರಿಂದಲೇ ಆಕೆ ತನ್ನ ಮಕ್ಕಳು

ಮುರಿಯನ್ನು ಅನಾಯಾಸವಾಗಿ ಬಿಟ್ಟು ಹೊರಟುಹೋಗಬಲ್ಲವಳಾಗಿದ್ದಳು. ಮಾನವ ಜೀವ ಬಿಡುಗಡೆ ಬಯಸಿದಾಗ ಯಾವ ವಿಧದಲ್ಲೂ ಅದನ್ನು ತಡೆದಿಡುವುದು ಸಾಧ್ಯವಲ್ಲ. ನಾನು ನಿನ್ನ ತಂಗಿ. ಅಣ್ಣಾ, ನಾನು ಬಿಡುಗಡೆ ಬಯಸುವೆ. ಒಂದು ದಿನ, ನನ್ನ ಬಂಧನ ಕತ್ತರಿಸಿ ಹೋದಾಗ ಅಮ್ಮ ಅಂದು ನನ್ನನ್ನು ಆಶೀರ್ವದಿಸುವಳು. ಇದೋ ಈಗ ನಾನು ಹೇಳಿಬಿಟ್ಟೆನೆ.''

ಮತ್ತೆ ಬಹಳ ಹೊತ್ತಿನವರೆಗೆ ಇಬ್ಬರೂ ಮಾತಿಲ್ಲದೆ ಇದ್ದರು. ಹಠಾತ್ತಾಗಿ ಸರಸರನೆ ಗಾಳಿ ಬೀಸಿತು. ಟೀಪಾಯಿಯ ಮೇಲಿದ್ದ ವಿಪ್ರದಾಸನ ಪುಸ್ತಕದ ಹಾಳೆಗಳು ಫರಫರನೆ ಮಗುಚಿಕೊಳ್ಳಲಾರಂಭಿಸಿದವು. ತೋಟದಿಂದ ಜಾಜಿ ಹೂವಿನ ಸುಗಂಧ ಕೋಣೆಯನ್ನು ತುಂಬಿತು.

ಕುಮು "ನನಗೆ ಅವರು ಬೇಕೆಂದೇ ದುಃಖ ಕೊಟ್ಟಿರುವರೆಂದು ಯೋಚಿಸಬೇಕು. ನನಗೆ ಅವರು ಸುಖ ಕೊಡಲಾರರು ಎಂದು ಹೇಳಿದಳು. ನನ್ನ ಹುಟ್ಟೇ ಅಂಥಾದ್ದು. ನಾನೂ ಕೂಡ ಅವರನ್ನು ಸುಖಪಡಿಸಲಾರೆನಲ್ಲ! ಯಾರು ಸಹಜವಾಗಿ ಅವರನ್ನು ಸುಖಪಡಿಸಬಲ್ಲರೋ ಅವರ ಸ್ಥಾನವನ್ನು ಕುರಿತು ಒಂದಲ್ಲ ಒಂದು ಗೊಂದಲ ತಲೆಯೆತ್ತುವುದು. ಹೀಗಿರುವಾಗ ಈ ವಿಡಂಬನೆಯೇಕೆ? ಸಮಾಜದ ಬಳಿಯಿಂದ ಅಪರಾಧದ ಎಲ್ಲ ಅವಮಾನವನ್ನೂ ನಾನೇ ಒಂಟಿಯಾಗಿಯೇ ಹೊರುವೆ. ಅವರ ಮೈಗೆ ಯಾವ ಕಳಂಕವೂ ಸೋಕದು. ಆದರೆ ಒಂದು ದಿನ ಅವರಿಗೆ ಬಿಡುಗಡೆ ಕೊಡುವೆ. ನಾನೂ ಬಿಡುಗಡೆ ಹೊಂದುವೆ. ಹೊರಟು ಬಂದೇ ಬರುವೆ. ಇದನ್ನು ನೀನು ನೋಡು. ಮಿಥ್ಯೆಯಾಗಿ ಮಿಥ್ಯೆಯ ನಡುವೆ ಇರಲಾರೆ. ನಾನು ಅವರ ಮನೆಯ ಹಿರಿಯ ಸೊಸೆ. ಹಾಗೆಂದು ನಾನು ಕುಮು ಅಲ್ಲ ಎಂದೇನಾದರೂ ಅರ್ಥವಿದೆಯೇನು? ಅಣ್ಣಾ, ನೀನು ಈಶ್ವರನನ್ನು ನಂಬುವುದಿಲ್ಲ, ನಾನು ನಂಬುತ್ತೇನೆ. ಮೂರು ತಿಂಗಳ ಹಿಂದೆ ಯಾವ ವಿಧದಲ್ಲಿ ನಂಬುತ್ತಿದ್ದೇನೆ ಅದಕ್ಕಿಂತ ಹೆಚ್ಚಾಗಿ ನಂಬುತ್ತಿದ್ದೇನೆ. ಇಂದು ಹಗಲು ಪೂರ್ತಿಯಾಗಿ ನಾನು ಯೋಚಿಸುತ್ತಿದ್ದುದು ಇದೇ. ನಾಲ್ಕು ದಿಕ್ಕಿನಲ್ಲೂ ಇಷ್ಟೊಂದು ಅವ್ಯವಸ್ಥೆ. ಇಷ್ಟು ತಿರುವುಮುರುವು ಆದರೂ ಈ ಉತ್ಪಾತ. ಪ್ರಪಂಚವನ್ನೆಲ್ಲ ಮುಚ್ಚಿ

ಬಿಟ್ಟಿಲ್ಲ. ಇವಿಷ್ಟನ್ನೂ ದಾಟಿಹೋಗಿ ಚಂದ್ರಸೂರ್ಯರಿಂದ ಪ್ರಪಂಚ ಸಾಗುತ್ತಿದೆ. ದಾಟಿ ಹೋಗಿರುವ ಆ ಸ್ಥಳದಲ್ಲಿಯೇ, ವೈಕುಂಠವಿರುವುದು. ಅಲ್ಲೇ ನನ್ನ ದೇವರು ಇರುವುದು. ನಿನ್ನ ಬಳಿ ಇದೆಲ್ಲ ಮಾತನ್ನು ಹೇಳಲು ನನಗೆ ನಾಚಿಕೆಯಾಗುವುದು. ಆದರೆ ಇನ್ನೆಂದೂ ಹೇಳುವುದು ಸಾಧ್ಯವಿಲ್ಲ. ಇಂದು ಹೇಳಿ ಹೋಗುವೆ. ಇಲ್ಲದಿದ್ದರೆ ನನಗಾಗಿ ಸುಮ್ಮನೆ ಯೋಚನೆಮಾಡುತ್ತಿರುವೆ. ಎಲ್ಲವೂ ಅಳಿದರೂ ಇನ್ನೂ ಉಳಿದಿರುವುದು. ಈ ಸಂಗತಿಯನ್ನೇ ಅರಿತಿರುವೆ ಅದೇ ನನ್ನ ಅನಂತ. ಅದೇ ನನ್ನ ದೇವರು. ಇವನ್ನೇನಾದರೂ ನಾನು ಅರಿಯದಿದ್ದರೆ ಇಲ್ಲೇ ನಿನ್ನ ಕಾಲ ಬಳಿ ತಲೆ ಚಚ್ಚಿಕೊಂಡು ಸಾಯುತ್ತಿದ್ದೆ. ಆ ಸಲಾಕಿಯಲ್ಲಿ ನುಗ್ಗುತ್ತಿರಲಿಲ್ಲ. ಅಣ್ಣಾ, ಪ್ರಪಂಚದಲ್ಲಿ ನೀನು ನನ್ನದಾಗಿ ಇರುವೆ ಯೆಂವೆ ಈ ಸಂಗತಿ ಅರಿಯಲಾರದೆ ಹೋದೆ" ಎಂದಳು.

ಇಷ್ಟು ಹೇಳಿ ಕುಮು ಕುರ್ಚಿಯಿಂದ ಎದ್ದು ಅಣ್ಣನ ಕಾಲ ಬಳಿ ತಲೆಯಿಟ್ಟುಕೊಂಡು ಬಿದ್ದಿದ್ದಳು. ರಾತ್ರಿ ಮುಂದುವರಿಯಿತು. ವಿಪ್ರ ದಾಸ ಕಿಟಕಿಯ ಹೊರಗೆ ಎವೆಯಿಕ್ಕದ ನೋಡುತ್ತ ಯೋಚನೆಯಲ್ಲಿ ಮುಳುಗಿದ್ದ.

೫೮

ಮರುದಿನ ಮುಂಜಾನೆಯೇ ವಿಪ್ರದಾಸ ಕುಮುವಿಗೆ ಕರೆಕಳುಹಿಸಿದ. ಕುಮು ಬಂದು ನೋಡಲು ವಿಪ್ರದಾಸ ಹಾಸಿಗೆಯ ಮೇಲೆ ಕುಳಿತಿದ್ದ. ಮಡಿಲಲ್ಲಿ ಒಂದು ಏಸ್‌ರಾಜಿತ್ತು. ಮತ್ತೊಂದು ಪಕ್ಕದಲ್ಲಿತ್ತು. ಕುಮು ವಿಗೆ "ತೆಗೆದುಕೊ, ನಾವಿಬ್ಬರೂ ಕೂಡಿ ಬಾರಿಸೋಣ" ಎಂದ. ಇನ್ನೂ ನಸುಗತ್ತಲೆ ರಾತ್ರಿ ಕಳೆದ ಮೇಲೆ ಗಾಳಿ ಸ್ವಲ್ಪ ತಂಪಾಗಿ ಅಶ್ವತ್ಥದ ಎಲೆಯ ನಡುವೆ ಸರಸರಗುಟ್ಟುತ್ತಿತ್ತು. ಕಾಗೆಗಳು ಕೂಗತೊಡಗಿದ್ದುವು. ಇಬ್ಬರೂ ಭೈರವೀ ರಾಗದಲ್ಲಿ ಗಂಭೀರವಾಗಿ ಶಾಂತವಾಗಿ ಕರುಣಾ ಪ್ರೂರಿತವಾಗಿ ಆಲಾಪನೆಯನ್ನು ಆರಂಭಿಸಿದರು. ಸತೀ ವಿರಹವು ನಿಶ್ಚಯ ವಾದ ಸಮಯದಲ್ಲಿ ಮಹಾದೇವನ ಆ ದಿನದ ಪ್ರಭಾತದ ಧ್ಯಾನ ದಂತಿತ್ತು ಆ ಆಲಾಪನೆ. ಬಾರಿಸುತ್ತ ಬಾರಿಸುತ್ತ ಇದ್ದಂತೆ, ಹೂ ತುಂಬಿದ ಪಾದರೀ ಗಿಡದ ರೆಂಬೆಗಳ ಸಂದಿನಲ್ಲಿ ಹೊಂಬೆಳಕು ಉಜ್ವಲ

ವಾಯಿತು. ತೋಟದ ಗೋಡೆಯ ಮೇಲೆ ಸೂರ್ಯ ಕಾಣಿಸಿಕೊಂಡ. ಆಳುಗಳು ಬಾಗಿಲ ಬಳಿ ಬಂದು ನಿಂತಿದ್ದು ಹೊರಟು ಹೋದರು. ಕೋಣೆ ಗುಡಿಸುವುದಾಗಲಿಲ್ಲ. ಬಿಸಿಲು ಕೋಣೆಯೊಳಕ್ಕೆ ಬಂದಿತು. ದರ್ವಾನ್ ಮೆಲ್ಲಮೆಲ್ಲನೆ ಬಂದು ಪತ್ರಿಕೆಯನ್ನು ಟೀಪಾಯಿಯ ಮೇಲಿಟ್ಟು ಸದ್ದಿಲ್ಲದೆ ಹೆಜ್ಜೆಯಿಡುತ್ತ ಹೊರಟುಹೋದ.

ಕೊನೆಗೆ ಬಾರಿಸುವುದನ್ನು ನಿಲ್ಲಿಸಿ ವಿಪ್ರದಾಸ "ಕುಮೂ, ನನಗೆ ಯಾವ ಧರ್ಮವೂ ಇಲ್ಲವೆಂದು ನೀನು ಎಣಿಸುತ್ತಿರುವೆ. ನನ್ನ ಧರ್ಮವನ್ನು ಮಾತಿನಲ್ಲಿ ವಿವರಿಸಹೋದರೆ ಸಾಧ್ಯವಿಲ್ಲ. ಅದಕ್ಕೋಸ್ಕರ ಹೇಳುವುದಿಲ್ಲ. ಸಂಗೀತದ ಸ್ವರದಲ್ಲಿ ಆದರ ರೂಪ ಕಾಣುತ್ತಿರುವೆ. ಅದರಲ್ಲಿ ಗಭೀರ ದುಃಖ ಗಭೀರ ಆನಂದ ಎರಡೂ ಒಂದುಗೂಡಿ ಇರುವುದು. ಆದಕ್ಕೆ ಹೆಸರಿಡಲು ಸಾಧ್ಯವಿಲ್ಲ. ಇಂದು ನೀನು ಹೊರಟು ಹೋಗುತ್ತಿರುವೆ. ಬಹುಶಃ ಮತ್ತೆ ನೋಡಲು ಸಾಧ್ಯವಿರದು. ಇಂದಿನ ಬೆಳಗ್ಗೆ ನಿನ್ನನ್ನು ಆ ಎಲ್ಲ ಅಪಸ್ವರದ, ಎಲ್ಲ ಇಜ್ಜೋಡಿನ ಆಚೆಯ ತೀರಕ್ಕೆ ದಾಟಿಸಲು ಯತ್ನಿಸಿದೆ. ಶಕುಂತಲಾ ಕಾವ್ಯ ಓದಿರುವೆಯಷ್ಟೆ. ದುಷ್ಯಂತನ ಮನೆಗೆ ಶಕುಂತಲೆ ಪಯಣ ಹೊರಟಿದ್ದಾಗ ಕಣ್ವ ಸ್ವಲ್ಪದೂರದ ವರೆಗೆ ಅವಳನ್ನು ಮುಟ್ಟಿಸಿ ಹಿಂದಿರುಗಿದ. ಯಾವ ಲೋಕಕ್ಕೆ ಅವಳನ್ನು ದಾಟಿಸಲು ಆತ ಹೊರಟಿದ್ದನೋ ಅಲ್ಲಿ ದುಃಖವೂ ಅವಮಾನವೂ ಸಿದ್ಧವಾಗಿತ್ತು. ಆದರೆ ಅಲ್ಲಿಯೇ ನಿಂತು ಬಿಡಲಿಲ್ಲ. ಶಕುಂತಲೆ ಆದನ್ನೂ ದಾಟಿ ನಿಶ್ಚಲವಾದ ಶಾಂತಿಯ ಬೀಡನ್ನು ಸೇರಿದ್ದಳು. ಇಂದು ಮುಂಜಾನೆಯ ಭೈರವಿಯಲ್ಲಿ ಆ ನಿಶ್ಚಲ ಶಾಂತಿಯ ಸ್ವರವಿತ್ತು. ನನ್ನ ಸಂಪೂರ್ಣ ಅಂತಃಕರಣದ ಆಶೀರ್ವಾದ ಆ ನಿರ್ಮಲ ಪರಿಪೂರ್ಣತೆಯ ಕಡೆಗೆ ನಿನ್ನನ್ನು ಮುಂದುವರಿಸಲಿ. ಆ ಪರಿಪೂರ್ಣತೆ ನಿನ್ನ ಒಳಗೆ ಮತ್ತು ಹೊರಗಿನ ಎಲ್ಲ ದುಃಖವನ್ನೂ ನಿನ್ನ ಎಲ್ಲ ಅವಮಾನವನ್ನೂ ಕೊಚ್ಚಿಕೊಂಡು ಹೋಗಲಿ" ಎಂದನು.

ಕುಮು ಒಂದು ಮಾತನ್ನೂ ಆಡಲಿಲ್ಲ. ವಿಪ್ರದಾಸನ ಪಾದಗಳಲ್ಲಿ ನಮಸ್ಕರಿಸಿದಳು. ಸ್ವಲ್ಪ ಹೊತ್ತು ಕಿಟಕಿಯ ಹೊರಗಣ ಬೆಳಕಿನ ಕಡೆ

ದಿಟ್ಟಿಸಿ ನೋಡುತ್ತಿದ್ದಳು. ಅನಂತರ "ಅಣ್ಣಾ ನಿನ್ನ ಟೀ, ರೊಟ್ಟಿಯನ್ನು ನಾನು ಸಿದ್ಧಮಾಡಿಕೊಂಡು ಬರುತ್ತೇನೆ" ಎಂದಳು.

ಮಧುಸೂದನ ಇಂದು ಜೋಯಿಸನನ್ನು ಕರೆಸಿ ಪ್ರಯಾಣದ ಲಗ್ನವನ್ನು ಗೊತ್ತುಮಾಡಿದ್ದ. ಬೆಳಗ್ಗೆ ಹತ್ತುಘಂಟೆಯಾದ ಸ್ವಲ್ಪ ಹೊತ್ತಿನ ಮೇಲೆ, ಹೊತ್ತಿಗೆ ಸರಿಯಾಗಿ ಕಲಾಪತ್ತಿನ ಕೆಲಸಮಾಡಿದ್ದ ಕೆಂಪು ಬನಾತಿನ ಮುಸುಕು ಹಾಕಿದ ಪಲ್ಲಕ್ಕಿ ಬಾಗಿಲಲ್ಲಿ ಬಂದು ನಿಂತಿತು. ಕೋಲು, ಕಟ್ಟಿಗೆ ಮೊದಲಾದುವನ್ನು ಹಿಡಿದುಕೊಂಡು ಆಳುಗಳು ಬಂದಿದ್ದರು. ಬಹು ಆಡಂಬರದೊಡನೆ ಕುಮುವನ್ನು ಮಿರ್ಜಾಪುರದ ಪ್ರಾಸಾದಕ್ಕೆ ಕರೆದುಕೊಂಡು ಹೋದರು. ಇಂದು ಅಲ್ಲಿ ನೌಬತ್ತು ಬಾರಿಸುತ್ತಿದ್ದರು. ಬ್ರಾಹ್ಮಣ ಭೋಜನ. ದಾನಧರ್ಮ ಇವುಗಳ ಏರ್ಪಾಡು ನಡೆದಿತ್ತು.

ಮಾಣಿಕ್ ಬಟ್ಟಲಲ್ಲಿ ಬಾರ್ಲಿ ತೆಗೆದುಕೊಂಡು ವಿಪ್ರದಾಸನ ಕೊಟಡಿಗೆ ಬಂದ. ಇಂದು ವಿಪ್ರದಾಸ ಹಾಸಿಗೆಯಲ್ಲಿರಲಿಲ್ಲ. ಕಿಟಕಿಯ ಇದಿರಿನಲ್ಲಿ ಕುರ್ಚಿ ಎಳೆದುಕೊಂಡು ಅಲುಗದೆ ಕುಳಿತಿದ್ದ. ಬಾರ್ಲಿ ಯಾವಾಗ ಬಂತೆಂಬುದನ್ನು ಗಮನಿಸಲೇ ಇಲ್ಲ. ಆಳು ಹಿಂದಿರುಗಿ ಹೋದ. ಅನಂತರ ಕ್ಷೇಮಾ ಅತ್ತೆ ಪಥ್ಯದ ಊಟವನ್ನು ಮುಗಿಸಿ ಎತ್ತಿಕೊಂಡು ಬಂದಳು. ವಿಪ್ರದಾಸನ ಹೆಗಲ ಮೇಲೆ ಕೈಯಿಟ್ಟು "ವಿಪ್ರೂ, ಹೊತ್ತಾಯಿತಪ್ಪಾ" ಎಂದಳು.

ವಿಪ್ರದಾಸ ಕುರ್ಚಿಯಿಂದ ಮೆಲ್ಲನೆ ಎದ್ದು ಹಾಸಿಗೆಯಲ್ಲಿ ಹೋಗಿ ಮಲಗಿದ. ಕುಮುವನ್ನು ಅವರುಗಳು ಎಷ್ಟೊಂದು ಆಡಂಬರದೊಡನೆ ಕರೆದುಕೊಂಡು ಹೋದರೆಂಬುದನ್ನು ವಿಸ್ತರಿಸಿ ಹೇಳಬೇಕೆಂದು ಕ್ಷೇಮಾ ಅತ್ತೆಗೆ ಆಸೆ. ಆದರೆ ವಿಪ್ರದಾಸನ ಗಭೀರವಾದ ನಿಸ್ತಬ್ಧತೆಯನ್ನು ಕಂಡು ಒಂದು ಮಾತನ್ನೂ ಆಡಲಾರದೆ ಹೋದಳು. ವಿಪ್ರದಾಸನ ದೃಷ್ಟಿಯ ಇದಿರಿನಲ್ಲಿ ಆಳ ಸಿಕ್ಕದ ಶೂನ್ಯತೆ ನೆಲಸಿರುವಂತೆ ಇತ್ತು.

ವಿಪ್ರದಾಸ, "ಅತ್ತೇ ಕಾಳೂವನ್ನು ಕಳುಹಿಸಿಕೊಡು" ಎಂದು ಹೇಳಿದಾಗ ಈ ಸಾಮಾನ್ಯ ಮಾತೂ ಕಣ್ಣಿಗೆ ಕಾಣಿಸದ ಒಂದು

ಪ್ರಕಾಂಡ ನಿಶ್ಯಬ್ದ ಛಾಯೆಯು ಒಳಗಿನಿಂದ ಧ್ವನಿಸಿದಂತೆ ಇತ್ತು. ಅತ್ತೆಯ ಮೈ ನಡುಗಿತು.

ಕಾಳೂ ಬರಲು ವಿಪ್ರದಾಸ ಅವನ ಕೈಗೊಂದು ಕಾಗದ ಕೊಟ್ಟ. ವಿಲಾಯತಿಯಿಂದ ಸುಬೋಧ ಬರೆದಿದ್ದ ಕಾಗದ. ಬಾರ್ (Bar) ನ "ಡಿನ್ನರ್" ಮುಗಿಸದೆಯೇ ತಾನು ದೇಶಕ್ಕೆ ಹಿಂದಿರುಗಿದುದಾದರೆ ಪುನಃ ಅದಕ್ಕೆ ಹಿಂದಿರುಗಬೇಕಾಗುವುದು. ಅದಕ್ಕಿಂತ ಕಡೆಯ "ಡಿನ್ನರ್" ತೀರಿಸಿಕೊಂಡು ಮಾಘ ಫಾಲ್ಗುಣದ ನಡುವೆ ಹಿಂದಿರುಗುವುದಾದರೆ ಅವನಿಗೆ ಅನುಕೂಲ. ಅನಾವಶ್ಯಕವಾದ ಖರ್ಚಿನ ತೊಂದರೆಯೂ ತಪ್ಪುವುದು ಎಂದು ಅವನು ಬರೆದಿದ್ದ. ಅಲ್ಲಿಯವರೆಗೆ ಆಸ್ತಿಪಾಸ್ತಿಯ ಮಾತುಕತೆ ಸಾವಕಾಶವಾಗಿರಲು ಸಾಧ್ಯವೆಂದು ಅವನ ನಂಬಿಕೆ.

ಅಂದು ಆಸ್ತಿಪಾಸ್ತಿಯ ಸಂಕಟವನ್ನು ತಿಳಿಸಿ ವಿಪ್ರದಾಸನನ್ನು ನೋಯಿಸಲು ಕಾಳೂವಿಗೆ ಸ್ವಲ್ಪವೂ ಮನಸ್ಸಿರಲಿಲ್ಲ. "ಅಣ್ಣಾ, ಇನ್ನೂ ಹಣ ಹಿಂದಕ್ಕೆ ಕೊಡಬೇಕೆಂದು ಯಾವ ಪ್ರಸ್ತಾಪವೂ ತಲೆಯೆತ್ತಿಲ್ಲವಲ್ಲ. ಇನ್ನು ಕೆಲವು ದಿನಗಳು ಜಾಗರೂಕತೆಯಿಂದ ಇರೋಣ. ಹಾಗಿದ್ದರೆ ಶೀಘ್ರದಲ್ಲಿ ಯಾವ ಹಿಂಸೆಯೂ ಘಟಿಸದು. ಏನೇ ಇರಲಿ, ನೀನೇನೂ ಯೋಚನೆ ಮಾಡಬೇಡ" ಎಂದು ಕಾಳು ಹೇಳಿದ.

ವಿಪ್ರದಾಸ "ನನಗೆ ಯಾವ ಯೋಚನೆಯೂ ಇಲ್ಲ ಕಾಳೂ; ಎಳ್ಳಷ್ಟೂ ಇಲ್ಲ" ಎಂದ.

ವಿಪ್ರದಾಸ ಚಿಂತಿಸುತ್ತಿದ್ದುದು ಕಾಳೂವಿಗೆ ಹಿತವಾಗಿರಲಿಲ್ಲ. ಹಿಂದೆ ಸಂಪೂರ್ಣ ನಿಶ್ಚಿಂತೆಯಿಂದಿರುವುದೂ ಮತ್ತಷ್ಟು ಕೆಡುಕೆನಿಸಿತು.

ವಿಪ್ರದಾಸ ಪತ್ರಿಕೆ ಎತ್ತಿಕೊಂಡು ಓದಲಾರಂಭಿಸಿದ. ಈ ವಿಷಯವಾಗಿ ಯಾವ ಆಲೋಚನೆ ನಡೆಸಲೂ ವಿಪ್ರದಾಸನಿಗೆ ಮನಸ್ಸಿಲ್ಲವೆಂದು ಕಾಳೂ ತಿಳಿದುಕೊಂಡ. ಇತರ ದಿನಗಳಲ್ಲಿ ಕೆಲಸ ತೀರಿದರೆ ಕಾಳೂ ಆ ಕ್ಷಣ ಹೊರಟು ಹೋಗುತ್ತಿದ್ದ. ಇಷ್ಟೊತ್ತು ಅವನು ಸುಮ್ಮನೆ ಕುಳಿತಿದ್ದ. ಬೇರೆ ಏನಾದರು ಮಾತನಾಡೋಣ, ಏನಾದರೊಂದು ವಿಧವಾದ

ಸೇವೆ ಮಾಡೋಣ ಎಂದು ಮನಸ್ಸಾಗುತ್ತಿತ್ತು. "ಹೊರಗಡೆಯ ಆ ಕಿಟಕಿ ಮುಚ್ಚಲೇ ? ಬಿಸಿಲು ಬರುತ್ತಿದೆ" ಎಂದ.

ವಿಪ್ರದಾಸ ಕೈ ಆಡಿಸಿ ಆವಶ್ಯಕವಿಲ್ಲವೆಂದು ತಿಳಿಸಿದ.

ಕಾಳೂ ಆಗಲೂ ಕುಳಿತೇ ಇದ್ದ. ಅಣ್ಣನ ಕೊಟಡಿಯಲ್ಲಿ ಇಂದು ಕುಮು ಇರಲಿಲ್ಲ. ಈ ಶೂನ್ಯತೆ ಅವನ ಎದೆಯ ಮೇಲೆ ಅದುಮಿಕೊಂಡಿತ್ತು. ಹಠಾತ್ತಾಗಿ ಮಂಚದ ಕೆಳಗಿನಿಂದ ಟಾಮಿ ನಾಯಿಯ ಅಳುವಿನ ದನಿ ಕೇಳತೊಡಗಿತು. ಕುಮು ಹೊರಟು ಹೋದುದನ್ನು ಅದು ನೋಡಿತ್ತು. ಏನೋ ತಿಳಿದುಕೊಂಡಿತ್ತು. ಆದರೆ ಅದನ್ನು ಸ್ಪಷ್ಟವಾಗಿ ವ್ಯಕ್ತಪಡಿಸಲಾರದಂತಿತ್ತು.

---

